ಶ್ರೀ

ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ

ನಂ. ೧೫

ಶ್ರೀ ವ್ಯಾಸಮುನಿಪ್ರಣೀತಂ.

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

ಪ್ರಥಮಖಂಡ-ಒಂದನೆಯಭಾಗ



ಅನುವಾದಕ:

**ಚಾಮರಾಜನಗರದ ವೆಂಕಟರಮಣಶಾಸ್ತ್ರೀ**



ಮೈಸೂರು.

ಶ್ರೀ ಚಾಮುಂಡೇಶ್ವರೀ ಎಲಕ್ಟ್ರಿಕ್ ಪ್ರೆಸ್.

೧೯೪೪.

# ಪ್ರಸ್ತಾವನೆ

ಸರ್ವದರ್ಶಕನಾದ ಪರಮೇಶ್ವರನು (ವ್ಯಾಸರು) ಸಕಲ ವೇದರಾಶಿಗಳಿಂದಲೂ ದೊರಕುವ ಸಕಲ ಧರ್ಮಗಳ ಸಾರವನ್ನೂ ಸಂಗ್ರಹಿಸಿ ಐದನೆಯ ವೇದವೆಂದು ಹೆಸರಾಂತ ಇತಿಹಾಸ ಪುರಾಣಗಳನ್ನು ನಿರ್ಮಿಸಿರುವನು. ಅಂದರೆ ಪುರಾಣಗಳಲ್ಲಿ ಹೇಳಿರುವ ಸಕಲ ವೃತ್ತಾಂತಗಳೂ ವೇದೋಕ್ತವಾದುವುಗಳೆಂದೇ ತಿಳಿಯಬೇಕು.

ವೇದದಲ್ಲಿ ಹೇಳಿರುವ ವಿಚಾರವನ್ನು ಸಾಮಾನ್ಯ ಜನರು ತಿಳಿದುಕೊಳ್ಳಲಾರರು. ಅದರಲ್ಲಿ ಹೇಳಿರುವ ಅತ್ಯಂತ ಗಹನವಾದ ಧರ್ಮಾದಿ ವಿಷಯಗಳನ್ನೂ ಸರಳಭಾಷೆಯಿಂದ ವಿವರಿಸಿ, ಸಾಧಾರಣ-ಬುದ್ಧಿಯುಳ್ಳವರೂ ಸ್ವಲ್ಪವೇ ಬುದ್ಧಿಯನ್ನುಪಯೋಗಿಸಿ ತಿಳಿದುಕೊಳ್ಳುವಂತಹ ಸರಳವಾದ ಶೈಲಿಯಲ್ಲಿ ತಿಳಿಸಿರುವ ಗ್ರಂಥಗಳೇ ಪುರಾಣಗಳು.

ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರಗಳೆಂಬ ಅಂಗಗಳಿಂದ ಸಮ್ಮಿಶ್ರವಾದ ನಾಲ್ಕು ವೇದಗಳೂ, ಧರ್ಮದ ಹದಿನಾಲ್ಕು ಹೆಬ್ಬಾಗಿಲುಗಳು; ಈ ವೇದಾಂಗಗಳಲ್ಲಿ ಯಾಜ್ಞವಲ್ಕ್ಯರು ಪುರಾಣದ ಹೆಸರನ್ನೇ ಮೊದಲು ಎತ್ತಿ ತೋರಿಸಿರುವುದರಿಂದ, ಲೋಕಕ್ಕೆ ಹೆಚ್ಚಾದ ಉಪಕಾರವಾಗಬೇಕಾದರೆ ಪುರಾಣಗಳಿಂದಲೇ ಎಂಬ ಮಾತಿಗೆ ಇದೇ ಮುಖ್ಯ ಪ್ರಮಾಣವಾಗಿದೆ

ಈಗ ಪ್ರಕಟವಾಗಿರುವ ಈ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಹೇಳಿರುವ ಸಂಗತಿಗಳೇನೆಂಬುದನ್ನು ಸೂಕ್ಷ್ಮವಾಗಿ ಇಲ್ಲಿ ವಿವರಿಸುತ್ತೇನೆ. ಈ ಪುರಾಣದಲ್ಲಿ ನಾನಾ ವಿಧವಾದ ಧಾರ್ಮಿಕ ಕಥೆಗಳೂ, ಪುಣ್ಯಕಾರ್ಯಗಳೂ, ವ್ರತಗಳೂ, ಯಮನಿಯಮಾದಿಗಳ ವಿವರಣೆಗಳೂ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ವೇದಾಂತ, ಜ್ಯೋತಿಷ, ವಂಶಚರಿತ್ರ, ಪ್ರಕರಣ, ಸ್ತೋತ್ರಭಾಗ, ಚತುರ್ದಶ ಮನುಚರಿತ, ನಾನಾ ವಿದ್ಯೆಗಳ ರಹಸ್ಯಾಂಶಗಳೂ ಲೋಕೋಪಕಾರಕ್ಕಾಗಿ ಈ ಪ್ರಸಕ್ತ ಪುರಾಣದಲ್ಲಿ ವ್ಯಾಸರಿಂದ ವಿರಚಿತವಾಗಿವೆ. ಸರ್ವಶಾಸ್ತ್ರಾರ್ಥ ಸಂಗ್ರಹರೂಪವಾದ ಇದೊಂದು ಪುರಾಣವನ್ನೋದಿದವನು ಸಕಲಶಾಸ್ತ್ರ ಪಾರಂಗತನಾದ ಮಹಾವಿದ್ವಾಂಸನಾಗಲು ಅಡ್ಡಿಯಿಲ್ಲ. ಇದು ನಾರದ

ಪುರಾಣದ ಸಾಸಿವೇಕಾಳಿನಷ್ಟು ಸಂಗ್ರಹವಾದ ಮಾತೇಹೊರತು ವಿಸ್ತಾರ ವಿಚಾರ ವನ್ನು ನಿರೂಪಿಸಿಲ್ಲ. ಈ ಪುರಾಣದಲ್ಲಿ ಹೇಳಿರುವ ನಕ್ಷತ್ರ ಪೂಜಾ, ರಾಜ್ಯಾಭಿಷೇಕವಿಧಿ ಅಥರ್ವಣಪ್ರಯೋಗ, ರಾಜ್ಯಕ್ಕೆ ಅತ್ಯಂತ ಉಪಕಾರವನ್ನುಂಟುಮಾಡತಕ್ಕ ಅನೇಕಾ ನೇಕ ವಿಚಾರಗಳು ನಾರದಪುರಾಣದಲ್ಲಿಯೂ ಸಂಗ್ರಹವಾಗಿ ಹೇಳಲ್ಪಟ್ಟಿದೆ.

ಮುಖ್ಯವಾಗಿ ಈ ಪುರಾಣದಲ್ಲಿ ರಾಜರು ವಾಸಮಾಡುವ ಅರಮನೆಗಳ ಲ್ಲಿಯೂ, ಮಹಡಿಗಳಲ್ಲಿಯೂ, ಸಭಾಸ್ಥಾನಗಳಲ್ಲಿಯೂ ಎಂತೆಂತಹ ಚಿತ್ರಗಳನ್ನು ಕೆತ್ತಿಸಬೇಕೋ, ಯಾವ ಯಾವ ಚಿತ್ರಗಳನ್ನು ಗೋಡೆಗಳ ಮೇಲೆ ಬರೆಯಿಸ ಬೇಕೋ, ಯಾವಯಾವುದನ್ನು ಬರೆಯಿಸಬಾರದೋ ಎಂತೆಂತಹ ಚಿತ್ರಗಳನ್ನು ನಿಷೇಧಿಸಬೇಕೋ, ಇವುಗಳನ್ನೆಲ್ಲಾ ವಿಸ್ತಾರವಾಗಿ ನಿರೂಪಿಸಿರುವರಲ್ಲದೆ, ಬಹುಕಾಲ ನಿಲ್ಲುವಂತೆ ಚಿನ್ನ ಬೆಳ್ಳಿಗಳಿಂದ ಮಾಡಿಸಬೇಕಾದ ವಸ್ತುಗಳ ವಿವರಣೆಯೂ ಸಹ ಅಭೂತಪೂರ್ವವಾಗಿ ಈ ಪುರಾಣದಲ್ಲಿ ವಿವರಿಸಲ್ಪಟ್ಟಿದೆ.

ಈ ಪುರಾಣದ ಮೂರನೆಯ ಖಂಡದಲ್ಲಿ ೨೨೭ ನೆಯ ಅಧ್ಯಾಯ ಮೊದಲು ಗೊಂಡು ೩೪೩ನೇ ಅಧ್ಯಾಯ ಪೂರ್ತಿಯಾಗಿ ಒಟ್ಟು ೧೧೭ ಅಧ್ಯಾಯಗಳಲ್ಲಿ ವಿವರಿಸಿ ರುವ ವಿಷಯಗಳೇನೆಂದರೆ. —

ಕಲಿಯುಗದ ಕಡೆಯ ಭಾಗದಲ್ಲಿ ಧರ್ಮಕ್ಕೆ ಧಕ್ಕೆ ತಗುಲಿದಾಗ ಜನರು ಜ್ಞಾನ ಹೀನರಾಗಿ ಅಜ್ಞಾನದಿಂದ ವರ್ತಿಸಲು ಆರಂಭಿಸಿದ ಸಮಯದಲ್ಲಿ ಚರಾಚರ ಪ್ರಪಂಚ ಪರಿಪಾಲಕನಾದ ಭಗವಾನ್ ಮಹಾವಿಷ್ಣುವು ಲೋಕೋದ್ಧಾರಕ್ಕಾಗಿ ಹಂಸಪಕ್ಷಿಯ ಆಕಾರವನ್ನು ಧರಿಸಿ ಲೋಕಕ್ಕೆ ಧರ್ಮವನ್ನು ಉಪದೇಶಮಾಡುವನು. ಈ ರೀತಿ ಹಂಸಪಕ್ಷಿಯು ಉಪದೇಶಿಸಿದ ಧರ್ಮ ನಿರೂಪಣೆಗೆ ಹಂಸಗೀತೆಯೆಂದು ಹೆಸರಾಗಿದೆ.

ಈ ಹಂಸಗೀತೆಯಲ್ಲಿ ಉಪದಿಷ್ಟವಾದ ವಿಷಯಗಳನ್ನು ಇದರ ಕೆಳಗೆ ನಿರೂಪಿಸ ಲಾಗಿದೆ.

ಬ್ರಹ್ಮಚರ್ಯ ಗೃಹಸ್ಥಾದಿ ವರ್ಣಾಶ್ರಮಿಗಳ ವರ್ಣಾಶ್ರಮಧರ್ಮ ವರ್ಣನೆ. ಅಹಂಕಾರ, ಮಮಕಾರ, ಮದ, ಲೋಭ, ಕ್ರೋಧ, ನಾಸ್ತಿಕ್ಯ, ದುರಹಂಕಾರ, ಮುಂ ತಾದ ದೋಷಗಳನ್ನು ನಿಷೇಧಿಸಿ, ಶೌಚ, ಜ್ಞಾನ, ಧರ್ಮ, ಗುರುಶುಶ್ರೂಷಾ, ಕೀರ್ತಿ ಪ್ರಾಪ್ತಿ, ಸೌಶೀಲ್ಯ, ಸತ್ಯವಾದಿತ್ವ, ತಪಸ್ಸು, ಶೌರ್ಯ, ಅಹಿಂಸಾ, ಕ್ಷಮಾ, ಜ್ಞಾನ, ಕೃತಜ್ಞತಾ, ತೀರ್ಥಯಾತ್ರಾ, ಉಪವಾಸ, ಮನಶ್ಶೌಚ, ಶ್ರದ್ಧಾ, ಪ್ರಾಣಾಯಾಮ,

ಪ್ರತ್ಯಾಹಾರ, ಧ್ಯಾನ, ಧಾರಣ ಸಮಾಧಿಗಳ ನಿರೂಪಣೆಯೂ, ದೇವಬ್ರಾಹ್ಮಣಪೂಜಾ ಗೋಸೇವಾ, ಗೋಮಹತ್ವ. ದಯಾದಾಕ್ಷಿಣ್ಯಾದಿಯಾಗಿ ಸಕಲ ಸದ್ಧರ್ಮಗಳೂ ಈ ಗ್ರಂಥದಲ್ಲಿ ಹಂಸಪಕ್ಷಿಯಿಂದ ಉಪದಿಷ್ಟವಾಗಿವೆ.

ಮೇಲೆ ವಿವರಿಸಿದ ಈ ಸಂಗತಿಗಳೆಲ್ಲವೂ ಬೊಂಬಾಯಿನಲ್ಲಿರುವ ವೆಂಕಟೇಶ್ವರ ಮುದ್ರಾಶಾಲಾಧಿಕರಿಗಳು ಸಂಸ್ಕೃತ ಭಾಷೆಯಲ್ಲಿ ನಿರೂಪಿಸಿರುವ ಪ್ರಸ್ತಾವನೆಯನ್ನು ಸ್ವಲ್ಪವೂ ಬಿಡದೆ ಕನ್ನಡಿಸಿದುದಾಗಿದೆ.

ನಮ್ಮ ಮಹಾರಾಜರವರು, ಪ್ರಾಚೀನ ಪುರಾಣಗಳನ್ನು ಕನ್ನಡದಲ್ಲಿ ಪರಿವರ್ತಿಸಿ ಲೋಕೋಪಕಾರ ಮಾಡಬೇಕೆಂಬ ಆಲೋಚನೆಯಿಂದ ಈಗಾಗಲೇ ಭಾಷಾಂತರ ಕೆಲಸದಲ್ಲಿ ನುರಿತ ಪಂಡಿತರನ್ನು ಆರಿಸಿ ಆರಿಸಿ, ಆ ಐತಿಹಾಸಿಕ ಸಂಗತಿಗಳು ಪಂಡಿತಪಾಮರರಾದಿಯಾಗಿ ಎಲ್ಲರಿಗೂ ತಿಳಿಯಬೇಕೆಂಬ ಸಂಕಲ್ಪದಿಂದ ಅನಿತರ ನಿರ್ವಹಣವಾದ ಈ ಮಹಾಕಾರ್ಯಕ್ಕೆ ಕೈಹಾಕಿರುವರು. ಇದು ನಮ್ಮ ದೇಶದ ಜನರ ಭಾಗ್ಯೋದಯವೇ ಸರಿ. ಇದರ ಉಪಯೋಗವನ್ನು ಸಮಸ್ತರೂ ಮಾಡಿಕೊಂಡರೆ ನಮ್ಮ ಶ್ರೀಮನ್ ಮಹಾರಾಜರವರ ಸದುದ್ದೇಶವು ಸಾರ್ಥಕವಾಗುವುದು.

ಈ ಪುರಾಣವು ಬಹಳ ದೊಡ್ಡದಾಗಿರುವುದರಿಂದ ರಾಮಾಯಣ ಭಾರತ ಭಾಗವತಾದಿಗಳಂತೆ ಇದನ್ನೂ ಪ್ರತಿದಿನವೂ ತಾಳ್ಮೆಯಿಂದ ಸ್ವಲ್ಪಸ್ವಲ್ಪವಾಗಿ ಆಹ್ನಿಕಾನಂತರ ಪಾರಾಯಣದಲ್ಲಿಟ್ಟುಕೊಳ್ಳುವುದು ಉತ್ತಮವಾಗಿದೆ. ಹಾಗಲ್ಲದೆ ಸಿಕ್ಕಿಸಿಕ್ಕಿದ ಸಮಯಗಳಲ್ಲಿ ಸಿಕ್ಕಿಸಿಕ್ಕಿದ ಕಡೆ ಇದನ್ನು ಓದತಕ್ಕದ್ದು ಸರಿಯಲ್ಲ. ಹರಿಕಥೆ ಹರಿದಾಸರೂ, ಪುರಾಣಹೇಳುವ ಪುರಾಣೀಕರೂ ಈ ಮಹಾಪುರಾಣವನ್ನು ಚೆನ್ನಾಗಿ ವ್ಯಾಸಂಗಮಾಡಿ ಕಥೆಗಳನ್ನು ಮೂಲಕ್ಕೆ ತಕ್ಕಂತೆ ರಚಿಸಿಕೊಂಡು ಜನರಿಗೆ ಹೇಳುವುದರಿಂದ ಇದು ಸಕಲರಿಗೂ ತಿಳಿದುಬರುವುದು.

ಮೂಲಗ್ರಂಥದ ಸ್ವಾರಸ್ಯವನ್ನು ಸ್ವಲ್ಪವೂ ಬಿಡದೆ, ಜನರಿಗೆ ಓದುವುದಕ್ಕೆ ತೊಡಕಾಗದಂತೆ, ಕಠಿನ ಪದಗಳನ್ನು ಹೆಚ್ಚಾಗಿ ಪ್ರಯೋಗಿಸದೆ ಈ ಮೂಲಗ್ರಂಥವು ಭಾಷಾಂತರ ಮಾಡಲ್ಪಟ್ಟಿದೆ. ವಿದ್ವಾಂಸರು ನೀರಕ್ಷೀರನ್ಯಾಯದಂತೆ ಈ ಗ್ರಂಥದ ಭಾಷಾಂತರದ ಗುಣಾಂಶಗಳನ್ನು ಮಾತ್ರ ಸ್ವೀಕರಿಸಿ ಸಂತೋಷಪಡಬೇಕು. "ನಹಿ ಸರ್ವಸ್ಸರ್ವಂ ಜಾನಾತಿ" ಎಂಬಂತೆ, ಸರ್ವಜ್ಞರಾದವರು ಯಾರೂ ಇರಲಾರರು. ಈ ಸೂಕ್ತಿಯನ್ನನುಸರಿಸಿ ನಾನು ಈ ಗ್ರಂಥದಲ್ಲಿ ಏನಾದರೂ ತಿಳುವಳಿಕೆಯಿಲ್ಲದೆ ತಪ್ಪುಮಾಡಿರಬಹುದು. ಮುದ್ರಣದೋಷಗಳೂ ಇರಬಹುದು.

ಸಕಲ ಶಾಸ್ತ್ರಗಳನ್ನೂ ತಿಳಿದ ಮಹಾಮಹಾಸಂಡಿತೋತ್ತಮರು ನಿರ್ವಹಿಸ ಬಹುದಾದ ಈ ಭಾಷಾಂತರ ಕಾರ್ಯವನ್ನು ಶ್ರೀ ಮನ್ಮಹಾರಾಜರವರು ಅಲ್ಪಮತಿ ಯಾದ ನನಗೆ ವಹಿಸಿರುವುದನ್ನು ನೋಡಿದರೆ ನಮ್ಮ ಮಹಾರಾಜರು ನನ್ನ ಭಾಗದ ದೇವರೇ ಪ್ರತ್ಯಕ್ಷವಾಗಿ ಆಜ್ಞಾಪಿಸಿರುವರೆಂದು ಭಾವಿಸಿ, ಸಕಲ ವಿದ್ಯಾಪ್ರದಳಾದ ಶಾರ ದೆಗೂ, ಜಗತ್ತನ್ನೂ ಜಗತ್ಸುಖವನ್ನೂ ತೃಣೀಕರಿಸಿ ಜೀವನ್ಮುಕ್ತರಾದ, ನನ್ನ ಹೃದ ಯದಲ್ಲಿ ಹೊಕ್ಕು ನನ್ನ ಲೇಖನಿಯಲ್ಲಿ ನಿಂತು ಈ ಪುರಾಣ ಪರಿವರ್ತನೆಯನ್ನು ಅದೃಶ್ಯ ರೂಪದಿಂದ ಮಾಡಿಸುತ್ತಿರುವ ಸದಾಶಿವ ಬ್ರಹ್ಮೇಂದ್ರರಿಗೂ ಸಾಷ್ಟಾಂಗಪ್ರಣಾಮ ಮಾಡಿ, ಈ ಪ್ರಸ್ತಾವನೆಯನ್ನು ಪರಿಸಮಾಪ್ತಿಮಾಡುವೆನು.

ಅಧ್ಯಾತ್ಮರಾಮಾಶ್ರಮ
ಮೈಸೂರು,
ತಾರಣ ಸಂ॥ ಪುಷ್ಯ ಶುದ್ಧ ತದಿಗೆ

ಚಾ. ವೆಂಕಟರಮಣಶಾಸ್ತ್ರಿ,
ಅನುವಾದಕ.



# ವಿಷಯಾನುಕ್ರಮಣಿಕೆ



ಪುಟಸಂಖ್ಯೆ

ಮಾಡದೆ ಆ ಅನ್ನವನ್ನು ತನ್ನ ತಾಯಿಯ ಮಾತಿಗೆ ವಶಳಾಗಿ ಬದಲಾಯಿಸಿಕೊಂಡು ತಿಂದುದರಿಂದ ಗರ್ಭಗಳಲ್ಲಿ ವಿರುದ್ಧಧರ್ಮ ವುಂಟಾಯಿತು. 192-198,

## ಮೂವತ್ತನಾಲ್ಕನೆಯ ಅಧ್ಯಾಯ

ಚ್ಯವನ ಮಹರ್ಷಿಯ ಕೃಪೆಯಿಂದ ಗಾಧಿನೃಪತಿಯ ಮಗ ನಾದ ವಿಶ್ವಾಮಿತ್ರನು ರಾಜಪುತ್ರನಾಗಿ ಹುಟ್ಟಿದಾಗ್ಯೂ ಮುಂದೆ ಬ್ರಾಹ್ಮಣ್ಯವನ್ನು ಸಂಪಾದಿಸುವ ವೃತ್ತಾಂತ :— ಸತ್ಯವತಿಗೆ ಜಮದಗ್ನಿ, ವಾತ್ಸ್ಯರೇ ಮುಂತಾದ ನೂರು ಮಕ್ಕಳುಗಳು ಹುಟ್ಟುವರು. 198-205.

## ಮೂವತ್ತೈದನೆಯ ಅಧ್ಯಾಯ

ಜಮದಗ್ನಿಋಷಿಯ ಹೆಂಡತಿ ರೇಣುಕಾದೇವಿ. ಈಕೆಯು ಮಟಮಟಮಧ್ಯಾಹ್ನದ ಹೊತ್ತಿನಲ್ಲಿ ತನ್ನ ಗಂಡನ ಶರಕ್ರೀಡಾ ಸಮಯದಲ್ಲಿ ಧನುರ್ಮುಕ್ತವಾಗಿ ದೂರ ಹೋಗಿ ಬಿದ್ದ ಬಾಣ ಗಳನ್ನು ತಂದು ತಂದು ಕೊಡುತ್ತಿದ್ದಳು. ಒಂದು ಸಾರಿ ಬಹು ದೂರ ಹೊರಟುಹೋದ ಬಾಣವನ್ನು ಹಿಂದಕ್ಕೆ ತರುತ್ತಿದ್ದಾಗ ಬಿಸಿಲಿನ ಬೇಗೆಯಿಂದ ಬಳಲಿ ಒಂದು ಮರದ ನೆರಳಿನಲ್ಲಿ ಕುಳಿ ತಿದ್ದು ಸ್ವಲ್ಪಹೊತ್ತಿನ ಮೇಲೆ ಬಾಣವನ್ನು ತಂದುಕೊಟ್ಟಳು. ಏಕೆ ಹೊತ್ತಾಯಿತೆಂದು ಗಂಡನು ಕೇಳಲು ಸೂರ್ಯಕಿರಣಗಳು ತನ್ನ ಕಾಲುಗಳನ್ನು ಸುಡುತ್ತಿದ್ದುದರಿಂದ ಬರುವುದು ಹೊತ್ತಾ ಯಿತೆಂದು ಹೇಳಿದಳು. ಇದನ್ನು ಕೇಳಿ ಜಮದಗ್ನಿಗೆ ತನ್ನ ಹೆಂಡತಿಯನ್ನು ಹಿಂಸೆಮಾಡಿದನೆಂದು ಸೂರ್ಯನ ಮೇಲೆ ಬಹಳ ಕೋಪ ಬಂದು ಅವನನ್ನು ಕೊಂದುಬಿಡಬೇಕೆಂದು ಅವನ ಮೇಲೆ ಬಾಣಪ್ರಯೋಗಮಾಡಿದುದನ್ನು ಸೂರ್ಯನು ನೋಡಿ ಹೆದರಿ, ಬ್ರಾಹ್ಮಣವೇಷದಿಂದ ಜಮದಗ್ನಿಯ ಬಳಿಗೆ ಬಂದು, ಅಪ್ಪಾ ! ನನ್ನನ್ನು ಕೊಲ್ಲಬೇಡ. ನಿನ್ನ ಮಗನಾಗಿ ಹುಟ್ಟುತ್ತೇನೆಂದು ಬೇಡಿಕೊಂಡು ಛತ್ರಿ, ಜೋಡುಗಳನ್ನು ನಿರ್ಮಿಸಿ ಸತ್ಯವತಿಗೆ ಕೊಟ್ಟು ಬಿಸಿಲಿನ ತಾಪವನ್ನು ಪರಿಹರಿಸುವನು. ಅಗಲೇ ಪಾದ ರಕ್ಷೆ, ಛತ್ರಿಗಳು ನಿರ್ಮಿತವಾದ ಕಾಲ.—ಛತ್ರ, ಪಾದರಕ್ಷಾ ದಾನ ಮಹಿಮೆ.—ತನ್ನ ಮಾತಿನಂತೆ ಸೂರ್ಯನು ಜಮದ

ಪುಟಸಂಖ್ಯೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದ ಪ್ರಥಮ ಸಂಪುಟದ ವಿಷಯಾನುಕ್ರಮಣಿಕೆಯು ಪೂರ್ಣವಾಯಿತು.

|| ಶ್ರೀಃ ||

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

ಶ್ರೀ ಸೀತಾರಾಮಾಭ್ಯಾಂನಮಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ಪ್ರಥಮೋಽಧ್ಯಾಯಃ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೧ ॥**

**ಕೃತವರ್ಮಾ ತಥಾ ಭೋಜಃ ಶ್ವೇತೋ ಮಾಹಿಷ್ಮತೀಪತಿಃ ।**
**ಕುಳಿಂದಃ ಸರ್ವದಮನೋ ಮಾಳವಿಶ್ಚಂದ್ರವರ್ಧನಃ ॥ ೨ ॥**

**ವತ್ಸನಾಭಶ್ಚ ಬಾಣಶ್ಚ ನಂದೀಶೋ ದರಸತ್ಪತಿಃ ।**
**ಪ್ರತಿಸಾರಶ್ಚಿತ್ರಧನುಸ್ಸರ್ವೋ ವಾಯುರಥಸ್ತಥಾ ॥ ೩ ॥**

**ದ್ರವಿಡಃ ಕುಸುಮಾಪೀಡ ಔತ್ರಶ್ಚ ಸಮರಪ್ರಿಯಃ ।**
**ಶಂಭುಃ ಕಿರಾತರಾಜಶ್ಚ ಔರಸೋ ನಂದಿವರ್ಧನಃ ॥ ೪ ॥**

---

## ಮೊದಲನೆಯ ಅಧ್ಯಾಯವು

೧-೮. ನರನಾರಾಯಣರನ್ನೂ, ಸರಸ್ವತೀ ದೇವಿಯನ್ನೂ, ವ್ಯಾಸಮಹರ್ಷಿಗಳನ್ನೂ ಮೊದಲು ನಮಸ್ಕರಿಸಿ ಬಳಿಕ ಗ್ರಂಥಾರಂಭಮಾಡುವೆವು.

ಪೂರ್ಣಚಂದ್ರನಂತೆ ಇರುವ ಸುಂದರ ಮುಖಕಮಲಗಳಿಂದಲೂ, ಆನೆಯ ಸೊಂಡಿಲಿನಂತಿರುವ ತೊಡೆಗಳಿಂದಲೂ ವಿರಾಜಮಾನರಾದ, ಸಿಂಹಾಸನಾಧೀಶ್ವರರುಗಳಾದ, ಕೃತವರ್ಮ, ಭೋಜ, ಮಾಹಿಷ್ಮತೀ ರಾಜನಾದ ಶ್ವೇತ, ಕುಳಿಂದ,

ವಟುಮುಖೋಲಶ್ಚ ತೂನೇಶಃ ಶಾಲ್ವಶ್ಚ ಜನಮೇಜಯಃ ।
ಸುಹ್ನರಾಜೋ ದಧೀಕರ್ಣೋ ಬಾಹ್ಲೀಕೋ ದಮನಸ್ತಥಾ ॥ ೫ ॥

ಹಿರಣ್ಯನಾಭಃ ಕೌಸಲ್ಯೋ ದಾಶಾರ್ಹೋ ವಿಜಯಸ್ತಥಾ ।
ಏತೇ ಚಾನ್ಯೇ ಚ ರಾಜಾನಃ ಶತಶೋ ಬಹುದಕ್ಷಿಣಾಃ ॥ ೬ ॥

ಸಂಪೂರ್ಣಚಂದ್ರವದನಾ ಗಜರಾಜಕರೋರವಃ ।
ಉಪಾಸಾಂಚಕ್ರಿರೇ ವಜ್ರಂ ಸಿಂಹಾಸನಗತಾ ನೃಪಾಃ ॥ ೭ ॥

ಬಹುಭಿರ್ಭೂಮಿಪಾಲೈಶ್ಚ ತಥಾ ವಜ್ರೇಣ ಧೀಮತಾ ।
ಯುಧಿಷ್ಠಿರೇಣ ಚ ಸದಾ ಶೋಭಿತಾ ಶುಶುಭೇ ಸಭಾ ॥ ೮ ॥

ರಾಜಾನಸ್ತೇ ತತೋ ದೃಷ್ಟ್ವಾ ಋಷೀನ್ ದುರ್ಲಭದರ್ಶನಾನ್ ।
ಬ್ರಹ್ಮಲೋಕಸ್ಥಮಾತ್ಮಾನಮಮನ್ಯಂತ ಯಶೋಭೃತಃ ॥ ೯ ॥

ಊಚುಸ್ತೇ ಪ್ರಣಯಾದ್ವಾಕ್ಯಂ ವಜ್ರಂ ಭೂರಿಸಹಸ್ರದಂ ।
ಯಥಾ ತ್ರೇತಾಯುಗೇ ರಾಜನ್ ದ್ವಾಪರೇಚ ತಥಾ ನೃಪಾಃ ॥ ೧೦ ॥

ಬ್ರಾಹ್ಮಣಾಃ ಬ್ರಹ್ಮಕಲ್ಪಾಶ್ಚ ತಥೈವ ಸುಸಮಾಗತಾಃ ।
ಅಸ್ಮಿಂ ಸ್ತಿಷ್ಯೇ ಚ ಸಂಪ್ರಾಪ್ತೇ ತವ ರಾಜನ್ ಪ್ರಸಾದತಃ ॥ ೧೧ ॥

---

ಸರ್ವದಮನ, ಮಾಳವಿ, ಚಂದ್ರವರ್ಧನ, ವತ್ಸನಾಭ, ಬಾಣ, ನಂದೀಶನೇ ಮೊದಲಾದ ನೂರಾರು ಮಂದಿ ಮಹಾರಾಜರುಗಳು ಕಪ್ಪಕಾಣಿಕೆಗಳನ್ನು ತಂದು ವಜ್ರರಾಜನನ್ನು ಓಲೈಸುತ್ತ ಕುಳಿತಿದ್ದರು. ಆ ವಜ್ರಮಹಾಚಕ್ರವರ್ತಿಯ ಮಹಾರಾಜಸಭೆಯು ಬಹುಮಂದಿ ಮಹಾರಾಜರಿಂದಲೂ ಯುಧಿಷ್ಠಿರನಿಂದಲೂ ಸರ್ವದಾ ಶೋಭಿಸುತ್ತಿತ್ತು.

೯. ಮಹಾಕೀರ್ತಿವಂತರಾದ ಆ ರಾಜರುಗಳು ಆ ಸಭೆಯಲ್ಲಿ ಪ್ರಕಾಶಮಾನರಾಗಿ ಕುಳಿತಿದ್ದ ದುರ್ಲಭದರ್ಶನರಾದ ಮಹರ್ಷಿಗಳನ್ನು ನೋಡಿ ತಾವು ಬ್ರಹ್ಮಲೋಕದಲ್ಲಿರುವೆವೆಂದು ಭಾವಿಸಿಕೊಂಡರು.

೧೦-೧೨. ಆ ಮಹಾರಾಜರೆಲ್ಲರೂ ವಜ್ರರಾಜನನ್ನು ಕುರಿತು ಪ್ರೀತಿಯಿಂದ ಹೇಳಿದುದೇನೆಂದರೆ:—ಎಲೈ! ಮಹಾರಾಜನೇ, ತ್ರೇತಾಯುಗ, ದ್ವಾಪರಯುಗ

**ರಾಜರ್ ಕೃಷ್ಣಸಗೋತ್ರೋಽಸಿ ತೇ ನೇಯಂತೇ ಸಭಾ ನೃಪ ।**
**ಉಪಾಸ್ಯತೇ ಮಹಾಭಾಗೈಃ ಬ್ರಹ್ಮಕಲ್ಪೈಸ್ತಪೋಧನೈಃ ॥ ೧೨ ॥**

**ಭಕ್ತ್ಯಾ ಯಥಾ ತು ತಸ್ಯೈವ ಕೃಷ್ಣಸ್ಯಾಮಿತತೇಜಸಃ ।**
**ತೇನ ಕೃಷ್ಣೇನ ಯೇ ಚಕ್ರುರ್ವ್ಯತೀತಾಃ ಪೂರ್ವಪಾರ್ಥಿವಾಃ ॥ ೧೩ ॥**

**ವರ್ತತಾ ತೇನ ಕೃಷ್ಣೇನ ತೇ ರಾಜನ್ ಮೋಕ್ಷಮಾಪ್ನುಯುಃ ।**
**ಅಥ ತಿಷ್ಯಯುಗಃ ಪ್ರಾಪ್ತೋ ಘೋರಃ ಪರಮದಾರುಣಃ ॥ ೧೪ ॥**

**ದುರ್ಲಭಂ ದರ್ಶನಂ ಯತ್ರ ನೃಪಸಂಘೇ ಮಹಾತ್ಮನಾಂ ।**
**ತಸ್ಮಾತ್ತ್ವಂ ರಾಜಶಾರ್ದೂಲ ಪ್ರಷ್ಟುಮರ್ಹಸಿ ದ್ವಿಜೋತ್ತಮಾನ್ ॥ ೧೫ ॥**

**ವೈಷ್ಣವಾನ್ ವಿವಿಧಾನ್ ಧರ್ಮಾನ್ ಸರಹಸ್ಯಾನ್ ಸಸಂಗ್ರಹಾನ್ ॥ ೧೬ ॥**

**ಇತ್ಯೇವಮುಕ್ತೋ ವಜ್ರಸ್ತೈಸ್ತ್ಯಕ್ತ್ವಾ ಸಿಂಹಾಸನಂ ತದಾ ।**
**ವಜ್ರಂ ತು ಪ್ರಾಂಜಲಿಂ ದೃಷ್ಟ್ವಾ ಸರ್ವ ಏವ ನರಾಧಿಪಾಃ ॥ ೧೭ ॥**

---

ಗಳಲ್ಲಿದ್ದಂತೆ ಈ ಕಲಿಯುಗದಲ್ಲೂ ಸಹ ಬ್ರಹ್ಮವೇತ್ತರಾದ ಬ್ರಾಹ್ಮಣರು ನಿನ್ನ ಅನುಗ್ರಹದಿಂದ ಈ ಸಭೆಯಲ್ಲಿ ಸೇರಿದಾರೆ. ಎಲೈ! ದೊರೆಯೇ, ನೀನು ಕೃಷ್ಣನಿಗೆ ಸಮಾನನಾಗಿರುವೆ. ಈ ಸಭೆಯು ಕೃಷ್ಣನಸಭೆಗೆ ಸಮಾನವಾಗಿದೆ. ಈ ನಿನ್ನ ಆಸ್ಥಾನವೂ ಸಹ ಬ್ರಹ್ಮವೇತ್ತರಾದ, ತಪೋಧನರಾದ ಮಹರ್ಷಿಗಳಿಂದ ಉಪಾಸಿಸಲ್ಪಡುತಲಿದೆ.

೧೩-೧೬. ಅಧಿಕ ಪರಾಕ್ರಮಶಾಲಿಯಾದ ಶ್ರೀ ಕೃಷ್ಣನಲ್ಲಿ ಸಕಲರಾಜರೂ ಅದೆಂತು ಭಕ್ತಿಯಿಂದಿದ್ದರೋ, ಆ ಹಿಂದಿನ ದ್ವಾಪರಯುಗದಲ್ಲಿದ್ದ ಮಹಾರಾಜರೆಲ್ಲರೂ ಕೃಷ್ಣನೊಡನೆ ಸೇರಿ ಮೋಕ್ಷವನ್ನು ಅದೆಂತು ಪಡೆದರೋ ಅಂತೆಯೇ ಈ ಕಲಿಯುಗದಲ್ಲಿ ಕೃಷ್ಣಸದೃಶನಾದ ನಿನ್ನೊಡನೆ ನಾವು ಕೂಡಿರುವೆವು. ಈ ರಾಜರ ಗುಂಪಿನಲ್ಲಿ ಮಹಾತ್ಮರೂ, ದರ್ಶನಕ್ಕೆ ದುರ್ಲಭರಾದ ಬ್ರಹ್ಮರ್ಷಿಗಳೂ ಸಹ ಸೇರಿರುವರು. ಆದ್ದರಿಂದ ಎಲೈ! ರಾಜಶ್ರೇಷ್ಠನೇ, ವೈಷ್ಣವಸಂಬಂಧವಾದ ವಿವಿಧ ಧರ್ಮಗಳನ್ನೂ ಧರ್ಮರಹಸ್ಯಗಳನ್ನೂ ಸಂಗ್ರಹವಾಗಿ ಉಪದೇಶಿಸುವಂತೆ ಇಲ್ಲಿ ಪ್ರಕಾಶಮಾನರಾಗಿರುವ ಬ್ರಾಹ್ಮಣಶ್ರೇಷ್ಠರನ್ನು ಕೇಳುವುದು ಯುಕ್ತವಾಗಿದೆ.

೧೭. ರಾಜರೆಲ್ಲರೂ ಹೇಳಿದ ಈ ಮಾತನ್ನು ಕೇಳಿದೊಡನೆಯೇ ವಜ್ರರಾಜನು ಸಿಂಹಾಸನದಿಂದ ಕೆಳಕ್ಕಿಳಿದು ಕೈಜೋಡಿಸಿ ನಿಂತುಕೊಂಡನು. ಇದನ್ನು ನೋಡಿ ಆ

ವರಾಸನಾ‌ನ್ ವಿಹಾಯಾಶು ತಸ್ಥುಃ ಪ್ರಾಂಜಲಯಸ್ತದಾ ।

ವಜ್ರ ಉವಾಚ

ಭವದ್ಭಿಃ ನೃಪಶಾರ್ದೂಲಾಃ ಪ್ರಾರ್ಥಿತಾ ಯೇ ದ್ವಿಜಾಃ ಶ್ರಿತಾಃ ॥ ೧೮ ॥

ಅನುಗ್ರಹಾರ್ಥಂ ಭೂಪಾನಾಂ ಜಗತೋ ಹಿತಕಾಮ್ಯಯಾ ।
ಭವಂತೋ ವಕ್ತುಮರ್ಹಂತಿ ವಿಷ್ಣುಧರ್ಮಾನ್ ಸನಾತನಾನ್ ॥ ೧೯ ॥

ತಸ್ಮಾತ್ತ್ರಿಷ್ಯಯುಗೇ ನಾಸ್ತಿ ಭವತೋ ದರ್ಶನಂ ನೃಪೈಃ ।

ಋಷಯ ಊಚುಃ

ಉತ್ತಿಷ್ಠ ತ್ವಂ ಮಹೀಪಾಲ ಅಲಂಕುರು ತ್ವದಾಸನಂ ॥ ೨೦ ॥

ಶ್ರವಣೇಽಪಿ ವಯಂ ತಸ್ಯ ವಿಶೇಷೇಣಾರ್ಥಿತಾ ನೃಪ ।
ವಜ್ರ ತೇ ಸಂಶಯಾನ್ ಸರ್ವಾನ್ ಛೇತ್ಸ್ಯತ್ಯೇಷ ಮಹಾಮುನಿಃ ॥ ೨೧ ॥

---

ಮಹಾಸಭೆಯಲ್ಲಿದ್ದ ಸಕಲಭೂಪಾಲಕರೂ ಸಹ ತಮ್ಮ ತಮ್ಮ ಆಸನಗಳನ್ನು ಬಿಟ್ಟು ಮೇಲಕ್ಕೆದ್ದು ವಜ್ರಮಹಾರಾಜನಂತೆ ತಾವೂ ಕೈಮುಗಿದುಕೊಂಡು ನಿಂತುಕೊಂಡರು.

೧೮-೧೯. ವಜ್ರರಾಜನು ಹೇಳುತ್ತಾನೆ:— ಎಲೈ ! ಇಲ್ಲಿ ಕೂಡಿರುವ ರಾಜ ಮಹಾರಾಜರುಗಳಿರಾ, ಕೇಳಿರಿ "ನಿಮ್ಮಿಂದ ಪ್ರಾರ್ಥಿಸಲ್ಪಟ್ಟ ಈ ಸಭಾಸದರಾದ ಮಹರ್ಷಿಗಳು ಲೋಕ ಹಿತಾರ್ಥವಾಗಿಯೂ, ನಿಮ್ಮ ಸರ್ವರ ಅನುಗ್ರಹಾರ್ಥ ವಾಗಿಯೂ ಸನಾತನವಾದ ವಿಷ್ಣುಧರ್ಮಗಳನ್ನು ತಿಳಿಸುತ್ತಾರೆ.'' ಹೀಗೆಂದು ಹೇಳಿ ಬ್ರಾಹ್ಮಣರೆದುರಾಗಿ ನಿಂತು ಈ ಕಲಿಯುಗದಲ್ಲಿ ನಿಮ್ಮಂತಹ ಮಹಾತ್ಮರ ದರ್ಶನವು ರಾಜರಿಗೆ ಸಿಕ್ಕುವುದು ಕಷ್ಟವೆನಲು,

೨೦-೨೧. ಋಷಿಗಳು ಹೇಳುತ್ತಾರೆ:—ಎಲೈ ವಜ್ರಭೂಪಾಲನೇ ಏಳು, ನಿನ್ನ ಸಿಂಹಾಸನದಮೇಲೆ ಹೋಗಿ ಕುಳಿತುಕೋ ಇಲ್ಲಿರುವ ಧೊರೆಗಳು ಹೇಳಿದ ಮಾತನ್ನು ಕೇಳಿದೆವು. ಅವರ ಪ್ರಾರ್ಥನೆಯನ್ನು ತಿಳಿದುಕೊಂಡೆವು. ಎಲೈ! ವಜ್ರನೇ, ನಿನ್ನ ಮನಸ್ಸಿನಲ್ಲಿರುವ ಸಂಶಯವೇನೆಂದು ಕೇಳು. ಆ ಸಂಶಯಗಳನ್ನೆಲ್ಲಾ ಈ ಮಹರ್ಷಿಯು ಪರಿಹರಿಸುವನು.

ಇತ್യೈವಮುಕ್ತ್ವಾ ವಜ್ರಂ ತೇ ಋಷಯಸ್ತಪಸಿ ಸ್ಥಿತಾಃ ।
ಮಾರ್ಕಂಡೇಯಮಥೋಚುಸ್ತೇ ಬ್ರೂಹಿ ಧರ್ಮಾನ್ ಮಹೀಪತೇ ॥ ೨೨ ॥

ವೈಷ್ಣವಾನ್ ವಿವಿಧಾನ್ ಧರ್ಮಾನ್ ಲೋಕಾನಾಮಘಹಾರಿಣಃ ।
ತಥಾ ಪಾರ್ಥಿವಸಂಘಸ್ಯ ಸಂಶಯಾನ್ ಮನಸಿ ಸ್ಥಿತಾನ್ ॥ ೨೩ ॥

ಮಾರ್ಕಂಡೇಯ ಉವಾಚ

ಬ್ರಹ್ಮಣ್ಯಃ ಸತ್ಯವಾನ್ ಧನ್ಯಃ ಸರ್ವಶತ್ರುನಿಬರ್ಹಣಃ ।
ಯದ್ಯತ್ಪೃಚ್ಛಸಿ ಮಾಂ ವಜ್ರ ತತ್ತದ್ವಕ್ಷ್ಯಾಮ್ಯಸಂಶಯಂ ॥ ೨೪ ॥

ಸಿಂಹಾಸನಸ್ಥೋ ಭವ ಭೂಮಿಪಾಲ
ಭವಂತು ಸರ್ವೇಽಪಿ ತಥಾ ಮಹೀಪಾಃ ।
ಸುಖೋಪವಿಷ್ಟೈರಿಹ ಭೂಮಿಪಾಲೈಃ
ಸ್ವಸಂಶಯಾನ್ ಬ್ರೂಹಿ ಯಥಾ ಪ್ರಕಾಮಂ ॥ ೨೫ ॥

---

೨೨. ಹೀಗೆಂದು ವಜ್ರನಿಗೆ ಹೇಳಿ ಆ ತಪಸ್ವಿಗಳೆಲ್ಲರೂ ಮಾರ್ಕಂಡೇಯ ಋಷಿಯ ಬಳಿಗೆ ಬಂದು, ಎಲೈ! ಮಹರ್ಷಿಯೇ, ಸಕಲ ಧರ್ಮಗಳನ್ನೂ ಈ ವಜ್ರನಿಗೆ ಹೇಳು.

೨೩. ಸಮಸ್ತಜನರ ಪಾಪಗಳನ್ನೂ ಪರಿಹರಿಸತಕ್ಕ ವಿವಿಧ ವೈಷ್ಣವಧರ್ಮಗಳನ್ನೂ ಮತ್ತು ಇಲ್ಲಿ ಗುಂಪುಗುಂಪಾಗಿ ಸೇರಿರುವ ರಾಜರುಗಳ ಮನಸ್ಸಿನಲ್ಲಿರುವ ಸಂಶಯಗಳನ್ನೂ ಪರಿಹರಿಸು.

೨೪. ಮಾರ್ಕಂಡೇಯನು ಹೇಳುತ್ತಾನೆ:—ಬ್ರಹ್ಮಜ್ಞಾನಿಯೂ, ಸತ್ಯಸಂಧನೂ, ಪುಣ್ಯಶಾಲಿಯೂ, ಸಕಲಶತ್ರುಸಂಹಾರಕನೂ ಆದವನು ಈ ವಜ್ರನು. ಎಲೈ! ವಜ್ರನೇ, ನೀನು ಏನೇನು ಪ್ರಶ್ನೆಯನ್ನು ಕೇಳುವಿಯೋ, ಕೇಳು, ಅದೆಲ್ಲ ಪ್ರಶ್ನೆಗಳಿಗೂ ನಿಸ್ಸಂಶಯವಾದ ಉತ್ತರವನ್ನು ಕೊಡುವೆನು.

೨೫. ಎಲೈ! ರಾಜನೇ, ಸಿಂಹಾಸನದ ಮೇಲೆ ಕುಳಿತುಕೋ. ಅದರಂತೆ ಇಲ್ಲಿರುವ ಎಲ್ಲಾ ರಾಜರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳಲಿ. ಯಾರು ಯಾರಿಗೆ ಯಾವಯಾವ ಧರ್ಮಸಂದೇಹಗಳು ಉಂಟೋ ಅದನ್ನೆಲ್ಲಾ ಕುಳಿತುಕೊಂಡೇ ಯಥೇಚ್ಛವಾಗಿ ಪ್ರಶ್ನೆಮಾಡಿರಿ.

ಇತ್ಯೇವಮುಕ್ತೇ ಸ ಯದುಪ್ರಧಾನೋ
ಭೃಗುಪ್ರಬರ್ಹೇಣ ಮಹರ್ಷಿಮಧ್ಯೇ ।
ಪ್ರಣಮ್ಯ ವಿಪ್ರಾನ್ ಸ ಜಗಾಮ ರಾಜಾ
ಸಿಂಹಾಸನಂ ರತ್ನಸಹಸ್ರಚಿತ್ರಂ ॥ ೨೬ ॥
ಸಿಂಹಾಸನಸ್ಥೇ ನೃಪವರ್ಯಮುಖ್ಯೇ
ಸಿಂಹಾಸನಸ್ಥಾಃ ಕ್ಷಿತಿಪಪ್ರಧಾನಾಃ ।
ಸರ್ವೇ ಬಭೂವುಃ ಪ್ರಣತಾಸ್ತಥಾ ಚ
ಶುಶ್ರೂಷವೋ ಬ್ರಾಹ್ಮಣಮುಖ್ಯವಾಕ್ಯಂ ॥ ೨೭ ॥

ವಜ್ರ ಉವಾಚ

ಆಚಕ್ಷ್ವ ಮಹ್ಯಂ ಭೃಗುವಂಶಚಂದ್ರ
ಸಮುದ್ಭವಂ ತ್ವಂ ಜಗತೋ ಯಥಾವತ್ ।
ಶೃಣ್ವಂತಿ ಮೇ ಬ್ರಾಹ್ಮಣಸಂಘಮುಖ್ಯಾ
ನರೇಂದ್ರಮುಖ್ಯಾಶ್ಚ ವಚಸ್ತ್ವದೀಯಂ ॥ ೨೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯವಜ್ರಸಂವಾದೇ ಕಥಾಪ್ರಸ್ತಾವನಂನಾಮ
ಪ್ರಥಮೋಽಧ್ಯಾಯಃ

---

೨೬. ಮಾರ್ಕಂಡೇಯನು ಹೇಳಿದ ಈ ಮಾತನ್ನು ಕೇಳಿ ಆ ಯದುವಂಶದ ಮಹಾರಾಜನಾದ ವಜ್ರನು ಸಮಸ್ತ ಬ್ರಾಹ್ಮಣರನ್ನೂ ನಮಸ್ಕರಿಸಿ ರತ್ನಖಚಿತವಾದ ತನ್ನ ಸಿಂಹಾಸನದ ಮೇಲೆ ಹೋಗಿ ಕುಳಿತನು.

೨೭. ಮಾರ್ಕಂಡೇಯನ ಮಾತಿನಂತೆ ವಜ್ರನು ಸಿಂಹಾಸನದ ಮೇಲೆ ಕುಳಿತುಕೊಂಡೊಡನೆಯೇ ಇತರರಾದ ಸಕಲರಾಜರೂ ಋಷಿಮಂಡಲಕ್ಕೆ ನಮಸ್ಕರಿಸಿ ತಾವೂ ಕುಳಿತುಕೊಂಡರು.

೨೮. ವಜ್ರರಾಜನು ಹೇಳುತ್ತಾನೆ:—ಎಲೈ! ಮಾರ್ಕಂಡೇಯ ಋಷಿಯೇ, ಈ ಪ್ರಪಂಚದ ಉತ್ಪತ್ತಿಯನ್ನು ಯಥಾವತ್ತಾಗಿ ತಿಳಿಸು. ಇಲ್ಲಿ ಸೇರಿರುವ ಬ್ರಾಹ್ಮಣ ಸಮುದಾಯವೂ ರಾಜಮಹಾರಾಜಮಂಡಲವೂ ನಿನ್ನ ಮಾತನ್ನು ಕೇಳುತ್ತ ಕುಳಿತುಕೊಂಡಿರುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದದಲ್ಲಿ ಕಥಾಪ್ರಸ್ತಾವನೆಯೆಂಬ
ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

### ॥ ದ್ವಿತೀಯೋಧ್ಯಾಯಃ ॥

**ಮಾರ್ಕಂಡೇಯ ಉವಾಚ**

**ನಾರಾಯಣಂ ನಮಸ್ಕೃತ್ಯ ಸರ್ವಭೂತಪರಾಯಣಂ ।**
**ಲಕ್ಷ್ಮೀಸಹಾಯಂ ವರದಂ ಶೇಷಪರ್ಯಂಕಶಾಯಿನಂ ॥ ೧ ॥**

**ಜಗತೋಸ್ಯ ಸಮುತ್ಪತ್ತಿಸ್ಥಿತಿನಾಶೈಕಕಾರಣಂ ।**
**ಜ್ಞಾನಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ಸಂಸ್ಥಿತಂ ॥ ೨ ॥**

**ವಕ್ಷ್ಯಾಮಿ ಜಗತಾಂ ರಾಜನ್ ಸಮುತ್ಪತ್ತಿಂ ನಿಬೋಧ ತಾಂ ।**
**ಸರ್ವಪಾಪಪ್ರಶಮನೀ ಮಾಯುಷ್ಯಾಂ ಸ್ವರ್ಗದಾಂ ಶಿವಾಂ ॥ ೩ ॥**

---

### ಎರಡನೆಯ ಅಧ್ಯಾಯವು.

೧-೩. ಸರ್ವಪ್ರಾಣಿಗಳಿಗೂ ಆಶ್ರಯಸ್ಥಾನನಾಗಿಯೂ, ಲಕ್ಷ್ಮೀಪತಿಯಾಗಿಯೂ, ಇಷ್ಟಾರ್ಥವನ್ನು ಕೊಡುವವನಾಗಿಯೂ, ಆದಿಶೇಷನೆಂಬ ಮಂಚದ ಮೇಲೆ ಮಲಗಿರುವವನಾಗಿಯೂ, ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಈ ಜಗತ್ತಿನ ಹುಟ್ಟು, ಇರುವಿಕೆ, ನಾಶಗಳಿಗೆ ಕಾರಣನಾಗಿಯೂ, ಜ್ಞಾನದಿಂದ ತಿಳಿಯಲ್ಪಡುವವನಾಗಿ, ಜ್ಞಾನದಿಂದಲೇ ಹೊಂದಲ್ಪಡುವವನಾಗಿಯೂ, ಎಲ್ಲರ ಹೃದಯದಲ್ಲಿ (ಮನಸ್ಸಿನಲ್ಲಿ) ವಾಸಮಾಡುವವನಾಗಿಯೂ ಇರುವ ನಾರಾಯಣನನ್ನು ನಮಸ್ಕರಿಸಿ, ಎಲೈ! ವಜ್ರನೇ, ಈ ಜಗತ್ತು ಹುಟ್ಟಿದ ಸಂಗತಿಯನ್ನು ಹೇಳುತ್ತೇನೆ, ಚೆನ್ನಾಗಿ ಕೇಳು. ಇದನ್ನು ಕೇಳಿದರೆ ಸಕಲಪಾಪವೂ ನಾಶವಾಗಿ ಆಯುಸ್ಸು ಹೆಚ್ಚುವುದು. ಈ ಚರಿತ್ರೆಯು ಮಂಗಳಕರವಾದುದು. ಸ್ವರ್ಗಲೋಕವಾಸವನ್ನು ಕೊಡತಕ್ಕುದು.

**ನಾರಾಯಣೋಽಸ್ಯ ಜಗತಃ ಸೃಷ್ಟಿಸಂಹಾರಪಾಲನಂ ।**
**ಕರೋತಿ ಜಗತೀಪಾಲ ಯಸ್ಯ ಸರ್ವಮಿದಂ ಮಹಾನ್ ॥ ೪ ॥**

**ವೇದೇಷು ಗೀಯತೇ ಯೋಽಸೌ ಪುರುಷಃ ಪಂಚವಿಂಶಕಃ ।**
**ಅನಾದಿನಿಧನೋ ಧಾತಾ ತ್ವನಂತಃ ಪುರುಷೋತ್ತಮಃ ॥ ೫ ॥**

**ಯಸ್ಯೋನ್ಮೇಷಸ್ತು ದಿವಸೋ ಬ್ರಹ್ಮಣಃ ಪರಮೇಷ್ಠಿನಃ ।**
**ನಿಮೇಷಸ್ತು ತಥಾ ರಾತ್ರಿಸ್ತಚ್ಚ ಕಲ್ಪಂ ಪ್ರಕೀರ್ತಿತಂ ॥ ೬ ॥**

**ಪುರುಷತ್ವೇತ್ವನಂತಸ್ಯ ನ ರೂಪಂ ನೃಪ ವಿದ್ಯತೇ ।**
**ನ ಚ ಶಬ್ದೋ ನ ಚ ಪ್ರಾಣಃ ಸ್ಪರ್ಶೋ ವಾ ಪೃಥಿವೀಪತೇ ॥ ೭ ॥**

**ನ ತಸ್ಯ ಪರಿಮಾಣಂ ವಾ ನಚಾದಿರ್ನಿಧನಂ ಕುತಃ ।**
**ಸರ್ವತಃ ಪಾಣಿಪಾದಾಂತಃ ಸರ್ವತೋಽಕ್ಷಿಶಿರೋಮುಖಃ ॥ ೮ ॥**

---

೪-೬. ಎಲೈ! ರಾಜನೇ, ಕೇಳು, ಈ ನಾರಾಯಣನು ಈ ಪ್ರಪಂಚದ ಸೃಷ್ಟಿಗೂ ಲಯಕ್ಕೂ ಪಾಲನೆಗೂ ಕಾರಣನಾದವನು. ಮಹತ್ತಾದೀ ಭೂಲೋಕವನ್ನು ನಿರ್ಮಿಸುವವನೇ ಈತನು. ವೇದಗಳಲ್ಲಿ ಇಪ್ಪತ್ತೈದು ವಿಧವಾದ ಪುರುಷನೆಂದು ನಾರಾಯಣನು ಗಾನಮಾಡಲ್ಪಡುತ್ತಿದಾನೆ. ತುದಿಮೊದಲಿಲ್ಲದವನೆಂದೂ, ಬ್ರಹ್ಮನೆಂದೂ, ಅನಂತನೆಂದೂ, ಪುರುಷಶ್ರೇಷ್ಠನೆಂದೂ ಈ ನಾರಾಯಣನಿಗೆ ಅನೇಕ ನಾಮಗಳಿವೆ. ಯಾವನ ಕಣ್ಣಿರೆಪ್ಪೆಯು ತೆರೆಯಲ್ಪಟ್ಟಿರುವುದೋ ಆ ಸಮಯಕ್ಕೆ ಹಗಲೆಂದು ಹೆಸರು. ಆ ರೆಪ್ಪೆಯು ಮುಚ್ಚಲ್ಪಟ್ಟರೆ ರಾತ್ರಿಯೆಂದು ಹೆಸರಾಗುವುದು. ಇದಕ್ಕೆ ಕಲ್ಪವೆಂದು ಹೆಸರುಂಟು.

೭-೧೦. ಎಲೈ! ವಜ್ರರಾಜನೇ, ಕೇಳು, ಆ ಅನಂತನ ಪುರುಷಸ್ವರೂಪದಲ್ಲಿ ರೂಪವೆಂಬುದಿಲ್ಲ. ಶಬ್ದವಿಲ್ಲ. ಪ್ರಾಣವೂ ಇಲ್ಲ. ಸ್ಪರ್ಶವೂ ಇಲ್ಲ. ಆ ಅನಂತನಿಗೆ ಅಳತೆಯಿಲ್ಲ. ಆದಿಯಿಲ್ಲದೇ ಇದ್ದಮೇಲೆ ತುದಿಯೆಲ್ಲಿ ಬಂದೀತು? ಇವನಿಗೆ ಎಲ್ಲ ಕಡೆಯಲ್ಲಿಯೂ ಕೈಕಾಲುಗಳು ಪ್ರಸರಿಸಿಕೊಂಡಿವೆ. ಎಲ್ಲೆಲ್ಲೂ ಕಣ್ಣು, ತಲೆ, ಮುಖಗಳಿವೆ. ಎಲ್ಲೆಡೆಗಳಲ್ಲೂ ಕಿವಿಗಳಿವೆ. ಎಲ್ಲ ಪ್ರಪಂಚವನ್ನೂ ಆವರಿಸಿಕೊಂಡಿದಾನೆ. ಇವನು ಸಕಲ ಇಂದ್ರಿಯಗುಣಗಳಿಗೂ ಹೊರಗಾದವನಾಗಿದಾನೆ. ಸಕಲೇಂದ್ರಿಯಗಳಿಂದ ಬಿಡಲ್ಪಟ್ಟವನಾಗಿದಾನೆ. ಒಂದರ ಸೋಂಕೂ ಇವನಿಗಿಲ್ಲ.

**ಸರ್ವತಃ ಶೃತಿಮಾ೯ ಲೋಕೇ ಸರ್ವಮಾವೃತ್ಯ ತಿಷ್ಠತಿ ।**
**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ॥ ೯ ॥**

**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ।**
**ತಂ ಚ ಪ್ರಾಪ್ಯ ಭವಂತೀಹ ಯೇ ಮುಕ್ತಾಃ ಪುರುಷೋತ್ತಮಾಃ ॥ ೧೦ ॥**

**ಸುಗತಿರ್ಯೋಗಸಿದ್ಧಾನಾಂ ತಸ್ಮಾತ್ಸರ್ವಸ್ಯ ಸಂಭವಃ ।**
**ತಸ್ಮಾದ್ಭವತಿ ಚಾವ್ಯಕ್ತಸ್ತಸ್ಮಾದಾತ್ಮಾಽಪಿ ಜಾಯತೇ ॥ ೧೧ ॥**

**ತಸ್ಮಾದ್ಬುದ್ಧಿರ್ಮನಸ್ತಸ್ಮಾತ್ತತಃ ಖಂ ಪವನಸ್ತತಃ ।**
**ತಸ್ಮಾತ್ತೇಜಸ್ತತಸ್ತ್ವಾಪಃ ತೇಭ್ಯೋಂಡಮಭವತ್ಕಿಲ ॥ ೧೨ ॥**

**ಅಂಡೋ ಹಿರಣ್ಮಯೋ ರಾಜ೯ ತಸ್ಯಾಂತಃ ಸ್ವಯಮೇವ ಹಿ ।**
**ಶರೀರಗ್ರಹಣಂ ಪೂರ್ವಂ ಸೃಷ್ಟ್ಯರ್ಥಂ ಕುರುತೇ ಪ್ರಭುಃ ॥ ೧೩ ॥**

---

ಆದರೂ ಎಲ್ಲಾಲೋಕವನ್ನೂ ಧರಿಸಿದ್ದಾನೆ. ನಿರ್ಗುಣನಾದರೂ ಗುಣದಿಂದ ಭೋಗಿಸಲ್ಪಡುವವನಾಗಿದ್ದಾನೆ. ಇಂತಹ ನಾರಾಯಣಸ್ವರೂಪನನ್ನು ತಿಳಿದ ಮಹನೀಯರು ಮುಕ್ತರೆಂದು ಹೇಳಿಸಿಕೊಳ್ಳುತ್ತಾರೆ.

೧೧-೧೪. ಯೋಗ,(ಜ್ಞಾನ)ದಿಂದ ಸಿದ್ಧಿ,(ಮುಕ್ತಿ)ಯನ್ನು ಹೊಂದಿದ ಮಹಾತ್ಮರಿಗೆ ಸದ್ಗತಿಯಾಗುವುದು. ಆ ಪರಮಾತ್ಮ(ನಾರಾಯಣ) ನಿಂದಲೇ ಸಕಲವೂ ಹುಟ್ಟುವುದು. ಆ ಪರಮಾತ್ಮನು ಮೊದಲು ಅವ್ಯಕ್ತವನ್ನು ನಿರ್ಮಿಸುವನು. ಆ ಅವ್ಯಕ್ತ(ಕಣ್ಣಿಗೆ ಕಾಣದ ಚಿದ್ವಸ್ತು)ದಿಂದ ಪರಮಾತ್ಮನು ಉದಯಿಸುತ್ತಾನೆ. ಆ ಆತ್ಮನಿಂದ ಬುದ್ಧಿ, ಬುದ್ಧಿಯಿಂದ ಮನಸ್ಸು, ಮನಸ್ಸಿನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಬೆಂಕಿ, ಬೆಂಕಿಯಿಂದ ನೀರು, ನೀರಿನಿಂದ ಅಂಡ,(ಮೊಟ್ಟೆ,)ವೂ ಆಗುವುದು. ಆ ಅಂಡವು ಚಿನ್ನದ ಬಣ್ಣದಿಂದಿರುತ್ತದೆ. ಎಲೈ ರಾಜನೇ ಕೇಳು? ಆ ಹಿರಣ್ಮಯಾಂಡದಲ್ಲಿ(ಹಿರಣ್ಯಗರ್ಭನಲ್ಲಿ)ಶರೀರ ಗ್ರಹಣಪೂರ್ವದಲ್ಲಿ ಪರಮಾತ್ಮನು ತಾನೇ ಪ್ರವೇಶಿಸಿ, ಕ್ರಮಕ್ರಮವಾಗಿ ಅವಯವಗಳನ್ನು ಹೊಂದಿ, ಶರೀರಗ್ರಹಣಾನಂತರ ಚತುರ್ಮುಖಬ್ರಹ್ಮನಾಗುವನು. ಬ್ರಹ್ಮನಿಗೆ ರಜೋಗುಣವು ಹೆಚ್ಚು. ಆ ರಜೋಗುಣದಿಂದ ಬ್ರಹ್ಮಶರೀರನಾಗಿ ಈ ಚರಾಚರ ಪ್ರಪಂಚವನ್ನು ನಿರ್ಮಾಣ ಮಾಡುವನು. ಈ ಅರ್ಥವನ್ನೇ ಉಪನಿಷತ್ತು:—ತಸ್ಮಾದೇತಸ್ಮಾದಾತ್ಮನಆಕಾಶ

ಬ್ರಹ್ಮಾ ಚತುರ್ಮುಖೋ ದೇವೋ ರಜೋಮಾತ್ರಾಧಿಕಸ್ಸದಾ ।
ಶರೀರಗ್ರಹಣಂ ಕೃತ್ವಾ ಸೃಜತೀದಂ ಚರಾಚರಂ ॥ ೧೪ ॥

ಅಂಡಸ್ಯಾಂತರ್ಜಗತ್ಸರ್ವಂ ಸದೇವಾಸುರಮಾನುಷಂ ।
ಸಪ್ತಲೋಕಾನ್ ಸಪಾತಾಳಾನ್ ಸಪ್ತದ್ವೀಪಾರ್ಣವಾಂ ಮಹೀಂ ॥ ೧೫ ॥

ಸೃಷ್ಟಿಂ ಕೃತ್ವಾ ಸ ಭಗವಾನ್ ಸಾತ್ವಿಕೀಮಾಸ್ಥಿತಸ್ತನುಂ ।
ಕ್ಷೀರೋದೇ ಕೇಶವೋ ಭೂತ್ವಾ ಶೇಷಭೋಗಮಯಃ ಪ್ರಭುಃ ॥ ೧೬ ॥

ಲಕ್ಷ್ಮೀಸಹಾಯೋ ಲೋಕಾಂಸ್ತು ಸರ್ವಾನ್ ಪಾಲಯತೇ ಸದಾ ।
ಯೋಗನಿದ್ರಾಂ ಸಮಾಸ್ಥಾಯ ಸರ್ವಸತ್ವಶರೀರಗಃ ॥ ೧೭ ॥

ಶುಭಾಶುಭಾನಿ ಕರ್ಮಾಣಿ ಸರ್ವೇಷಾಂ ಸ ಹಿ ಪಶ್ಯತಿ ।
ಅಂತಕಾಲೇ ಹರೋ ಭೂತ್ವಾ ಜಗತ್ಸಂಹರತೇ ಪುನಃ ॥ ೧೮ ॥

---

ಸ್ಸಂಭೂತಃ-ಆಕಾಶಾದ್ವಾಯುಃ; ಇತ್ಯಾದಿ ಮಂತ್ರಗಳಿಂದ ಪ್ರತಿಪಾದನೆ ಮಾಡುತ್ತಿರುವುದು. ಹಿರಣ್ಯಗರ್ಭಸ್ಸಮವರ್ತತಾಗ್ರೇ-ಮುಂತಾದ ವೇದಮಂತ್ರಗಳೂ ಇದಕ್ಕೆ ಆಧಾರಗಳು.

೧೫-೧೮. ಇಂತಹ ಹಿರಣ್ಯಗರ್ಭನೆನಿಸಿದ ಬ್ರಹ್ಮನು ತನ್ನ ಅಂಡ(ಬ್ರಹ್ಮಾಂಡ) ದೊಳಗೆ ದೇವರಾಕ್ಷಸಮನುಷ್ಯರಿಂದ ಸಹಿತವಾದ ಈ ಸಕಲ ಪ್ರಪಂಚವನ್ನೂ, ಪಾತಾಳದಿಂದೊಡಗೂಡಿದ ಸಪ್ತಲೋಕಗಳನ್ನೂ' ಸಪ್ತದ್ವೀಪಸಮುದ್ರಗಳಿಂದೊಡಗೂಡಿದ ಭೂಲೋಕವನ್ನೂ ಸಹ, ಸೃಷ್ಟಿಸಿದ ಬಳಿಕ ಆ ಭಗವಂತನೇ ಸತ್ವಗುಣದಿಂದ ಕೂಡಿದ ದೇಹವನ್ನು ಧರಿಸಿ, ಕ್ಷೀರಸಮುದ್ರದಲ್ಲಿ ಆದಿಶೇಷನ ಹೆಡೆಗಳಮೇಲೆ ಕೇಶವನೆಂಬ ಹೆಸರಿನಿಂದಿರುವನು. ಆ ಮಹಾಪ್ರಭುವು ಲಕ್ಷ್ಮೀಸಮೇತನಾಗಿ ಸಕಲ ಲೋಕಗಳನ್ನೂ ಕಾಪಾಡುವನು. ಸಕಲ ಪ್ರಾಣಿಗಳ ಶರೀರದಲ್ಲೂ ನಿಂತು, ತಾನುಮಾತ್ರ ಶೇಷಶಾಯಿಯಾಗಿ ಯೋಗನಿದ್ರೆಯನ್ನು ಹೊಂದಿ, ಸಕಲ ಪ್ರಾಣಿಗಳೂ ಮಾಡುವ ಶುಭಾಶುಭಕರ್ಮಗಳನ್ನು ನೋಡುತ್ತಲಿರುವನು. ಅದೇ ಭಗವಂತನೇ ಕೊನೆಗಾಲದಲ್ಲಿ (ಹರ) ಈಶ್ವರನೆನಿಸಿ ಸಕಲ ಪ್ರಪಂಚವನ್ನೂ ಸಂಹರಿಸುವನು.

**ತಾಮುಸೀಂ ತನುಮಾಸ್ಥಾಯ ಲೀಲಯೈವ ಮಹಾಯಶಾಃ ।**
**ಬ್ರಹ್ಮಾತ್ಮತೋ ಸೃಷ್ಟಿಕಾಲೇ ತು ಜಲಮಧ್ಯಗತಾಂ ಮಹೀಂ ॥ ೧೯ ॥**

**ದೃಷ್ಟ್ವೋದ್ಧರತಿ ಯಜ್ಞಾತ್ಮಾ ವಾರಾಹೀಮಾಸ್ಥಿತಸ್ತನುಂ**
**ಬ್ರಹ್ಮಾತ್ಮಸ್ಯ ಸರ್ಗೇ ಪರಿಪಾಲನೇ ಚ ವಿಷ್ಣುರ್ಮಹಾತ್ಮಾ ಭವತೀಹ ನಿತ್ಯಂ ।**
**ಸಂಹಾರಕಾಲೇ ಚ ಹರತ್ವಮೇತಿ ತ್ರೈಧಂ ವಿಧತ್ತೇ ಸ ತ್ರಿಕಾಲಯೋಗಾತ್ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಹಿರಣ್ಯಗರ್ಭೋತ್ಪತ್ತಿ ಕಥನಂನಾಮ ದ್ವಿತೀಯೋಽಧ್ಯಾಯಃ**

೧೯. ತಾಮಸಗುಣದಿಂದ ರುದ್ರನಾಗಿ ಅವತರಿಸಿ, ಯಾವಾಗ ಜಗತ್ತನ್ನು ಸಂಹರಿಸುವನೋ ಆಗ ಆ ಜಗತ್ತು ಜಲದೊಳಗೆ ಮುಳುಗಿಹೋಗುವುದು. ಅನಂತರ ಪರಬ್ರಹ್ಮನು ಸೃಷ್ಟಿಯನ್ನು ಪುನಃ ಮಾಡುವ ಸಮಯದಲ್ಲಿ ಜಲದೊಳಗೆ ಮುಳುಗಿ ಹೋದ ಆ ಭೂಮಿಯನ್ನು ಯಜ್ಞವರಾಹರೂಪದಿಂದ ಅವತರಿಸಿ ನೀರಿನಿಂದ ಮೇಲ ಕ್ಕೆತ್ತುವನು.

೨೦. ಈ ಪ್ರಪಂಚದ ಉತ್ಪತ್ತಿಸ್ಥಿತಿಲಯಗಳನ್ನು ಮಹಾತ್ಮನಾದ ಮಹಾ ವಿಷ್ಣುವೇ ರಜಸ್ಸತ್ವತಮೋಗುಣಗಳೆಂಬ ತ್ರಿಗುಣಭೇದದಿಂದ ಬ್ರಹ್ಮವಿಷ್ಣುಮಹೇಶ್ವರ್ರ ರೆಂಬ ಮೂರುವಿಧ ರೂಪಗಳನ್ನು ಧರಿಸಿ, ಮೂರು ವಿಧಕಾಲಯೋಗದಿಂದ ಮಾಡುತ ಲಿರುವನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದ ಹಿರಣ್ಯಗರ್ಭೋತ್ಪತ್ತಿಕಥನ ವೆಂಬ ಎರಡನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತೃತೀಯೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಬ್ರಹ್ಮರಾತ್ರ್ಯಾಂ ವ್ಯತೀತಾಯಾಂ ವಿಬುದ್ಧೇ ಪದ್ಮಸಂಭವೇ ।
ವಿಷ್ಣುಸ್ಸಿಸೃಕ್ಷುರ್ಭೂತಾನಾಂ ಜ್ಞಾತ್ವಾ ಭೂಮಿಂ ಜಲಾಂತಗಾಂ ॥ ೧ ॥

ಜಲಕ್ರೀಡಾರುಚಿ ಶುಭಂ ಕಲ್ಪಾದಿಷು ಯಥಾ ಪುರಾ ।
ವಾರಾಹಮಾಸ್ಥಿತೋ ರೂಪಮುಜ್ಜಹಾರ ವಸುಂಧರಾಂ ॥ ೨ ॥

॥ ಯಜ್ಞವರಾಹಸ್ವಾಮಿ ವರ್ಣನಂ ॥

ವೇದಪಾದೋ ಯೂಪದಂಷ್ಟ್ರಶ್ಚ ಚತುರ್ವಕ್ತ್ರಶ್ಚತುರ್ಮುಖಃ ।
ಅಗ್ನಿಜಿಹ್ವೋ ದರ್ಭರೋಮಾ ಬ್ರಹ್ಮಶೀರ್ಷೋ ಮಹಾತಪಾಃ ॥ ೩ ॥

---

## ಮೂರನೆಯ ಅಧ್ಯಾಯ.

೧-೨. ಮಾರ್ಕಂಡೇಯ ಮಹರ್ಷಿಯು ಹೇಳುವನು :-ಬ್ರಹ್ಮನು ರಾತ್ರಿಯಂ ಕಳೆದು ಬೆಳಗಾಗಿ ಎದ್ದ ಬಳಿಕ (ಪ್ರಳಯಾನಂತರ) ಮಹಾವಿಷ್ಣುವು ಪ್ರಾಣಿಗಳನ್ನು ಸೃಷ್ಟಿಸಲು ಇಚ್ಛೈಸಿಟ್ಟು ನೋಡಿದಾಗ ಭೂಮಿಯು ನೀರೊಳಗೆ ಪಾತಾಳದಲ್ಲಿ ಮುಳುಗಿ ಹೋದದ್ದು ಕಂಡುಬರಲು ಜಲಕ್ರೀಡೆಯನ್ನು ಆಡುವ ರೀತಿಯಲ್ಲಿ ಕಲ್ಪಾದಿಯೊಳಗೆ ಯಜ್ಞವರಾಹ ರೂಪವಂ ಧರಿಸುವನೆಂದು ಹಿಂದೆಯೇ ಹೇಳಿದೆಯಷ್ಟೆ? ಈರೀತಿ ವರಾಹರೂಪವನ್ನು ಧರಿಸಿ ಮೊದಲು ಭೂಮಿಯನ್ನು ನೀರಿನಿಂದ ಮೇಲಕ್ಕೆ ಎತ್ತಿದನು.

೩-೧೧. ನಾಲ್ಕು ವೇದಗಳೇ ವರಾಹನ ನಾಲ್ಕು ಕಾಲುಗಳು. ಯಜ್ಞದಲ್ಲಿ ನೆಡುವ ಯೂಪಸ್ತಂಭವೇ ಕೋರೆದಾಡೆ. ಚತುರ್ಮುಖಬ್ರಹ್ಮನೇ ನಾಲ್ಕು ಮುಖ ಗಳು. ಬೆಂಕಿಯೇ ನಾಲಗೆ. ದರ್ಭೆಗಳೇ ಕೂದಲುಗಳು. ಬ್ರಹ್ಮಶೀರ್ಷ

**ಅಹೋರಾತ್ರೇಕ್ಷಣೋ ದಿವ್ಯೋ ವೇದಾಂಗಃ ಶ್ರುತಿಭೂಷಣಃ ।**
**ಆಜ್ಯನಾಸಃ ಸ್ರುವಸ್ತುಂಡಃ ಸಾಮಘೋಷಸ್ವನೋ ಮಹಾನ್ ॥ ೪ ॥**

**ಧರ್ಮಸ್ಸತ್ಯಮಹಾಃ ಶ್ರೀಮಾನ್ ಕರ್ಮವಿಕ್ರಮಸತ್ಕೃತಃ ।**
**ಪ್ರಾಯಶ್ಚಿತ್ತಮಯೋ ಧೀರಃ ಪ್ರಾಂಶುಜಾನುರ್ಮಹಾಯಶಾಃ ॥ ೫ ॥**

**ಉದ್ಗಾತ್ರಂತ್ರೋ ಹೋಮಲಿಂಗಃ ಫಲಬೀಜಮಹೌಷಧಿಃ ।**
**ವಾಯ್ವಂತರಾತ್ಮಾ ಮಂತ್ರಾಸ್ಥಿಃ ವಿಕೃತಸ್ಸೋಮಶೋಣಿತಃ ॥ ೬ ॥**

**ವೇದಸ್ಕಂಧೋ ಹವಿರ್ಗಂಧೋ ಹವ್ಯಕವ್ಯಾತಿ ವೇಗವಾನ್ ।**
**ಪ್ರಾಗ್ವಂಶಕಾಯೋ ದ್ಯುತಿಮಾನ್ನಾನಾದೀಕ್ಷಾಭಿರನ್ವಿತಃ ॥ ೭ ॥**

**ದಕ್ಷಿಣಾಹೃದಯೋ ಯೋಗೀ ಮಹಾಕ್ರತುಮಯೋ ಮಹಾನ್ ।**
**ಉಪಾಕರ್ಮೇಷ್ಟಿ ರುಚಿರಃ ಪ್ರವರ್ಗ್ಯಾವರ್ತಭೂಷಣಃ ।**
**ಮಯಾಪತ್ನೀಸಹಾಯೋ ವೈ ಮಹಾಶೃಂಗ ಇವೋದಿತಾಂ ॥ ೮ ॥**

(ಅಥರ್ವ ಶೀರ್ಷ) ವೇ ಕತ್ತು. ರಾತ್ರಿಹಗಲುಗಳೇ ಎರಡು ಕಣ್ಣುಗಳು. ಎರಡು ಕಿವಿಗಳೇ ವೇದವೇದಾಂಗಗಳು. ತುಪ್ಪವೇ ಮೂಗು. ಸ್ರುವವೇ ಹೊಟ್ಟೆ. ಸಾಮ ವೇದಘೋಷವೇ ಮಹಾಧ್ವನಿಗಳು ಧರ್ಮ, ಸತ್ಯ, ತೇಜಸ್ಸು, ಕರ್ಮ, ಪರಾಕ್ರಮ ಗಳೇ ಸತ್ಕರ್ಮಾನುಷ್ಠಾನಗಳು. ಪ್ರಾಯಶ್ಚಿತ್ತಮಯನಾದೀ ಧೀರವರಾಹನು ಪ್ರಾಂಶು (ಪಶು)ವೆಂಬ ತೊಡೆಗಳಿಂದಲೂ, ಉದ್ಗಾತೃ (ಋತ್ವಿಕ್) ವೆಂಬ ಕೊಬ್ಬಿನಿಂದಲೂ, ಹೋಮವೆಂಬ ಲಿಂಗದಿಂದಲೂ, ಯಜ್ಞಫಲಗಳೆಂಬ ಬೀಜದಿಂದಲೂ, ಅಂತರಾತ್ಮ ನೆಂಬ ಪ್ರಾಣವಾಯುವಿನಿಂದಲೂ, ವಿಕೃತವಾದ ಮಂತ್ರಗಳೆಂಬ ಮೂಳೆಗಳಿಂದಲೂ, ಸೋಮರಸವೆಂಬ ರಕ್ತಗಳಿಂದಲೂ, ವೇದವೆಂಬ ಹೆಗ್ಗತ್ತಿನಿಂದಲೂ. ಹವಿಸ್ಸೆಂಬ ಗಂಧ ದಿಂದಲೂ, ಹವ್ಯಕವ್ಯಗಳೆಂಬ ನಡಿಗೆಗಳಿಂದಲೂ, ಪ್ರಾಗ್ವಂಶ (ಹೋಮಸ್ಥಳದ ಪೂರ್ವಭಾಗ) ವೆಂಬ ದೇಹದಿಂದಲೂ, ಕೂಡಿ, ಪ್ರಕಾಶಿಸುತ್ತಾ ನಾನಾ ದೀಕ್ಷೆಗಳಿಂದ ಕೂಡಿದವನಾಗಿ' ದಕ್ಷಿಣಾಗ್ನಿಯೆಂಬ ಹೃದಯದಿಂದ ಕೂಡಿರುವ ಈ ಮಹಾಯೋಗಿ ಯಾದ ವರಾಹಮೂರ್ತಿಯು, ಮಹಾಕ್ರತುಮಯನಾಗಿ ಉಪಾಕರ್ಮಯಜ್ಞದಿಂದ ಪ್ರಕಾಶಿಸುತ್ತಾ, ಪ್ರವರ್ಗ್ಯ, (ಯಜ್ಞಾಂಗಕರ್ಮ) ವೆಂಬ ಆಭರಣವನ್ನು ಧರಿಸಿ, ಮಾಯೆಯೆಂಬ ಪತ್ನಿಯ ಸಹಾಯವನ್ನು ಪಡೆದು, ದೊಡ್ಡ ಶಿಖರದಂತೆ ಉದಯಿಸಿದ ವನಾಗಿ ಸಮುದ್ರ, ಬೆಟ್ಟ ಕಾಡುಗಳಿಂದಕೂಡಿದ ಈ ಭೂಮಿಯನ್ನು ಸಮುದ್ರದೊಳಗೆ

ಮಹೀಂ ಸಾಗರಪರ್ಯಂತಾಂ ಸಶೈಲವನಕಾನನಾಂ ।
ಏಕಾರ್ಣವಜಲಭ್ರಷ್ಟಾಂ ಏಕಾರ್ಣವಗತಃ ಪ್ರಭುಃ ॥ ೯ ॥

ದಂಷ್ಟ್ರಾಗ್ರೇಣ ಸಮುದ್ಧೃತ್ಯ ಲೋಕಾನಾಂ ಹಿತಕಾಮ್ಯಯಾ ।
ಆದಿದೇವೋ ಮಹಾಯೋಗೀ ಚಕಾರ ಜಗತೀಂ ಪುನಃ ॥ ೧೦ ॥

ಏವಂ ಜ್ಞಾತ್ವಾ ವರಾಹೇಣ ಭೂತ್ವಾ ಭೂತಹಿತಾರ್ಥಿನಾ ।
ಉದ್ಧೃತಾ ಪೃಥಿವೀ ದೇವೀ ಜಲಮಧ್ಯಗತಾ ಪುರಾ ॥ ೧೧ ॥

ಉದ್ಧೃತ್ಯ ಭೂಮಿಂ ಸ ವಿಭುರ್ಮಹಾತ್ಮಾ
ವರಾಹರೂಪೇಣ ಜಲಾಂತರಸ್ಥಾಂ ।
ಚಕ್ರೇ ವಿಭಾಗಂ ಜಗತಸ್ತದೀಶೋ
ಯಥಾ ಯಥಾ ತಚ್ಛೃಣು ರಾಜಸಿಂಹ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯವಜ್ರಸಂವಾದೇ ವರಾಹಪ್ರಾದುರ್ಭಾವೋನಾಮ
ತೃತೀಯೋಧ್ಯಾಯಃ

---

ನುಗ್ಗಿ ತನ ಕೋರೆದಾಡೆ (ಮೂತಿ) ಯಿಂದ ಮೇಲಕ್ಕೆತ್ತಿ, ಲೋಕಹಿತದೃಷ್ಟಿಯಿಂದ ಆದಿಪುರುಷನಾದ ನಾರಾಯಣನು ಜಗತ್ತ (ಭೂಮಿಯ)ನ್ನು ಮೊದಲಿದ್ದಂತೆ ಸರಿಪಡಿಸಿದನು. ಈರೀತಿಯಾಗಿ ಭೂದೇವಿಯು ಪೂರ್ವದಲ್ಲಿ ನಾರಾಯಣನಿಂದ ಮೇಲಕ್ಕೆ ಎತ್ತಲ್ಪಟ್ಟಳು.

೧೨ ನೀರಿನಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ಮಹನೀಯನಾದ ಮಹಾವಿಷ್ಣುವು ವರಾಹರೂಪದಿಂದ ಅವತರಿಸಿ, ಮೇಲಕ್ಕೆ ಎತ್ತಿ ಪ್ರಪಂಚವನ್ನು ಹೇಗೆ ಹೇಗೆ ವಿಭಾಗಮಾಡಿದನೋ ಆ ಕ್ರಮವನ್ನು ಹೇಳುವೆನು ಕೇಳಯ್ಯಾ ! ರಾಜಸಿಂಹ. ಹೀಗೆಂಬುದಾಗಿ ಮಾರ್ಕಂಡೇಯ ಮಹರ್ಷಿಗಳು ವಜ್ರಮಹಾ ಚಕ್ರವರ್ತಿಗೆ ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರ ಸಂವಾದದಲ್ಲಿ ವರಾಹಪ್ರಾದುರ್ಭಾವವೆಂಬ
ಹೆಸರಿನ ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರ್ಥೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

**ಜಾಲಾಂತರಗತೇ ಭಾನೌ ಯತ್ಸೂಕ್ಷ್ಮಂ ದೃಶ್ಯತೇ ರಜಃ ।**
**ಪ್ರಥಮಂ ತತ್ಪ್ರಮಾಣಾನಾಂ ತ್ರಸರೇಣುಂ ಪ್ರಚಕ್ಷತೇ ॥ ೧ ॥**

**ತ್ರಸರೇಣವೋಽಷ್ಟೌ ವಿಜ್ಞೇಯಾ ಲಿಕ್ಷೈಕಾ ಪರಿಮಾಣತಃ ।**
**ತಾ ರಾಜಸರ್ಷಪಾಸ್ತಿಸ್ರಸ್ತಾಸ್ತ್ರಯೋ ಗೌರಸರ್ಷಪಃ ॥ ೨ ॥**

**ಸರ್ಷಪಾಃ ಷಡ್ಯವೋ ಮಧ್ಯೇ ಅಂಗುಲಂ ಚ ತದಷ್ಟಕಂ ।**
**ದ್ವಾದಶಾಂಗುಳಿಕಶ್ಶಂಕುಸ್ತದ್ದ್ವಯಾ ಹಸ್ತ ಉಚ್ಯತೇ ॥ ೩ ॥**

---

## ನಾಲ್ಕನೆಯ ಅಧ್ಯಾಯ

೧. ಮಾರ್ಕಂಡೇಯನು ಹೇಳುತ್ತಾನೆ:—ಕಿಟಕಿಯೊಳಗಿನಿಂದ ಒಳಹೊಕ್ಕು ಕಾಣುವ ಬಿಸಿಲುಗೋಲಿನಲ್ಲಿ ಸಣ್ಣ ಸಣ್ಣ ಧೂಳುಗಳು ಕಾಣುವುವಷ್ಟೆ? ಆ ಸೂಕ್ಷ್ಮವಾದ ಬಿಸಿಲ್ಗೋಲಿನ ಒಂದು ಕಣಕ್ಕೆ ತ್ರಸರೇಣು ಎಂಬುದಾಗಿ ಹೇಳುತ್ತಾರೆ.

೨. ಇಂತಹ ಎಂಟು ತ್ರಸರೇಣುಗಳು ಕೂಡಿದರೆ ಪರಿಮಾಣದಲ್ಲಿ ಒಂದು ಲಿಕ್ಷವೆನಿಸುವುದು. ಅಂತಹ ಮೂರಕ್ಕೆ ರಾಜಸರ್ಷಪವೆಂದೂ, ಅಂತಹ ಮೂರು ರಾಜಸರ್ಷಪಗಳು ಕೂಡಿ, ಗೌರಸರ್ಷಪವೆಂದೂ ಹೇಳಲ್ಪಡುತ್ತವೆ.

೩. ಆರು ಗೌರಸರ್ಷಪಗಳಿಗೆ ಯವೆಯೆಂದೂ, ಅಂತಹ ಎಂಟು ಯವೆಗಳು ಅಂಗುಲವೆಂದೂ, ಇಂತಹ ಹನ್ನೆರಡು ಅಂಗುಲಗಳು ಒಂದು ಶಂಕು (ಅಡಿ) ಯೆಂದೂ ಎರಡು ಅಡಿ (ಶಂಕು) ಗೆ ಒಂದುಹಸ್ತ (ಮೊಳ) ವೆಂದೂ ಹೆಸರು.

**ತಚ್ಚತುಷ್ಕಂ ಧನುಃ ಪ್ರೋಕ್ತಂ ಕ್ರೋಶೋ ಧನುಸಹಸ್ರಿಕಾ ।**
**ಕ್ರೋಶದ್ವಯಂ ತು ಗವ್ಯೂತಿಃ ಯೋಜನಂ ತಚ್ಚತುಷ್ಟಯಂ ॥ ೪ ॥**

**ಯೋಜನಾನಾಂ ಪ್ರಮಾಣೇನ ಚಾಯುತಾನಾಂ ಶತತ್ರಯಂ ।**
**ಅಯುತಾನಾಂ ಚ ಪಂಚಾಶಚ್ಛೇಷಸ್ಥಾನಂ ಮನೋಹರಂ ॥ ೫ ॥**

**ಸ ಏವ ಲೋಕೇ ವಾರಾಹಃ ಕಥಿತಶ್ಚ ಸ್ವಯಂ ಪ್ರಭುಃ ।**
**ವಾರಾಹರೂಪೀ ಭಗವಾನ್ ಶತರೂಪಧರಸ್ತಥಾ ॥ ೬ ॥**

**ತತ್ರಾಸ್ತೇ ಭಗವಾನ್ ವಿಷ್ಣುರ್ಭಕ್ತೈಸ್ಸಹ ಮಹಾತ್ಮಭಿಃ ।**
**ಲೋಕೋಯಮಂಡಸಂಲಗ್ನಶ್ಛತ್ರಾಕಾರಃ ಪ್ರಕೀರ್ತಿತಃ ॥ ೭ ॥**

**ಸ್ವಯಂಪ್ರಭುರ್ವೀತರಜಾಃ ಸರ್ವದುಃಖ ವಿವರ್ಜಿತಃ ।**
**ಏಕಾಂತಭಾವೋಪಗತಾಸ್ತಂ ಪ್ರಯಾಂತಿ ಹರಿಂ ಜನಾಃ ॥ ೮ ॥**

---

೪. ಇಂತಹ ನಾಲ್ಕು ಹಸ್ತಗಳು ಕೂಡಿದರೆ ಒಂದು ಧನುಸ್ಸೆಂದೂ, ಇಂತಹ ಒಂದು ಸಾವಿರ ಧನುಸ್ಸಿಗೆ ಒಂದು ಕ್ರೋಶವೆಂದೂ, ಇಂತಹ ಎರಡು ಕ್ರೋಶಕ್ಕೆ ಒಂದು ಗವ್ಯೂತಿಯೆಂದೂ, ಇಂತಹ ನಾಲ್ಕು ಗವ್ಯೂತಿಗಳಾದರೆ ಒಂದು ಯೋಜನವೆಂದೂ ಹೆಸರಾಗುವುದು.

೫. ಇಂತಹ ಯೋಜನಗಳ ಪ್ರಮಾಣದಿಂದ ೧೦೩೦೦ ನ್ನೂ ೧೦೦೫೦ ರಿಂದ ಗುಣಿಸಿದರೆ ಆಗುವ ಪ್ರಮಾಣಕ್ಕೆ ಮನೋಹರವಾದ ಶೇಷಸ್ಥಾನವೆಂದು ಹೆಸರು.

೬೭. ಈ ಶೇಷಸ್ಥಾನವನ್ನೇ ಸ್ವಯಂಪ್ರಭುವಾದ ವಾರಾಹನೆಂದು ಹೇಳುವರು. ಇಂತಹ ವರಾಹರೂಪಿಯಾದ ಭಗವಂತನು ನೂರುವಿಧವಾದ ಆಕಾರಗಳನ್ನು ಧರಿಸಿ ಮಹಾತ್ಮರಾದ ಭಕ್ತರಿಂದೊಡಗೂಡಿ ಪ್ರಕಾಶಿಸುತ್ತಿರುವನು. ಈ ಭೂಲೋಕವು ಮೊಟ್ಟೆಯೊಡನೆ ಅಂಟಿಕೊಂಡಿರುವ ಛತ್ರಿಯಂತೆ ಇದೆಯೆಂದು ತಿಳಿಯಬೇಕು.

೮. ಸಕಲವಿಧ ದುಃಖಗಳಿಂದಲೂ ಬಿಡಲ್ಪಟ್ಟ ಶುದ್ಧ ಸಾತ್ವಿಕಸ್ವಭಾವವುಳ್ಳ ಸ್ವಯಂಪ್ರಭುವಾದ ಶ್ರೀಮನ್ನಾರಾಯಣನನ್ನು ಏಕಾಂತಭಾವದಿಂದ (ಒಂದೇಮನಸ್ಸಿನಿಂದ) ಧ್ಯಾನಮಾಡುವವರು ಅವನನ್ನೇ ಹೊಂದುತ್ತಾರೆ.

ಸರ್ವಾಧಸ್ತಾದಯಂ ಲೋಕಃ ಕಥಿತಸ್ತೇ ಮನೋಹರಃ ।
ತಸ್ಯೋಪರಿಷ್ಟಾದಪರಸ್ತಾವದೇವಪ್ರಮಾಣತಃ ॥ ೯ ॥

ಕಾಲಾಗ್ನಿರುದ್ರಲೋಕಸ್ತು ಕಥ್ಯತೇಽಗ್ನಿಸಮರ್ಚಿತಃ ।
ಏಕ ಏವ ಸ ತತ್ರಾಸ್ತೇ ಸ್ವಪ್ರಭಾಭಾಸ್ವರಾತ್ಮಕಃ ॥ ೧೦ ॥

ತಸ್ಮಾತ್ಸಮುತ್ಥಿತೋ ವಹ್ನಿರ್ಜಗತ್ಪ್ರಾಪ್ತದಿನಕ್ಷಯೇ ।
ಭಸ್ಮಸಾತ್ಕುರುತೇ ಸರ್ವಂ ಯಚ್ಚೇಂಗಂ ಯಚ್ಚನೇಂಗತೇ ॥ ೧೧ ॥

ತಸ್ಯೋಪರಿಷ್ಟಾದಪರಃ ತಾವದೇವ ಪ್ರಮಾಣತಃ ।
ಪಾತಾಳನಾಮಾ ಪಾತಾಳಃ ಪ್ರಥಮಃ ಪರಿಕೀರ್ತಿತಃ ॥ ೧೨ ॥

ಯೋಗಮಾಯಾಂ ಸಮಾಸ್ಥಾಯ ದ್ವಿತೀಯಾಮಾಸ್ಥಿತಸ್ತನೂಂ ।
ಸರ್ವತೋ ಭಗವಾನಾಸ್ತೇ ಶೇಷಮೂರ್ತಿರ್ಜನಾರ್ದನಃ ॥ ೧೩ ॥

---

೯-೧೦. ಎಲ್ಲಕ್ಕಿಂತಲೂ ಕೆಳಗೆ ಮನೋಹರವಾದೀ ಭೂಲೋಕವು ಇದೆ. ಅದರ ಮೇಲುಗಡೆ ಅದೇ ಪ್ರಮಾಣದಿಂದ ಕೂಡಿ ಅಗ್ನಿಯಿಂದ ಅರ್ಚಿಸಲ್ಪಡುತ್ತಲಿರುವ ಕಾಲಾಗ್ನಿರುದ್ರಲೋಕವೆಂಬುದಿದೆ. ತನ್ನ ಪ್ರಭೆಯಿಂದಲೇ ಎಲ್ಲ ಲೋಕವನ್ನೂ ಬೆಳಗಿಸುತ್ತಾ ದೇದೀಪ್ಯಮಾನನಾದ ಶ್ರೀ ಮಹಾವಿಷ್ಣುವು ತಾನೊಬ್ಬನೇ ಅಲ್ಲಿ ವಾಸವಾಗಿದಾನೆ.

೧೧. ಆ ಕಾಲಾಗ್ನಿರುದ್ರಲೋಕದಿಂದೆದ್ದ ಯಜ್ಞೇಶ್ವರನೇ ಜಗದುದಯವಾದ ಬಳಿಕ ಆ ಉದಯಕಾಲವು ಕಳೆದು ದಿನಕ್ಷಯವಾಗುವ ಸಮಯದಲ್ಲಿ ಸಕಲ ಲೋಕವನ್ನೂ ಬೂದಿಯ ರಾಶಿಯನ್ನಾಗಿ ಮಾಡುತ್ತಾನೆ.

೧೨. ಆ ಲೋಕದ ಮೇಲ್ಗಡೆ ಆದೇ ಪ್ರಮಾಣದ ಇನ್ನೊಂದು ಲೋಕವಿದೆ. ಅದಕ್ಕೆ ಪಾತಾಳವೆಂಬಹೆಸರಿನ ಮೊದಲನೆಯ ಪಾತಾಳವೆಂದು ಹೆಸರು.

೧೩. ಭಗವಂತನೂ ಶೇಷಮೂರ್ತಿಯೂ ಆದ ಜನಾರ್ದನನು ಯೋಗಮಾಯೆಯನ್ನು ಹೊಂದಿ ಎರಡನೇ ದೇಹವನ್ನು ಧರಿಸಿ ಆ ಪಾತಾಳ ಲೋಕದಲ್ಲಿ ವಾಸವಾಗಿರುವನು.

ರುಕ್ಮಭೌಮಸ್ಸಪಾತಾಳೋ ಧೃತೋ ರುದ್ರಸ್ಯ ತೇಜಸಾ ।
ತಸ್ಮಿನ್ ಸ ಭಗವಾನಾಸ್ತೇ ಶೇಷಪರ್ಯಂಕ ಮಾಸ್ಥಿತಃ ॥ ೧೪ ॥

ನಿತ್ಯಂ ತಾಳಧ್ವಜೋ ವಾಗ್ಮೀ ವನಮಾಲಾವಿಭೂಷಿತಃ ।
ಧಾರಯಂ ಚ್ಛಿರಸಾ ನಿತ್ಯಂ ರತ್ನಚಿತ್ರಾಂ ಫಣಾವಳೀಂ ॥ ೧೫ ॥

ಲಾಂಗಲೀ ಮುಸಲೀ ಖಡ್ಗೀ ನಿಲಾಂಬರವಿಭೂಷಿತಃ ।
ಸ್ತೂಯಮಾನಸ್ಸಗಂಧರ್ವೈಃ ನಾಗೈಃ ಋಷಿವರ್ಯೈಸ್ತಥಾ ॥ ೧೬ ॥

ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।
ಸುತಲಸಂಜ್ಞಃ ಪಾತಾಳಃ ಶಿಲಾಭಾಸಸ್ಸಮಂತತಃ ॥ ೧೭ ॥

ಬಲಿಸ್ತು ಭಗವಾನ್ ತತ್ರ ಬಹಿಸ್ತಿಷ್ಠತಿ ಸಂಯುತಃ ।
ರಮ್ಯಂ ಪುರವರಂ ತಸ್ಯ ವಿಷ್ಣುನಾ ನಿರ್ಮಿತಂ ಸ್ವಯಂ ॥ ೧೮ ॥

---

೧೪. ಆ ಪಾತಾಳದಲ್ಲಿ ಶೇಷಶಾಯಿಯಾದ ಮಹಾವಿಷ್ಣುವು ರುಕ್ಮಭೌಮನೆಂಬ ಹೆಸರಿನಿಂದ ರಾರಾಜಿಸುತ್ತಿರುವನು. ಈ ಪಾತಾಳವು ಈಶ್ವರನ ತೇಜಸ್ಸಿನಿಂದ ಧರಿಸಲ್ಪಟ್ಟಿದೆ.

೧೫-೧೬. ತುಲಸೀಮಾಲೆಯನ್ನು ಧನಿಸಿರುವ ವಾಗ್ಮಿಯಾದಾ ಮಹಾವಿಷ್ಣುವು ಪ್ರತಿದಿನವೂ ರತ್ನಚಿತ್ರಗಳಿಂದಲಂಕೃತವಾದ ಹೆಡೆಗಳನ್ನು ಶಿರಸ್ಸಿನಲ್ಲಿ ಧರಿಸಿ ಲಾಂಗಲೀ, ಮುಸಲೀ, ಖಡ್ಗೀ ಮುಂತಾದ ನಾನಾವಿಧ ನಾಮಗಳಿಂದ ವಿರಾಜಿಸುತ್ತಾ ಗಂಧರ್ವರಿಂದಲೂ ನಾಗರಿಂದಲೂ ಋಷಿಗಳಿಂದಲೂ ಹೊಗಳಿಸಿಕೊಳ್ಳುತ್ತಾ ಪ್ರಕಾಶಿಸುತ್ತಿರುವನು.

೧೭-೧೮. ಆ ಪಾತಾಳದ ಮೇಲ್ಗಡೆ ಅಷ್ಟೇ ಪ್ರಮಾಣವುಳ್ಳ ಸುತಳವೆಂಬ ಪಾತಾಳಲೋಕವಿರುವುದು. ಅದು ಎಲ್ಲ ಕಡೆಗಳಲ್ಲೂ ಕಲ್ಲಿನಿಂದ ವಿಸ್ತರಿಸಲ್ಪಟ್ಟು ಪ್ರಕಾಶಿಸುತ್ತಿರುವುದು. ಆ ಲೋಕದ ಹೊರಭಾಗದಲ್ಲಿ ಭಗವಾನ್ ಬಲಿಚಕ್ರವರ್ತಿಯು ವಾಸವಾಗಿದಾನೆ. ಆ ಸುತಲವು ಬಹು ರಮ್ಯವಾಗಿ ಸ್ವಯಂ ವಿಷ್ಣುವಿನಿಂದಲೇ ನಿರ್ಮಿತವಾದುದು.

ನಿವಾಸಂ ದೇವರಾಜಸ್ಯ ವಿಶಿಷ್ಟಂ ತತ್ಪುರೋತ್ತಮಂ ।
ಸಾ ವೈಷ್ಣವೀ ಕಲಾ ಪ್ರೋಕ್ತಾ ಯಯೇದಂ ಧಾರ್ಯತೇ ಜಗತ್ ॥ ೧೯ ॥

ಫಣೇಷು ತಸ್ಯ ವಿಶ್ರಾಂತಾ ಮಿಳಿತಾ ಚ ಶುಭಾಶುಭಾ।
ತತ್ರಾಸ್ತೇ ಸ ಮಹಾಭಾಗಃ ಶ್ರಿಯಾ ಪರಮಯಾ ಯುತಃ ॥ ೨೦ ॥

ತಮುಪಾಸಂತಿ ಸತತಂ ಗಂಧರ್ವಾಪ್ಸರಸಾಂ ಗಣಾಃ ।
ತತ್ರಾಸ್ತೇ ದೇವದೇವಸ್ಯ ಮೂರ್ತಿಃ ಕೃಷ್ಣಸ್ಯ ಚಾಪರಾ ॥ ೨೧ ॥

ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।
ಆಭಾಸತಲ ಇತ್ಯೇವ ಪಾತಾಳೋ ನೀಲಮೃತ್ತಿಕಃ ॥ ೨೨ ॥

ತೃತೀಯಸ್ಸ ತು ವಿಖ್ಯಾತಃ ಸುರಭಿರ್ಯತ್ರ ತಿಷ್ಠತಿ ।
ದಿಗ್ಧೇನವಸ್ತಥಾ ತತ್ರ ಚತಸ್ರಶ್ಚ ತಥಾ ಸ್ಥಿತಾಃ ॥ ೨೩ ॥

---

೧೯-೨೦. ಈ ನಗರದಲ್ಲೇ ಇಂದ್ರನು ವಾಸವಾಗಿದಾನೆ. ಈ ಪಟ್ಟಣವು ವಿಷ್ಣುಶಕ್ತಿಯಿಂದ ಕೂಡಿರುವುದು. ಆದಾವ ವಿಷ್ಣುಕಲೆಯಿಂದೀ ಜಗತ್ತು ಧರಿಸಲ್ಪಟ್ಟಿದೆಯೋ ಆ ವೈಷ್ಣವಕಲಾವಿಶಿಷ್ಟನಾದ ಆ ಮಹಾವಿಷ್ಣುವು ಲಕ್ಷ್ಮಿಸಮೇತನಾಗಿ ಆದಿಶೇಷನ ಮೇಲೆ ಪವಡಿಸಿ ಪ್ರಾಣಿಗಳು ಮಾಡುವ ಶುಭಾಶುಭಕರ್ಮಗಳನ್ನು ನೋಡುತ್ತಿರುವನು.

೨೧-೨೨. ಆ ಮಹಾವಿಷ್ಣುವನ್ನು ಯಾವಾಗಲೂ ಗಂಧರ್ವರೂ ಅಪ್ಸರರೂ ಸೇವಿಸುತ್ತಿರುವರು. ಆ ನಗರದಲ್ಲಿ ದೇವದೇವೋತ್ತಮನಾದ ಕೃಷ್ಣನ ಮತ್ತೊಂದು ಮೂರ್ತಿಯೂ ಸಹ ಇದೆ. ಆ ಲೋಕದ ಮೇಲ್ಗಡೆ ಅದೇ ಪ್ರಮಾಣದ ಮತ್ತೊಂದು ಪಾತಾಳಲೋಕವಿದೆ. ಆ ಪಾತಾಳದಲ್ಲಿರುವ ಮಣ್ಣು ನೀಲೀವರ್ಣದಿಂದಿರುವುದು. ಆ ಪಾತಾಳಕ್ಕೆ ಆಭಾಸತಳವೆಂದು ಹೆಸರು.

೨೩. ಈ ಪ್ರಸಿದ್ಧವಾದ ಮೂರನೇ ಪಾತಾಳದಲ್ಲಿ ಕಾಮಧೇನುವೂ ಮತ್ತು ನಾಲ್ಕು ದಿಗ್ಧೇನುಗಳೂ ಸಹ ವಾಸವಾಗಿವೆ.

ಸುಭದ್ರಾ ವಹ್ನಿರೂಪಾ ಚ ವಿಶ್ವರೂಪಾ ತಥೈವ ಚ ।
ರೋಹಿಣೀ ಚ ಮಹಾಭಾಗಾ ಯಾಭಿರ್ವ್ಯಾಪ್ತಮಿದಂ ಜಗತ್ ॥ ೨೪ ॥

ತಾಸಾಂ ಕ್ಷೀರೇಣ ಸರ್ವಾಸಾಂ ಕೃತಃ ಕ್ಷೀರಾರ್ಣವಃ ಪ್ರಭೋ ।
ಪಾತಾಳಮಧ್ಯೇ ತಸ್ಮಿಂಸ್ತು ಪುರಂ ವಿಷ್ಣೋರ್ಮನೋರಮಂ ॥ ೨೫ ॥

ತತ್ರಾಸ್ತೇ ಭಗವಾನ್ ವಿಷ್ಣುಃ ಶೇಷಪರ್ಯಂಕಗಸ್ತಥಾ ।
ಅಗ್ನಿಜ್ವಾಲಾ ಪರಿಕ್ಷಿಪ್ತಃ ಸಹ ಲಕ್ಷ್ಮ್ಯಾ ಪರಂತಪ ॥ ೨೬ ॥

ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।
ಪೀತಭೌಮಶ್ಚತುರ್ಥಸ್ತು ಗಭಸ್ತಿತಲಸಂಜ್ಞಿತಃ ॥ ೨೭ ॥

ತತ್ರಾಸ್ತೇ ಭಗವಾನ್ ವಿಷ್ಣುರ್ದೇವೋ ಹಯಶಿರೋಧರಃ ।
ಶಶಾಂಕಶತಸಂಕಾಶಃ ಶಾತಕೌಂಭವಿಭೂಷಣಃ ॥ ೨೮ ॥

ಪುರಂ ತತ್ರೈವ ವಿಖ್ಯಾತಂ ಗರುಡಸ್ಯ ಮಹಾತ್ಮನಃ ।
ಪ್ರಹ್ಲಾದಸ್ಯಾಸುರೇಂದ್ರಸ್ಯ ಭಾಷ್ಕಳೇಶ್ಚ ಮಹಾತ್ಮನಃ ॥ ೨೯ ॥

---

೨೪. ಈ ಚತುರ್ದಿಕ್ಕಾಮಧೇನುಗಳಿಗೆ ಸುಭದ್ರೆ, ವಹ್ನಿರೂಪೆ, ವಿಶ್ವರೂಪೆ, ರೋಹಿಣಿಗಳೆಂದು ಹೆಸರು. ಈ ಸಕಲ ಪ್ರಪಂಚವೂ ಈ ನಾಲ್ಕು ಧೇನುಗಳಿಂದಲೇ ಆವರಿಸಲ್ಪಟ್ಟಿರುವುದು.

೨೫-೨೬. ಆ ನಾಲ್ಕು ಹಸುಗಳ ಹಾಲಿನಿಂದಲೇ ಕ್ಷೀರಸಮುದ್ರವು ನಿರ್ಮಿತವಾಗಿದೆ. ಆ ಪಾತಾಳ ಮಧ್ಯದಲ್ಲಿ ಮನೋಹರವಾದ ಮಹಾವಿಷ್ಣುವಿನ ಅರಮನೆ ಇದೆ. ಆ ಅರಮನೆಯಲ್ಲಿ ಆದಿಶೇಷನೆಂಬ ಮಂಚದ ಮೇಲೆ ಮಹಾವಿಷ್ಣುವು ಪವಡಿಸಿರುವನು. ಲಕ್ಷ್ಮೀಸಮೇತನಾದ ಆ ಮಹಾವಿಷ್ಣುವಿನ ಅರಮನೆಯ ಸುತ್ತಲೂ ಅಗ್ನಿಜ್ವಾಲೆಯು ಆವರಿಸಿಕೊಂಡಿದೆ.

೨೭-೨೮. ಹಿಂದೆ ವಿವರಿಸಿದ ಆ ಪಾತಾಳದ ಮೇಲುಗಡೆ ಅದೇ ಆಳತೆಯಿಂದ ಕೂಡಿದ ಹಳದೀಬಣ್ಣದ ಗಭಸ್ತಿತಲವೆಂಬ ಹೆಸರಿನ ನಾಲ್ಕನೇ ಪಾತಾಳಲೋಕವಿದೆ. ಅಲ್ಲಿ ಭಗವಾನ್ ಮಹಾವಿಷ್ಣುವು ನೂರು ಚಂದ್ರರ ಪ್ರಕಾಶದಿಂದ ಕೂಡಿದವನಾಗಿ ಪೀತಾಂಬರಾಲಂಕೃತನಾಗಿ ವಿರಾಜಿಸುತಲಿರುವನು.

೨೯. ಆ ಗಭಸ್ತಿತಲದಲ್ಲಿ ವಿಖ್ಯಾತನಾದ ಗರುಡನ ಮತ್ತು ಪ್ರಹ್ಲಾದ, ಬಾಷ್ಕಲಿಗಳೆಂಬ ಮಹಾ ಭಾಗವತೋತ್ತಮರ ನಗರಗಳು ರಾರಾಜಿಸುತ್ತಿರುವವು.

ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।
ಮಹಾತಲೇತಿ ವಿಖ್ಯಾತೋ ರಕ್ತಭೌಮಸ್ತು ಪಂಚಮಃ ॥ ೩೦ ॥

ಸರೋವರಂ ತಸ್ಯ ಮಧ್ಯೇ ಯೋಜನಾನಾಂ ದಶಾಯುತಂ ।
ಜಂಗಮಾಜಂಗಮೈಸ್ಸರ್ವೈರ್ಜಲಜೈಶ್ಚ ವಿವರ್ಜಿತಂ ॥ ೩೧ ॥

ತತ್ರಾರೂಪೇಣ ವಸತಿ ಕೂರ್ಮರೂಪಧರೋ ಹರಿಃ ।
ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ॥ ೩೨ ॥

ಷಷ್ಠಶ್ಚೈವ ಮಹಾರಾಜ ನಾಮ್ನಾ ಭೀಮತಲಸ್ತು ಸಃ ।
ತತ್ರಾಪಿ ಸರಸೀ ದಿವ್ಯಾ ಯೋಜನಾನಾಂ ಶತಂ ಗತಾ ॥ ೩೩ ॥

ತಸ್ಯಾಂ ಚ ವಸತೇ ದೇವೋ ಮತ್ಸ್ಯರೂಪಧರೋ ಹರಿಃ ।
ಸಪ್ತಮಃ ಕೃಷ್ಣಭೌಮಸ್ತು ನಾಮ್ನಾ ಭೀಮತಲಸ್ತು ಸಃ ।
ತತ್ರಾಸ್ತೇ ಕಪಿಲೋ ದೇವೋ ವಾಸುದೇವಃ ಸ್ವಯಂಪ್ರಭುಃ ॥ ೩೪ ॥

---

೩೦-೩೧, ಆ ಗಭಸ್ತಿತಲದ ಮೇಲ್ಗಡೆ ಅದೇ ಪ್ರಮಾಣದ ಮತ್ತೊಂದು ಪಾತಾಳವಿರುವುದು. ಅದಕ್ಕೆ ಮಹಾತಳವೆಂದು ಹೆಸರು. ಆ ಐದನೇ ಪಾತಾಳವು ಕೆಂಪುಬಣ್ಣದ ಭೂಮಿಯಿಂದ ಪ್ರಕಾಶಿಸುತ್ತಿದೆ. ಆ ಮಹಾತಳದ ಮಧ್ಯಭಾಗದಲ್ಲಿ ಹತ್ತುಸಾವಿರಗಾವುದ ಅಳತೆಯುಳ್ಳ ಒಂದಾನೊಂದು ಸುಂದರವಾದ ಸರೋವರವಿರುವುದು. ಅಲ್ಲಿ ಯಾವ ಜಲಚರಪ್ರಾಣಿಗಳಾಗಲೀ ಸ್ಥಾವರ ಜಂಗಮ ಪ್ರಾಣಿಗಳಾಗಲೀ ವಾಸವಾಗಿಲ್ಲ.

೩೨-೩೩. ಆ ಮಹಾತಲದಲ್ಲಿ ಕೂರ್ಮರೂಪೀ ಭಗವಾನ್ ನಾರಾಯಣನು ವಾಸಮಾಡುವನು. ಆ ಮಹಾತಲದ ಮೇಲುಗಡೆ ಅಷ್ಟೇ ಪ್ರಮಾಣವುಳ್ಳ ಆರನೆಯ ಭೀಮತಲವೆಂಬ ಪಾತಾಳಲೋಕವಿರುವುದು. ಅಲ್ಲಿಯೂ ಕೂಡ ನೂರುಯೋಜನ ಅಗಲವುಳ್ಳ ಮನೋಹರವಾದ ಸರೋವರವಿದೆ. ಆ ಕೊಳದ ಮಧ್ಯದಲ್ಲಿ ಮತ್ಸ್ಯರೂಪವನ್ನು ಧಾರಣೆಮಾಡಿದ್ದ ಮಹಾವಿಷ್ಣುವು ವಾಸಮಾಡುತ್ತಿರುವನು.

೩೪-೩೫. ಏಳನೆಯ ಪಾತಾಳಲೋಕಕ್ಕೆ ಭೀಮತಲವೆಂದು ಹೆಸರು. ಅಲ್ಲಿನ ನೆಲ ಕಪ್ಪು ಬಣ್ಣವಾಗಿದೆ. ಅಲ್ಲಿ ಭಗವಾನ್ ನಾರಾಯಣನು ಕಪಿಲನೆಂಬ ಹೆಸರಿನಿಂದ ಸ್ವಯಂಪ್ರಭುವಾಗಿ ವಾಸವಾಗಿದಾನೆ. ಅಲ್ಲಿ ವರುಣನ ಪಟ್ಟಣವಿದೆ.

ತತ್ರಾಶ್ಮನಗರಂ ನಾಮ ವರುಣಸ್ಯ ಪುರಂ ಸ್ಮೃತಂ ।
ತಥಾ ದಾನವವೀರಾಣಾಂ ನಗರಾಣಿ ಪೃಥಕ್ಪೃಥಕ್ ॥ ೩೫ ॥

ವಿರೋಚನಸ್ಯ ಕುಂಭಸ್ಯ ನಿಕುಂಭಸ್ಯ ಹರಸ್ಯ ಚ ।
ಶಂಬರಸ್ಯ ಕರಾಳಸ್ಯ ನರಕಸ್ಯ ಹಯಸ್ಯ ಚ ॥ ೩೬ ॥

ಹಯಗ್ರೀವಸ್ಯ ಸುಂದಸ್ಯ ಘಸಸ್ಯ ಪ್ರಘಸಸ್ಯ ಚ ।
ಬಲೇಃ ಪುರವರಂ ಚಾತ್ರ ಯೋಗೀಶಸ್ಯ ತಥಾಪರಂ ॥ ೩೭ ॥

ಯತ್ರಸ್ಥಮೇನಂ ದದೃಶೇ ರಾವಣೋ ಲೋಕರಾವಣಃ ।
ತಥಾ ಪುರವರಂ ತತ್ರ ವಿಷ್ಣೋರಮಿತತೇಜಸಃ ॥ ೩೮ ॥

ಲಕ್ಷ್ಮೀಸಹಾಯೋ ಯತ್ರಾಸ್ತೇ ಚಾಗ್ನೇಯಾಂಬರಸಂವೃತಃ ।
ತಿಸ್ರಃ ಕೋಟ್ಯಸ್ತು ಯತ್ರಾಸ್ಯ ಭಕ್ತಾನಾಂ ಸುಮಹಾತ್ಮನಾಂ ॥ ೩೯ ॥

ಶಂಖಚಕ್ರಗದಾಪದ್ಮಧಾರಿಣಾಂ ಪೀತವಾಸಸಾಂ ।
ನೀಲೋತ್ಪಲಸವರ್ಣಾನಾಂ ವಿಷ್ಣೋಸ್ಸದೃಶತೇಜಸಾಂ ॥ ೪೦ ॥

---

ಅದಕ್ಕೆ ಅಶ್ಮನಗರವೆಂದು ಹೆಸರು. ಆ ಭೀಮತಲದಲ್ಲೇ ಪಾತಾಳವಾಸಿಗಳಾದ ರಾಕ್ಷಸವೀರರ ನಗರಗಳೂ ಸಹ ಅಪಾರವಾಗಿ ಬೇರೆ ಬೇರೆಯಾಗಿವೆ.

೩೬-೪೨. ಆ ರಾಕ್ಷಸರಾರಾರೆಂದರೆ:—ವಿರೋಚನ, ಕುಂಭ, ನಿಕುಂಭ, ಹರ, ಶಂಬರ, ಕರಾಳ, ನರಕ, ಹಯ, ಹಯಗ್ರೀವ, ಸುಂದ, ಘಸ, ಪ್ರಘಸ, ಬಲಿ ಮುಂತಾದವರು:—

ಯೋಗೀಶನೆಂಬ ರಾಕ್ಷಸನ ಮತ್ತು ರಾವಣನ ನಗರಗಳೂ ಸಹ ಇಲ್ಲಿಯೇ ಇರುವವು. ಅಮಿತ ಪರಾಕ್ರಮಿಯಾದ ವಿಷ್ಣುವಿನ ನಗರವೂ ಇಲ್ಲಿಯೇ ಇದೆ. ಇಲ್ಲಿ ಲಕ್ಷ್ಮೀಪತಿಯಾದ ಆದಿನಾರಾಯಣನು ಕೆಂಪು ಬಣ್ಣದ ಮುಗುಟವನ್ನು ಧರಿಸಿ ವಾಸವಾಗಿದಾನೆ. ಅಲ್ಲದೆ ಆ ಮಹಾವಿಷ್ಣುವಿನ ಪರಮಭಕ್ತರಾದ ಭಾಗವತೋತ್ತಮರು ಇಲ್ಲಿ ಮೂರುಕೋಟಿ ಮಂದಿ ವಾಸವಾಗಿದಾರೆ. ಇವರೆಲ್ಲರೂ ಶಂಖಚಕ್ರಗದಾಪದ್ಮಧಾರಿಗಳಾಗಿ ಪೀತಾಂಬರಗಳನ್ನು ಉಟ್ಟುಕೊಂಡು ನೀಲಮೇಘಶ್ಯಾಮರಾಗಿ ಕಂಗೊಳಿಸುತ್ತ ಮಹಾವಿಷ್ಣುವಿಗೆ ಸಮಾನವಾದ ಕಾಂತಿಯಿಂದ ವಿರಾಜಮಾನರಾಗಿದಾರೆ,

**ವಿಷ್ಣೋಸ್ಸುತಾನಾಂ ಹೃಷ್ಟಾನಾಂ ಸತತಂ ಭೂರಿವರ್ಚಸಾಂ ।**
**ತತ್ರಸ್ಥೋ ದೃಷ್ಟವಾನ್ ದೇವೋ ಪೌಲಸ್ತ್ಯೋ ರಾವಣಃ ಪುರಾ ॥ ೪೧ ॥**

**ಪುರೀ ಭೋಗವತೀ ತತ್ರ ತಥಾ ವಾಸುಕಿಪಾಲಿತಾ ॥ ೪೨ ॥**

**ನಾಗಾನಾಂತು ಪುರಾಣ್ಯತ್ರ ತಥೈವ ಚ ಪೃಥಕ್ ಪೃಥಕ್ ।**
**ಪದ್ಮಸ್ಯ ಧೃತರಾಷ್ಟ್ರಸ್ಯ ವಿರಕ್ತಸ್ಯ ಕುರೋಸ್ತಥಾ ॥ ೪೩ ॥**

**ತಕ್ಷಕಸ್ಯೈಲಪತ್ರಸ್ಯ ತಥಾ ಕರ್ಕೋಟಕಸ್ಯ ಚ ।**
**ಧನಂಜಯಸ್ಯ ಶಂಖಸ್ಯ ತಥೈವಾಶ್ವತರಸ್ಯ ಚ ॥ ೪೪ ॥**

**ಕಂದಳಸ್ಯ ಸುರಾಸಸ್ಯ ಸುಮುಖಸ್ಯ ಗಯಸ್ಯ ಚ ।**
**ದಿಶಾಂ ಗಜಾನಾಂ ಚ ತಥಾ ತತ್ರ ಸ್ಥಾನಂ ಪೃಥಕ್ ಪೃಥಕ್ ॥ ೪೫ ॥**

**ಯೇಷಾಂ ಸ್ಕಂಧಗತಾ ಭೂಮಿಃ ಸಶೈಲವನಕಾನನಾ ।**
**ವಿರೂಪಾಕ್ಷಸ್ಯ ನಾಗಸ್ಯ ಮಹಾಪದ್ಮಸ್ಯ ಚಾಪ್ಯಥ ॥ ೪೬ ॥**

**ತಥಾ ಸುಮನಸಶ್ಚಾತ್ರ ರುದ್ರಸ್ಯ ಚ ಮಹಾತ್ಮನಃ ।**
**ಪಂಚಾಯುತಪರೀಮಾಣಾ ಭೂಮಿಸ್ಸರ್ವೇಷು ಪಾರ್ಥಿವ ॥ ೪೭ ॥**

---

ಮತ್ತು ಮಹಾವಿಷ್ಣುವಿನ ಮಹಾತೇಜಃ ಪುಂಜರಾದ ಮಕ್ಕಳೂ ಸಹ ಇಲ್ಲಿ ಆನಂದದಿಂದಿದಾರೆ. ಪೂರ್ವದಲ್ಲಿ ಪುಲಸ್ತ್ಯಬ್ರಹ್ಮನ ಮಗನಾದ ರಾವಣನು ಇಲ್ಲಿ ದೇವತೆಯ ಆಕಾರದಿಂದ ವಾಸವಾಗಿದ್ದನು. ಇದಕ್ಕೆ ಭೋಗವತೀ ಪಟ್ಟಣವೆಂದೂ ಹೆಸರಿದೆ. ಇದನ್ನು ವಾಸುಕಿಯು ಪರಿಪಾಲಿಸುತ್ತಿರುವನು.

೪೩-೪೫. ಈ ಪಾತಾಳದಲ್ಲಿ ಬೇರೆ ಬೇರೆಯಾಗಿ ನಾಗರಾಜನಗರಿಗಳೂ ಇರುವುವು. ಆ ನಾಗರಾಜರ ಹೆಸರುಗಳೇನೆಂದರೆ :—ಪದ್ಮ, ಧೃತರಾಷ್ಟ್ರ, ವಿರಕ್ತ, ಕುರು, ತಕ್ಷಕ, ಏಲಪತ್ರ, ಕರ್ಕೋಟಕ, ಧನಂಜಯ, ಶಂಖ, ಅಶ್ವತರ, ಕಂದಳ, ಸುರಾಸ, ಸುಮುಖ, ಗಯ ಇವರುಗಳೇ ನಾಗರಾಜರುಗಳು. ಇಷ್ಟಲ್ಲದೆ ಇದೇ ಪಾತಾಳದಲ್ಲೇ ಬೇರೆ ಬೇರೆಯಾಗಿ ದಿಗ್ಗಜಗಳ ಸ್ಥಾನವೂ ಇದೆ.

೪೬-೪೮. ಬೆಟ್ಟ, ಗುಡ್ಡ, ಕಾಡುಗಳೊಡನೆ ಕೂಡಿದ ಭೂಲೋಕವು ಆದಾವ ದಿಗ್ಗಜಗಳ ಹೆಗಲಮೇಲಿರುವುದೋ ಆ ಗಜಗಳ ಹೆಸರುಗಳೇನಂದರೆ :—ವಿರೂಪಾಕ್ಷ, ನಾಗ, ಮಹಾಪದ್ಮ, ಸುಮನ, ರುದ್ರ, ಈ ಗಜಗಳ ಮೇಲೆ ನಿಂತಿರುವ ಹತ್ತುಸಾವಿರ ಪ್ರಮಾಣವುಳ್ಳ ಭೂಮಿಯು ಪಾತಾಳದೊಳಗಡೆ ಇದೆಯೆಂದು ತಿಳಿಯತಕ್ಕದ್ದು.

ಪಾತಾಳೇಷು ವಿನಿರ್ದಿಷ್ಟಾ ಪರಿತಾಂತರವರ್ತಿನೀ ।
ಅಂಡಸ್ಯಾರ್ಧಮಿದಂ ಪ್ರೋಕ್ತಂ ಅಧಸ್ತಾತ್ತು ಪ್ರಮಾಣತಃ ॥ ೪೮ ॥
ತಿಸ್ರಃ ಕೋಟ್ಯಸ್ತು ರಾಜೇಂದ್ರ ನಿಯುತಾನಿ ತಥಾ ದಶ ।
ಪಂಚಾನ್ಯಾನಿ ಮಹೀಪಾಲ ಭೂಮಿಪೃಷ್ಠ್ಯಾ ಮಹಾನಘ ॥ ೪೯ ॥
ಪಂಚಾಯುತಪರೀಮಾಣಾಃ ಪೃಷ್ಟಿಭೂಮೇಃ ಪ್ರಕೀರ್ತಿತಾಃ ।
ಭೂಮೇರಧೋಪರಿಷ್ಟಾಚ್ಚ ಅಂಡಸ್ಯಾರ್ಧ ಮಥಾಪರಂ ॥
ಏತಾವದೇವ ನಿರ್ದಿಷ್ಟಾ ಭೂಮಿಪಾಲ ಪ್ರಮಾಣತಃ ॥ ೫೦ ॥

ಚಂದ್ರಾರ್ಕಭಾಸಾ ರಹಿತಂ ನೃವೀರ
ಸ್ವಯಂಪ್ರಭೇದಂ ಕಥಿತಂ ಮಯೈತತ್ ।
ಪಾತಾಳಪೂಗಂ ವಿವಿಧಂ ಸುರಮ್ಯಂ
ಶೃಣುಷ್ವ ಲೋಕಾ೯ ಗದತೋ ಮಯಾನ್ಯಾನ್ ॥ ೫೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಪಾತಾಳಲೋಕವರ್ಣನೋನಾಮ
ಚತುರ್ಥೋಽಧ್ಯಾಯಃ

---

ಇದು ಮೇಲ್ಕಂಡ ಪ್ರಮಾಣದಿಂದ ಕೂಡಿ ಪಾತಾಳದೊಳಗಿನ ಭಾಗಗಳೆನಿಸಿವೆ. ಇದುವರಿಗೆ ಹೇಳಿದ ಲೋಕಗಳೆಲ್ಲ ಸೇರಿ ಪೂರ್ಣ ಬ್ರಹ್ಮಾಂಡದ ಅರ್ಧ ಅಂಡವೆಂದು ಹೇಳಲ್ಪಟ್ಟಿದೆ.

೪೯-೫೧. ಎಲೈ ! ವಜ್ರಮಹಾರಾಜನೇ, ಮೂರುಕೋಟಿಗಳೂ ಹತ್ತುಲಕ್ಷದ ಹದಿನೈದು ಸಾವಿರ ಯೋಜನದಗಲವುಳ್ಳ ಪ್ರಮಾಣದಿಂದ ವಿಸ್ತರಿಸಲ್ಪಟ್ಟಿರುವೀ ಭೂಲೋಕದವರಿಗೆ ಬ್ರಹ್ಮಾಂಡದ ಅರ್ಧಭಾಗವಾಯಿತೆಂದು ಹೇಳಿದೆನಷ್ಟೆ? ಇದು ವರಿಗೆ ಹೇಳಿದ ಅಳತೆಯುಳ್ಳ ಈ ಏಳು ಪಾತಾಳಗಳಲ್ಲಿ ಸೂರ್ಯಚಂದ್ರರ ಕಾಂತಿ ಯಿಲ್ಲ. ಪರಮಾತ್ಮನ ಪ್ರಭೆಯೇ ಇಲ್ಲಿನ ಬೆಳಕು. ಇಂತಹ ಪ್ರಭೆಯಿಂದಕೂಡಿದ ಪಾತಾಳಗಳನ್ನು ಇದುವರಿಗೆ ಹೇಳಿಯಾಯಿತಷ್ಟೆ? ಇನ್ನು ಮುಂದೆ ಇನ್ನರ್ಧಭಾಗದ ಬ್ರಹ್ಮಾಂಡದ ಮೇಲುಗಡೆ ಇರುವ ಲೋಕಗಳನ್ನು ವಿವರಿಸುವೆನು:—ಕೇಳಯ್ಯ ! ಎಂಬದಾಗಿ ಮಾರ್ಕಂಡೇಯ ಋಷಿಗಳು ವಜ್ರಮಹಾರಾಜನಿಗೆ ಹೇಳಿದರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದೊಳ್ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದ ರೂಪವಾದ ಪಾತಾಳಲೋಕವರ್ಣನ
ವೆಂಬ ನಾಲ್ಕನೆಯ ಅಧ್ಯಾಯುವು ಮುಗಿದುದು.

★

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ಪಂಚಮೋಽಧ್ಯಾಯಃ

**॥ ಮಾರ್ಕಂಡೇಯ ಉವಾಚ ॥**

**ಭೂಲೋಕಃ ಪ್ರಥಮೋ ರಾಜನ್ ಶೃಣುಷ್ವ ಗದತೋ ನೃಪ ।**
**ಪಾತಾಳೇನ ತು ತತ್ತುಲ್ಯಮೂರ್ಧ್ವಗಃ ಪರಿಕೀರ್ತಿತಃ ॥ ೧ ॥**

**ವಾಯುಸ್ಕಂಧಾ ವಿನಿರ್ದಿಷ್ಟಾಸ್ತೇ ತು ಸಪ್ತ ಮಹರ್ಷಿಭಿಃ ।**
**ಏಕೈಕಂ ನಿಯುತಾಃ ಪಂಚಯೋಜನಾನಾಂ ಪ್ರಕೀರ್ತಿಕಂ ॥ ೨ ॥**

**ಪಶವಃ ಪಕ್ಷಿಣಃ ಕೀಟಾ ಮನುಷ್ಯಾಃ ಕಿನ್ನರಾಸ್ತಥಾ ।**
**ಯಕ್ಷರಾಕ್ಷಸಗಂಧರ್ವಾಃ ಪಿಶಾಚಾ ಭೂಮಿಗೋಚರಾಃ ॥ ೩ ॥**

---

೧-೨. ಮಾರ್ಕಂಡೇಯಋಷಿಯು ಹೇಳುತ್ತಾನೆ:—ಎಲೈ ವಜ್ರರಾಜನೇ, ಕೇಳು. ಮೊದಲು ಭೂಲೋಕ ವೃತ್ತಾಂತವನ್ನು ಹೇಳುವೆನು. ಈ ಭೂಲೋಕವು ಪಾತಾಳದಿಂದ ಮೇಲುಗಡೆ ಅದಕ್ಕೆ ಸಮನಾಗಿಯೇ ಇರುವುದು. ಆ ಭೂಲೋಕವು ವಾಯುಸ್ಕಂಧವೆಂಬ ಹೆಸರಿನಿಂದ ಏಳುವಿಧವಾಗಿದೆಯೆಂದು ಮಹಾತ್ಮರು ಹೇಳುವರು. ಒಂದೊಂದು ಐದೈದುಲಕ್ಷಯೋಜನ ಪ್ರಮಾಣವುಳ್ಳದ್ದೆಂದು ಹೇಳಲ್ಪಟ್ಟಿದೆ.

೩-೪. ಈ ಭೂಮಿಯಲ್ಲಿ, ಪಶುಗಳೂ, ಪಕ್ಷಿಗಳೂ, ಕ್ರಿಮಿಗಳೂ, ಮನುಷ್ಯರೂ ಕಿನ್ನರರೂ, ಯಕ್ಷರೂ, ರಾಕ್ಷಸರೂ, ಗಂಧರ್ವರೂ, ಪಿಶಾಚಿಗಳೂ ಸಹ ವಾಸವಾಗಿ ದಾರೆ. ಭೂಮಿಗೋಚರಾದೀ ಪ್ರಾಣಿಗಳೆಲ್ಲರೂ ಅನ್ನವನ್ನೇ ಆಹಾರವಾಗಿ ತೆಗೆದು

**ಸರ್ವ ಏಕೇ ವಿನಿರ್ದಿಷ್ಟಾ ಅನ್ನಾದಾ ಭೂಮಿಗೋಚರಾಃ ।**
**ವಿದ್ಯಾಧರಾಣಾಂ ಪ್ರಥಮಂ ವಾಯುಮಾರ್ಗಃ ಪ್ರಕೀರ್ತಿತಃ ॥ ೪ ॥**

**ದ್ವಿತೀಯಃ ಸಿದ್ಧವಿದ್ಯಾನಾಂ ತೃತೀಯಸ್ತು ಗರುತ್ಮತಾಂ ।**
**ಚತುರ್ಥೋ ವಾಯುಮಾರ್ಗಸ್ತು ಗಂಧರ್ವಾಣಾಂ ಪ್ರಕೀರ್ತಿತಃ ॥ ೫ ॥**

**ವಿನಾಯಕಾಃ ಪಂಚಮಗಾಃ ಷಷ್ಠಶ್ಚ ಕರಿಣಾಂ ಗಣಾಃ ।**
**ಯೇಷಾಂ ಶೀಕರತೋಯೇನ ಚಾವಶ್ಯಾಯಃ ಪ್ರಕೀರ್ತಿತಃ ॥ ೬ ॥**

**ಸಪ್ತಮೇ ಚ ಮಹಾಭಾಗ ಸಿದ್ಧಾಸ್ತಿಷ್ಠಂತಿ ಯಾದವ ।**
**ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ॥ ೭ ॥**

**ಭುವರ್ಲೋಕ ಇತಿ ಖ್ಯಾತೋ ಯತ್ರ ತಿಷ್ಠಂತಿ ದೇವತಾಃ ।**
**ಮನ್ವನ್ತರಾಧಿಕಾರೇಷು ಯೇ ಭವಿಷ್ಯಾ ಮಹೀಪತೇ ॥ ೮ ॥**

---

ಕೊಳ್ಳತಕ್ಕವರು. ಈ ಸಂಗತಿ ಹೀಗಿರಲಿ. ಮೊದಲು ವಿದ್ಯಾಧರರ ಸಂಗತಿಯನ್ನು ಹೇಳೋಣ. ಇವರು ವಾಯುಮಾರ್ಗಸಂಚಾರಿಗಳೆಂದು ಹೇಳಲ್ಪಟ್ಟಿರುವುದು.

೫-೬. ಎರಡನೇಯವರೇ ಸಿದ್ಧವಿದ್ಯರೆನಿಸಿಕೊಳ್ಳುವರು. ಮೂರನೆಯದೇ ಗರುಡರ ಲೋಕ. ನಾಲ್ಕನೆಯದು ಗಂಧರ್ವರು ಸಂಚರಿಸುವ ವಾಯುಮಾರ್ಗವು. ಐದನೇಯ ವಿಧದವರೇ ವಿನಾಯಕಗಣದವರು. ಆರನೆಯ ಮಾರ್ಗವೇ ಆನೆಗಳು ಸಂಚರಿಸುವ ಮಾರ್ಗ. ಈ ಮಾರ್ಗಗಳೆಲ್ಲವೂ ತುಂತುರು ಹನಿಗಳಿಂದ ತಣ್ಣಗಿರುವುದರಿಂದ ಈ ಹಿಮಮಾರ್ಗವು ಅವಶ್ಯಾಯವೆಂದು ಪ್ರಸಿದ್ಧಗಳಾಗಿರುವುವು.

೭-೮. ಏಳನೆಯ ಭಾಗದಲ್ಲಿ, ಎಲೈ ! ಯದುಕುಲಚಕ್ರವರ್ತಿಯಾದ ವಜ್ರನೆ ! ಕೇಳು. ಸಿದ್ಧರು ವಾಸವಾಗಿದಾರೆ. ಅದರ ಮೇಲುಗಡೆ ಹಿಂದೆ ಹೇಳಿದಷ್ಟೇ ಪ್ರಮಾಣವುಳ್ಳ ಭುವರ್ಲೋಕವಿದೆ. ಅಲ್ಲಿ ದೇವತೆಗಳು ವಾಸವಾಗಿದಾರೆ. ಮುಂದೆಮುಂದೆ ಬರಲಿರುವ ಮನ್ವಂತರಗಳಲ್ಲಿ ಅಧಿಕಾರಮಾಡಲು ಅರ್ಹರಾದವರೇ ಆ ದೇವತೆಗಳೆಂದು ತಿಳಿ.

ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।
ಸ್ವರ್ಲೋಕೋ ವಸತಿರ್ಯತ್ರ ಪ್ರಾಯಶಃ ಪುಣ್ಯಕರ್ಮಣಾಂ ॥ ೯ ॥

ಸೋಮಪಾನಾಂ ಚ ದೇವಾನಾಂ ಶಕ್ರಾದೀನಾಂ ಮಹೀಪತೇ ।
ಮಹರ್ಲೋಕಸ್ಸ್ಥಿತಿರ್ಯತ್ರ ದೇವತಾನಾಂ ಮಹಾತ್ಮನಾಂ ॥ ೧೦ ॥

ವಿನಿವೃತ್ತಾಧಿಕಾರಾಣಾಂ ಸಿದ್ಧಾನಾಂ ನೃಪಸತ್ತಮ ।
ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ॥ ೧೧ ॥

ಜನೋಲೋಕಃ ಸ್ಥಿತಿರ್ಯತ್ರ ಗವಾಂ ಪಾರ್ಥಿವಸತ್ತಮ ।
ತಿಷ್ಠಂತಿ ಬ್ರಹ್ಮಣೋ ರಾತ್ರ್ಯಾಂ ಯತ್ರ ಜೀವಾಸ್ಸಮಂತತಃ ॥ ೧೨ ॥

ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।
ತಪೋಲೋಕಃ ಸ್ಥಿತಿರ್ಯತ್ರ ಪ್ರಾಣೇಶಾನಾಂ ಮಹಾತ್ಮನಾಂ ॥ ೧೩ ॥

---

೯-೧೦. ಆ ಭುವರ್ಲೋಕದ ಮೇಲ್ಗಡೆ ಅಷ್ಟೇ ಪ್ರಮಾಣ (ಅಳತೆ) ವುಳ್ಳ ಸ್ವರ್ಲೋಕವಿದೆ. ಪ್ರಾಯಶಃ ಪುಣ್ಯಕರ್ಮಮಾಡಿದ ಮಹಾತ್ಮರೇ ಅಲ್ಲಿ ವಾಸಮಾಡತಕ್ಕವರು. ಸೋಮಪಾನಮಾಡಿದ ದೀಕ್ಷಿತರೂ, ದೇವತೆಗಳೂ, ಇಂದ್ರಾದಿಗಳೂ ಸಹ ಅಲ್ಲಿ ವಾಸವಾಗಿದಾರೆ. ಮಹಾತ್ಮರಾದ ದೇವತೆಗಳು ವಾಸಮಾಡುವ ಲೋಕಕ್ಕೆ ಮಹರ್ಲೋಕವೆಂದು ಹೆಸರು.

೧೧-೧೨. ಆ ಮಹರ್ಲೋಕದಲ್ಲಿ ಅಧಿಕಾರ ಮುಗಿಯುತ್ತ ಬಂದಿರುವ (ರಿಟೈರ್ಡ್ ಆಫೀಸರ್ಸ್) ಸಿದ್ಧರು ವಾಸಮಾಡುತ್ತಾರೆ. ಆ ಮಹರ್ಲೋಕದ ಮೇಲ್ಗಡೆ ಅದೇ ಅಳತೆಯಿಂದಿರುವ ಲೋಕಕ್ಕೆ ಜನೋಲೋಕವೆಂದು ಹೆಸರು. ಅಲ್ಲಿ ಗೋವುಗಳೇ ವಾಸಮಾಡುತ್ತಲಿವೆ. ಬ್ರಹ್ಮನ ರಾತ್ರಿಕಾಲದಲ್ಲಿ ಈ ಜನೋಲೋಕದಲ್ಲಿ ಪ್ರಳಯಕ್ಕೆ ಸತ್ತ ಸಕಲ ಜೀವಾಣುಗಳೂ ತುಂಬಿವೆ.

೧೩-೧೫. ಈ ಜನೋಲೋಕದ ಮೇಲುಭಾಗದಲ್ಲಿ ಅಷ್ಟೇ ಪ್ರಮಾಣದಿಂದೊಡಗೂಡಿದ ತಪೋಲೋಕವಿದೆ. ಸಕಲರ ಪ್ರಾಣಕ್ಕೂ ಒಡೆಯರಾದ ಮಹಾತ್ಮರೇ ಇಲ್ಲಿ ತಪೋನಿರತರಾಗಿದಾರೆ. ಆ ತಪೋಲೋಕದಮೇಲೆ ಅಷ್ಟೇ ಪ್ರಮಾಣದಳತೆಯು ಸತ್ಯ

**ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।**
**ಸತ್ಯಲೋಕಃ ಸ್ಥಿತಿರ್ಯತ್ರ ಬ್ರಹ್ಮಣಃ ಪರಮೇಷ್ಠಿನಃ ॥ ೧೪ ॥**

**ಇತ್ಯೇತೇ ಕಥಿತಾಸ್ಸಪ್ತ ತವ ಲೋಕಾ ಮಹಾತ್ಮನಾಂ ।**
**ಏತಾವಾನೇವ ಸವಿತುರ್ವಿಚರಂತಿ ಮರೀಚಯಃ ॥ ೧೫ ॥**

**ಏತೇಷು ಲೋಕಸಂಜ್ಞೋಕ್ತಾಸ್ತಸ್ಮಾದೇವ ಮನೀಷಿಭಿಃ ।**
**ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ॥ ೧೬ ॥**

**ಸ್ಥಾನಂ ರುದ್ರಸ್ಯ ಕಥಿತಂ ರುದ್ರತೇಜೋವಿರಾಜಿತಂ ।**
**ಬ್ರಹ್ಮಲೋಕೋಪರಿಷ್ಟಾತ್ತು ರುದ್ರಲೋಕೋ ಮಹತ್ತಮಃ ॥ ೧೭ ॥**

**ಯೋಜನಾನಾಂ ಸಹಸ್ರಾಣಿ ಪಂಚಭಿರ್ನಿಬಿಡಂ ಮತಂ ।**
**ಆದಿತ್ಯಮಂದಿರಂ ಪ್ರೋಕ್ತಂ ಯದೇತದ್ದಿವಿ ದೃಶ್ಯತೇ ॥ ೧೮ ॥**

**ಯದೇತದ್ದೃಶ್ಯತೇ ನೀಲಂ ತಮಸ್ತತ್ಪೃಥಿವೀಪತೇ ।**
**ತಮಸಸ್ತು ಪರೇಪಾರೇ ರುದ್ರಲೋಕಃ ಸ್ವಯಂ ಪ್ರಭೋ ॥ ೧೯ ॥**

---

ಲೋಕವಿದೆ. ಅಲ್ಲಿ ಪರಮೇಷ್ಠಿಯೆನಿಸಿರುವ ಬ್ರಹ್ಮನು ವಾಸವಾಗಿದಾನೆ. ಎಲೈ ವಜ್ರಮಹಾರಾಜನೆ, ಕೇಳು. ಈರೀತಿಯಾಗಿ ದಿನಗೆ ಮಹಾತ್ಮರ ವಾಸಸ್ಥಳವಾದ ಸಪ್ತ ಊರ್ಧ್ವಲೋಕಗಳನ್ನೂ ವಿವರವಾಗಿ ಹೇಳಿದೇನೆ. ಈ ಸಪ್ತಲೋಕಗಳ ಸುತ್ತಲೂ ಸೂರ್ಯನಕಿರಣಗಳು ಸಂಚರಿಸುತ್ತವೆ. ಈ ಕಿರಣಗಳ ಪ್ರಸರಣೆಯು ಇಲ್ಲಿಯತನಕವೇ ಸರಿ.

೧೬-೧೮. ಸೂರ್ಯನ ಗಮನವಿರುವುದರ ದೆಸೆಯಿಂದಲೇ ಈ ಏಳಕ್ಕೂ ಸಪ್ತ ಲೋಕಗಳೆಂದು ಸಂಜ್ಞೆಯಾಗಿದೆ. ಈ ಸತ್ಯಲೋಕದ ಮೇಲುಗಡೆ ಅಷ್ಟೇ ಪ್ರಮಾಣ ದಿಂದಿರುವ ರುದ್ರಲೋಕವೆಂಬುದಿದೆ. ಇಲ್ಲಿ ರುದ್ರದೇವರ ಮಹಾಪ್ರಕಾಶವು ಸೂರ್ಯ ತೇಜಸ್ಸಿನಿಂದ ಮಿಗಿಲಾಗಿದೆ. ಬ್ರಹ್ಮಲೋಕದ ಮೇಲುಗಡೆ ಇರುವ ಮಹತ್ತಮವಾದ ರುದ್ರಲೋಕದಲ್ಲಿ ಸೂರ್ಯನ ಅರಮನೆ ಇದೆ. ಪ್ರತಿದಿನವೂ ನಮ್ಮ ಕಣ್ಣಿಗೆ ಕಾಣು ತ್ತಿರುವ ಸೂರ್ಯನೇ ಅವನು. ಐದುಸಾವಿರಯೋಜನದಳತೆಯಿಂದ ಆ ಸೂರ್ಯನ ರಾಜಗೃಹವು ಸುತ್ತುವರಿಯಲ್ಪಟ್ಟಿದೆ.

೧೯-೨೦. ಈ ನಮ್ಮ ಕಣ್ಣಿಗೆ ನೀಲೀಬಣ್ಣದ ಆಕಾಶವು ಕಪ್ಪಾಗಿ ಕಾಣುತ್ತಿದೆ ಯಷ್ಟೆ? ಈ ತಮಸ್ಸಿನ ಕೊನೇಭಾಗದಲ್ಲಿ ರುದ್ರಲೋಕವಿದೆ. ಮಹಾಭಕ್ತರಾದ

ರುದ್ರತ್ವಂ ಸಮನುಪ್ರಾಪ್ತೈಸ್ತತ್ರ ಭಕ್ತೈರ್ಮಹಾನಘ ।
ಕ್ರೀಡನ್ನಾಸ್ತೇ ಮಹಾದೇವಃ ಸಪತ್ನೀಕೋ ವೃಷಧ್ವಜಃ ॥ ೨೦ ॥

ತಸ್ಯೋಪರಿಷ್ಟಾದಪರಸ್ತಾವದೇವ ಪ್ರಮಾಣತಃ ।
ಅಗಮ್ಯಸ್ಸರ್ವದೇವಾನಾಂ ವಿಷ್ಣುಲೋಕಃ ಪ್ರಕೀರ್ತಿತಃ ॥ ೨೧ ॥

ತಸ್ಯೋಪರಿಷ್ಟಾದ್ಬ್ರಹ್ಮಾಂಡಃ ಕಾಂಚನೋ ದೀಪ್ತಿಸಂಯುತಃ ।
ಭುವರ್ಲೋಕೇ ತು ವಸತಿರ್ವಾಮನಸ್ಯ ಮಹಾತ್ಮನಃ ॥ ೨೨ ॥

ಸ್ವರ್ಲೋಕೇ ವಸತಿರ್ವಿಷ್ಣೋರ್ವೈಕುಂಠಸ್ಯ ಮಹಾತ್ಮನಃ ।
ನೃವರಾಹಸ್ಯ ವಸತಿರ್ಮಹರ್ಲೋಕೇ ಪ್ರಕೀರ್ತಿತಾ ॥ ೨೩ ॥

ನೃಸಿಂಹಸ್ಯ ತಥಾ ಪ್ರೋಕ್ತಾ ಜನೋಲೋಕೇ ಮಹಾತ್ಮನಃ ।
ತ್ರಿವಿಕ್ರಮಸ್ಯ ವಸತಿಸ್ತಪೋಲೋಕೇ ಪ್ರಕೀರ್ತಿತಾ ॥ ೨೪ ॥

ಲೋಕಾಸ್ಸಂತಾನಕಾ ನಾಮ ಸತ್ಯಲೋಕೇ ಪ್ರಕೀರ್ತಿತಾಃ ।
ತೇಷು ದೇವಂ ಪಶ್ಯಂತಿ ದೇವಾಸ್ಸೇಂದ್ರಪುರೋಗಮಾಃ ॥ ೨೫ ॥

---

ಈಶ್ವರೋಪಾಸಕರು ರುದ್ರದೇವರಂತೆ ಆಕಾರವಂ ತಳೆದು ಅಲ್ಲಿ ವಾಸವಾಗಿದಾರೆ. ಪಾರ್ವತೀಸಮೇತನಾದ ಮಹೇಶ್ವರನು ಆ ಭಕ್ತರೊಡನೆ ವಿನೋದವಾಗಿ ಕಾಲಯಾಪನೆಮಾಡುತ್ತಾ ವೃಷಭಧ್ವಜನಾಗಿ ಆ ರುದ್ರಲೋಕದಲ್ಲಿ ವಾಸವಾಗಿದಾನೆ.

೨೧-೨೨. ರುದ್ರಲೋಕದ ಮೇಲುಗಡೆ ಅಷ್ಟೇ ಅಳತೆಯುಳ್ಳ ಇತರ ದೇವತೆಗಳಿಂದ ಪ್ರವೇಶಿಸಲಶಕ್ಯವಾದ ವಿಷ್ಣುಲೋಕವಿದೆ. ಅದರ ಮೇಲುಗಡೆ ಇರುವ ಬ್ರಹ್ಮಾಂಡವು ಮಹಾಪ್ರಕಾಶಮಾನವಾಗಿ ಚಿನ್ನದಮಯವಾಗಿದೆ. ಆ ಭುವರ್ಲೋಕವು ವಾಮನಾವತಾರಮಾಡಿದ ಮಹಾವಿಷ್ಣುವಿನ ವಾಸಸ್ಥಾನವೆಂದು ತಿಳಿಯಬೇಕು.

೨೩-೨೪. ಸುವರ್ಲೋಕದಲ್ಲಿ ವೈಕುಂಠನಾರಾಯಣನೂ, ಮಹರ್ಲೋಕದಲ್ಲಿ ವರಾಹಸ್ವಾಮಿಯೂ, ಜನೋಲೋಕದಲ್ಲಿ ನೃಸಿಂಹಸ್ವಾಮಿಯೂ, ತಪೋಲೋಕದಲ್ಲಿ ತ್ರಿವಿಕ್ರಮಸ್ವಾಮಿಯೂ ವಾಸವಾಗಿದಾರೆಂದು ತಿಳಿಯಬೇಕು.

೨೫-೨೬. ಸತ್ಯಲೋಕದಲ್ಲಿ ಸಂತಾನಕವೆಂಬ ಹೆಸರಿನ ಲೋಕಗಳಿರುವವು. ಈ ಲೋಕದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಮಹಾವಿಷ್ಣುವನ್ನು ದರ್ಶನ

ತಪಸಾ ಮಹತಾ ರಾಜರ್ಷ ಭಕ್ತ್ಯಾ ಚ ಸತತಂ ಪ್ರಭುಂ ।
ರುದ್ರಸ್ಥಾನೋಪರಿಷ್ಟಾತ್ತು ವಿಷ್ಣೋಃ ಸ್ಥಾನಂ ಮಯೋದಿತಂ ॥ ೨೬ ॥

ನ ಕಶ್ಚಿದೇನಂ ಶಕ್ನೋತಿ ದ್ರಷ್ಟುಂ ದೇವವರಂ ಹರಿಂ ।
ನ ತತ್ರ ಸೂರ್ಯಸ್ತಪತಿ ಚಂದ್ರಮಾ ನ ವಿರಾಜತೇ ॥ ೨೭ ॥

ತೇಜಸಾ ತಸ್ಯ ದೇವಸ್ಯ ಸ ತು ದೇಶೋ ವಿರಾಜತೇ ।
ತಸ್ಮೋಪರಿಷ್ಟಾದಾರಭ್ಯ ಯಾವದಂತಂ ಮಹೀಪತೇ ॥ ೨೮ ॥

ಪ್ರೋಕ್ತಂ ವರಾಹಸ್ಥಾನಸ್ಯ ಪವ ಮಾನಂನಿಬೋಧ ಮೇ ।
ಯೋಜನಾನಾಂ ಚ ಷಟ್ಕೋಟ್ಯಃ ತ್ರಿಂಶಚ್ಚ ನಿಯುತಾನ್ಯಥ ॥ ೨೯ ॥

ಏತಾವದೇವ ಭೂತಾನಾಂ ವಸತಿಃ ಪರಿಕೀರ್ತಿತಾ ।
ಏತಾವದೇವ ಚಂದ್ರಸ್ಯ ತಲಮುಕ್ತಂ ಸಮಂತತಃ ॥ ೩೦ ॥

---

ಮಾಡುವರು. ರುದ್ರಸ್ಥಾನದ ಮೇಲ್ಗಡೆ ಇರುವ, ಹಿಂದೆಯೇ ವಿವರಿಸಿದ ಮಹಾ ವಿಷ್ಣುವಿನ ಸ್ಥಾನದಲ್ಲಿ ಭಕ್ತರು ಮಹತ್ತರವಾದ ತಪಸ್ಸಿನಿಂದ ಕೂಡಿದವರಾಗಿ ಯಾವಾಗಲೂ ವಾಸವಾಗಿರುತ್ತಾರೆ.

೨೭-೨೯. ಆ ಮಹಾವಿಷ್ಣುಮಂದಿರದಲ್ಲಿ ವಾಸವಾಗಿರುವ ಮಹಾಪ್ರಭುವನ್ನು ನೋಡಲಾರಿಂದಲೂ ಸಾಧ್ಯವೇ ಇಲ್ಲ. ಅಲ್ಲಿ ಸೂರ್ಯನ ಬಿಸಿಲಿಲ್ಲ. ಚಂದ್ರನ ಬೆಳದಿಂಗಳಿಲ್ಲ. ಆ ಮಹಾಸ್ವಾಮಿಯ ಆತ್ಮತೇಜಸ್ಸಿನಿಂದಲೇ ಆ ಪ್ರದೇಶವು ವಿರಾಜಮಾನವಾಗಿದೆ. ಆ ಮೇಲ್ಗಡೆ ಭಾಗದಿಂದ ಹಿಡಿದು ತುದಿಯವರೆಗೂ ವರಾಹಸ್ವಾಮಿಯ ಸ್ಥಾನವಿರುವುದು. ಅದರ ಅಳತೆಯನ್ನು ಹೇಳುವೆನು ಕೇಳು. ಆರುಕೋಟಿ ಮೂವತ್ತುಲಕ್ಷಯೋಜನವೇ ಆ ಸ್ಥಳದ ಅಳತೆ.

೩೦-೩೧. ಈ ಚಂದ್ರದೇಶದವರಿಗೆ ಭೂತ(ಪ್ರಾಣಿ)ಗಳ ವಸತಿಯೆಂದು ತಿಳಿಯಬೇಕು ಮತ್ತು ಚಂದ್ರನು ಸುತ್ತುತ್ತಿರುವುದೂ ಇಲ್ಲಿಗೆ ನಿಂತುಹೋಗುವುದು. ಇಂತಹ ಸ್ಥಳದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಮಹಾಭಕ್ತಿಯಿಂದ ಕೂಡಿದವರಾಗಿ

ಏತೇಷು ದೇವಂ ಪಶ್ಯಂತಿ ದೇವಾಃ ಸೇಂದ್ರಪುರೋಗಮಾಃ ।
ತಪಸಾ ಮಹತಾ ರಾಜನ್ ಭಕ್ತ್ಯಾಶ್ಚ ಸತತಂ ಪ್ರಭುಂ ॥ ೩೧ ॥

ಬಾಹ್ಯತೋಽಂಡಂ ದಶಗುಣಂ ತ್ವದ್ಭಿಸ್ತು ಪರಿವಾದಿತುಂ ।
ಆಪೋ ದಶಗುಣೇನೈವ ಬಾಹ್ಯತಸ್ತೇಜಸಾವೃತಾಃ ॥ ೩೨ ॥

ತೇಜೋ ದಶಗುಣೇನೈವ ಬಾಹ್ಯತಃ ಪವನೇನ ಚ ।
ವಾಯುರ್ದಶಗುಣೇನೈವ ಗಗನೇನ ತಥಾವೃತಾಃ ॥ ೩೩ ॥

ಆಕಾಶಂ ಚ ದಶಘ್ನೇನ ಮನಸಾ ಬಾಹ್ಯತೋ ವೃತಂ ।
ಮನಶ್ಚ ಬುದ್ಧ್ಯಾ ಸಕಲಂ ವೃತಂ ರಾಜನ್ ದಶಘ್ನಯಾ ॥ ೩೪ ॥

ಆತ್ಮನಾ ಚಾವೃತಾ ಬುದ್ಧಿರ್ದಶಘ್ನೇನ ಸಮಂತತಃ ।
ಅವ್ಯಕ್ತೇನ ತಥೈವಾತ್ಮಾ ದಶಘ್ನೇನೈವ ಚಾವೃತಃ ॥ ೩೫ ॥

---

ಭಗವಂತನಾದ ಮಹಾವಿಷ್ಣುವನ್ನು ಕುರಿತು ತಪಸ್ಸುಮಾಡುತ್ತ ಆ ಮಹಾಸ್ವಾಮಿಯ ದರ್ಶನಮಾಡುತ್ತ ಧನ್ಯರಾಗಿರುವರು.

೩೨-೩೫. ಇದುವರಿಗೆ ಹೇಳಿದುದೆಲ್ಲವೂ ಬ್ರಹ್ಮಾಂಡದ ಒಳಗಡೆಯ ಮಾತಾಯಿತು. ಇನ್ನು ಆ ಅಂಡದ ಹೊರಗಿನ ಸಮಾಚಾರವನ್ನು ಹೇಳುವೆನು. ಈ ಅಂಡದ ಹೊರಗೆ ಹತ್ತುಪಾಲು ಹೆಚ್ಚಾಗಿ ನೀರಿನಿಂದ ಸುತ್ತುವರೆಯಲ್ಪಟ್ಟಿದೆ. ಅದರಿಂದ ಆಚೆ ಹತ್ತುಪಾಲಿನಷ್ಟು ಹೆಚ್ಚಾಗಿ ಬೆಂಕಿಯಿದೆ. ಅಲ್ಲಿಂದಾಚೆ ಹೊರಗೆ ಅದರ ಹತ್ತುಪಾಲಿನಷ್ಟು ಹೆಚ್ಚಾಗಿ ವಾಯುವು ಆಕಾಶದೊಡನೆ ಮಿಳಿತವಾಗಿದೆ. ಈ ವಾಯ್ವಾಕಾಶದ ಹೊರಗಡೆ ಹತ್ತುಪಾಲು ಹೆಚ್ಚಾಗಿ ಮನಸ್ಸಿನಿಂದ ತುಂಬಿಹೋಗಿವೆ. ಅದಕ್ಕಿಂತ ಹೆಚ್ಚಾಗಿ ಹತ್ತುಪಾಲು ಬುದ್ಧಿಯಿಂದ ಸಕಲ ಪ್ರದೇಶವೂ ಆವರಿಸಲ್ಪಟ್ಟಿದೆ. ಇಂತು ವಿರಾಜಿಸುವ ಬುದ್ಧಿಮಯಪ್ರಪಂಚದ ಹೊರಗಿನ ಭಾಗವು ಹತ್ತುಪಾಲು ಹೆಚ್ಚಾಗಿ ಅವ್ಯಕ್ತದಿಂದ ಕೂಡಿದೆ. ಹಾಗೆಯೇ ಅಲ್ಲಿಂದಾಚೆ ಹತ್ತುಪಾಲು ಹೆಚ್ಚಾಗಿ ಆತ್ಮನಿರುವನು.

**ಅವ್ಯಕ್ತಃ ಪುರುಷೇಣಾಥ ತ್ವನಂತೇನಾವೃತೋಽನಘ ।**
**ಏವಂ ವಿಧಾನಾಮಂಡಾನಾಮನಂತಃ ಪುರುಷೋತ್ತಮಃ ॥ ೩೬ ॥**

**ತಿರ್ಯಗೂರ್ಧ್ವಮಧಸ್ಸಂಖ್ಯಾ ವಕ್ತುಂ ರಾಜನ್ ನ ಶಕ್ಯತೇ ।**
**ಅನಂತತ್ವಾತ್ಪ್ರಧಾನಸ್ಯ ಪುರುಷಸ್ಯ ಮಹಾತ್ಮನಃ ॥ ೩೭ ॥**

**ಏಕರೂಪಾಸ್ತಥೈವಾಂಡಾಃ ಸರ್ವ ಏವ ನರಾಧಿಪ ।**
**ತುಲ್ಯದೇಶೋ ವಿಭಾಗಾಶ್ಚ ತುಲ್ಯಜಂತವ ಏವ ಚ ॥ ೩೮ ॥**

**ದೇಶೇ ದೇಶೇ ಸಮಾನಾ ಯೇ ಅಂಡೇಷು ನೃಪಸತ್ತಮ ।**
**ಸುಖದುಃಖೇ ಸಮೇ ತೇಷಾಂ ಜೀವಿತಂ ಮರಣಂ ತಥಾ ॥ ೩೯ ॥**

**ಸರ್ವಾಂಡಾನಾಂ ಸಮಾ ಜ್ಞೇಯಾ ಕಾಲಸಂಖ್ಯಾ ನರಾಧಿಪ ।**
**ಪೌರುಷಸ್ಯ ದಿನಸ್ಯಾಂತೇ ಸರ್ವೇ ಹ್ಯಂಡನಿವಾಸಿನಃ ॥ ೪೦ ॥**

---

೩೬-೩೮. ಅನಂತಾನಂತವಾದ ಮಹಾವಿಷ್ಣುವಿನ ಆತ್ಮದಿಂದ ಅವ್ಯಕ್ತವು ಆವರಿಸಲ್ಪಟ್ಟಿದೆ. ಇಂತಹ ಅನೇಕವಾದ ಅಂಡಗಳೊಡನೆ ಪುರುಷೋತ್ತಮನಾದ ಅನಂತನು "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃಸ್ಥಿತಃ" ಎಂಬ ವೇದ ಮಂತ್ರಪ್ರಮಾಣದಂತೆ ಮೇಲೆ, ಕೆಳಗೆ, ಹೊರಗೆ, ಆಚೆ, ಈಚೆ, ಉದ್ದುದ್ದವಾಗಿ ಅಡ್ಡಡ್ಡವಾಗಿ ತುಂಬಿಕೊಂಡಿರುವ ಸಂಖ್ಯೆಯನ್ನು ಹೇಳುವುದಕ್ಕೆ ಸಾಧ್ಯವೇ ಇಲ್ಲ. ಮಹಾತ್ಮನೂ, ಪ್ರಧಾನಪುರುಷನೂ ಆದ ಅನಂತನಿಗೆ ಅನಂತಾನಂತರೂಪಗಳಿದ್ದಾಗ್ಯೂ ಎಲ್ಲೆಲ್ಲೂ ಒಂದೇರೂಪವೂ, ಹಾಗೆಯೇ ಒಂದೇವಿಧವಾದ ಅಂಡವೂ ಸಮನಾದ ದೇಶವಿಭಾಗವೂ ಸಮವಾಗಿಯೇ ಜಂತುಗಳೂ ಸಹ ಇವೆಯೆಂದು ತಿಳಿಯಬೇಕು.

೩೯-೪೧. ದೇಶದೇಶಗಳಲ್ಲೂ ಯಾವವು ಸಮನಾಗಿವೆಯೋ ಅಂತೆಯೇ ಅಂಡಗಳಲ್ಲೂ ಸಮಸಮನೆಂದು ತಿಳಿಯಬೇಕು. ಸುಖದುಃಖಗಳೂ ಜೀವಿತಮರಣಗಳೂ ಹಾಗೆಯೇ ಸಮಸಮವಾಗಿಯೇ ಇವೆ. ಸಕಲ ಅಂಡಗಳ ಕಾಲಸಂಖ್ಯೆಯೂ ಹಾಗೆಯೇ ಸಮಸಮನಾಗಿದೆ. ಮಹಾಪುರುಷನಾದ ಆದಿವರಾಹಮೂರ್ತಿಯ ಹಗಲಿನ ಕೊನೆಯಲ್ಲಿ ಸಕಲ ಅಂಡನಿವಾಸಿಗಳಾದ ಪ್ರಾಣಿಗಳೂ ಅನಂತನಲ್ಲಿ ಸೇರಿ ಒಂದೇ ಆಗುತ್ತಾರೆ. ಎಲೈ ಮಹಾರಾಜನಾದ ವಜ್ರಮಹಾಚಕ್ರವರ್ತಿಯೇ ಕೇಳು.

**ಏಕೋಽಪ್ಯನಂತೋ ರಾಜೇಂದ್ರ ನಾಂತರೇವ ಪ್ರಕೀರ್ತಿತಃ**
**ಅಯಂ ಮಯೋಕ್ತೋ ನೃಪ ಸಂನಿವೇಶಃ**
**ಸಂಕ್ಷೇಪಮಾತ್ರೇಣ ಚರಾಚರಸ್ಯ ।**
**ವ್ಯಾಸೇನ ಚೈವಂ ಪರಿಕೀರ್ತ್ಯಮಾನಃ**
**ಸಮಾಪ್ಯತೇ ನೈವ ಕದಾಚಿದೇವ　　　　॥ ೪೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಲೋಕವರ್ಣನಂ ನಾಮ ಪಂಚಮೋಽಧ್ಯಾಯಃ**

---

ಇದವರಿಗೆ ನಾನೇನೇನನ್ನು ಹೇಳಿದೆನೋ ಈ ಸನ್ನಿವೇಶಗಳೆಲ್ಲಾ ಸಂಗ್ರಹಮಾತ್ರವೆಂದು ತಿಳಿದುಕೋ. ಚರಾಚರಮಹಾಪ್ರಪ್ರಂಚದ ಈ ಕೀರ್ತನೆಯನ್ನು ವ್ಯಾಸಮಹರ್ಷಿಗಳು ವಿಧವಿಧವಾಗಿ ಹೇಳುತ್ತ ಬಂದಿರುವರಾದರೂ ಇದು ಯಾವಾಗಲೂ ಎಂದೆಂದಿಗೂ ಮುಗಿಯುವುದೇ ಇಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದ ಮಾಕಂಡೇಯ ವಜ್ರಸಂವಾದದಲ್ಲಿ ಲೋಕವರ್ಣನೆಯೆಂಬ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ಷಷ್ಠೋಽಧ್ಯಾಯಃ

---

॥ ವಜ್ರ ಉವಾಚ ॥

**ಭೂಮಂಡಲಸ್ಯ ಕೃತ್ಸ್ನಸ್ಯ ಸಂಸ್ಥಾನೇನ ಚ ಭಾರ್ಗವ ।**
**ವದ ಕೃತ್ಸ್ನಂ ಪ್ರಮಾಣಂ ತತ್ತತ್ರ ಮೇ ಸಂಶಯೋ ಮಹಾನ್ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಭೂಮಂಡಲಸ್ಯ ರಾಜೇಂದ್ರ ಮಧ್ಯೇ ಮೇರುರ್ಮಹಾಗಿರಿಃ ।**
**ಯೋಜನಾನಾಂ ಸಹಸ್ರಾಣಿ ತಸ್ಯ ಮಧ್ಯೇ ಸಮಂತತಃ ॥ ೨ ॥**

**ಜಂಬೂದ್ವೀಪಸ್ತು ಪಂಚಾಶತ್ಪ್ರಮಾಣೇನ ಪ್ರಕೀರ್ತಿತಃ ।**
**ಯೋಜನಾನಾಂ ತು ನಿಯುತಂ ತಸ್ಯ ಪಾರಂ ಮಹೀಪತೇ ॥ ೩ ॥**

---

೧. ವಜ್ರರಾಜನು ಹೇಳುತ್ತಾನೆ:— ಈ ಸಮಸ್ತ ಭೂಮಂಡಲದ ಪ್ರಮಾಣವು ಎಷ್ಟೆಂಬುದನ್ನು ತಿಳಿಸಬೇಕು ಎಂದು ಭೃಗುಪುತ್ರನಾದ ಮಾರ್ಕಂಡೇಯನನ್ನು ಕುರಿತು ವಜ್ರರಾಜನು ಕೇಳಿದನು.

೨-೩. ಮಾರ್ಕಂಡೇಯನು ಹೇಳುತ್ತಾನೆ:— ಎಲೈ ವಜ್ರರಾಜೇಂದ್ರನೇ' ಕೇಳು. ಈ ಭೂಮಂಡಲದ ಮಧ್ಯದಲ್ಲಿ ಮೇರುವೆಂಬ ಬಹು ದೊಡ್ಡ ಬೆಟ್ಟವಿದೆ. ಆ ಮೇರುಪರ್ವತದ ಮಧ್ಯದಲ್ಲಿ ಸುತ್ತಲೂ ಒಂದೊಂದು ಸಾವಿರಯೋಜನ ಪ್ರಮಾಣವುಳ್ಳ ಜಂಬೂದ್ವೀಪವಿದೆ. ಈ ಜಂಬೂದ್ವೀಪದ ಅಳತೆ ಐವತ್ತುಸಾವಿರ ಯೋಜನಗಳೆಂದು ತಿಳಿ. ಅದು ಲವಣಸಮುದ್ರದ ಕೊನೆಯ ದಡದವರಿಗೆ ಒಂದು ಲಕ್ಷ ಯೋಜನದ ಅಳತೆಯಿದೆ

ಲವಣೇನ ಸಮುದ್ರೇಣ ತೇನಾಸೌ ಪರಿವೇಷ್ಟಿತಃ ।
ಲವಣದ್ವಿಗುಣೇನಾಪಿ ಶಾಕದ್ವೀಪೇನ ಲಾವಣಃ ॥ ೪ ॥

ವೇಷ್ಟಿತಶ್ಚ ಮಹಾರಾಜ ಶಾಕದ್ವೀಪೋ ನ ಸಂಶಯಃ ।
ಕ್ಷೀರೋದೇನ ಸ್ವತುಲ್ಯೇನ ಕ್ಷೀರೋದೋಽಪಿ ಚ ವೇಷ್ಟಿತಃ ॥ ೫ ॥

ಕ್ಷೀರೋದದ್ವಿಗುಣೇನಾಪಿ ಕುಶದ್ವೀಪೇನ ಯೋಜನೈಃ ।
ಆಜ್ಯೋದೇನ ಕುಶದ್ವೀಪಃ ಸ್ವತುಲ್ಯೇನ ಚ ವೇಷ್ಟಿತಃ ॥ ೬ ॥

ಕ್ರೌಂಚದ್ವೀಪೇನ ಚಾಜ್ಯೋದೋ ದ್ವಿಗುಣೇನ ಚ ವೇಷ್ಟಿತಃ ।
ಕ್ರೌಂಚದ್ವೀಪಃ ಸ್ವತುಲ್ಯೇನ ದಧಿಮಂಡೋದಕೇನ ಚ ॥ ೭ ॥

ದ್ವೀಪೇನ ಶಾಲ್ಮಲೇನಾಥ ದ್ವಿಗುಣೇನ ಚ ವೇಷ್ಟಿತಃ ।
ಸುರೋದೋ ದ್ವಿಗುಣೇನಾಥ ಗೋಮೇದೇನ ಚ ವೇಷ್ಟಿತಃ ॥ ೮ ॥

ಪುಷ್ಕರದ್ವೀಪಮಧ್ಯೇ ತು ದ್ವೀಪಸಂಸ್ಥಾನಮಂಡಪಃ ।
ಪರ್ವತಃ ಸುಮಹಾನ್ ಲೋಕೇ ವಿಖ್ಯಾತೋ ಮಾನಸೋತ್ತರಃ ॥ ೯ ॥

---

೪-೬. ಲಕ್ಷಯೋಜನವಿರುವ ಈ ಲವಣಸಮುದ್ರದಿಂದ ಈ ಜಂಬೂದ್ವೀಪವು ಸುತ್ತುವರೆಯಲ್ಪಟ್ಟಿದೆ. ಈ ಲವಣಸಮುದ್ರದ ಎರಡರಷ್ಟಿರುವ ಶಾಂಕದ್ವೀಪದಿಂದ ಲವಣಸಮುದ್ರವು ವೇಷ್ಟಿತವಾಗಿದೆ. ಕ್ಷೀರಸಮುದ್ರವು ತನಗೆ ಸಮನಾದ ಮತ್ತೊಂದು ಕ್ಷೀರಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ. ಈ ಕ್ಷೀರಸಮುದ್ರದ ಎರಡರಷ್ಟಿರುವ ಆಜ್ಯಸಮುದ್ರದಿಂದ ಕುಶದ್ವೀಪವು ತನಗೆ ಸಮನಾದ ಆಳತೆಯಿಂದ ಸುತ್ತುವರೆಯುಲ್ಪಟ್ಟಿದೆ.

೭-೮. ಇದರ ಎರಡರಷ್ಟು ಪ್ರಮಾಣವಿರುವ ಕ್ರೌಂಚದ್ವೀಪದಿಂದ ಆಜ್ಯ ಸಮುದ್ರವು ಸುತ್ತುವರೆಯಲ್ಪಟ್ಟಿದೆ. ಈ ಕ್ರೌಂಚದ್ವೀಪವು ತನಗೆ ಸಮಾನವಾದ ಮೊಸರು ಮಜ್ಜಿಗೆಗಳ ಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ. ಮತ್ತು ಇದರ ಎರಡರಷ್ಟಿರುವ ಶಾಲ್ಮಲದ್ವೀಪದಿಂದ ಸುರಾ ಸುರಾ (ಹೆಂಡ) ಸಮುದ್ರವು ಸುತ್ತುವರೆಯುಲ್ಪಟ್ಟಿದೆ. ಈ ಸುರಾಸಮುದ್ರವು ತನಗೆ ಎರಡರಷ್ಟಿರುವ ಗೋಮೇದಸಮುದ್ರದಿಂದ ವೇಷ್ಟಿತವಾಗಿದೆ.

೯. ಪುಷ್ಕರದ್ವೀಪದ ಮಧ್ಯದಲ್ಲಾದರೋ ಅನೇಕ ದ್ವೀಪಗಳು ಗುಂಪುಗುಂವಾಗಿ ವಿರಾಜಿಸುತಲಿವೆ. ವ.ತ್ತು ಲೋಕಪ್ರಸಿದ್ಧವಾದ ಮಾನಸೋತ್ತರ ಪರ್ವತವೂ ಸಹ ಇಲ್ಲಿಯೇ ಇದೆ.

ನಿಯುತಾರ್ಧಂ ಯೋಜನಾನಾಂ ಪ್ರಮಾಣೇನ ಪ್ರಕೀರ್ತಿತಃ ।
ನಾನಾಪ್ರಕಾರಶಿಖರಸ್ತಾವದೇವ ಸಮುಚ್ಛ್ರಿತಃ ॥ ೧೦ ॥

ಮೇರೋಸ್ತು ಪೂರ್ವದಿಗ್ಭಾಗೇ ಮಾನಸೋತ್ತರಮೂರ್ಧನಿ ।
ಪುರೀ ಶಕ್ರಸ್ಯ ವಿಖ್ಯಾತಾ ನಾಮತಸ್ತ್ವಮರಾವತೀ ॥ ೧೧ ॥

ಪೂರ್ವದಕ್ಷಿಣದಿಗ್ಭಾಗೇ ತಥಾ ವಹ್ನೇಃ ಪ್ರಭಾವತೀ ।
ಯಮಸ್ಯ ದಕ್ಷಿಣೇ ಭಾಗೇ ನಾಮ್ನಾ ಸಂಯಮಿನೀ ಪುರೀ ॥ ೧೨ ॥

ವಿರೂಪಾಕ್ಷಸ್ಯ ವಿಕ್ರಾಂತಾ ಭಾಗೇ ದಕ್ಷಿಣಪಶ್ಚಿಮೇ ।
ಪಶ್ಚಿಮೇ ಚ ತಥಾ ಭಾಗೇ ವರುಣಸ್ಯ ಸುಖಪ್ರಭಾ ॥ ೧೩ ॥

ಶಿವಾ ನಾಮ ಪುರೀ ವಾಯೋರ್ಭಾಗೇ ವೈ ಪಶ್ಚಿಮೋತ್ತರೇ ।
ವಿಭಾವರೀ ಸೋಮಪುರೀ ಉತ್ತರೇಣ ಪ್ರಕೀರ್ತಿತಾ ॥ ೧೪ ॥

ಶರ್ಮದಾ ಚ ಪುರೀ ಶೈವೀ ಭಾಗೇ ಪೂರ್ವೋತ್ತರೇ ಸ್ಮೃತಾ ।
ಪುಷ್ಕರಶ್ಚ ಸ್ವತುಲ್ಯೇನ ವೃತಃ ಸ್ವಾದೂದಕೇನ ಚ ॥ ೧೫ ॥

---

೧೦. ಈ ಮಾನಸೋತ್ತರಪರ್ವತವು ಐವತ್ತುಸಾವಿರಯೋಜನ ಪ್ರಮಾಣವಿದೆಯೆಂದು ಹೇಳಲ್ಪಟ್ಟಿದೆ. ಈ ದರ್ವತದಲ್ಲಿ ನಾನಾವಿಧವಾದ ಶಿಖರಗಳು ಅಷ್ಟೇ ಆಳತೆ ಎತ್ತರವಾಗಿವೆ.

೧೧-೧೨. ಮೇರುಪರ್ವತದ ಪೂರ್ವದಿಗ್ಭಾದಲ್ಲಿರುವ ಮಾನಸೋತ್ತರಪರ್ವತದ ಶಿಖರದಮೇಲೆ ಇಂದ್ರನ ಅಮರಾವತೀ ಪಟ್ಟಣವಿದೆ. ಅದರ ಆಗ್ನೇಯದಿಗ್ಭಾಗದಲ್ಲಿ ಅಗ್ನಿಯ ಪ್ರಭಾವತೀ ಪಟ್ಟಣವಿದೆ. ದಕ್ಷಿಣದಿಕ್ಕಿನಲ್ಲಿ ಯಮಧರ್ಮರಾಜನ ಸಂಯಮಿನೀ ಪಟ್ಟಣವಿದೆ.

೧೩-೧೫. ನೈಋತ್ಯ ದಿಗ್ಭಾಗದಲ್ಲಿ ನಿಋತಿಯ ವಿರೂಪಾಕ್ಷ ಪಟ್ಟಣವೂ, ಪಶ್ಚಿಮದಿಕ್ಕಿನಲ್ಲಿ ವರುಣನ ಸುಖಪ್ರಭಾಪಟ್ಟಣವೂ, ವಾಯುವ್ಯ ದಿಗ್ಭಾಗದಲ್ಲಿ ವಾಯುವಿನ ಶಿವಾನಗರವೂ, ಪಶ್ಚಿಮೋತ್ತರದಲ್ಲಿ ವಿಭಾವರಿಯೂ, ಉತ್ತರದಲ್ಲಿ ಸೋಮಪುರಿಯೂ, ಈಶಾನ್ಯಭಾಗದಲ್ಲಿ ಸುಖಾವಹವಾದ ಶೈವೀ ನಗರವೂ ಸಹ ಇವೆ. ಪುಷ್ಕರ ದ್ವೀಪವು ತನಗೆ ಸಮನಾದ ಸಿಹಿನೀರಿನ ಸಮುದ್ರದಿಂದ ಆವರಿಸಲ್ಪಟ್ಟಿದೆ.

ಸ್ವಾದೂದಕಾತ್ಪರಂ ಕ್ಷೋಣೀ ಕಾರ್ತಸ್ವರಮಯೀ ಶುಭಾ ।
ಯೋಜನಾನಾಂ ಪ್ರಮಾಣೇನ ಸಹಸ್ರಾಣಿ ತು ವಿಂಶತಿಃ ॥ ೧೬ ॥

ದಶ ಚಾನ್ಯಾನಿ ರಾಜೇಂದ್ರ ಪಂಚ ಪಂಚ ಪ್ರಕೀರ್ತಿತಾ ।
ಸಮಂತತಸ್ತ್ವೇಕಶಿಲಾ ದೇವೋದ್ಯಾನೇ ಮಹೀ ಶುಭಾ ॥ ೧೭ ॥

ಸ್ಥಿತಸ್ತಾಂ ಪರಿವಾರ್ಯೋರ್ವೀಂ ಲೋಕಾಲೋಕೋ ಮಹೀಧರಃ ।
ಅಯುತಂ ಯೋಜನಾನಾಂ ತು ವಿಸ್ತರೇಣೋಚ್ಛ್ರಯೇಣ ಚ ॥ ೧೮ ॥

ಲೋಕಾಲೋಕೇ ಮಹೀಪಾಲ ಲೋಕಪಾಲಾಸ್ತ್ವಮೀ ಸ್ಮೃತಾಃ ।
ಪ್ರಾಚ್ಯಾದಿಷು ಮಹಾವೀರ್ಯಾಃ ಕಲ್ಪಸ್ಥಾಯಿನ ಏವ ತೇ ॥ ೧೯ ॥

ಸುದಾಮಾ ಶೇಷಪಾದಶ್ಚ ಕೇತುಮಾನ್ ಸುಮಹಾಬಲಃ ।
ಹಿರಣ್ಯರೋಮಾ ಚ ತಥಾ ವಿಜ್ಞೇಯಾಶ್ಚ ದಿಗೀಶ್ವರಾಃ ॥ ೨೦ ॥

ಅರ್ವಾಕ್ತಸ್ಯ ಮಹೀಧ್ರಸ್ಯ ಚಂದ್ರಾರ್ಕಗ್ರಹತಾರಕಾಃ ।
ಪ್ರಪತಂತಿ ಮಹಾರಾಜ ನ ತು ಪಾರೇ ಕದಾಚನ ॥ ೨೧ ॥

೧೬-೧೯. ಸ್ವಾದೂದಕದಿಂದಾಚೆ ಇರುವ ಭೂಭಾಗವೆಲ್ಲವೂ ಸುವರ್ಣಮಯವಾಗಿದೆ. ಅದು ಒಂದು ಸಾವಿರ ಯೋಜನ ಅಳತೆ ಇದೆ. ಎಲೈ! ದೊರೆಯೇ ಕೇಳು. ಅಲ್ಲಿ ಶುಭಕರವಾದ ಭೂಮಿಗೆ ದೇವತೆಗಳ ಉದ್ಯಾನವೆಂದು ಹೆಸರು. ಇಂತಹ ಉದ್ಯಾನಗಳು ಅಲ್ಲಿ ಹತ್ತು ಮತ್ತು ಇಪ್ಪತ್ತೈದು ತರಹವಾಗಿವೆ. ಅಲ್ಲಿರುವ ಪರ್ವತಕ್ಕೆ ಲೋಕಾಲೋಕವೆಂದು ಹೆಸರು. ಅದು ಭೂಮಿಯನ್ನೆಲ್ಲಾ ಆಕ್ರಮಿಸಿಕೊಂಡು ಹತ್ತುಸಾವಿರ ಯೋಜನ ಉದ್ದವಾಗಿಯೂ ಅಷ್ಟೇ ಎತ್ತರವಾಗಿಯೂ ಇದೆ. ಆ ಲೋಕಾಲೋಕ ಪರ್ವತದಲ್ಲಿ ಇದರ ಕೆಳಗೆ ವಿವರಿಸುವ ಲೋಕಪಾಲಕರುಗಳು ವಾಸವಾಗಿದಾರೆ. ಪೂರ್ವಾದಿ ದಿಗ್ಭಾಗದಲ್ಲಿರುವ ಲೋಕಪಾಲಕರು ಕಲ್ಪಾಂತ್ಯದ ವರೆಗೂ ಇರುತ್ತಾರೆ.

೨೦. ಅವರ ಹೆಸರುಗಳೇನೆಂದರೆ :—ಸುದಾಮ, ಶೇಷಪಾದ, ಕೇತುಮಂತ, ಮಹಾಬಲಶಾಲಿಯಾದ ಹಿರಣ್ಯರೋಮ ಇವರೇ ನಾಲ್ಕು ದಿಕ್ಕಿನ ಒಡೆಯರು.

೨೧-೨೪. ಆ ಪರ್ವತದ ಹಿಂಭಾಗದಲ್ಲಿ ಚಂದ್ರಸೂರ್ಯಗ್ರಹಗಳೂ ನಕ್ಷತ್ರಗಳೂ ಮುಳುಗುತ್ತಿರುತ್ತವೆ. ಆದರೆ ಅದರ ದಡದಲ್ಲಿ ಮಾತ್ರ ಯಾವಾಗಲೂ ಮುಳು

ದಧ್ಯೋದಕಸಮುದ್ರಸ್ತು ಲೋಕಾಲೋಕಸಮಂತತಃ ।
ಪರಿವಾರ್ಯ ಸ್ಥಿತೋ ರಾಜನ್ನಂಧಕಾರೇ ಮಹಾರ್ಣವಃ ॥ ೨೨ ॥

ಏಕಷಷ್ಟಿ ಪ್ರಮಾಣೇನ ನಿಯುತಾನಿ ಸಮಂತತಃ ।
ತಸ್ಯ ಪಾದೇ ತತೋ ರಾಜನ್ ಬ್ರಹ್ಮಾಂಡಸ್ತು ಸಮಂತತಃ ॥ ೨೩ ॥

ಊರ್ಧ್ವೇನಾಧಶ್ಚ ವಿಷ್ಕಂಭೋ ಮಹಾನಂಡಸ್ಯ ಕೀರ್ತಿತಃ ।
ತಾವದೇವ ಪ್ರಮಾಣೇನ ತಿರ್ಯಕ್ಷು ಪರಿವಾರಿತಃ ॥ ೨೪ ॥

ಮೇರುಮಧ್ಯಾತ್ಸಮುದ್ರಸ್ಯ ಪಾರಂ ಗರ್ಭೋದಕಸ್ಯ ತು ।
ಕೋಟಿತ್ರಯಂ ಯೋಜನಾನಾಂ ನಿಯುತಾನಿ ತಥಾ ದಶ ॥ ೨೫ ॥

ಪಂಚಾನ್ಯಾನಿ ಚ ರಾಜೇಂದ್ರ ಪ್ರಮಾಣಂ ಪರಿಕೀರ್ತಿತಂ ।
ತಸ್ಯ ರಾಜನ್ ಶೃಣುಷ್ವಾದ್ಯ ಬ್ರಹ್ಮಾಂಡಸ್ತು ಸಮಂತತಃ ॥ ೨೬ ॥

ತದರ್ಧ ರ್ಥಂ ದ್ವಿತೀಯಸ್ಯ ಮಹೀಪತೇ ।
ಏತದೇವ ತು ನಿರ್ದಿಷ್ಟಂ ಪ್ರಮಾಣಂ ತತ್ತ್ವಚಿಂತಕೈಃ ॥ ೨೭ ॥

ಮೇರೋಸ್ತು ಪೂರ್ವದಿಗ್ಭಾಗೇ ಮಧ್ಯೇ ತು ಲವಣೋದಧೇಃ ।
ವಿಷ್ಣುಲೋಕೋ ಮಹಾನ್ ಪ್ರೋಕ್ತಃ ಸಲಿಲಾಂತರಸನ್ನಿಭಂ ॥ ೨೮ ॥

---

ಗುವುದಿಲ್ಲ. ಬೀಳುವುದಿಲ್ಲ. ಲೋಕಾಲೋಕ ಪರ್ವತದಸುತ್ತಲೂ ದಧ್ಯೋದಕ ಸಮುದ್ರವಿದೆ. ಆ ಮಹಾಸಮುದ್ರವನ್ನು ಯಾವಾಗಲೂ ಅಂಧಕಾರವು ಸುತ್ತಿಕೊಂಡೇ ಇರುತ್ತದೆ. ಆ ಸಮುದ್ರದ ಸುತ್ತಲೂ ೧೬೧ ಲಕ್ಷವ್ಯೈಲಿ ದಡವಿದೆ. ಆ ದಡದ ಸುತ್ತಲೂ ಬ್ರಹ್ಮಾಂಡವು ವ್ಯಾಪಿಸಿದೆ. ಆ ಅಂಡದ ಪ್ರಮಾಣವು ಮೇಲೆ ಕೆಳಗೆ ಉದ್ದುದ್ದವಾಗಿ ಅಷ್ಟೇ ಅಡ್ಡಡ್ಡಲಾಗಿ ವ್ಯಾಪಿಸಿಕೊಂಡಿದೆ.

೨೫-೨೭. ಮೇರುಪರ್ವತದ ಮಧ್ಯದಿಂದ ಗರ್ಭೋದಕ ಸಮುದ್ರದ ದಡದವರಿವಿಗೆ ಮೂರು ಕೋಟಿಯೂ ಹತ್ತುಲಕ್ಷ ಯೋಜನ ದೂರವಿದೆ. ಇದರ ಸುತ್ತಲೂ ಐದರಷ್ಟು ಹೆಚ್ಚು ಅಳತೆಯುಳ್ಳ ಬ್ರಹ್ಮಾಂಡವು ವ್ಯಾಪಿಸಿಕೊಂಡಿದೆ. ತತ್ವಚಿಂತಕರಾದ ಮಹರ್ಷಿಗಳಿಂದ ಈ ಅಳತೆಯು ಕಂಡುಹಿಡಿಯಲ್ಪಟ್ಟಿದೆ.

೨೮-೩೧. ಆ ಮೇರುಪರ್ವತದ ಪೂರ್ವದಿಕ್ಕಿನಲ್ಲಿ ಲವಣಸಮುದ್ರದ ಮಧ್ಯದಲ್ಲಿ ನೀರಿನೊಳಗೆ ಮಹಾಪ್ರಕಾಶಮಾನವಾದ ವಿಷ್ಣುಲೋಕವಿದೆ. ಎಲೈ! ವಜ್ರ

**ಸ್ವಭಾಸಯಾತ್ರ ದೇವಸ್ಯ ಸತತಂ ನೃಪ ರಾಜಿತಂ ।**
**ತತ್ರ ಸ್ವಪಿತಿ ಘರ್ಮಾಂತೇ ದೇವದೇವೋ ಜನಾರ್ದನಃ ॥ ೨೯ ॥**

**ಲಕ್ಷ್ಮೀಸಹಾಯಸ್ಸತತಂ ಶೇಷಪರ್ಯಂಕಮಾಶ್ರಿತಃ ।**
**ಏಕಾದಶ್ಯಾಮಾಷಾಢಸ್ಯ ಶುಕ್ಲಪಕ್ಷೇ ಜನಾರ್ದನಂ ॥ ೩೦ ॥**

**ದೇವಾಶ್ಚ ಋಷಯಶ್ಚೈವ ಗಂಧರ್ವಾಪ್ಸರಸಾಂ ಗಣಾಃ ।**
**ಅಭಿಷ್ಟುವಂತಿ ತೇ ಗತ್ವಾ ಸತತಂ ದಿನಪಂಚಕಂ ॥ ೩೧ ॥**

**ಉತ್ಸವಂ ಚೈವ ಕುರ್ವಂತಿ ಗೀತನೃತ್ಯಸಮಾಕುಲಂ ।**
**ತತಸ್ತು ಚತುರೋ ಮಾಸಾನ್ ಯೋಗನಿದ್ರಾಮುಪಾಸತೇ ॥ ೩೨ ॥**

**ಸುಪ್ತಂ ಚ ತಮುಪಾಸಂತೇ ಋಷಯೋ ಬ್ರಹ್ಮಸನ್ಮಿತಾಃ ।**
**ಸಶರೀರಾಣಿ ಶಾಸ್ತ್ರಾಣಿ ಭಕ್ತಾಸ್ತಂ ದೇವಮಾನವಾಃ ॥ ೩೩ ॥**

**ಕಾರ್ತಿಕಸ್ಯ ಸಿತೇ ಪಕ್ಷೇ ತದೇವ ದಿನಪಂಚಕಂ ।**
**ವಿಬೋಧಯಂತಿ ದೇವೇಶಂ ಗತ್ವಾ ಸೇಂದ್ರಾ ದಿವೌಕಸಃ ॥ ೩೪ ॥**

---

ಮಹಾರಾಜನೇ, ಕೇಳು. ಭಗವಂತನಾದ ದೇವದೇವೋತ್ತಮನಾದ ಜನಾರ್ದನನು ತನ್ನ ಆತ್ಮಪ್ರಕಾಶದಿಂದಲೇ ಎಲ್ಲವನ್ನೂ ಅಲ್ಲಿ ಬೆಳಗಿಸುತ್ತಾ ವಾಸವಾಗಿರುವನು ಮತ್ತು ಆ ಮಹಾನುಭಾವನು ಗ್ರೀಷ್ಮಋತುವಿನ ಕಡೆಯ ತಿಂಗಳಾದ ಆಷಾಢಮಾಸದ ಶುಕ್ಲಪಕ್ಷ ಏಕಾದಶೀ (ಶಯನೈಕಾದಶೀ) ದಿವಸ ಲಕ್ಷ್ಮೀಸಮೇತನಾಗಿ ಆದಿಶೇಷನೆಂಬ ಮಂಚದಮೇಲೆ ಮಲಗಿಕೊಳ್ಳುತ್ತಾನೆ. ಆ ಶಯನೈಕಾದಶಿಯಿಂದ ಪೂರ್ಣಿಮಾ ಪರ್ಯಂತವಾಗಿ ಐದು ದಿವಸಗಳ ಕಾಲ ಆ ಸ್ವಾಮಿಯನ್ನು ದೇವತೆಗಳೂ ಋಷಿಗಳೂ ಗಂಧರ್ವಾಪ್ಸರಸರೂ ಸಹ ಸ್ತೋತ್ರಮಾಡುತ್ತಿರುತ್ತಾರೆ.

೩೨-೩೪. ಗೀತ ನೃತ್ಯವಾದ್ಯದೊಡನೆ ಕೂಡಿದ ಮಹೋತ್ಸವವನ್ನೂ ಸಹ ಮಾಡುತ್ತಾರೆ. ಅಲ್ಲಿಂದ ಹಿಡಿದು ನಾಲ್ಕು ತಿಂಗಳ (ಚಾತುರ್ಮಾಸ್ಯ) ಕಾಲ ಮಹಾ ವಿಷ್ಣುವು ಯೋಗನಿದ್ರೆಯಿಂದ ಮಲಗಿಬಿಡುತ್ತಾನೆ. ಆ ರೀತಿ ಮಲಗಿದ್ದ ನಾಲ್ಕು ತಿಂಗಳ ಕಾಲವೂ, ಬ್ರಹ್ಮವಾದಿಗಳಾದ ಋಷಿಗಳೆಲ್ಲರೂ, ಸಮಸ್ತರಾದ ದೇವಮಾನಸ ಭಕ್ತರೂ ಸಹ ಶಾರೀರಕಾದಿ ಶಾಸ್ತ್ರ (ಬ್ರಹ್ಮಸೂತ್ರ) ಗಳನ್ನು ವ್ಯಾಸಂಗಮಾಡುತ್ತಿರುತ್ತಾರೆ. ಈ ರೀತಿ ನಾಲ್ಕು ತಿಂಗಳು ಕಳೆದ ಮೇಲೆ ಕಾರ್ತೀಕ ಶುದ್ಧ ದ್ವಾದಶೀ

**ದೇವಾಸ್ತಥೈವ ಕುರ್ವಂತಿ ತದಾಪಿ ಚ ಮಹೋತ್ಸವಂ ।**
**ಮೇರೋಸ್ತು ಪೂರ್ವದಿಗ್ಭಾಗೇ ಮಧ್ಯೇ ಕ್ಷೀರಾರ್ಣವಸ್ಯ ತು ॥ ೩೫ ॥**

**ಕ್ಷೀರಾಂಬುಮಧ್ಯಗಾ ಶುಭ್ರಾ ದೇವಸ್ಯಾನ್ಯಾ ತಥಾ ಪುರೀ ।**
**ಲಕ್ಷ್ಮೀಸಹಾಯಸ್ತತ್ರಾಸ್ತೇ ಶೇಷಾಸನಗತಃ ಪ್ರಭುಃ ॥ ೩೬ ॥**

**ತತ್ರಾಪಿ ಚತುರೋ ಮಾಸಾನ್ ಸುಪ್ತಸ್ತಿಷ್ಠತಿ ವಾರ್ಷಿಕಾನ್ ।**
**ಅಸ್ತ್ರೈಸ್ಸಕೇವಲೈಸ್ತತ್ರ ದೃಶ್ಯತೇ ಶಾಶ್ವತಃ ಪ್ರಭುಃ ॥ ೩೭ ॥**

**ತಸ್ಮಿಂಸ್ತಥೈವ ದಿಗ್ಭಾಗೇ ಮಧ್ಯೇ ಕ್ಷೀರಾರ್ಣವಸ್ಯ ತು ।**
**ಯೋಜನಾನಾಂ ಸಹಸ್ರಾಣಿ ಮಂಡಲಃ ಪಂಚವಿಂಶತಿಃ ॥ ೩೮ ॥**

**ಶ್ವೇತದ್ವೀಪಸ್ತು ವಿಖ್ಯಾತೋ ದ್ವೀಪಃ ಪರಮಶೋಭನಃ ।**
**ನರಾಸ್ಸೂರ್ಯಪ್ರಭಾಸ್ತತ್ರ ಶೀತಾಂಶುಸಮದರ್ಶನಾಃ ॥ ೩೯ ॥**

**ತೇಜಸಾ ದುರ್ನಿರೀಕ್ಷ್ಯಾಶ್ಚ ದೇವನಾಮಪಿ ಯಾದವ ।**
**ಪಂಚಕಾಲವಿಧಾನಜ್ಞಾಃ ಪೂಜಯಂತಿ ಜನಾರ್ದನಂ ॥ ೪೦ ॥**

---

(ಉತ್ಥಾನದ್ವಾದಶೀ) ದಿವಸ ಹಿಂದಿನಂತೆಯೇ ಐದು ದಿವಸ ಇಂದ್ರನೇ ಮೊದಲಾದ ದೇವತೆಗಳು ಹೋಗಿ ಮಹಾವಿಷ್ಣುವನ್ನು ಎಬ್ಬಿಸುತ್ತಾರೆ. ಆಗಲೂ ಕೂಡ ಋಷಿ ಮಾನವ ದೇವತೆಗಳೆಲ್ಲರೂ ಮಹೋತ್ಸವವನ್ನು ನೆರವೇರಿಸುತ್ತಾರೆ.

೩೫-೩೭. ಮೇರುಪರ್ವತದ ಪೂರ್ವದಿಗ್ಭಾಗದಲ್ಲಿರುವ ಕ್ಷೀರಸಮುದ್ರದ ಮಧ್ಯದಲ್ಲಿ ಮಹಾವಿಷ್ಣುವಿನ ಮತ್ತೊಂದು ಮನೆಯಿದೆ. ಅಲ್ಲಿಯೂ ಕೂಡ ಮಹಾ ವಿಷ್ಣುವು ಲಕ್ಷ್ಮೀಸಮೇತನಾಗಿ ಆದಿಶೇಷನ ಮೇಲೆ ಮಲಗಿದಾನೆ. ಅಲ್ಲಿಯೂ ಕೂಡ ಪ್ರತಿವರ್ಷವೂ ನಾಲ್ಕುತಿಂಗಳು ಯೋಗನಿದ್ರೆಯಿಂದ ಕೂಡಿರುತ್ತಾನೆ. ಅಲ್ಲಿ ಮಹಾಪ್ರಭುವು ಬಾಣಂಗಳಂ ಧರಿಸಿ ಶಾಶ್ವತವಾಗಿ ವಾಸವಾಗಿದಾನೆ.

೩೮-೪೦. ಮತ್ತು ಅದೇ ದಿಕ್ಕಿನಲ್ಲಿ ಕ್ಷೀರಸಮುದ್ರ ಮಧ್ಯದಲ್ಲಿ ಶ್ವೇತದ್ವೀಪ ವಿದೆ. ಇದು ಬಹು ಪ್ರಕಾಶಮಾನವಾದುದು. ಇದರ ಅಳತೆ ಒಂದು ಸಾವಿರ ಯೋಜನವು. ಇಲ್ಲಿ ಇಪ್ಪತ್ತೈದು ಮಂಡಲವಿದೆ. ಈ ಶ್ವೇತದ್ವೀಪದಲ್ಲಿರುವ ಜನರು ಸೂರ್ಯಚಂದ್ರರಿಗೆ ಸಮಾನವಾದ ಕಾಂತಿಯಿಂದ ಕೂಡಿ ನೋಡುವವರ ಕಣ್ಣು ಕುಕ್ಕುವಂತೆ ದುರ್ನಿರೀಕ್ಷ್ಯರೆನಿಸಿಕೊಂಡಿದಾರೆ. ಎಲೈ! ಯದುಕುಲತಿಲಕನಾದ

**ಪೂಜಾಂ ತು ತೇಷಾಂ ಶಿರಸಾ ಸ ತು ದೇವಃ ಪ್ರಯಚ್ಛತಿ ।**
**ಇಹ[illegible]ಶ್ಚ ಕೃತಾಂ ಪೂಜಾಂ ಪಾದತಶ್ಚ ಪ್ರಯಚ್ಛತಿ ॥ ೪೧ ॥**

**ಏಕಾಂತಭಾವೋಪಗತಾಸ್ತತ್ರ ಯಾಂತಿ ಹರಿಂ ನರಾಃ ।**
**ತತ್ರ ಗತ್ವಾ ನ ಶೋಚಂತಿ ನಿವರ್ತಂತೇ ನ ಚಾಪ್ಯಥಾ ॥ ೪೨ ॥**

**ಪೂಜಯಿತ್ವಾ ಚಿರಂ ಕಾಲಂ ದೇವದೇವಂ ಜನಾರ್ದನಂ ।**
**ಆದಿತ್ಯಮಂಡಲಂ ಭಿತ್ವಾ ಬ್ರಹ್ಮಾಣಂ ಪ್ರವಿಶಂತಿ ತೇ ॥ ೪೩ ॥**

**ತತೋಽನಿರುದ್ಧಂ ದೇವೇಶಂ ಪ್ರದ್ಯುಮ್ನಂ ಚಾಪ್ಯನಂತರಂ ।**
**ತತಸ್ಸಂಕರ್ಷಣಂ ದೇವಂ ವಾಸುದೇವಂ ತತಃ ಪರಂ ॥ ೪೪ ॥**

**ವಾಸುದೇವಂ ಚ ಸಂಪ್ರಾಪ್ಯ ಮುಚ್ಯಂತೇ ಸರ್ವವರ್ತನೈಃ ।**
**ಶ್ವೇತದ್ವೀಪಗತಾಸ್ತಸ್ಮಾನ್ನ ನಿವರ್ತಂತಿ ಕರ್ಹಿಚಿತ್ ॥ ೪೫ ॥**

---

ವಜ್ರನೇ, ಕೇಳು. ಈ ಶ್ವೇತದ್ವೀಪ ನಿವಾಸಿಗಳು ಪಂಚಕಾಲ ಪೂಜಾವಿಧಾನವನ್ನು ತಿಳಿದವರಾಗಿ ಜನಾರ್ದನಸ್ವಾಮಿಯನ್ನು ಪೂಜೆಮಾಡುತ್ತಿರುವರು.

೪೧-೪೫. ದೇವತೆಗಳು ಮಾಡಿದ ಪೂಜೆಯನ್ನು ಶಿರಸ್ಸಿನಿಂದಲೂ ಈ ಲೋಕದ ಜನರು ಮಾಡಿದ ಪೂಜೆಯನ್ನು ಪಾದಗಳಿಂದಲೂ ಅಂಗೀಕರಿಸುತ್ತಾ ಶ್ರೀ ಹರಿಯು ವಿರಾಜಮಾನನಾಗಿರುವನು. ಏಕಾಂತವಾದ ಧ್ಯಾನದಿಂದ ಜನರು ಹರಿಯನ್ನು ಮೆಚ್ಚಿಸಿ ಆ ಲೋಕಕ್ಕೆ ಹೋಗುತ್ತಾರೆ. ಅಲ್ಲಿಗೆ ಹೋದವರು ಸಕಲ ದುಃಖಗಳಿಂದಲೂ ಮುಕ್ತರಾಗುವರಲ್ಲದೆ ಅಲ್ಲಿಂದ ಈ ಲೋಕಕ್ಕೆ ಹಿಂತಿರುಗುವುದೇ ಇಲ್ಲ. ಬಹುಕಾಲ ದೇವದೇವೋತ್ತಮನಾದ ಜನಾರ್ದನನನ್ನು ಪೂಜಿಸಿ ಆದಿತ್ಯ ಮಂಡಲವನ್ನು ಭೇದಿಸಿಕೊಂಡು ಬ್ರಹ್ಮಲೋಕಕ್ಕೆ ಪ್ರವೇಶಿಸುತ್ತಾರೆ. ಅನಂತರ ದೇವೇಶ್ವರನಾದ ಅನಿರುದ್ಧನನ್ನು ಪ್ರದ್ಯುಮ್ನನನ್ನು ಅನಂತರ ಕ್ರಮವಾಗಿ ಸಂಕರ್ಷಣ ದೇವನನ್ನೂ ಬಳಿಕ ವಾಸುದೇವನನ್ನೂ ಪೂಜಿಸಿ ಸಕಲವ್ಯವಹಾರಗಳಿಂದಲೂ ಮುಕ್ತರಾದ ಬ್ರಹ್ಮಾನಂದವನ್ನು ಅನುಭವಿಸುತ್ತಾರೆ. ಈ ಶ್ವೇತದ್ವೀಪಕ್ಕೆ ಹೋದ ಜನರು ಯಾವುದೇ ಕಾರಣದಿಂದಾಗಲಿ ಭೂಸ್ಪರ್ಶಮಾಡುವುದಿಲ್ಲವೆಂದು ತಿಳಿಯಬೇಕು.

ಪೂರ್ವೋತ್ತರೇ ತು ದಿಗ್ಭಾಗೇ ಮಧ್ಯೇ ಕ್ಷೀರಾರ್ಣವಸ್ಯ ಚ ।
ವೈಜಯಂತ ಇತಿ ಖ್ಯಾತಃ ಪರ್ವತಸ್ಸರ್ವಕಾಂಚನಃ ॥ ೪೬ ॥

ಯೋಜನಾನಾಂ ಸಹಸ್ರಾಣಿ ಪ್ರಮಾಣೇನ ದಶ ಸ್ಮೃತಃ ।
ಆಯಾಮವಿಸ್ತರೋಚ್ಛ್ರಾಯೈಃ ಪ್ರಮಾಣಂ ತಸ್ಯ ಕೀರ್ತಿತಂ ॥ ೪೭ ॥

ಯೋಜನಾನಾಂ ಸಹಸ್ರಾಣಿ ಪಂಚ ತಸ್ಯ ಗುಹಾ ಸ್ಮೃತಾ ।
ಉಚ್ಛ್ರಿತಾ ಯೋಜನಶತಂ ತಾವದೇವ ಚ ವಿಸ್ತೃತಾ ॥ ೪೮ ॥

ತಿಮಿರೇಣಾವೃತಾ ದ್ವಾರಿ ಯೋಜನಾನಾಂ ತಥಾ ಶತಂ ।
ಸ್ವಪ್ರಭಾಭರಣಾ ದಿವ್ಯಾ ತತಃ ಪರತರಂ ಹಿ ಸಾ ॥ ೪೯ ॥

ನಾಮ್ನಾ ಚ ಲೋಕೇ ವಿಖ್ಯಾತಾ ಋಷಿಭಿಸ್ತಿಮಿರಾವತೀ ।
ತಸ್ಯಾಂ ದೇವವರೋ ವಿಷ್ಣುಃ ಸ್ವಪನ್ನಾಸ್ತೇ ಜನಾರ್ದನಃ ॥ ೫೦ ॥

ತತ್ರೈನಮುಪತಿಷ್ಠಂತಿ ದೇವ್ಯಸ್ತಿಸ್ರೋ ಮಹೀಪತೇ ।
ನಿದ್ರಾ ಚ ಕಾಳರಾತ್ರಿಶ್ಚ ಲಕ್ಷ್ಮೀಶ್ಚ ವರವರ್ಣಿನೀ ॥ ೫೧ ॥

---

೪೬-೪೯. ಕ್ಷೀರಸಮುದ್ರದ ಈಶಾನ್ಯ ದಿಗ್ಭಾಗದಲ್ಲಿ ವೈಜಯಂತವೆಂಬ ಪರ್ವತವಿದೆ. ಅದರ ಎತ್ತರವೂ ಉದ್ದ ಅಗಲಗಳೂ ಸಹ ಹತ್ತು ಸಾವಿರಯೋಜನ ಪ್ರಮಾಣದಿಂದ ಕೂಡಿದೆ. ಅಲ್ಲಿ ಒಂದು ಮಹಾಗುಹೆ ಇದೆ. ಅದರ ಎತ್ತರವೂ ಅಷ್ಟೇ ಅಳತೆಯುಳ್ಳದು. ಅದರ ಬಾಗಿಲು ಬಹು ಕತ್ತಲೆಯಿಂದ ಕೂಡಿದೆ. ನೂರು ಯೋಜನ ಎತ್ತರ, ನೂರು ಯೋಜನ ಅಗಲದವರಿಗೆ ಗಾಢಾಂಧಕಾರವಿರುವುದು. ಬಳಿಕ ಆಚೆ ನೂರು ಯೋಜನದವರಿವಿಗೆ ಆತ್ಮನ ಅನಂತ ಪ್ರಭೆಯಿಂದ ಆ ಗುಹೆಯು ಬೆಳಗುತ್ತಲಿದೆ.

೫೦-೫೧. ಋಷಿಗಳು ಆ ಗುಹಗೆ ತಿಮಿರಾವತೀ ಎಂದು ಹೆಸರಿಟ್ಟಿದಾರೆ. ಆ ಗುಹೆಯಲ್ಲಿ ಜನಾರ್ದನಸ್ವಾಮಿಯು ಮಲಗಿಕೊಂಡಿರುವನು. ಆ ಸ್ವಾಮಿಯ ಬಳಿ ನಿದ್ರಾ, ಕಾಳರಾತ್ರೀ, ಲಕ್ಷ್ಮಿ ಎಂಬ ಹೆಸರಿನ ಮೂರು ಮಂದಿ ದೇವಿಯರು ಕುಳಿತಿರುವರು. ಭೃಗುವೇ ಮುಂತಾದ ಮಹರ್ಷಿಗಳು ಆ ಸ್ವಾಮಿಯನ್ನು ಅಲ್ಲಿ ಉಪಾಸನೆ (ಸೇವೆ) ಮಾಡುತ್ತಿರುವರು.

**ಉಪಾಸತೇ ಚ ತಂ ದೇವಂ ಭೃಗ್ವಾದ್ಯಾ ಪರಮರ್ಷಯಃ ।**
**ಶರೀರಧಾರಿಭಿಶ್ಚಾಸ್ತ್ರೈಸ್ತಥಾ ತತ್ರ ಚ ಸೇವ್ಯತೇ ॥ ೫೨ ॥**

**ತಸ್ಯ ಸುಪ್ತಸ್ಯ ವದನಾನ್ನಿಃಶ್ವಾಸೋಚ್ಛ್ವಾಸತಃ ಕ್ರಮಾತ್ ।**
**ಪ್ರಜಾನಾಂ ಪಂಕ್ತಯೋ ಹ್ಯುಚ್ಚೈರ್ನಿರ್ಗತಂತಿ ಪತಂತಿ ಚ ॥ ೫೩ ॥**

**ತಸ್ಯೋಚ್ಛ್ವಾಸಸ್ಯ ಜಂತೂನಾಂ ಸಂಭವಃ ಕಥಿತೋ ನೃಪ ।**
**ನಿಃಶ್ವಾಸಕಾಲೇ ಚ ತಥಾ ಜಂತೂನಾಂ ಮರಣಂ ಸ್ಮೃತಂ ॥ ೫೪ ॥**

**ಮಧ್ಯೇ ಘೃತಸಮುದ್ರಸ್ಯ ಮೇರೋಃ ಪಶ್ಚಿಮತಸ್ತಥಾ ।**
**ಯೋಜನಾನಾಂ ತು ನಿಯುತಂ ದ್ವೀಪಸ್ತು ಪರಿಮಂಡಲಃ ॥ ೫೫ ॥**

**ತತ್ರ ಗೋವರ್ಧನಸ್ಯೋಕ್ತಾಃ ವಸತಿಸ್ಸುಮಹಾತ್ಮನಃ ।**
**ದಿವ್ಯಾನಾಂ ತತ್ರ ಧೇನೂನಾಂ ವಸತಿಶ್ಚ ತಥಾ ಸ್ಮೃತಾ ॥ ೫೬ ॥**

**ಸತತಂ ಕಾಮರೂಪೇಣ ಭಾಭಿಸ್ಸ ರಮತೇ ಹರಿಃ ।**
**ಮಧ್ಯೇ ಧಧಿಸಮುದ್ರಸ್ಯ ದ್ವೀಪಸ್ತಾವತ್ಪ್ರಮಾಣತಃ ॥ ೫೭ ॥**

---

೫೨-೫೪. ಆ ಸ್ವಾಮಿಯನ್ನು ಭೃಗ್ವಾದಿಗಳು ಶರೀರವಂ ಧರಿಸಿ ಸೇವಿಸುವರೆಂದು ಹೇಳಿಯಾಯಿತಷ್ಟೆ? ಅಲ್ಲಿ ಮಲಗಿರುವ ಜನಾರ್ದನಸ್ವಾಮಿಯು ಮೂಗಿನ ಹೊಳ್ಳೆಯಿಂದ ಕ್ರಮವಾಗಿ ನಿಃಶ್ವಾಸೋಚ್ಛ್ವಾಸ ವ್ಯಾಪಾರಗಳು ನಡೆಯುತಲಿವೆ. ಆ ವ್ಯಾಪಾರಕಾಲದಲ್ಲಿ ಪ್ರಜೆಗಳು ಸಾಲುಸಾಲಾಗಿ ಎತ್ತರವಾಗಿ ಬೀಳುತ್ತ ಏಳುತ್ತಲಿರುತ್ತಾರೆ. ಆ ಮಹಾಸ್ವಾಮಿಯ ಉಚ್ಛ್ವಾಸಸಮಯವೇ ಪ್ರಜೆಗಳು ಉತ್ಪತ್ತಿಯಾಗುವ ಕಾಲವೆಂದೂ ಉಸಿರು ಈಚೆಗೆ ಹೊರಡುವ ನಿಃಶ್ವಾಸಕಾಲವೇ ಪ್ರಾಣಿಗಳು ಮರಣ ಕಾಲವೆಂದೂ ಹೇಳಲ್ಪಟ್ಟಿದೆ.

೫೫-೫೮. ಮೇರುಪರ್ವತದ ಪಶ್ಚಿಮಭಾಗದಲ್ಲಿರುವ ಘೃತಸಮುದ್ರದ ಮಧ್ಯದಲ್ಲಿ ಒಂದು ಲಕ್ಷಯೋಜನ ವಿಸ್ತಾರವುಳ್ಳ ಒಂದು ದ್ವೀಪವಿದೆ. ಆದಕ್ಕೆ ಗೋವರ್ಧನ ದ್ವೀಪವೆಂದು ಹೆಸರು. ಅಲ್ಲಿ ಕಾಮಧೇನುವಿಗೆ ಸಮಾನವಾದ ದೇವಲೋಕದ ಹಸುಗಳು ಅನಂತಾನಂತವಾಗಿ ವಾಸಮಾಡುತಲಿವೆ. ಆ ಗೋವರ್ಧನ ದ್ವೀಪದಲ್ಲಿ ಶ್ರೀ ಹರಿಯು ಯಾವಾಗಲೂ ಕಾಮರೂಪದಿಂದ ಆಟವಾಡುತ್ತಿರುವನು. ದಧಿ (ಮೊಸರು) ಸಮುದ್ರಮಧ್ಯದಲ್ಲಿ ಅದೇ ಪ್ರಮಾಣದ ಮತ್ತೊಂದು ದ್ವೀಪವಿದೆ. ಕೇಶವಸ್ವಾಮಿಯು ಆ ದ್ವೀಪದಲ್ಲಿ ಸುವರ್ಣಮಯ ರೂಪವನ್ನು ಧರಿಸಿ ವಾಸ ಮಾಡುತಲಿರುವರು. ಮಹಾತೇಜಸ್ವಿಗಳಾದ ಋಷಿಗಳು ಅಲ್ಲಿರುವ ಪರಮಾತ್ಮನನ್ನು ನೋಡಬಲ್ಲರು.

**ಹೇಮರೂಪಧರೋ ಯತ್ರ ನಿತ್ಯಂ ವಸತಿ ಕೇಶವಃ ।**
**ತತ್ರಸ್ಥಮೇನಂ ಪಶ್ಯಂತಿ ಋಷಯೋ ಭೂರಿತೇಜಸಃ ॥ ೫೮ ॥**

**ಸುರಾಸಮುದ್ರಮಧ್ಯೇ ತು ದ್ವೀಪಃ ಪರಮವಿಸ್ತೃತಃ ।**
**ತತ್ರ ಸಂಕರ್ಷಣೋ ದೇವೋ ವಿಭುರಾಸ್ತೇ ಸುರಾಸುರಾಃ ॥ ೫೯ ॥**

**ಉಪತಿಷ್ಠಂತಿ ತತ್ರೈನಂ ದಿವ್ಯಸ್ತ್ರಿಸ್ರೋ ಮನೋರಮಾಃ ।**
**ಕಾಂತಿಶ್ಚ ಮದಿರಾ ಚೈವ ತಥಾ ದೇವೀ ಕರೀಷಿಣೀ**
**ತತ್ರಸ್ಥಮೇನಂ ಪಶ್ಯಂತಿ ಪ್ರಜಾನಾಂ ಪತಯಸ್ಸದಾ । ॥ ೬೦ ॥**

**ಕ್ಷ್ಮಾಮಂಡಲಂ ಕೃತ್ಸ್ನಮಿದಂ ತವೋಕ್ತಂ ।**
**ಕ್ಷ್ಮಾಪಾಲವೃಂದಾವನಪೂರ್ಣಚಂದ್ರ ।**
**ಸಮಾಸತೋ ವ್ಯಾಸಗಿರಾಮಶಕ್ಯಂ ।**
**ವಕ್ತುಂ ಮಹೇಂದ್ರೋಽಪಿ ನ ವರ್ಷಪೂಗೈಃ ॥ ೬೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ**
**ಪ್ರಥಮಖಂಡೇ ಷಷ್ಠೋಽಧ್ಯಾಯಃ**

---

೫೯-೬೧. ಸುರಾ (ಸಾರಾಯಿ) ಸಮುದ್ರ ಮಧ್ಯದಲ್ಲಿ ವಿಸ್ತಾರವಾದ ಇನ್ನೊಂದು ದ್ವೀಪವಿದೆ. ಅಲ್ಲಿ ಸಂಕರ್ಷಣನಾಮಕ ಶ್ರೀ ಹರಿಯು ವಾಸವಾಗಿದಾನೆ. ದೇವತೆಗಳೂ ರಾಕ್ಷಸರೂ ಆ ಸ್ವಾಮಿಯನ್ನು ಸೇವಿಸುತ್ತಾರೆ. ಮತ್ತು ಕಾಂತಿ, ಮದಿರೆ, ಕರೀಷಿಣಿಯರೆಂಬ ಮೂವರು ದೇವಿಯರು ಸ್ವಾಮಿಯ ಸಾನ್ನಿಧ್ಯದಲ್ಲೇ ಇರುವರು. ಆ ಮಹಾಸ್ವಾಮಿಯನ್ನು ಸೃಷ್ಟಿಕುಶಲರಾದ ಬ್ರಹ್ಮರು ನೋಡುತ್ತಲಿದಾರೆ. ಎಲೈ ! ಭೂಪಾಲಕವೃಂದದೊಡೆಯನಾದ ವಜ್ರಚಕ್ರಾಧೀಶ್ವರನೇ, ಕೇಳು. ಸಕಲ ಭೂಮಂಡಲದ ವಿಸ್ತಾರವನ್ನು ನಿನಗೆ ಹೇಳಿರುವೆನು. ಒಟ್ಟಿನ ಮೇಲೆ ಹೇಳುವುದಾದರೆ ವ್ಯಾಸಮಹರ್ಷಿಗಳ ಮಾತುಗಳಿಗೇ ಸಿಕ್ಕದೇ ಇರುವ ಈ ಮಹಾಪುರಾಣವನ್ನು ಬಾಯಿನಿಂದ ವರ್ಣಿಸಲು ಮಹೇಂದ್ರನು ಅನೇಕ ವರ್ಷಗಳು ಪ್ರಯತ್ನಪಟ್ಟಾಗ್ಯೂಸಾಧ್ಯವಿಲ್ಲದೇ ಇದೆ.

ಇಂತೆಂಬಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ಸಪ್ತಮೋಽಧ್ಯಾಯಃ

---

॥ ವಜ್ರ ಉವಾಚ ॥

**ಜಂಬೂದ್ವೀಪಸ್ಯ ಸಂಸ್ಥಾನಂ ವಿಸ್ತರೇಣ ಮಹಾಮುನೇ ।**
**ತ್ವತ್ತೋಽಹಂ ಶ್ರೋತುಮಿಚ್ಛಾಮಿ ಯತ್ರ ಜಾತೋಽಸಿ ಭಾರ್ಗವ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಅವಗಾಢಾವುಭಯತಸ್ಸಮುದ್ರೌ ಪೂರ್ವಪಶ್ಚಿಮೌ ।**
**ಜಂಬೂದ್ವೀಪೇ ಮಹಾರಾಜ ಷಡಿಮೇ ಕುಲಪರ್ವತಾಃ ॥ ೨ ॥**

**ಹಿಮವಾನ್ ಹೇಮಕೂಟಶ್ಚ ನಿಷಧೋ ನೀಲ ಏವಚ ।**
**ಮೇರುಶ್ಚ ಶೃಂಗವಾಂಶ್ಚೈವ ಸರ್ವೇ ರತ್ನಾಕರಾಶ್ಶುಭಾಃ ॥ ೩ ॥**

---

## ಏಳನೆಯ ಅಧ್ಯಾಯವು

೧. ವಜ್ರಮಹಾರಾಜನು ಹೇಳುವನು :—ಎಲೈ! ಭೃಗುಪುತ್ರನಾದ ಮಾರ್ಕಂಡೇಯನೆ, ನೀನು ಅದಾವ ಜಂಬೂದ್ವೀಪದಲ್ಲಿ ಸಂಜನಿಸಿರುವೆಯೋ ಅಂತಹ ಜಂಬೂದ್ವೀಪದ ವರ್ಣನೆಯನ್ನು ನಿನ್ನ ಮುಖದಿಂದ ಕೇಳಲಪೇಕ್ಷಿಸುತ್ತೇನೆ.

೨. ಮಾರ್ಕಂಡೇಯನು ಹೇಳುವನು :—ಪೂರ್ವಪಶ್ಚಿಮಸಮುದ್ರಗಳನ್ನು ನಿಬಿಡವಾಗಿ ವ್ಯಾಪಿಸಿಕೊಂಡಿರುವ ಜಂಬೂದ್ವೀಪದಲ್ಲಿ ಆರು ಕುಲಪರ್ವತಗಳಿವೆ. ಕೇಳಯ್ಯ ಮಹಾರಾಜ!

೩. ಮಂಗಳಕರಗಳಾದ ಆ ಆರು ಸಮುದ್ರಗಳ ಹೆಸರುಗಳೇನೆಂದರೆ :— ಹಿಮವಂತ, ಹೇಮಕೂಟ, ನಿಷಧ, ನೀಲ, ಮೇರು ಶೃಂಗವಂತವೆಂದು ತಿಳಿ.

ಮಧ್ಯೇ ತು ಮಂಡಲಶ್ಶೈಲೋ ನೀಲಸ್ಯ ನಿಷಧಸ್ಯ ಚ ।
ಸೌವರ್ಣಃ ಕಥ್ಯತೇ ಮೇರುಃ ಪ್ರಮಾಣಂ ತಸ್ಯ ಮೇ ಶೃಣು ॥ ೪ ॥

ಚತುರಾಶೀತಿಸಾಹಸ್ರಾಃ ಕಥಿತಾಶ್ಚೋಚ್ಛ್ರಯೇಣ ಚ ।
ಅಧಸ್ತಾತ್ ಷೋಡಶೈವೋಕ್ತಃ ಷೋಡಶೈವ ತು ವಿಸ್ತೃತಃ ॥ ೫ ॥
ವಿಸ್ತಾರೋ ದ್ವಿಗುಣಶ್ಚಾಸ್ಯ ಭೂಲಗ್ನೋ ಮಂಡಲಃಸ್ಮೃತಃ ।
ವೃಂದಪುಷ್ಪನಿಭಶ್ಚೋರ್ಧ್ವಂ ದ್ವಾಂತ್ರಿಂಶಚ್ಚೈವ ವಿಸ್ತೃತಃ ॥ ೬ ॥

ವಿಸ್ತಾರೋ ದ್ವಿಗುಣಶ್ಚಾಸ್ಯ ತತ್ರಾಧಿಕವಿಧಿಃ ಸ್ಮೃತಃ ।
ಮೇರುಸ್ತು ನವತಿಃ ಪ್ರೋಕ್ತಸ್ಸಹಸ್ರಃ ಪೂರ್ವತೋ ಗಿರಿಃ ॥ ೭ ॥

ಯೋಜನಾನಾಂ ಸಹಸ್ರಂ ತು ಮಾಲ್ಯವಾನ್ನಾಮ ನಾಮತಃ
ಆನೀಲಂ ನಿಷಧಂ ಯಾವತ್ಪಶ್ಚಿಮೇನ ತು ತಾವತಾ ॥ ೮ ॥

ತಾವತ್ಪ್ರಮಾಣೋ ನಿರ್ದಿಷ್ಟಃ ಪೂರ್ವತೋ ಗಂಧಮಾಧನಃ ।
ಮೇರೋಸ್ತೂತ್ತರತಃ ಶ್ವೇತಃ ಪೂರ್ವತೋಽನಂತ ಉಚ್ಯತೇ ॥ ೯ ॥

---

೪. ನೀಲ ಮತ್ತು ನಿಷಧಪರ್ವತಗಳ ಮಧ್ಯದಲ್ಲಿ ಮೇರುಮಂಡಲವು ಸುವರ್ಣಮಯ (ಚಿನ್ನದ ಬೆಟ್ಟ) ವಾಗಿರುವುದು. ಅದರ ಪ್ರಮಾಣವನ್ನು ಹೇಳುವೆನು. ಕೇಳು.

೫. ಮೇರುಪರ್ವತವು ನಲವತ್ತುಸಾವಿರ ಯೋಜನದೆತ್ತರವಾಗಿಯೂ ಬುಡವು ಹದಿನಾರುಸಾವಿರ ಯೋಜನ, ಅಗಲವು ಹದಿನಾರುಸಾವಿರ ಯೋಜನದಿಂದಲೂ ಕೂಡಿದೆ.

೬. ಭೂಮಂಡಲವು ಇದರ ಎರಡರಷ್ಟು ವಿಸ್ತಾರವುಳ್ಳದ್ದಾಗಿದೆ. ಇದರ ವಿಸ್ತಾರವು ಮೂವತ್ತೆರಡು ಸಾವಿರ ಯೋಜನ ಎತ್ತರವಾಗಿದೆ. ಇದು ಬೃಂದಪುಷ್ಪದಂತೆ ಕಾಂತಿಯುಳ್ಳದು.

೭. ಇದರ ಎರಡರಷ್ಟು ವಿಸ್ತಾರವಾಗಿರುವುದೇ ಮೇರುಪರ್ವತವು. ಇದರ ಪೂರ್ವದಿಕ್ಕಿನಲ್ಲಿರುವ ತೊಂಭತ್ತುಸಾವಿರ ಯೋಜನವುಳ್ಳದ್ದಾಗಿರುವ ಬೆಟ್ಟವು.

೮-೯. ಮಾಲ್ಯವತ್‌ಪರ್ವತವೆಂದು ಹೆಸರುಗೊಂಡಿದೆ. ನಿಷಧಪರ್ವತದಿಂದ ನೀಲಪರ್ವತದವರಿಗೆ ಪಶ್ಚಿಮಕ್ಕೆ ಹಬ್ಬಿರುವ ಗಂಧಮಾದನ ಪರ್ವತವು ಒಂದು ಸಾವಿರ ಯೋಜನವುಳ್ಳದ್ದಾಗಿದೆ. ಮೇರುಪರ್ವತದ ಉತ್ತರ ದಿಕ್ಕಿನಲ್ಲಿ ಅದೇ

**ದಕ್ಷಿಣೇ ಚ ತಥಾ ಪೀತಃ ಕೃಷ್ಣಃ ಪಶ್ಚಿಮತಃ ಸ್ಮೃತಃ ।**
**ಅಂತರೇಣ ಸ್ಮೃತೋ ವಿಪ್ರಃ ಪೂರ್ವತಃ ಕ್ಷತ್ರಿಯಃ ಸ್ಮೃತಃ ॥ ೧೦ ॥**

**ದಕ್ಷಿಣೇನ ತಥಾ ವೈಶ್ಯಃ ಶೂದ್ರಃ ಪಶ್ಚಿಮತಃ ಸ್ಮೃತಃ ।**
**ತಸ್ಮಾದುದೀಚೀ ವಿಪ್ರಾಣಾಂ ಪ್ರಾಚೀ ಸ್ಯಾತ್ಕ್ಷತ್ರಜನ್ಮನಾಂ ॥ ೧೧ ॥**

**ದಕ್ಷಿಣಾ ವೈಶ್ಯಜಾತೀನಾಂ ಶೂದ್ರಾಣಾಂ ಪಶ್ಚಿಮಾ ಸ್ಮೃತಾ ।**
**ಪ್ರಾಚ್ಯಾಂ ಮಹೇಂದ್ರಸ್ಯ ಪುರೀ ಮೇರುಪೃಷ್ಠೇಽಮರಾವತೀ ॥ ೧೨ ॥**

**ವಹ್ನೇಃ ಪ್ರದಕ್ಷಿಣೇನೋಕ್ತಾಃ ಪುರೀ ನಾಮ್ನಾ ಸಭಾವತೀ ।**
**ಯಮಸ್ಯ ದಕ್ಷಿಣೇನೋಕ್ತಾ ನಾಮ್ನಾ ಸಂಯಮಿನೀ ಪುರೀ ॥ ೧೩ ॥**

**ಪ್ರೋಕ್ತಾ ವೈ ನೈಋತೀ ಭಾಗೇ ಪುರೀ ಪಶ್ಚಿಮದಕ್ಷಿಣೇ ।**
**ಪಶ್ಚಿಮೇನ ತಥಾ ರಮ್ಯಾ ಸುಮುಖಾ ವರುಣಸ್ಯ ಚ ॥ ೧೪ ॥**

**ಅನಂತರಂ ಶಿವಾ ನಾಮ ಪುರೀ ವಾಯೋಃ ಪ್ರಕೀರ್ತಿತಾ ।**
**ಉತ್ತರೇಣ ಪುರೀ ರಮ್ಯಾ ಸೋಮಸ್ಯೋಕ್ತಾ ವಿಭಾವರೀ ॥ ೧೫ ॥**

**ಅನಂತರಂ ಶಿವಸ್ಯೋಕ್ತಾ ನಗರೀ ಶಾಂಕರೀ ಶಿವಾ ।**
**ಮೇರುಪೃಷ್ಠೇ ಯಥಾ ದೇವಾಃ ಸಂಶ್ರಿತಾಸ್ತು ಯಥಾ ದಿಶಂ ॥ ೧೬ ॥**

---

ಪ್ರಮಾಣದಿಂದ ಕೂಡಿರುವ ಶ್ವೇತಪರ್ವತವೂ ಪೂರ್ವದಿಕ್ಕಿನಲ್ಲಿ ಅನಂತಪರ್ವತವೂ ಹಬ್ಬಿದೆ.

೧೦-೧೨. ದಕ್ಷಿಣದಲ್ಲಿ ಪೀತಪರ್ವತವೂ ಪಶ್ಚಿಮದಲ್ಲಿ ಕೃಷ್ಣಪರ್ವತವೂ ಇವೆ. ಉತ್ತರ ದಿಕ್ಕಿಗೆ ಬ್ರಾಹ್ಮಣನೆಂದೂ ಪೂರ್ವದಿಕ್ಕಿಗೆ ಕ್ಷತ್ರಿಯನೆಂದೂ ದಕ್ಷಿಣದಿಕ್ಕಿಗೆ ವೈಶ್ಯನೆಂದೂ ಪಶ್ಚಿಮಕ್ಕೆ ಶೂದ್ರನೆಂದೂ ಹೆಸರು. ಆದ್ದರಿಂದಲೇ ಬ್ರಾಹ್ಮಣನಿಗೆ ಉತ್ತರದಿಕ್ಕು, ಕ್ಷತ್ರಿಯನಿಗೆ ಪೂರ್ವದಿಕ್ಕು, ವೈಶ್ಯನಿಗೆ ದಕ್ಷಿಣದಿಕ್ಕು, ಶೂದ್ರನಿಗೆ ಪಶ್ಚಿಮ ದಿಕ್ಕು ಇಷ್ಟವಾದುದೆಂದು ಹೇಳಲ್ಪಟ್ಟಿದೆ. ಮೇರುಪರ್ವತದ ಪೂರ್ವದಿಕ್ಕಿನಲ್ಲಿ ಇಂದ್ರನ ಪಟ್ಟಣವಾದ ಅಮರಾವತೀ ಪಟ್ಟಣವೂ.

೧೩-೧೮. ಅದರಂತೆ ಪ್ರದಕ್ಷಿಣಾಕಾರವಾಗಿ ಆಗ್ನೇಯದಲ್ಲಿ ಸಭಾವತೀನಗರವೂ, ದಕ್ಷಿಣದಿಕ್ಕಿನಲ್ಲಿ ಸಂಯಮಿನೀ ಪುರವೂ, ನಿರ್ಋತಿ ದಿಕ್ಕಿನಲ್ಲಿ ನಿರ್ಋತಿ ನಗರವೂ, ಪಶ್ಚಿಮದಲ್ಲಿ ರಮ್ಯವೂ ಸುಂದರವೂ ಆದ ವರುಣನ ನಗರವೂ, ವಾಯುವ್ಯದಿಕ್ಕಿನಲ್ಲಿ

ವಿಜ್ಞೇಯಾ ಸ್ತೇ ತು ದಿಕ್ಪಾಲಾಸ್ತಸ್ಯಾಂ ತಸ್ಯಾಂ ತಥಾ ದಿಶಿ ।
ದೇವಃ ಸ್ವಾಂ ನಗರೀಂ ನಿತ್ಯಂ ಮಾನಸೋತ್ತರಮೂರ್ಧನಿ ॥ ೧೭ ॥

ಮೇರುಂ ತು ಪಶ್ಯತಿ ವಿಭುಸ್ತತ್ಸ್ಥೋ ಮೇರುಗತಾಂ ಪುರೀಂ ।
ಉದಕ್ ಶೃಂಗವತೋರ್ಧೇತು ಯಾಮ್ಯೇನ ಕುರುಸಂಜ್ಞಿತಂ ॥ ೧೮ ॥

ವರ್ಷಂ ತು ಕಥಿತಂ ದಿವ್ಯಂ ಸರ್ವೋಪದ್ರವವರ್ಜಿತಂ ।
ಶೃಂಗವಚ್ಛ್ವೇತಯೋರ್ಮಧ್ಯೇ ವರ್ಷಂ ಜ್ಞೇಯಂ ಹಿರಣ್ಮಯಂ ॥ ೧೯ ॥

ರಮ್ಯಂ ತು ವರ್ಷಂ ವಿಜ್ಞೇಯಂ ಮಧ್ಯತಃ ಶ್ವೇತನೀಲಯೋಃ ।
ಮಧ್ಯೇ ನಿಷಧನೀಲಾಭ್ಯಾಂ ಪಶ್ಚಾರ್ಧೇ ಗಂಧಮಾದನಃ ॥ ೨೦ ॥

ಕೇತುಮಾಲಃ ಸ್ಮೃತೋ ವರ್ಷಸ್ತ್ವತೀವ ಸುಮನೋಹರಃ ।
ಮಧ್ಯೇ ನಿಷಧನೀಲಾಭ್ಯಾಂ ಪೂರ್ವಂ ಮಾಲ್ಯವತೋ ಗಿರೇಃ ॥ ೨೧ ॥

ವರ್ಷೋ ರುದ್ರಮುಖೋ ನಾಮ ನಿತ್ಯಂ ಮುದಿತಮಾನವಃ ।
ಮೇರೋಶ್ಚತುರ್ದಿಶಂ ನಾಮ್ನಾ ವರ್ಷೋ ರಾಜನ್ನಿಳಾವೃತಃ ॥ ೨೨ ॥

---

ವಾಯುವಿನ ಶಿವಾ ನಗರವೂ, ಉತ್ತರದಿಕ್ಕಿನಲ್ಲಿ ಚಂದ್ರನ ವಿಭಾವರೀ ನಗರವೂ, ಈಶಾನ್ಯದಲ್ಲಿ ಈಶ್ವರನ ಶಾಂಕರೀ ನಗರವೂ ವಿರಾಜಿಸುತಲಿವೆ. ಮೇರುಪರ್ವತದ ಹಿಂಭಾಗದಲ್ಲಿ ದಿಕ್ಕುಗಳ ಅನುಸಾರವಾಗಿ ದೇವತೆಗಳು ವಾಸವಾಗಿದಾರೆ. ಇವೇ ದಿಕ್ಪಾಲಕರ ವಾಸಸ್ಥಾನಗಳು ಈ ದಿಕ್ಪಾಲಕರುಗಳು ಅವರವರ ದಿಕ್ಕುಗಳಲ್ಲಿ ದೊರೆತನ ಮಾಡುತ್ತಿದಾರೆ. ಮಾನಸೋತ್ತರ ಪರ್ವತದ ಶಿಖರದಲ್ಲಿ ವಾಸಮಾಡುತ್ತಿರುವ ಮಹಾವಿಷ್ಣುವು ಮೇರು ಪರ್ವತವನ್ನು ಆ ಬೆಟ್ಟದಲ್ಲಿರುವ ಪಟ್ಟಣವನ್ನು ನೋಡು ತ್ತಿರುತ್ತಾನೆ. ಮೇರುಪರ್ವತದ ಉತ್ತರದ ಶಿಖರದ ಅರ್ಧದಲ್ಲಿ ದಕ್ಷಿಣದಿಕ್ಕಿನಿಂದ ಕಾಣುವ ಸ್ಥಳಕ್ಕೆ ಕುರುವರ್ಷವೆಂದು ಹೆಸರು.

೧೯-೨೨. ಈ ಕುರುವರ್ಷವು ಸಕಲಉಪದ್ರವಗಳಿಂದಲೂ ಬಿಡಲ್ಪಟ್ಟು ದೇವತೆಗಳ ವಾಸಕ್ಕೆ ಅರ್ಹವಾಗಿದೆ. ಶೃಂಗಶ್ವೇತಪರ್ವತಗಳ ಮಧ್ಯದಲ್ಲಿ ಹಿರಣ್ಮಯ ವರ್ಷವೆಂಬುದಿದೆ. ಶ್ವೇತನೀಲಪರ್ವತಗಳ ಮಧ್ಯದಲ್ಲಿ ರಮ್ಯವರ್ಷವೆಂಬುದಿದೆ. ನಿಷಧನೀಲಪರ್ವತಗಳ ಪಶ್ಚಿಮಾರ್ಧದಲ್ಲಿ ಗಂಧಮಾದನಪರ್ವತವಿದೆ. ಮತ್ತು ಮನೋಹರವಾದ ಕೇತುಮಾಲವರ್ಷವೆಂಬುದಿದೆ. ನಿಷಧನೀಲಪರ್ವತಗಳ ಮಧ್ಯ ದಲ್ಲಿರುವ ಮಾಲ್ಯವಂತಪರ್ವತದ ಪೂರ್ವಭಾಗದಲ್ಲಿ ರುದ್ರಮುಖವರ್ಷವೆಂಬುದಿದೆ.

ತಸ್ಯಾಪಿ ಭೇದಾಶ್ಚತ್ವಾರೋ ನಾಮತಸ್ತನ್ನಿಬೋಧ ಮೇ ।
ಭದ್ರಾಶ್ವೋ ಜಂಬುಮಾಲಶ್ಚ ಕೇತುಮಾರ್ಲ ಕುರುವಸ್ತಥಾ ॥ ೨೩ ॥

ಜಂಬೂವೃಕ್ಷಸ್ತು ವಿಖ್ಯಾತೋ ಜಂಬುಮಾಲೇ ತು ಯಾದವ ।
ಯೋಜನಾನಾಂ ಸಹಸ್ರಂ ತು ತತ್ಪೂರ್ವಂ ತಸ್ಯ ಕೀರ್ತಿತಂ ॥ ೨೪ ॥

ತತ್ಫಲೇಭ್ಯಃ ಪ್ರಭವತಿ ರಮ್ಯಾ ಜಂಬೂನದೀ ಶುಭಾ ।
ಮೇರೋಃ ಪ್ರದಕ್ಷಿಣಂ ಕೃತ್ವಾ ಸ್ವಮೂಲೇ ಸಾ ಚ ನಶ್ಯತಿ ॥ ೨೫ ॥

ವೃಕ್ಷರಾಜೇನ ತೇನೇದಂ ಜಂಬೂದ್ವೀಪಂ ಪ್ರಚಕ್ಷತೇ ।
ಇಳಾವೃತಸ್ತು ಪ್ರಭಯಾ ಮೇರೋರ್ನಿತ್ಯಂ ಪ್ರಕಾಶತೇ ॥ ೨೬ ॥

ನ ತತ್ರ ಭ್ರಾಜತೇ ಸೂರ್ಯೋ ನ ಚಂದ್ರೋ ನ ಚ ತಾರಕಾಃ ।
ಮೇರೋಶ್ಯರಾವಸಂಸ್ಥತ್ವಾನ್ನಿತ್ಯಮೇವ ತಿರೋಹಿತಃ ॥ ೨೭ ॥

ಹೇಮಕೂಟಾದುತ್ತರತೋ ಹರಿವರ್ಷಂ ಪ್ರಚಕ್ಷತೇ ।
ಹೇಮಕೂಟಾದ್ದಕ್ಷಿಣತಸ್ತಥಾ ಕಿಂಪುರುಷಂ ಸ್ಮೃತಂ ॥ ೨೮ ॥

---

೨೩. ಅವರಲ್ಲಿ ನಾಲ್ಕು ಭೇದಗಳಿವೆ. ಅವುಗಳ ಹೆಸರುಗಳನ್ನು ಕೇಳು. ಭದ್ರಾಶ್ವ, ಜಂಬುಮಾಲ, ಕೇತುಮಾರ್ಲ, ಕುರವ ಎಂಬುವೇ ಆ ಹೆಸರುಗಳು.

೨೪-೨೫. ಜಂಬೂಮಾಲದ ಪೂರ್ವಭಾಗದಲ್ಲಿ ಜಂಬೂವೃಕ್ಷ (ನೇರಳೆಮರ) ವಿದೆ. ಅದು ಒಂದು ಸಾವಿರ ಯೋಜನವಿದೆ. ಅದರ ಹಣ್ಣುಗಳಿಂದ ಮನೋಹರವಾದ ಜಂಬೂನದಿಯು ಉತ್ಪತ್ತಿಯಾಗಿ ಮೇರುಪರ್ವತವನ್ನು ಪ್ರದಕ್ಷಿಣೆಮಾಡಿಕೊಂಡು ಬಂದು ತನ್ನ ಗಿಡದ ಬುಡದಲ್ಲೇ ಇಂಗಿಹೋಗುತ್ತದೆ.

೨೬. ಆ ಜಂಬೂವೃಕ್ಷದಿಂದಲೇ ಇದಕ್ಕೆ ಜಂಬೂದ್ವೀಪವೆಂದು ಹೆಸರಾಗಿದೆ. ಮೇರುಪರ್ವತದ ಕಾಂತಿಯಿಂದ ಪ್ರತಿದಿನವೂ ಇಳಾವೃತವರ್ಷವು ಪ್ರಕಾಶಮಾನವಾಗಿದೆ.

೨೭. ಅಲ್ಲಿ ಸೂರ್ಯನ ಅಥವಾ ಚಂದ್ರನ ಬೆಳಕಾಗಲಿ ನಕ್ಷತ್ರಗಳ ಬೆಳಕಾಗಲಿ ಸುತರಾಂ ಇಲ್ಲ. ಮೇರುವೆಂಬ ಶ್ರಾವೆಯ ಮುಚ್ಚಳದಿಂದ ಇದು ಯಾವಾಗಲೂ ಮುಚ್ಚಿಕೊಂಡಿದೆ.

೨೮. ಹೇಮಕೂಟಪರ್ವತದ ಉತ್ತರದಲ್ಲಿ ಹರಿವರ್ಷವೂ ದಕ್ಷಿಣ ಭಾಗದಲ್ಲಿ ಕಿಂಪುರುಷವರ್ಷವೂ ಇವೆಯೆಂದು ಹೇಳುತ್ತಾರೆ.

ಹಿಮಾಲಯಾದ್ದಕ್ಷಿಣತೋ ವರ್ಷಂ ಯಾದವ ಭಾರತಂ ।
ಕರ್ಮಭೂಮಿರ್ಮಹೀಪಾಲ ಯತ್ರ ವರ್ತಾಮಹೇ ವಯಂ ॥ ೨೯ ॥

ಭಾರತೇಽಸ್ಮಿನ್ ಯುಗಾವಸ್ಥಾ ಕೇಶವೇನ ವಿನಿರ್ಮಿತಾ ।
ವರ್ಷೇ ದ್ವೇ ಚಾಥ ಸಂಸ್ಥಾನೇ ವಿಜ್ಞೇಯೇ ದಕ್ಷಿಣೋತ್ತರೇ ॥ ೩೦ ॥

ವರ್ಷತ್ರಯಂ ತು ವಿಜ್ಞೇಯಂ ಚತುರಸ್ರಂ ತು ಮಧ್ಯಮಂ ।
ದೀರ್ಘಂ ತಥೈವ ವಿಜ್ಞೇಯಂ ವರ್ಷಾಣಾಂ ಚ ಚತುಷ್ಟಯಂ ॥ ೩೧ ॥

ವರ್ಷಾಣಾಂ ನವಸಾಹಸ್ರೋ ವಿಷ್ಕಂಭಃ ಕಥಿತೋ ನೃಪ ।
ಯೋಜನಾನಾಂ ಪ್ರಮಾಣೇನ ಕಥಿತಸ್ತತ್ತ್ವದರ್ಶಿಭಿಃ ॥ ೩೨ ॥

ವಿಷ್ಕಂಭಃ ಪರ್ವತಾನಾಂ ತು ಸಹಸ್ರದ್ವಿತಯಂ ಸ್ಮೃತಂ ।
ಮೇರೋರ್ಯೋಜನಸಾಹಸ್ರೋ ವಿಷ್ಕಂಭಃ ಕಥಿತಸ್ತಥಾ ॥ ೩೩ ॥

---

೨೯. ಎಲೈ! ಯದುವಂಶೋತ್ಪನ್ನನಾದ ವಜ್ರನೇ ಕೇಳು. ಹಿಮವತ್ಪರ್ವತದ ದಕ್ಷಿಣಭಾಗದಲ್ಲಿರುವುದೇ ಭಾರತವರ್ಷ. ಇದು ಕರ್ಮಭೂಮಿಯೆನಿಸಿಕೊಂಡಿದೆ. ನಾವಿರುವುದೂ ಇಲ್ಲಿಯೇ.

೩೦-೩೧. ಈ ಭಾರತವರ್ಷದಲ್ಲಿ ಕೇಶವನಿಂದ ಯುಗಗಳು ಎರಡು ರೀತಿಯಾಗಿ ವ್ಯವಸ್ಥೆಮಾಡಲ್ಪಟ್ಟಿವೆ. ಈ ಎರಡು ವರ್ಷಗಳೂ ದಕ್ಷಿಣೋತ್ತರವಾಗಿ ವಿಸ್ತೃತವಾಗಿದೆಯೆಂದು ತಿಳಿಯಬೇಕು. ಇದರ ಮಧ್ಯದಲ್ಲಿ ಚಚ್ಚೌಕವಾಗಿ ಮೂರುವರ್ಷಗಳಿವೆಯೆಂದು ತಿಳಿಯಬೇಕು. ಮತ್ತು ನಾಲ್ಕು ವರ್ಷಗಳು ಉದ್ದವಾಗಿದೆಯೆಂದೂ ತಿಳಿದುಕೊಳ್ಳಬೇಕು.

೩೨. ಒಂಭತ್ತುಸಹಸ್ರ ವರ್ಷಗಳಿಗೆ ವಿಷ್ಕಂಭವೆಂದು ಹೆಸರು. ಇದು ತತ್ವದರ್ಶಿಗಳಾದ ಮಹಾತ್ಮರಿಂದ ಯೋಜನಗಳ ಪ್ರಮಾಣದಿಂದ ಹೇಳಲ್ಪಟ್ಟಿದೆ.

೩೩. ಎರಡುಸಾವಿರಪರ್ವತಗಳ ಗುಂಪಿಗೂ ವಿಷ್ಕಂಭವೆಂದೇ ಹೆಸರು. ಮೇರುಪರ್ವತದ ಒಂದುಸಾವಿರ ಯೋಜನ ಪ್ರಮಾಣಕ್ಕೂ ವಿಷ್ಕಂಭವೆಂದೇ ಹೆಸರು.

**ಯೋಜನಾನಾಂ ತು ನಿಯುತಂ ಜಂಬೂದ್ವೀಪಃ ಪ್ರಕೀರ್ತಿತಃ ।**
**ಯಾಮ್ಯೋತ್ತರೇ ತು ತಸ್ಯೇದಂ ಪ್ರಮಾಣಂ ತೇ ಮಯೇರಿತಂ ॥ ೩೪ ॥**

**ಪೂರ್ವಾಪರೇಣ ತಸ್ಯಾಪಿ ಪ್ರಮಾಣಂ ಶೃಣು ಪಾರ್ಥಿವ ।**
**ಯೋಜನಾನಾಂ ಸಹಸ್ರಾಣಿ ದ್ವಾತ್ರಿಂಶಚ್ಚ ಶತಾನಿ ಚ ॥ ೩೫ ॥**

**ಭದ್ರಾಶ್ವಕೇತುಮಾಲೌ ದ್ವೌ ಪ್ರತ್ಯೇಕಂ ಪಾರ್ಥಿವೋತ್ತಮ ।**
**ಯೋಜನಾನಾಂ ಸಹಸ್ರೇಣ ಶತಸಾಹಸ್ರಕಾನಿ ಚ ॥ ೩೬ ॥**

**ನವಮೇರುಸ್ತಥಾ ಪ್ರೋಕ್ತೋ ಗಂಧಮಾದನನಾಮತಃ ।**
**ಮೇರೋರ್ನವಸಹಸ್ರಾಣಿ ಮಾಲ್ಯವಾಂಶ್ಚ ನಿಗದ್ಯತೇ ॥ ೩೭ ॥**

**ಮೇರೋರ್ಯೋಜನಸಾಹಸ್ರೋ ವಿಷ್ಕಂಭಃ ಕಥಿತಸ್ತಥಾ ।**
**ಏವಮೇಷ ನಿಯುತಂ ಜಂಬೂದ್ವೀಪಃ ಪ್ರಕೀರ್ತಿತಃ ॥ ೩೮ ॥**

**ಹಿಮಾಚಲೇ ಯಕ್ಷವರಾ ನಿವಿಷ್ಟಾ ದೈತ್ಯಪ್ರಧಾನಾಃ ಖಲು ಹೇಮಕೂಟೇ ।**
**ಗಂಧರ್ವಮುಖ್ಯಾ ನಿಷಧೇ ಚ ಶೈಲೇ ನಾಗಾ ನಿವಿಷ್ಟಾಶ್ಚ ತಥೈವ ನೀಲೇ ॥**

---

೩೪. ಜಂಬೂದ್ವೀಪದ ಅಳತೆ ಒಂದುಲಕ್ಷ ಯೋಜನವೆಂದು ತಿಳಿದುಕೋ. ಈರೀತಿ ನಾನು ಹೇಳಿದ ಈ ಅಳತೆಯು ದಕ್ಷಿಣೋತ್ತರಪ್ರಮಾಣವೆಂದು ತಿಳಿಯ ತಕ್ಕದ್ದು.

೩೫-೩೭. ಎಲೈ ವಜ್ರಮಹಾರಾಜನೇ! ಕೇಳು. ಇನ್ನೂ ಅದರ ಪೂರ್ವ ಪಶ್ಚಿಮದ ಅಳತೆಯನ್ನು ಹೇಳುವೆನು. ಒಂದುಸಾವಿರದ ನೂರಮೂವತ್ತೆರಡು ಯೋಜನಗಳಿಂಥ ಅದು ಕೂಡಿದೆ. ಇನ್ನು ಭದ್ರಾಶ್ವಕೇತುಮಾಲಗಳೆಂಬೆರಡೂ ಒಂದು ಲಕ್ಷವೂ ಒಂದುಸಾವಿರ ಯೋಜನಗಳಿವೆ. ಗಂಧಮಾದನವೆಂಬ ಹೆಸರಿನಿಂದ ಒಂಭತ್ತು ಮೇರುಗಳಿವೆಯೆಂದು ಹೇಳಲ್ಪಟ್ಟಿದೆ. ಮಾಲ್ಯಪರ್ವತವು ನವಸಹಸ್ರಮೇರುಗಳಿಂದ ಕೂಡಿದೆಯೆಂದು ಹೇಳಲ್ಪಟ್ಟಿದೆ.

೩೮-೪೦. ಮೇರುಪರ್ವತದ ಸಾವಿರಯೋಜನಕ್ಕೆ ವಿಸ್ತಂಭವೆಂದು ಹೇಳಲ್ಪ ಟ್ಟಿದೆ. ಹಿಮಾಲಯಪರ್ವತದಲ್ಲಿ ಯಕ್ಷಶ್ರೇಷ್ಠರು ವಾಸವಾಗಿದ್ದಾರೆ. ಹೇಮಕೂಟ ಪರ್ವತದಲ್ಲಿ ರಾಕ್ಷಸರು ವಾಸವಾಗಿರುತ್ತಾರೆ. ನಿಷಧಪರ್ವತದಲ್ಲಿ ಗಂಧರ್ವಶ್ರೇಷ್ಠರು

**ಶ್ವೇತೇ ಪಿತೃಣಾಂ ಚ ಗತಿರ್ನಿವಿಷ್ಟಾ ಸಿದ್ಧಾಸ್ತಥಾ ಶೃಂಗವತಶ್ಚ ಪೃಷ್ಠೇ ।**
**ಸೇಂದ್ರಾಸ್ತಥಾ ದೇವಗಣಾಶ್ಚ ಮೇರೌ ಕ್ರೀಡಾವಿಹಾರೇಣ ಸದಾ ವಸಂತಿ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ**
**ಮಾರ್ಕಂಡೇಯವಜ್ರಸಂವಾದೇ ಜಂಬೂದ್ವೀಪವರ್ಣನೋ**
**ನಾಮ ಸಪ್ತಮೋಧ್ಯಾಯಃ**

---

ವಾಸಮಾಡುತ್ತಲಿದಾರೆ. ನಾಗಶ್ರೇಷ್ಠರುಗಳೆಲ್ಲರೂ ನೀಲಪರ್ವತದಲ್ಲಿ ವಾಸವಾಗಿದಾರೆ. ಪಿತೃಗಳ ಗುಂಪು ಶ್ವೇತದ್ವೀಪದಲ್ಲಿ ವಾಸವಾಗಿವೆ. ಶೃಂಗಪರ್ವತದಲ್ಲಿ ಸಿದ್ಧರು ವಾಸ ಮಾಡುತ್ತಲಿದಾರೆ ಮತ್ತು ಇಂದ್ರನಿಂದ ಸಹಿತರಾಗಿ ಸಕಲ ದೇವತೆಗಳೂ ಸಹ ಮೇರು ಪರ್ವತದಲ್ಲಿ ಸರ್ವದಾ ಕ್ರೀಡಾವಿಹಾರದಿಂದ ಸಂತೋಷಚಿತ್ತರಾಗಿ ವಾಸಮಾಡುತ್ತ ಲಿದಾರೆ.

ಇಂತೆಂಬಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದದಲ್ಲಿ ಜಂಬೂದ್ವೀಪವರ್ಣನೆಯೆಂಬ
ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

### ಅ ಷ್ಟ ಮೋ ಧ್ಯಾ ಯಃ

---

॥ ವಜ್ರ ಉವಾಚ ॥

ಭಗವನ್ ಭಾರತಂ ವರ್ಷಂ ಶ್ರೋತುಮಿಚ್ಛಾಮಿ ತತ್ವತಃ ।
ಕರ್ಮಭೂಮಿಷು ಮರ್ತ್ಯಾನಾಂ ವರ್ಷಂ ಭಾರ್ಗವ! ಭಾರತಂ ॥ ೧ ॥

॥ ಮಾರ್ಕಂಡೇಯ ಉವಾಚ ॥

ಭರತಸ್ಯಾಸ್ಯ ವರ್ಷಸ್ಯ ನವಭೇದಾಃ ಪ್ರಕೀರ್ತಿತಾಃ ।
ಅಷ್ಟಾಭಿರ್ಗಿರಿಭಿಶ್ಛನ್ನಾ ಯೇತ್ವಗಮ್ಯಾಃ ಪರಸ್ಪರಂ ॥ ೨ ॥

---

### ಎಂಟನೆಯ ಅಧ್ಯಾಯವು

೧. ವಜ್ರಮಹಾರಾಜನು ಹೇಳಿದನು :—ಎಲೈ ಭೃ ಗು ಕು ಮಾ ರ ನಾ ದ ಮಾರ್ಕಂಡೇಯಮಹಾಮುನಿಯೇ, ಭಗವತ್ಸ್ವರೂಪನಾದ ನಿನ್ನ ಮುಖದಿಂದ ಮನುಷ್ಯರಿಗೆ ಕರ್ಮಭೂಮಿಗಳಲ್ಲಿ ಮುಖ್ಯವಾದ ಭಾರತವರ್ಷದ ಮಹಿಮೆಯನ್ನು ಕೇಳಲಪೇಕ್ಷಿಸುತ್ತೇನೆ.

೨. ಮಾರ್ಕಂಡೇಯನು ಹೇಳುತ್ತಾನೆ:—ಈ ಭರತವರ್ಷವು ಒಂಭತ್ತು ವಿಧ ಭೇದದಿಂದ ಕೂಡಿರುವುದು. ಮತ್ತು ಎಂಟು ಮಹಾಪರ್ವತಗಳಿಂದ ಆಚ್ಛಾದಿತವಾಗಿ (ಮುಚ್ಚಲ್ಪಟ್ಟು) ರುವುದು. ಒಂದು ಪರ್ವತದಿಂದ ಮತ್ತೊಂದು ಪರ್ವತಕ್ಕೆ ಹೋಗುವುದಕ್ಕೆ ಸಾಧ್ಯವಿಲ್ಲದೆ ಇರತಕ್ಕವುಗಳೇ ಗಿರಿಗಳು.

ಹಿಮಾಚಲಾದಾಸಮುದ್ರಂ ಗಿರಯಸ್ತೇ ವ್ಯವಸ್ಥಿತಾಃ ।
ಯಾಮ್ಯೋತ್ತರೇಣ ರಾಜೇಂದ್ರ ನಾಮತಸ್ತಾನ್ನಿಬೋಧ ಮೇ ॥ ೩ ॥

ಸ್ವಮಾಲೀ ಹೇಮಮಾಲೀ ಚ ಶಂಭುಃ ಕಾರ್ತಸ್ವರಾಕರಃ ।
ವೈಡೂರ್ಯಪರ್ವತಶ್ಚೈವ ರಾಜನ್ಮೋ ಮಣಿಮಾನ್ ಭವಃ ॥ ೪ ॥

ಇಂದ್ರದ್ಯುಮ್ನಃ ಕರೇತಶ್ಚ ತಾಮ್ರವರ್ಣೋ ಗಭಸ್ತಿಮಾನ್ ।
ರಾಗದ್ವೇಷಸ್ತಥೈವಾನ್ಯೋ ಗಾಂಧರ್ವಸ್ತ್ವಥ ವಾರುಣಃ ॥ ೫ ॥

ತೇಷಾಂ ತು ನವಮೋ ಮಧ್ಯೇ ದ್ವೀಪೋ ನಾಮ್ನಾ ತು ಸುಧ್ರುಮಃ ।
ಅಸ್ಮಿನ್ ಮನ್ವಂತರೇ ಕ್ಷಿಪ್ತಃ ಸಾಗರೈಶ್ಚ ಚತುರ್ದಿಶಂ ॥ ೬ ॥

ವೈಡೂರ್ಯಪರ್ವತಃ ಪೂರ್ವಮುತ್ತರೇಣ ಹಿಮಾಚಲಾತ್ ।
ಪಶ್ಚಾರ್ಧೇ ಕಾಂಚನಗಿರೇಃ ಉದಗೇವ ಚ ಲಾವಣಾತ್ ॥ ೭ ॥

ವೇಷ್ಟಿತಸ್ಸಾಗರಸ್ಸರ್ವೋ ನಾನಾಸತ್ವಾಶ್ರಯೋ ನೃಪ ।
ಹಿಮಾಲಯಸ್ಸಾಗರೈಸ್ತು ಕೃತೋ ದೇಶದ್ವಯಸ್ತಥಾ ॥ ೮ ॥

೩. ಹಿಮವತ್ಪರ್ವತದಿಂದ ಹಿಡಿದು ಸಮುದ್ರಪರ್ಯಂತವಾಗಿ ಈ ಬೆಟ್ಟಗಳು ವಿಸ್ತರಿಸಿರುವುವು. ದಕ್ಷಿಣೋತ್ತರಭಾಗದಿಂದ ವಿಸ್ತರಿಸಿಕೊಂಡುಹೋಗಿರುವ ಈ ಪರ್ವತಗಳ ಹೆಸರುಗಳನ್ನು ಹೇಳುತ್ತೇನೆ ಕೇಳು.

೪-೫-೬. ಸ್ವಮಾಲೀ, ಹೇಮಮಾಲೀ, ಶಂಭು (ಚಿನ್ನದ ಬೆಟ್ಟ), ವೈಡೂರ್ಯ ಪರ್ವತ, ಮಣಿಮಂತ, ಇಂದ್ರದ್ಯುಮ್ನ, ಕರೇತ (ತಾಮ್ರದ ಬೆಟ್ಟ), ರಾಗದ್ವೇಷ ಪರ್ವತ, ಪಶ್ಚಿಮದಿಕ್ಕಿನಲ್ಲಿ ಗಾಂಧರ್ವಪರ್ವತ, ಇವೇ ಆ ಒಂಭತ್ತು ಪರ್ವತಗಳು. ಇವುಗಳೊಳಗೆ ಒಂಭತ್ತನೇ ಬೆಟ್ಟವು ಸಗರನ ಮಕ್ಕಳಿಂದ ನಾಲ್ಕು ದಿಕ್ಕುಗಳಲ್ಲೂ ಸಮುದ್ರದಲ್ಲಿ ಮುಳುಗಿಸಲ್ಪಟ್ಟು ನೀರಿನಲ್ಲಿ ಮುಳುಗಿಹೋಗಿರುತ್ತದೆ.

೭-೧೦. ಹಿಮಾಲಯದಿಂದ ಉತ್ತರಭಾಗದ ಪೂರ್ವಕಡೆಯಲ್ಲಿ ವೈಡೂರ್ಯ ಪರ್ವತವಿದೆ. ಇದು ಮೇರುಪರ್ವತಕ್ಕೆ ಪಶ್ಚಿಮಕ್ಕೂ ಲವಣಸಮುದ್ರದ ಉತ್ತರಕ್ಕೂ ಇದ್ದುಕೊಂಡು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿದ್ದಾಗಿ ನಾನಾ ಪ್ರಾಣಿಗಳಿಗೆ ಆಶ್ರಯಸ್ಥಾನವಾಗಿದೆ. ಹಿಮಾಲಯಪರ್ವತವು ಸಾಗರಗಳಿಂದ ಎರಡುಭಾಗವಾಗಿ ಮಾಡ

ಲವಣಸ್ಯೋತ್ತರೇ ಪಾರ್ಶ್ವೇ ಸಾಗರಸ್ಯ ಚ ದಕ್ಷಿಣೇ ।
ಪುರೀ ಲಂಕಾ ಸನ್ನಿವಿಷ್ಟಾ ಯಸ್ಯಾಂ ವೈ ರಾವಣೋ ಹತಃ ॥ ೯ ॥

ಲವಣೇನ ಚ ಸಂಪೃಕ್ತಃ ಸಮುದ್ರೋ ಲವಣೋ ಯತಃ ।
ಹಿಮಾಚಲಸ್ಯ ಯೋ ಭಾಗೋ ವರ್ಷೇಽಸ್ಮಿನ್ ನೃಪ ಭಾರತೇ ॥ ೧೦ ॥

ತತ್ರಾಸ್ತಿ ಶೈಲಪ್ರವರೋ ದ್ವಿತೀಯೋ ಗಂಧಮಾದನಃ ।
ಶ್ವೇತಶ್ಚ ಪರ್ವತಶ್ರೇಷ್ಠೋ ಮಂದರಶ್ಚ ಮಹಾಗಿರಿಃ ॥ ೧೧ ॥

ಏತೇ ಶೈಲವರಾ ದೃಷ್ಟಾ ಪಾಂಡವೈಶ್ಚ ಮಹಾತ್ಮಭಿಃ ।
ಹಿಮಾಚಲಸ್ಯ ಮಧ್ಯೇ ತು ಕೈಲಾಸೋ ನಾಮಪರ್ವತಃ ॥ ೧೨ ॥

ಹಿಮವತ್ಯೇವ ವಿಖ್ಯಾತೋ ನರನಾರಾಯಣಾಶ್ರಮಃ ।
ಯತ್ರ ಸಾ ಬದರೀ ರಮ್ಯಾ ನಾನಾಶಕುನಿಸೇವಿತಾ ॥ ೧೩ ॥

ಲ್ಪಿಟ್ಟಿದೆ. ಲವಣಸಮುದ್ರದ ಉತ್ತರಕ್ಕೂ ಸಾಗರದ ದಕ್ಷಿಣದಿಕ್ಕಿಗೂ ಲಂಕಾಪಟ್ಟಣ ಎದೆ. ಇಲ್ಲಿಯೇ ರಾವಣನು ಪೂರ್ವದಲ್ಲಿ ರಾಮನಿಂದ ಹತನಾದುದು. ಲವಣಾಸುರನ ಸಂಪರ್ಕದಿಂದ ಕೂಡಿರುವುದರಿಂದಲೇ ಲವಣಸಮುದ್ರನೆಂದು ಹೆಸರಾಗಿದೆ. ಎಲೈ ದೊರೆಯೇ ! ಕೇಳು. ಈ ಭರತವರ್ಷದಲ್ಲಿ ಹಿಮವತ್ಪರ್ವತದ ಯಾವ ಪ್ರದೇಶವುಂಟೋ,

೧೧. ಅಲ್ಲಿ ಎರಡನೆಯದಾದ ಗಂಧಮಾಧನ ಪರ್ವತವಿದೆ. ಮತ್ತು ಶ್ವೇತ ಪರ್ವತವೂ ಮಂದರಗಿರಿಯೂ ಇರುವುವು. ಈ ಪರ್ವತಗಳನ್ನೆಲ್ಲಾ ಹಿಂದಿನ ಯುಗದಲ್ಲಿದ್ದ ಮಹಾತ್ಮರಾದ ಪಾಂಡವರು ನೋಡಿದ್ದರು.

೧೨-೧೩. ಹಿಮಾಲಯದ ಮಧ್ಯದಲ್ಲಿ ಕೈಲಾಸಪರ್ವತವಿದೆ. ಇದೇ ಹಿಮವತ್ಪರ್ವತದಲ್ಲಿಯೇ ನಾನಾವಿಧವಾದ ಪಕ್ಷಿಗಳಿಂದ ಸಿಬಿಡವಾದ ಮನೋಹರವಾದ ಬದರಿಕಾಶ್ರಮವಿದೆ. ಇದು ನರನಾರಾಯಣಾಶ್ರಮವೆಂಬ ಹೆಸರಿನಿಂದ ಸುಪ್ರಸಿದ್ಧವಾಗಿರುವುದು.

**ಉಷ್ಣತೋಯವಹಾ ಗಂಗಾ ಶ್ವೇತತೋಯವಹಾ ಪರಾ ।**
**ಸುವರ್ಣಸಿಕತಾರಾಜನ್ ತಾಪಸೈರುಪಶೋಭಿತಾ ॥ ೧೪ ॥**

**ಇತ್ಯೇತೇ ಕಥಿತಾ ದ್ವೀಪಾಃ ಪ್ರಾಧಾನ್ಯೇನ ತವಾನಘ ।**
**ಏತೇಷಾಮಂತರೇ ದ್ವೀಪಾಃ ಶತಶೋಽಥ ಸಹಸ್ರಶಃ ॥ ೧೫ ॥**

**ನ ತೇ ವರ್ಣಯಿತುಂ ಶಕ್ಯಾ ವರ್ಷಾಣಾಂ ತು ಶತೈರಪಿ ।**
**ವಿವರ್ಜಯಿತ್ವಾ ಭರತಸ್ಯ ವರ್ಷಂ**
**ವರ್ಷೇಷು ಸರ್ವೇಷು ನರೇಂದ್ರಸಿಂಹ ।**
**ನಿರಾಮಯಾ ವೀತಭಯಾ ಮನುಷ್ಯಾ**
**ವರ್ಷೇಷು ಸರ್ವೇಷು ತಥೈವ ಚೋಕ್ತಾಃ ॥ ೧೬ ॥**

**ಆಯುಃಪ್ರಮಾಣಂ ಲಭತೇ ಹಿ ರಾಜನ್**
**ದ್ವೀಪೇಷು ಸರ್ವೇಷು ನರೋ ಮಯೋಕ್ತಂ ।**
**ಕೃತ್ವಾ ಶುಭಂ ಕರ್ಮ ತು ಭಾರತೇಽಸ್ಮಿನ್**
**ದ್ವೀಪೇಷು ಸರ್ವೇಷು ನರಾಃ ಪ್ರಯಾಂತಿ ॥ ೧೭ ॥**

---

೧೪. ಈ ಬದರಿಕಾಶ್ರಮದಲ್ಲಿ ಬಿಸಿನೀರಿನ ಒಂದು ಗಂಗಾಕುಂಡವೂ ಅದರಂತೆ ತಣ್ಣೀರಿನ ಒಂದು ಕುಂಡವೂ ಸಹ ಇವೆ. ಅಲ್ಲಿ ಚಿನ್ನದ ಮರಳಿನಿಂದ ಕೂಡಿದ ಪ್ರದೇಶವಿದೆ. ಇದು ಮಹಾತಪಸ್ವಿಗಳಿಂದ ಶೋಭಿತವಾದುದು.

೧೫-೧೬. ಎಲೈ ದೊರೆಯೇ, ಈರೀತಿಯಾದ ಕೆಲವು ಮುಖ್ಯದ್ವೀಪಗಳ ಹೆಸರನ್ನು ಮಾತ್ರ ತಿಳಿಸಿರುತ್ತೇನೆ. ಇವುಗಳ ಮಧ್ಯದಲ್ಲಿ ನೂರಾರು ಸಾವಿರಾರು ದ್ವೀಪಗಳಿವೆ. ಅವುಗಳನ್ನೆಲ್ಲಾ ವರ್ಣಿಸುವುದಕ್ಕಾರಂಭಿಸಿದರೆ ನೂರಾರುವರ್ಷಗಳಾದರೂ ಮುಗಿಯುವಂತಿಲ್ಲ. ಭರತವರ್ಷವನ್ನು ಬಿಟ್ಟು ಉಳಿದ ವರ್ಷಗಳಲ್ಲಿರುವ ಜನರೆಲ್ಲರೂ ರೋಗರಹಿತರಾಗಿ, ಭಯವಿಲ್ಲದವರಾಗಿ ಸಂತೋಷದಿಂದಿರುತ್ತಾರೆ.

೧೭-೧೮. ಎಲೈ ಮಹಾರಾಜನೇ, ನಾನು ಮೇಲೆ ಹೇಳಿದ ಎಲ್ಲ ದ್ವೀಪಗಳಲ್ಲಿಯೂ ಸಹ, ಈ ಭಾರತವರ್ಷದಲ್ಲಿ ಪುಣ್ಯಕಾರ್ಯಗಳನ್ನು ಮಾಡಿದ ಮನುಷ್ಯರೆಲ್ಲರೂ, ಭೋಗಪಡುತ್ತಾರೆ. ಅವರು ಬೆಳೆದ ವೃಕ್ಷಗಳಲ್ಲಿ ಮನೋರಥಫಲಗಳು ಕೈಗೂಡು

ವೃಕ್ಷೇಷು ತೇಷಾಂ ಪ್ರಭವಂತಿ ಕಾಮಾಃ
ಸ್ತ್ರಿಯಶ್ಚ ತೇಷಾಮಪಿ ರೂಪವತ್ಯಃ ।
ದಂಡಶ್ಚ ತೇಷಾಂ ಚ ನ ದಾಂಡಿಕೋಽಸ್ತಿ
ಸನ್ಮಾರ್ಗಗಾಸ್ತೇಽಪಿ ತಥಾ ಚ ರಾಜನ್ ॥ ೧೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಭಾರತವರ್ಷವರ್ಣನಂ
ನಾಮ ಅಷ್ಟಮೋಽಧ್ಯಾಯಃ

---

ವುವು. ಅವರ ಹೆಂಗಸರು ರೂಪವತಿಯರಾಗಿರುವರು. ಅವರ ದಂಡವು ದಂಡವೆನಿಸುವುದಿಲ್ಲ. ಅವರೆಲ್ಲರೂ ಒಳ್ಳೆಯ ದಾರಿಯಲ್ಲಿಯೇ ಹೋಗುವರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದದಲ್ಲಿ ಭಾರತವರ್ಷವರ್ಣನೆಯೆಂಬ
ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

### ನವಮೋಽಧ್ಯಾಯಃ



॥ ವಜ್ರ ಉವಾಚ ॥

ಶ್ರೋತುಂ ಜನಾನಿಹೇಚ್ಛಾಮಿ ಸಾಗರದ್ವೀಪವಾಸಿನಃ ।
ಪ್ರಾಧಾನ್ಯೇನ ಭೃಗುಶ್ರೇಷ್ಠ ವಿಸ್ತಾರಾದ್ವಿಸ್ತರೋ ಯತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಪಾಂಚಾಲಾಃ ಕುರವೋ ಮತ್ಸ್ಯಾಃ ಯೌಧೇಯಾಶ್ಚ ಪಟಚ್ಚರಾಃ ।
ಕುಂತಯಶ್ಶೂರಸೇನಾಶ್ಚ ಮಧ್ಯದೇಶಜನಾಃ ಸ್ಮೃತಾಃ ॥ ೨ ॥

ವೃಷಧ್ವಜಾಂಜನಾಃ ಪನ್ನಾಃ ಸುಹ್ಮಾಃ ಮಾಗಧಚೇದಯಃ ।
ಕಾಶಯಶ್ಚ ವಿದೇಹಾಶ್ಚ ಪೂರ್ವಸ್ಯಾಂ ಕೋಸಲಾಸ್ತಥಾ ॥ ೩ ॥

---

### ಒಂಭತ್ತನೆಯ ಅಧ್ಯಾಯವು

೧. ವಜ್ರಮಹಾರಾಜನು ಹೇಳುತ್ತಾನೆ:—ಎಲೈ ಭೃಗುಕುಲೋತ್ಪನ್ನನಾದ ಮಾರ್ಕಂಡೇಯ ಮಹರ್ಷಿಯೇ, ನೀನು ನಿರೂಪಿಸಿದ ಅತ್ಯಂತ ವಿಸ್ತಾರವಾದ ಸಾಗರ ಮತ್ತು ದ್ವೀಪಗಳಲ್ಲಿ ವಾಸಮಾಡುವ ಜನರ ವಿಚಾರವನ್ನು ಮುಖ್ಯವಾಗಿ ನಿನ್ನ ಮುಖದಿಂದ ಕೇಳಲಾಶಿಸುತ್ತೇನೆ.

೨. ಮಾರ್ಕಂಡೇಯನು ಹೇಳುತ್ತಾನೆ:— ಪಾಂಚಾಲರು, ಕುರುಗಳು, ಮತ್ಸ್ಯರು, ಯೌಧೇಯರು, ಪಟಚ್ಚರರು, ಕುಂತೀದೇಶದ ಜನರು, ಶೂರಸೇನರು, ಇವರೆಲ್ಲರೂ ಮಧ್ಯದೇಶದಲ್ಲಿ ವಾಸಮಾಡುವ ಜನರೆಂದು ತಿಳಿಯಬೇಕು.

೩. ಪೂರ್ವದೇಶದಲ್ಲಿ ವಾಸವಾಗಿರುವ ಜನರನ್ನು ವೃಷಧ್ವಜರು, ಅಂಜನರು, ಪನ್ನ, ಸುಹ್ಮ, ಮಾಗಧ, ಚೇದಿ, ಕಾಶಿ, ವಿದೇಹರೆಂದು ಹೇಳುತ್ತಾರೆ.

**ಕಳಿಂಗ ವಂಗ ಪುಂಡ್ರಾಂಗ ವೈದರ್ಭಾ ಮೂಲಕಾಸ್ತಥಾ ।**
**ವಿಂಧ್ಯಾಂತನಿಲಯಾಃ ಪ್ರೋಕ್ತಾಃ ಪೂರ್ವದಕ್ಷಿಣತಃ ಸ್ಮೃತಾಃ ॥ ೪ ॥**

**ಪುಳಿಂದಾಶ್ಮಕಜೀಮೂತ ನರರಾಷ್ಟ್ರನಿವಾಸಿನಃ ।**
**ಕರ್ಣಾಟಕಾ ಭೋಜಕಟಾ ದಕ್ಷಿಣಾಪಥವಾಸಿನಃ ॥ ೫ ॥**

**ಅಂಬಷ್ಠಾ ದ್ರವಿಡಾ ನಾಗಾಃ ಕಾಂಭೋಜಾಃ ಸ್ತ್ರೀಮುಖಾಶ್ಶಕಾಃ ।**
**ಅನಂತವಾಸಿನಶ್ಚೈವ ಜ್ಞೇಯಾ ದಕ್ಷಿಣಪಶ್ಚಿಮೇ ॥ ೬ ॥**

**ಸ್ತ್ರೀರಾಜ್ಯಂ ಸೈಂಧವಾ ಮ್ಲೇಂಛಾ ನಾಸ್ತಿಕ್ಯಾ ಯವನಾಸ್ತಥಾ ।**
**ಪಶ್ಚಿಮೇನ ಚ ವಿಜ್ಞೇಯಾಃ ಪಟುಮಾನೌಷಧೈಸ್ಸಹ ॥ ೭ ॥**

**ಮಾಂಡವ್ಯಾಶ್ಚ ತುಷಾರಾಶ್ಚ ಮೂಲಿಕಾಶ್ವ ಮುಖಾಃ ಖಶಾಃ ।**
**ಮಹಾಕೇಶಾ ಮಹಾನಾಸಾ ದೇಶಾಸ್ತೂತ್ತರಪಶ್ಚಿಮೇ ॥ ೮ ॥**

---

೪. ಆಗ್ನೇಯದಿಕ್ಕಿನಲ್ಲಿ ವಾಸವಾಗಿರುವ ಜನರು, ಕಳಿಂಗರು, ವಂಗರು, ಪುಂಡ್ರರು, ಅಂಗದೇಶೀಯರು, ವೈದರ್ಭಿಗಳು, ಮೂಲಕರು, ವಿಂಧ್ಯಾಚಲತನಿವಾಸಿಗಳೆಂದು ಹೇಳಲ್ಪಟ್ಟಿದಾರೆ.

೫. ದಕ್ಷಿಣದಿಕ್ಕಿನಲ್ಲಿ ವಾಸಮಾಡುವ ಜನರನ್ನು ಪುಳಿಂದರು, ಅಶ್ಮಕರು, ಜೀಮೂತರು, ನರದೇಶವಾಸಿಗಳು. ಕರ್ಣಾಟಕರು, ಭೋಜಕಟರು ಎಂದು ತಿಳಿದು ಕೊಳ್ಳಬೇಕು.

೬. ನೈಋತ್ಯದಿಕ್ಕಿನಲ್ಲಿವಾಸಮಾಡುವ ಜನರುಗಳಿಗೆ ಅಂಬಷ್ಠರು, ದ್ರಾವಿಡರು, ನಾಗರು, ಕಾಂಭೋಜರು, ಸ್ತ್ರೀಮುಖರು, ಶಕರು, ಅನಂತವಾಸಿಗಳೆಂದು ಹೆಸರಾಗಿದೆ.

೭. ಪಶ್ಚಿಮದಿಕ್ಕಿನಲ್ಲಿ ವಾಸಮಾಡುವ ಜನರು ಸ್ತ್ರೀರಾಜ್ಯವಾಸಿಗಳು. ಅವರಿಗೆ ಸೈಂಧವ, ಮ್ಲೇಂಛ, ನಾಸ್ತಿಕ, ಯವನ, ಇತ್ಯಾದಿ ಹೆಸರು. ಇವರು ಔಷಧಗಳಿಂದ ಪುಷ್ಟರಾಗಿರುವವರು.

೮. ವಾಯುವ್ಯದಿಕ್ಕಿನಲ್ಲಿ ಮಾಂಡವ್ಯರೂ, ತುಷಾರರೂ, ಮೂಲಕರೂ, ಅಶ್ವಮುಖರೂ, ಮಹಾಕೇಶರೂ, ಮಹಾನಾಸರೆಂಬ ಜನರೆಲ್ಲರೂ ವಾಸವಾಗಿರುವರೆಂದು ತಿಳಿಯಬೇಕು.

ಲಂಪಗಾಸ್ತಾಳನಾಗಾಶ್ಚ ಮರುಗಾಂಧಾರಜಾಹುತಾಃ ।
ಹಿಮವನ್ನಿಲಯಾಮ್ಲೇಚ್ಛಾಹ್ಯುದೀಚೀಂ ದಿಶಮಾಶ್ರಿತಾಃ ॥ ೯ ॥

ತ್ರಿಗರ್ತಮೀನಕೌಲೂಕಾ ಬ್ರಹ್ಮಪುತ್ರಾಸ್ಸತೀಗಣಾಃ ।
ಅಭಿಸಾರಾಶ್ಚ ಕಾಶ್ಮೀರಾಶ್ಚೋದಕ್ಪೂರ್ವೇಣ ಕೀರ್ತಿತಾಃ ॥ ೧೦ ॥

ರಾಜೇಂದ್ರ ಸಾಗರದ್ವೀಪಾಪ್ರಧಾನಾ ವಸುಧಾಧಿಪಾಃ ।
ಭವತೇಽಹಂ ಪ್ರವಕ್ಷ್ಯಾಮಿ ದಿಗ್ದೇಶೇನ ನಿಬೋಧ ತತ್ ॥ ೧೧ ॥

ಪಂಚಾಲನಾಥೋ ಮಗಧಾಧಿಪಶ್ಚ ಕಳಿಂಗರಾಟ್ ಭೋಜಕಟೇಶ್ವರಶ್ಚ ।
ಅನಂತಕಸ್ಸೈಂಧವಕಸ್ತುಥಾರೋ ಮದ್ರೇಶ್ವರಶ್ಚಾಥ ಕುಲೂತನಾಥಃ॥೧೨॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ
ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಜನಪದ ವರ್ಣನೋ
ನಾಮ ನವಮೋಽಧ್ಯಾಯಃ

---

೯. ಉತ್ತರದಿಕ್ಕಿನಲ್ಲಿರುವ ಜನರ ಹೆಸರೇನೆಂದರೆ:— ಲಂಪಗರು, ತಾಳ ನಾಗರು, ಮರು, ಗಾಂಧಾರ, ಜಾಹೂತಾದಿಗಳು, ಹಿಮವತ್ಪರ್ವತದಲ್ಲಿ ವಾಸಮಾಡುವ ಮ್ಲೇಂಛರು.

೧೦. ಈಶಾನ್ಯದಿಕ್ಕಿನಲ್ಲಿ ತ್ರಿಗರ್ತರು, ಮೀನರು, ಕೌಲೂಕರು, ಬ್ರಹ್ಮಪುತ್ರರು ಸತೀಗಣರು, ಅಭಿಸಾರರು, ಕಾಶ್ಮೀರೀ ಜನರು ಇರುತ್ತಾರೆ.

೧೧. ಎಲೈ ವಜ್ರನರೇಂದ್ರನೇ ಕೇಳು. ಸಾಗರದ್ವೀಪಗಳಲ್ಲಿ ಪ್ರಧಾನರಾಗಿರುವ ರಾಜರುಗಳಾರೆಂಬುದನ್ನು ದಿಗ್ದೇಶ (ಸಂಗ್ರಹ) ದಿಂದ ತಿಳಿಸುತ್ತೇನೆ ಕೇಳು.

೧೨. ಪಂಚಾಲರು, ಮಗಧರಾಜ, ಕಳಿಂಗರಾಜ, ಭೋಜಮಹಾರಾಜ, ಅನಂತರಾಜ, ಸೈಂಧವರಾಜ, ಮದ್ರೇಶ್ವರ, ಕುಲೂತನಾಥ, ಇವರೇ ಮುಖ್ಯರಾಜರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದದಲ್ಲಿ ಜನಪದವರ್ಣನೆಯೆಂಬ
ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ

## ದಶಮೋಽಧ್ಯಾಯಃ

॥ ವಜ್ರ ಉವಾಚ ॥

ನಿವಿಷ್ಟಾನ್ ಸಾಗರೇ ದ್ವೀಪೇ ಸಪ್ತಾಹಂ ಕುಲಪರ್ವತಾನ್ ।
ನಾಮತಃ ಶ್ರೋತುಮಿಚ್ಛಾಮಿ ತತ್ಪ್ರಸೂತಾಶ್ಚ ನಿಮ್ನಗಾಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮಹೇಂದ್ರೋ ಮಲಯಸ್ಸಹ್ಯಃ ಶುಕ್ತಿಮಾನ್ ಋಕ್ಷಪರ್ವತಃ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತಾಸ್ಮಿನ್ ಕುಲಪರ್ವತಾಃ ॥ ೨ ॥

ತ್ರಿಸಾಮಾ ಋಷಿಕುಲ್ಯಾಶ್ಚ ಇಕ್ಷುಗಾ ತ್ರಿದಿವಾಲಯಾ ।
ಲಾಂಗೂಲಿನೀ ವಂಶಧರಾ ನದ್ಯಸ್ತ್ವೇತಾ ಮಹೇಂದ್ರಜಾಃ ॥ ೩ ॥

---

## ಹತ್ತನೆಯ ಅಧ್ಯಾಯವು

೧. ವಜ್ರಮಹಾರಾಜನು ಹೇಳಿದನು:—ಎಲೈ ! ಮಾರ್ಕಂಡೇಯ ಮಹರ್ಷಿಯೇ, ಸಾಗರದಲ್ಲೂ ದ್ವೀಪದಲ್ಲೂ ಪ್ರವೇಶಿಸಿದ ಏಳು ಕುಲಪರ್ವತಗಳ ಹೆಸರನ್ನೂ ಅಲ್ಲಿ ಉತ್ಪತ್ತಿಯಾಗುವ ಹೊಳೆಗಳ ಹೆಸರುಗಳನ್ನೂ ಕೇಳಲಪೇಕ್ಷಿಸುತ್ತೇನೆ.

೨. ಸಪ್ತಕುಲಪರ್ವತಗಳಾವುವೆಂದರೆ:— ಮಹೇಂದ್ರ, ಮಲಯ, ಸಹ್ಯ, ಶಕ್ತಿಮಂತ, ಋಕ್ಷಪರ್ವತ, ವಿಂಧ್ಯ, ಪಾರಿಯಾತ್ರ, ಇವುಗಳೇ ಸಪ್ತಗಿರಿಗಳು.

೩. ಮಹೇಂದ್ರ ಪರ್ವತದಲ್ಲಿ ತ್ರಿಸಾಮಾ, ಋಷಿಕುಲ್ಯ, ಇಕ್ಷುಗಾ, ತ್ರಿದಿವಾಲಯಾ, ಲಾಂಗೂಲಿನೀ, ವಂಶಧರಾ, ಎಂಬ ನದಿಗಳೂ ಹುಟ್ಟುವುವು.

ಕೃತಮಾಲಾ ತಾಮ್ರಪರ್ಣೀ ಪುಷ್ಪಜಾ ಚೋತ್ಪಲಾವತೀ ।
ಶೀತೋದಕಾ ಗಿರಿವಹಾ ನದ್ಯೋ ಮಲಯಸಂಭವಾಃ ॥ ೪ ॥

ತುಂಗಭದ್ರಾ ಸುಪ್ರಕಾರಾ ವಾಹ್ಯಾ ಕಾವೇರಿಕಾ ತಥಾ ।
ದಕ್ಷಿಣಾಪಥ ಮಧ್ಯಸ್ಥಾ ಸಹ್ಯಪಾದವಿನಿರ್ಮಿತಾಃ ॥ ೫ ॥

ಋಷಿಕಾ ಸುಕುಮಾರೀ ಚ ಮಂದಗಾ ಮಂದವಾಸಿನೀ ।
ನೃಪಮಾಲಾ ಶಿರೀ ಚೈವ ಶುಕ್ತಿಮತ್ಪಾದ ನಿಸ್ಸೃತಾಃ ॥ ೬ ॥

ಮಂದಾಕಿನೀ ದಶಾರ್ಣಾ ಚ ಶೋಣೋ ದೇವೀ ಚ ನರ್ಮದಾ ।
ತಮಸಾ ಪಿಪ್ಪಲಾ ಚೇತಿ ಋಕ್ಷವತ್ಪಾದನಿಸ್ಸೃತಾಃ ॥ ೭ ॥

ವೇಣಾ ವೈತರಣೀ ಚೈವ ನರ್ಮದಾ ಚ ಕುಮುದ್ವತೀ ।
ತೋಯಾ ಸೇತುಶಿಲಾ ಚೈವ ವಿಂಧ್ಯಪಾದವಿನಿಸ್ಸೃತಾಃ ॥ ೮ ॥

ಪಾರಾ ಚರ್ಮಣ್ವತೀ ಪಾದಾ ವಿದಿಶಾ ವೇಣುವತ್ಯಪಿ ।
ಸಿಪ್ರಾ ಹ್ಯವಂತೀ ಕುಂತೀ ಚ ಪಾರಿಯಾತ್ರಾದ್ವಿ ನಿಸ್ಸೃತಾಃ ॥ ೯ ॥

---

೪. ಮಲಯಪರ್ವತದಲ್ಲಿ ಕೃತಮಾಲಾ, ತಾಮ್ರಪರ್ಣೀ, ಪುಷ್ಪಜಾ, ಉತ್ಪಲಾವತೀ, ಶೀತೋದಕಾ, ಗಿರಿವಹಾ, ಎಂಬ ನದಿಗಳು ಹುಟ್ಟುತ್ತವೆ.

೫. ಸಹ್ಯ ಪರ್ವತದಲ್ಲಿ ತುಂಗಭದ್ರಾ, ಸುಪ್ರಕಾರಾ, ವಾಹ್ಯಾ, ಕಾವೇರೀ ನದಿಗಳು ಹುಟ್ಟಿ ದಕ್ಷಿಣ ದಿಕ್ಕಿಗೆ ಹರಿದುಕೊಂಡು ಹೋಗುವುವು.

೬. ಶುಕ್ತಿಮತ್ಪರ್ವತದಲ್ಲಿ ಋಷಿಕಾ, ಸುಕುಮಾರೀ, ಮಂದಗಾ, ಮಂದವಾಸಿನೀ, ನೃಪಮಾಲಾ, ಶಿರೀ ಎಂಬ ನದಿಗಳು ಹುಟ್ಟುವುವು.

೭. ಋಕ್ಷವಂತಪರ್ವತದಲ್ಲಿ ಮಂದಾಕಿನೀ, ದಶಾರ್ಣಾ, ಶೋಣ, ದೇವೀ, ನರ್ಮದಾ, ತಮಸಾ, ಪಿಪ್ಪಲಾ ಎಂಬ ಹೊಳೆಗಳು ಹುಟ್ಟುವುವು.

೮. ವಿಂಧ್ಯಪರ್ವತದಲ್ಲಿ ವೇಣಾ, ವೈತರಣೀ, ನರ್ಮದಾ, ಕುಮುದ್ವತೀ, ತೋಯಾ, ಸೇತುಶಿಲಾ, ಎಂಬ ನದಿಗಳು ಉತ್ಪತ್ತಿಯಾಗುವುವು.

೯. ಪಾರಿಯಾತ್ರಪರ್ವತದಿಂದ ಪಾರಾ, ಚರ್ಮಣ್ವತೀ, ಪಾದಾ, ವಿದಿಶಾ, ವೇಣುವತೀ, ಸಿಪ್ರಾ, ಅವಂತೀ, ಕುಂತೀ, ನದಿಗಳು ಹುಟ್ಟುತ್ತವೆ.

ನದ್ಯಃ ಪ್ರಧಾನಾಃ ಕಥಿತಾಸ್ತವೈತಾಃ
ಪುಣ್ಯಾಃ ಪವಿತ್ರಾ ಋಷಿಸೇವಿತಾಶ್ಚ ।
ಸಂತೀಹ ನದ್ಯಶ್ಚ ಸಹಸ್ರಶೋಽನ್ಯಾ
ವಕ್ತುಂ ನ ಶಕ್ತಾ ಯದುವೃಂದನಾಥ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರಪುರಾಣೇ ಪ್ರಥಮಖಂಡೇ
ದಶಮೋಽಧ್ಯಾಯಃ

---

೧೦. ಎಲೈ ಯದುವಂಶತಿಲಕನಾದ ವಜ್ರನೃಪಾಲನೇ ! ಕೇಳು. ಮುಖ್ಯ ಮುಖ್ಯವಾಗಿ ಪುಣ್ಯಕರಗಳೂ, ಪವಿತ್ರತೀರ್ಥೋದಕಗಳೂ ಉಳ್ಳವುಗಳಾಗಿ ಋಷಿಗಳಿಂದ ಸೇವಿತವಾದ ನದಿಗಳ ಹೆಸರುಗಳನ್ನು ಮಾತ್ರ ಹೇಳಿರುತ್ತೇನೆ. ಇಲ್ಲಿನ ಪರ್ವತಗಳಲ್ಲಿ ಇನ್ನೂ ಎಷ್ಟೋ ಸಾವಿರಾರು ಬೇರೆಬೇರೆ ನದಿಗಳಿವೆ. ಅವುಗಳ ಹೆಸರುಗಳನ್ನು ಹೇಳುವುದಕ್ಕೇ ಅಸಾಧ್ಯವಾಗಿದೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಹಿಮಗಿರ್ಯುದ್ಭವನದೀವರ್ಣನೆಯೆಂಬ
ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

॥ ಏಕಾದಶೋಽಧ್ಯಾಯಃ ॥

॥ ವಜ್ರ ಉವಾಚ ॥

ಹಿಮವತ್ಪಾದಸಂಭೂತಾಃ ಪುಣ್ಯಾ ಬ್ರಹ್ಮನ್ ವಿಶೇಷತಃ ।
ಪ್ರಾಧಾನ್ಯೇನ ಸಮಾಚಕ್ಷ್ವ ನದ್ಯಃ ಪಾಪಭಯಾಪಹಾಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಕೌಶೇಯವರ್ಣಸಲಿಲಾ ಕುಶೇಶಯವಿಮಿಶ್ರಿತಾ ।
ಕೌಶಿಕಸ್ಯ ಪ್ರಿಯಾ ನಿತ್ಯಂ ಕೌಶಿಕೀ ನಿಮ್ನಗೋತ್ತಮಾ ॥ ೨ ॥

## ಹನ್ನೊಂದನೆಯ ಅಧ್ಯಾಯವು.

೧. ವಜ್ರಮಹಾರಾಜನು ಹೇಳುತ್ತಾನೆ:—ಎಲೈ ಬ್ರಾಹ್ಮಣಶ್ರೇಷ್ಠನೇ! ವಿಶೇಷವಾಗಿ ಪುಣ್ಯಕರಗಳೂ ಪಾಪ ಮತ್ತು ಭಯಗಳನ್ನು ನಾಶಗೊಳಿಸುವುವೂ ಹಿಮತ್ಪರ್ವತಗಳಿಂದ ಉತ್ಪತ್ತಿಯಾಗುವುವೂ ಆದ ನದಿಗಳ ಹೆಸರುಗಳನ್ನು ದಯವಿಟ್ಟು ತಿಳಿಸು.

೨. ಮಾರ್ಕಂಡೇಯನು ಹೇಳುತ್ತಾನೆ.—ಕೌಶಿಕೀ ನದಿಯು ನದಿಗಳೊಳಗೆ ಶ್ರೇಷ್ಠವಾದುದು. ಇದು ರೇಷ್ಮೆವರ್ಣದಂತೆ ಇರುವ ನೀರಿನಿಂದಲೂ ತಾವರೆಯ ಹೂವಿನಿಂದಲೂ ಮಿಶ್ರವಾಗಿ ಹರಿಯುತ್ತಿರುವುದು.

ನಿಮಜ್ಜತ್ಪಾಪಸಂಘೌಘನಿರ್ಮಲೀಕರಣೇ ಶುಭಾ ।
ನಿಶ್ಚಲಾ ನಿಮ್ನಗಾ ಶ್ರೇಷ್ಠಾ ನಿತ್ಯಂ ಮುನಿಜನಪ್ರಿಯಾ ॥ ೩ ॥

ಗಜೇಂದ್ರಭಿನ್ನ ಕೂಲಾ ತು ಗಂಗಾತುಲ್ಯಾ ಚ ಪುಣ್ಯತಃ ।
ಗಂಧರ್ವಗಣಗೀತಾ ಚ ಗಂಡಕೀಗೋಕುಲಾಕುಲಾ ॥ ೪ ॥

ಲೋಕಾನಾಂ ಪಾವನಾಯಾಲಂ ಲೋಕನಾಥೇನ ನಿರ್ಮಿತಾ ।
ಲೋಕದೃಷ್ಟಿಮನೋಹಾರೀ ಲೋಹಿತ್ಯಶ್ಚ ಮಹಾನದಃ ॥ ೫ ॥

ದಿವಸ್ಸೇವ್ಯಾ ಯದಾ ವಿಪ್ರೈ ರ್ದಿವಿ ದೇವಗಣೈರ್ಯಥಾ ।
ದೃಷದ್ವತೀ ಸಮಾಕೀರ್ಣಾ ದರ್ಶನೀಯೋದಕಾ ತಥಾ ॥ ೬ ॥

ಬಹುದಾ ಬಹುಸತ್ವಾಥ ಮೇನಾ ಚ ಪ್ರಳಯಕ್ಷಮಾ ।
ಅನವಚ್ಛಿನ್ನವಾಹಾ ತು ಲಿಖಿತಸ್ಯ ಚ ಬಾಹುದಾ ॥ ೭ ॥

---

೩. ಈ ಕೌಶಿಕೀನದಿಯು ಸ್ನಾನಮಾಡಿದವರ ಪಾಪರಾಶಿಯನ್ನು ನಾಶಗೊಳಿಸಿ ಪರಿಶುದ್ಧರನ್ನಾಗಿ ಮಾಡುವ ಶಕ್ತಿಯುಳ್ಳದು. ಮತ್ತು ಋಷಿಜನಗಳಿಗೆ ಇಷ್ಟವಾದುದಾಗಿ ನಿಶ್ಚಲವಾಗಿಯೂ ಹರಿಯುತ್ತಿರುವುದು.

೪. ಗಜಶ್ರೇಷ್ಠಗಳಿಂದ ಭೇದಿಸಲ್ಪಟ್ಟ ದಡಗಳುಳ್ಳದ್ದಾಗಿಯೂ ಪುಣ್ಯದಲ್ಲಿ ಗಂಗಾನದಿಗೆ ಸಮಾನವಾಗಿಯೂ ಗಂಧರ್ವಗಣದಿಂದ ಗಾನಮಾಡಲ್ಪಡುವುದೂ ಗೋಸಮೂಹದಿಂದ ವಿರಾಜಿಸುವುದೂ ಆದ ಗಂಡಕೀನದಿಯೂ ಸಹ ಇಲ್ಲಿ ಹುಟ್ಟುವುದು.

೫. ಲೋಹಿತಮಹಾನದಿಯು ಲೋಕನಾಥನಾದ ಮಹಾವಿಷ್ಣುವಿನಿಂದ ನಿರ್ಮಿತವಾಗಿ ಲೋಕದ ಜನರ ದೃಷ್ಟಿಗೆ ಮನೋಹರವಾಗಿ ಕಾಣಿಸುತ್ತಾ ಲೋಕವನ್ನು ಪಾವನಮಾಡುವ ಶಕ್ತಿಯಿಂದೊಡಗೂಡಿರುವುದು.

೬. ನೋಡುವುದಕ್ಕೆ ಸಂತೋಷಕರವಾದ ನೀರುಗಳುಳ್ಳ ದೃಷದ್ವತೀನದಿಯು ದೇವಲೋಕದಲ್ಲಿ ದೇವತೆಗಳೊಡನೆ ವಾಸಮಾಡಲಿಚ್ಛಿಸುವ ಬ್ರಾಹ್ಮಣರುಗಳಿಂದ ಸೇವಿಸಲ್ಪಡುತ್ತಾ ಇಲ್ಲಿ ಪ್ರವಹಿಸುತ್ತಿರುವುದು.

೭. ಬಾಹುದಾನದಿಯು ಬಹು ಪುಣ್ಯಪ್ರದವಾಗಿಯೂ ಸತ್ವಗುಣವುಳ್ಳದ್ದಾಗಿಯೂ ಕ್ಷತ್ರಿಯರಿಗೆ ಸದ್ಗತಿಪ್ರದವಾದುದಾಗಿಯೂ ಪ್ರಳಯವನ್ನುಂಟುಮಾಡುವುದರಲ್ಲಿ ಸಹ ಸಮರ್ಥವಾಗಿಯೂ ಸರ್ವದಾ ಇಲ್ಲಿ ಹರಿಯುತ್ತಿದೆ.

**ಧರ್ಮಪ್ರದಾ ಸೇವಕಾನಾಂ ಧೂತಪಾಪಾ ಮಹಾನದೀ ।**
**ಗೋಮತೀ ಗೋಕುಲಾಕೀರ್ಣಾ ಗಜೇಂದ್ರಗಣಗಾಹಿತಾ ॥ ೮ ॥**

**ಗಂಧರ್ವಗೀತಗಂಭೀರಾ ಗಣಯಕ್ಷಗಣೈರ್ಯುತಾ ।**
**ಕುಹೂ ಕದಂಬಕಾದಂಬಕೇಕಾರಾವನಿನಾದಿತಾ ॥ ೯ ॥**

**ಕುಮುದೋತ್ಪಲಕಲ್ಹಾರಕುಸುಮೈರಾಕುಲೋದಕಾ ।**
**ದೇವದೇವಸ್ಯ ಯಾ ದೇವೀ ದಯಿತಾ ಶಂಕರಸ್ಯ ಚ ॥ ೧೦ ॥**

**ದೇವಿಕಾ ಸಾ ಪುರಾ ರಾಜನ್ ದೇವಲೋಕಗತಿಪ್ರದಾ ।**
**ವಿಸ್ತಾರಿತಮಹಾಕೂಲಾ ವಿಷಮದ್ವೀಪವೀಜಿತಾ ॥ ೧೧ ॥**

---

೮. ಧೂತಪಾಪಾ ಎಂಬ ಹೆಸರಿನ ಮಹಾನದಿಯು ತನ್ನನ್ನು ಸೇವಿಸುವವರಿಗೆ ಧರ್ಮಬುದ್ಧಿಯನ್ನುಂಟುಮಾಡುವುದಾಗಿಯೂ ಗೋಮತೀನದಿಯು ಗೋಗಳ ಸಮೂಹದಿಂದ ಕೂಡಿ ಗಜೇಂದ್ರ (ಆನೆ) ಗಳಿಂದ ಸ್ನಾನಮಾಡಿಸಿಕೊಳ್ಳುವುದಾಗಿಯೂ ಇದೆ.

ಇಲ್ಲಿ ಅರ್ಥಸ್ವಾರಸ್ಯವು ಮೇಲಿನ ನದಿಗಳನ್ನನುಸರಿಸಿ ವೈಶ್ಯಶೂದ್ರರಿಗೆ ಮುಕ್ತಿಪ್ರದವಾದುದೆಂಮೂ ತಿಳಿಯಬೇಕು.

೯-೧೦. ಗೋಮತೀನದಿಯ ವಿಶೇಷವನ್ನು ಇನ್ನೂ ಹೇಳುವೆವು. ಇದು ಪ್ರವಹಿಸುವ ಧ್ವನಿಯನ್ನಾಲೈಸಿದರೆ ಗಂಧರ್ವರು ಗೀತವಂ ಹಾಡುವಂತಿದೆ. ದೇವಗಣ ಯಕ್ಷಗಣಗಳಿಂದ ಕೂಡಿ ನಾನಾವಿಧ ಪಕ್ಷಿಗಳ ಇಂಚರ ಧ್ವನಿಗಳಿಂದಲೂ, ತಾವರೆ,. ಕನ್ನೈದಿಲೆ ಮುಂತಾದ ಪುಷ್ಪಗಳಿಂದ ಮಿಶ್ರಿತವಾದ ಉದಕಗಳಿಂದಲೂ ಕೂಡಿದೆ, ದೇವಾದಿದೇವನಾದ ಈಶ್ವರನ ಪ್ರಾಣವಲ್ಲಭೆಯಾದ ಮಹಾದೇವಿ ಯಾವಳುಂಟೋ ಆ ಮಹಾದೇವಿಯು ದೇವಲೋಕಗತಿಯನ್ನು ಕೊಡುವವಳಾಗಿ ದೇವಿಕಾನದಿಯೆಂಬ ಹೆಸರಿನಿಂದಿಲ್ಲಿ ಪ್ರವಹಿಸುತ್ತಿರುವಳು. ಮತ್ತು ಬಹುವಾಗಿ ಪಾತ್ರವಿಸ್ತಾರದಿಂದ ಕೂಡಿದ ದಡವುಳ್ಳವಳಾಗಿಯೂ, ವಿಷಮದ್ವೀಪಗಳಿಂದ ಸುತ್ತುವರಿಯಲ್ಪಟ್ಟವಳಾಗಿಯೂ ಮಹಾಪಾಪಗಳನ್ನು ನಾಶಮಾಡತಕ್ಕವಳಾಗಿಯೂ, ವಿಷ್ಣುಪದ [ಆಕಾಶ ಗಮನ] ವನ್ನು ಕೊಡತಕ್ಕವಳಾಗಿಯೂ

**ವಿಷ್ಣುಲೋಕಪ್ರದಾ ದೇವೀ ವಿತಸ್ತಾಽಘವಿನಾಶಿನೀ ।**
**ಚಂದ್ರಭಾಗಾ ಚ ಚಂದ್ರಾಂಶು ಚಾರುಶೀತಜಲಾವಿಲಾ ॥ ೧೨ ॥**

**ಚಂದ್ರಲೋಕಪ್ರದಾ ಸ್ನಾನೇ ಚಾಮರತ್ವಪ್ರದಾಯಿನೀ ।**
**ಸರೋಜಾಕುಲತೀರ್ಥಾ ಚ ಸರಯೂಃ ಸರಿತಾಂ ವರಾ ॥ ೧೩ ॥**

**ಸತತಂ ಸೇವಿತಾ ಸದ್ಭಿಃ ಸೋಮಲೋಕ-ಮಭೀಪ್ಸುಭಿಃ ।**
**ಇಂದ್ರೇಭಸೇವಿತತಟಾ ಇಂದ್ರಲೋಕಪ್ರದಾಯಿನೀ ॥ ೧೪ ॥**

**ಇಂದೀವರಾಕುಲಜಲಾ ತಥಾ ದೇವೀ ಇರಾವತೀ ।**
**ವಿಶಿಷ್ಟಪಾಶವಿಚ್ಛೇದೇ ವಿಪಾಶಾಕುಶಲಾ ತಥಾ ॥ ೧೫ ॥**

**ತಥೈವ ಸರ್ವಪಾಪಾನಾಂ ವಿಪಾಪಕರಿಣೀ ನೃಣಾಂ ।**
**ವಶಿಷ್ಠವಿದ್ರುತಾ ದೇವೀ ಶತದ್ರುರ್ದ್ರುತಗಾಮಿನೀ ॥ ೧೬ ॥**

---

೧೨. ಮನೋಹರವಾದ ಚಂದ್ರಕಿರಣದಂತೆ ಶೀತ್ರಜಲದಿಂದ ಕೂಡಿದವಳಾಗಿಯೂ, ಸ್ನಾನಮಾಡಿದ ಪುಣ್ಯಾತ್ಮರಿಗೆ ಚಂದ್ರಲೋಕವಾಸವನ್ನೂ, ಅಮರ [ದೇವತಾ] ಭಾವವನ್ನು ಕೊಡುವವಳಾದ ಚಂದ್ರಭಾಗಾ ನದಿಯೂ ಇಲ್ಲಿ ಹರಿಯುತ್ತಿರುವಳು.

೧೩-೧೫. ಸೋಮಲೋಕವಾಸವನ್ನಪೇಕ್ಷಿಸುವ ಸಜ್ಜನರಿಂದ ಸರ್ವದಾ ಸೇವಿಸಲ್ಪಡುತ್ತಾ, ಸರೋಜಪುಷ್ಪಗಳಿಂದ ವ್ಯಾಪ್ತವಾದ ಪುಣ್ಯತೀರ್ಥಗಳುಳ್ಳದ್ದಾಗಿಯೂ, ನದಿಗಳಲ್ಲಿ ಉತ್ತಮವಾದುದಾಗಿಯೂ ಇರುವ ಸರಯೂನದಿಯೂ, ಇಂದ್ರನ ಆನೆಯಾದ ಐರಾವತದಿಂದ ಸೇವಿಸಲ್ಪಟ್ಟ ತೀರ ವಿಶೇಷವುಳ್ಳ, ಸ್ನಾನದಿಂದ ಇಂದ್ರಲೋಕವಾಸವನ್ನು ಅನುಗ್ರಹಿಸುವ ಶಕ್ತಿಯುಳ್ಳ ಕಮಲಪುಷ್ಪಗಳಿಂದ ವ್ಯಾಪ್ತವಾದ ತೀರ್ಥಗಳುಳ್ಳ ಇರಾವತೀನದಿಯೂ, ವಿಶಿಷ್ಟದುಃಖಪಾಶವನ್ನು [ಸಂಕಟಗಳೆಂಬ ಹಗ್ಗ] ಕತ್ತರಿಸುವುದರಲ್ಲಿ ಕುಶಲಳಾದ ವಿಪಾಶಾನದಿಯೂ

೧೬. ಅದರಂತೆಯೇ ಸರ್ವಪಾಪಗಳನ್ನೂ ನಾಶಪಡಿಸಿ ವಿಪಾಪ [ಪುಣ್ಯವಂತರನ್ನಾಗಿ ಮಾಡುವ, ಬಲು ಬಿರುಸಿನಿಂದ ಹರಿಯುವುದಾದರೂ ವಸಿಷ್ಠಮಹರ್ಷಿಗಳಿಂದ ವಿದ್ರುತವಾಗಿ ಅಂದರೆ ನಿಧಾನವಾಗಿ ಹರಿಯುವ ಸ್ವಭಾವವನ್ನು ಹೊಂದಿದ ಶತದ್ರೂನದಿಯೂ,

ರೌದ್ರಾಣಾಮಪಿ ಸತ್ವಾನಾಂ ರುದ್ರಲೋಕಪ್ರದಾ ಶಿವಾ ।
ಕೃಷ್ಣೇನ ಕೃಷ್ಣತೋಯಾ ಚ ಬಾಲ್ಯೇ ಪೀತಪಯೋಧರಾ ॥ ೧೭ ॥

ಯಮಸ್ವಸಾ ಚ ಯಮುನಾ ಯಾಮ್ಯದುಃಖವಿನಾಶಿನೀ ।
ಸಪ್ತಪ್ರಕಾರಾ ಚ ನದೀ ತಥಾ ದೇವೀ ಸರಸ್ವತೀ ॥ ೧೮ ॥

ತಸ್ಯಾಸ್ಸಪ್ತಸುಭಾಗೇಶು ನಾಮಾನಿ ಶೃಣು ಮೇ ನೃಪ ।
ಸುಪ್ರಭಾ ಕಾತರಾಕ್ಷೀ ಚ ವಿಶಾಲಾ ಮಾನಸಹ್ರದಾ ॥ ೧೯ ॥

ಸರಸ್ವತ್ಯೋಘನಾದಾ ಚ ಸುವೇಣುರ್ವಿಮಲೋದಕಾ ।
ಪುಷ್ಕರೇ ನೈಮಿಷೇ ಚೈವ ಗಯಾಯಾಂ ಕೋಸಲೇಷು ಚ ॥ ೨೦ ॥

ಕುರುಕ್ಷೇತ್ರೇ ಕ್ರಮಾದ್ಜ್ಞೇಯಾ ಗಂಗಾದ್ವಾರೇ ಹಿಮಾಚಲೇ ।
ನದ್ಯಸ್ತಥೈತಾ ಹಿಮವತ್ಪ್ರಸೂತಾಃ ಪ್ರಧಾನಭೂತಾಃ ಕಥಿತಾ ನೃವೀರ ।

---

೧೭-೧೮. ಬಹು ರೌದ್ರ [ನಿಷ್ಕರುಣಿ] ಜನರಿಗೂ ರುದ್ರಲೋಕ ವಾಸವನ್ನು ಕೊಡುವ, ಮಂಗಳಪ್ರದಳಾದ, ತನ್ನ ಕಪ್ಪುಬಣ್ಣದಿಂದ, ನೀರನ್ನು ಕಪ್ಪಾಗಿ ಮಾಡಿರುವ, ಬಾಲ್ಯದಲ್ಲಿ ಪಾನಮಾಡಲ್ಪಟ್ಟ ಸ್ತನವುಳ್ಳ, ಯಮನ ಒಡಹುಟ್ಟಿದವಳಾದ, ನರಕ ದುಃಖವನ್ನು ನಾಶಪಡಿಸುವವಳಾದ ಯಮುನಾನದಿಯೂ ಇಲ್ಲಿ ಹರಿಯುತ್ತಿರುವಳು. ಇನ್ನು ಸರಸ್ವತೀನದಿಯ ವೃತ್ತಾಂತವನ್ನು ತಿಳಿಸೋಣ. ಈ ಮಹಾನದಿಯು ಸಪ್ತ [ಏಳು] ಪ್ರಕಾರವಾಗಿ ವಿಭಾಗಿಸಲ್ಪಟ್ಟಿದೆ. (ನದಿಗಳು ಸ್ತ್ರೀನಪುಂಸಕಗಳು)

೧೯-೨೦. ಆ ಸರಸ್ವತಿಯು ಏಳುಭಾಗಗಳಲ್ಲೂ ಏಳು ಹೆಸರುಗಳಿಂದ ಹರಿಯುತ್ತಿರುವುದು. ಅವುಗಳ ಹೆಸರುಗಳನ್ನು ಹೇಳುವೆನು ಕೇಳು, ಮಹಾರಾಜ !! ಸುಪ್ರಭಾ, ಕಾತರಾಕ್ಷೀ, ವಿಶಾಲಾ, ಮಾನಸಹ್ರದಾ, ಸರಸ್ವತೀ, ಓಘನಾದಾ, ಸುವೇಣು, ಇವೇ ಆ ಏಳು ನಾಮಗಳು. ಇವುಗಳು ಕ್ರಮವಾಗಿ ಪುಷ್ಕರ, ನೈಮಿಷಾರಣ್ಯ, ಗಯಾ, ಕೋಸಲ, ಕುರುಕ್ಷೇತ್ರ, ಹರಿದ್ವಾರ, ಹಿಮಾಲಯಗಳೆಂಬ ಹೆಸರಿನ ಪುಣ್ಯಪ್ರದವಾದ ಪವಿತ್ರಕ್ಷೇತ್ರಗಳಲ್ಲಿ ಪ್ರವಹಿಸುತ್ತಿರುವುವು.

೨೧-೨೨. ಎಲೈ! ವಜ್ರಭೂಪತಿಯೇ, ಕೇಳು. ಹಿಮಾಲಯದಿಂದ ಹುಟ್ಟುವ ಮುಖ್ಯ ಮುಖ್ಯವಾದ ಕೆಲವು ನದಿಗಳ ವಿಷಯವನ್ನು ಮಾತ್ರ ನಿನಗೆ ತಿಳಿಸಿರುತ್ತೇನೆ.

**ಉಕ್ತಾಶ್ಚ ನದ್ಯಶ್ಚ ಸಹಸ್ರಶೋನ್ಯಾಃ ಸರ್ವಾಃ ಪವಿತ್ರಾ ಋಷಿವರ್ಯ ಜುಷ್ಟಾಃ ॥ ೨೧ ॥**

**ವರ್ಷಸ್ಯ ತಸ್ಯಾಪಿ ತಥಾಂತರೇಸ್ಮಿನ್ ಸಪ್ತಪ್ರಕಾರಾ ಚ ತ್ರಿಮಾರ್ಗಗಾಽಪಿ ।**
**ದ್ವೀಪಂ ಪ್ರವಿಷ್ಟಾ ಭರತಸ್ಯ ರಾಜನ್ ಭಗೀರಥಾರಾಧಿತ ಪದ್ಮಜೋಕ್ತಾ ॥ ೨೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರಪುರಾಣೇ ಪ್ರಥಮಖಂಡೇ**
**ಏಕಾದಶೋಧ್ಯಾಯಃ**

---

ಈಗ ಹೇಳಿದ ನದಿಗಳಲ್ಲದೆ ಇನ್ನೂ ಸಾವಿರಾರು ನದಿಗಳು ಇಲ್ಲಿಂದ ಉದ್ಭವಿಸುತ್ತವೆ. ಅವೆಲ್ಲವುಗಳೂ ಪವಿತ್ರವಾದ ಜಲಗಳಿಂದ ಕೂಡಿ ಮಹರ್ಷಿಗಳಿಂದ ಸೇವಿಸಲ್ಪಡುತ್ತಿವೆ. ಇವು ಸಪ್ತವಿಧವಾಗಿ ತ್ರಿಮಾರ್ಗಗಾಮಿಗಳಾಗಿ ಬೇರೆ ದ್ವೀಪಗಳಿಂದ ಈ ಜಂಬೂದ್ವೀಪಕ್ಕೆ ಹರಿದುಕೊಂಡು ಬಂದು ಈ ಭರತ ವರ್ಷಕ್ಕೆ ಪ್ರವೇಶಿಸಿವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಹಿಮವನ್ನದೀವರ್ಣನವೆಂಬ ಹೆಸರಿನ ಹನ್ನೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ

## ದ್ವಾದಶೋಽಧ್ಯಾಯಃ



|| ವಜ್ರ ಉವಾಚ ||

ಭಾರತಸ್ಯಾಸ್ಯ ವರ್ಷಸ್ಯ ಭೇದೇಽಸ್ಮಿನ್ನವಮೇ ಪ್ರಭೋ ।
ಕಿಮರ್ಥಂ ಸಾಗರಃ ಖಾತಃ ಸಕೃತಸ್ಸಾಗರೈಸ್ತಥಾ || ೧ ||

ಮಾರ್ಕಂಡೇಯ ಉವಾಚ—

ಭಾರತಸ್ಯಾಸ್ಯ ವರ್ಷಸ್ಯ ಭೇದೇಽಸ್ಮಿನ್ ನವಮೇ ನೃಪ ।
ನವಮೇ ಚ ದಿಶಾಂ ಭಾಗೇ ಪೂರ್ವಸ್ಯಾಂ ದಿಶಿ ಯಾದವ || ೨ ||

ಕೋಸಲೋ ನಾಮ ವಿಷಯಃ ಪ್ರಭೂತಧನಧಾನ್ಯವಾನ್ ।
ಸ್ಫೀತಗ್ರಾಮಗುಣಾಢ್ಯೋಽಸ್ತಿ ನಿತ್ಯಂ ಮುದಿತಮಾನವಃ || ೩ ||

---

೧. ವಜ್ರ ಮಹಾರಾಜನು ಹೇಳುವನು:— ಈ ಭರತವರ್ಷದ ಒಂಬತ್ತು ಭೇದಗಳಲ್ಲಿ ಒಂದಾದ ಈ ಸಮುದ್ರವು ಏಕೆ ಅಗೆಯಲ್ಪಟ್ಟಿತು ? ಸಗರ ಚಕ್ರವರ್ತಿಯ ಮಕ್ಕಳಿಂದ ಸಾಗರವೆಂಬ ಹೆಸರಿನಿಂದ ಯಾವಾಗ ಪ್ರಸಿದ್ಧವಾಯಿತೋ ಈ ವೃತ್ತಾಂತ ವನ್ನು ಪ್ರಭುಶಕ್ತಿಯಿಂದೊಡಗೂಡಿದ ಮಾರ್ಕಂಡೇಯ ಮಹರ್ಷಿಯೇ! ನನಗೆ ತಿಳಿಸು.

೨-೩. ಮಾರ್ಕಂಡೇಯ ಋಷಿಯು ಹೇಳುವನು:— ಎಲೈ ! ವಜ್ರಮಹಾ ಚಕ್ರವರ್ತಿಯೇ, ಕೇಳು. ಈ ಭರತವರ್ಷದ ನವವಿಧ ಭೇದಗಳಲ್ಲಿರುವ ದಶದಿಗ್ಭೇದಗಳಲ್ಲಿ ಪೂರ್ವದಿಗ್ಭಾಗದಲ್ಲಿ ಧನಧಾನ್ಯ ಸಮೃದ್ಧಿಯಿಂದ ತುಂಬಿದ ಕೋಸಲವೆಂಬ ದೇಶವಿರುವುದು. ಈ ದೇಶವು ವಿಖ್ಯಾತವಾದ ಗ್ರಾಮಸಹಸ್ರಗಳ ಗುಂಪುಗಳಿಂದ ಪ್ರಕಾಶಿಸುತ್ತಾ ಸಂತೋಷಚಿತ್ತರಾದ ಜನರಿಂದ ತುಂಬಿದೆ.

**ಪಯಸ್ವಿನ್ಯಃ ಪಯಸ್ವಿನ್ಯೋ ಯತ್ರ ಸಸ್ಯಧರಾ ಧರಾ ।**
**ಮನೋಭಿರಾಮಾ ರಾಮಾಶ್ಚ ಪುರುಷಾಃ ಪೌರುಷಾಗ್ರಜಾಃ ॥ ೪ ॥**

**ವಿದಗ್ಧಜನಭೂಯಿಷ್ಠಾ ಸರ್ವಪುಣ್ಯಸಮಾಕುಲಾ ।**
**ನಗರೈರ್ನವಿಶಿಷ್ಯಂತೇ ಯತ್ರ ಗ್ರಾಮಾ ಮನೋಹರಾಃ ॥ ೫ ॥**

**ಗವಾಂ ಪ್ರವೇಶೇ ಸಾಯಾಹ್ನೇ ಯತ್ರ ಗ್ರಾಮೇಷು ಭಾಸ್ಕರಃ ।**
**ಧೂಳಿಪುಂಜಪರಿಕ್ಷಿಪ್ತಃ ವನಸಾನುವಿರಾಜಿತಃ ॥ ೬ ॥**

**ಪಶ್ಚಿಮೇ ಪ್ರಥಮೇ ಚೈವ ಯತ್ರ ಯಾಮೇ ವಿರಾಜಿತಃ।**
**ರಾತ್ರೌ ಬ್ರಹ್ಮಧ್ವನಿಸ್ತತ್ರ ತಿಷ್ಠತೀವ ನಭಸ್ತಲಂ ॥**
**ಪ್ರಪಾಕೂಪತಟಾಕಾಢ್ಯಾಃ ಪಂಥಾನೋ ಯತ್ರ ಯಾದವ ॥ ೮ ॥**

---

೪. ಇಲ್ಲಿ ಹಸುಗಳು ಯಾವಾಗಲೂ ಹಾಲು ಕೊಡುತ್ತಿರುವುವು. ಭೂಮಿಯು ಯಾವಾಗಲೂ ಪೈರುಪಚ್ಚೆಗಳಿಂದ ಕಂಗೊಳಿಸುತ್ತಿರುವುದು. ಸ್ತ್ರೀಯರು ಸುಂದರಿಯರಾಗಿರುವರು. ಪುರುಷರು ಪೌರುಷದಲ್ಲಿ ಅಗ್ರಗಣ್ಯರಾಗಿರುವರು.

೫-೮. ಈ ಕೋಸಲದೇಶವು ವಿದ್ವಾಂಸರಿಂದ ತುಂಬಲ್ಪಟ್ಟಿರುವುದು. ಸಕಲ ಪುಣ್ಯಗಳಿಂದ ವ್ಯಾಪ್ತವಾಗಿರುವುದು. ಈ ದೇಶದಲ್ಲಿರುವ ಮನೋಹರವಾದ ಹಳ್ಳಿಗಳೂ ಸಹ ನಗರಗಳಿಗಿಂತ ಕಡಿಮೆಯೆನಿಸದೇ ಇರುವುವು. ಸಾಯಂಕಾಲದ ಹೊತ್ತು ಹಸುಗಳು ಊರಿಗೆ ಹಿಂತಿರುಗಿ ಬರುತ್ತಿರುವಾಗ ಅವುಗಳ ಕಾಲುಗೊರಸಿನಿಂದ ಹೊರಟ ಧೂಳು, ಸೂರ್ಯಮಂಡಲವನ್ನು ಮುಚ್ಚಿಬಿಡುತ್ತಿತ್ತಲ್ಲದೆ ಪರ್ವತಪ್ರಾಂತಗಳಲ್ಲೂ ಆವರಿಸಿಕೊಂಡು ಪ್ರಕಾಶಿಸುತ್ತಿತ್ತು. ಸಾಯಂಕಾಲದ ಮೊದಲಯಾಮದಲ್ಲಿ ಹೀಗೆ ವಿರಾಜಿಸುತ್ತಿದ್ದ ನಗರವು ರಾತ್ರಿವೇಳೆಯಲ್ಲಿ ಬ್ರಾಹ್ಮಣರ ವೇದಧ್ವನಿಯಿಂದ ರಾರಾಜಿಸುತ್ತಿತ್ತು. ಈ ಧ್ವನಿಯು ಆಕಾಶತಲವನ್ನು ಮುಟ್ಟುತ್ತಿತ್ತು, ಈ ಕೋಸಲದೇಶದಲ್ಲಿ ಮಾರ್ಗಗಳಲ್ಲಿ ಬೆಳೆಸಲ್ಪಟ್ಟಿರುವ ನೆರಳಿಗೋಸ್ಕರ ಇರುವ ಸಾಲುಮರಗಳೂ ಸಹ ಹಣ್ಣುಗಳಿಂದ ಬಗ್ಗಿಸಲ್ಪಟ್ಟಿರುವ ಕೊಂಬೆಗಳಿಂದ ಪ್ರಕಾಶಿಸುತ್ತಿರುವುವು. ಈ ಕೋಸಲದೇಶದ ರಾಜಬೀದಿಗಳಲ್ಲೆಲ್ಲಾ ಕಡೆಗಳಲ್ಲೂ ಅರವಟ್ಟಿಗೆಗಳೂ, ಭಾವಿಗಳೂ, ಕೆರೆಗಳೂ ತುಂಬಿ ತುಳುಕಾಡುತ್ತಿರುವುವು.

**ವ್ಯಾಧಿತಸ್ಕರದುರ್ಭಿಕ್ಷ ಪರರಾಷ್ಟ್ರಭಯಾನಿ ಚ ।**
**ಜನಾ ಯತ್ರ ನ ಜಾನಂತಿ ನಾಕಾಲಮರಣಂ ತಥಾ ॥ ೯ ॥**

**ಯೂಪಚಿಹ್ನಾ ಮಹೀ ಯತ್ರ ದೇವವೇಶ್ಮಾವತಂಸಿಕಾ ।**
**ಯತ್ರೋತ್ಪಲಸಮಾಕೀರ್ಣಾ ವರವಾಪೀವಿಭೂಷಿತಾ ॥ ೧೦ ॥**

**ಉದ್ಯಾನೇಷು ಸದಾ ಯತ್ರ ವೇಣುಗಂಧರ್ವನಿಸ್ವನಃ ।**
**ಶಿಲೀಮುಖರವೈರ್ಮಿಶ್ರಂ ಯಾತ್ಯಸಂಬಾಧತಾಂ ಗುಣೈಃ ॥ ೧೧ ॥**

**ಯಸ್ಮಿನ್ನ ಕಶ್ಚಿಚ್ಚ್ಯವತೇ ಸ್ವಧರ್ಮಾದ್ದೀನೋ ಜನೋ ಯತ್ರ ನ ಚಾಸ್ತಿ ಕಶ್ಚಿತ್ ।**
**ನ ನೇತ್ರಹೀನೋ ವಿಕಲೇಂದ್ರಿಯೋ ವಾ ವಸುಂಧರಾ ಯತ್ರ ಯಥಾರ್ಥ ನಾಮಾ ॥ ೧೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರಪುರಾಣೇ ಪ್ರಥಮಖಂಡೇ ದ್ವಾದಶೋಧ್ಯಾಯಃ**

---

೯-೧೧. ಆ ದೇಶದಲ್ಲಿ ರೋಗ, ಕಳ್ಳತನ, ಕ್ಷಾಮ, ಶತ್ರುಭಯಗಳಿರಲಿಲ್ಲ, ಅಕಾಲಮರಣದ ಹೆಸರನ್ನೇ ಆ ದೇಶದ ಜನರು ಅರಿಯರು. ಆ ದೇಶದಲ್ಲಿ ಎಲ್ಲ ಕಡೆಗಳಲ್ಲಿಯೂ ಯೂಪಸ್ತಂಭದ ಚಿಹ್ನೆಯು ಕಾಣಿಸುತ್ತಲೇ ಇತ್ತು. ಅಂದರೆ ಬ್ರಾಹ್ಮಣರೆಲ್ಲರೂ ಯಜ್ಞಯಾಗಾದಿಗಳಲ್ಲಿ ನಿರತರಾಗಿರುತ್ತಿದ್ದರು. ಎಲ್ಲ ಕಡೆಗಳಲ್ಲೂ ದೇವಸ್ಥಾನಗಳು ಕಂಗೊಳಿಸುತ್ತಿದ್ದುವು. ಭಾವಿಗಳು ಕಾಶೀಕಲ್ಲಿನಿಂದ ಕಟ್ಟಲ್ಪಟ್ಟಿದ್ದುವು. ಉದ್ಯಾನವನಗಳಲ್ಲಿ ಎಲ್ಲ ಕಡೆಗಳಲ್ಲೂ ಕೊಳಲು, ವೀಣೆ, ಮುಂತಾದ ಧ್ವನಿಗಳು ತುಂಬಿ ತುಳುಕುತ್ತಿತ್ತು.

೧೨. ಆ ಕೋಸಲರಾಜ್ಯದಲ್ಲಿ ಸ್ವಧರ್ಮವನ್ನು ಯಾವನೂ ಮೀರಿ ನಡೆಯುತ್ತಿರಲಿಲ್ಲ. ದೀನರೂ ದರಿದ್ರರೂ ಆ ರಾಜ್ಯದಲ್ಲಿ ಇರಲೇ ಇಲ್ಲ. ಕುರುಡ, ಕುಂಟ, ಅಂಗಹೀನರೂ ಯಾರೂ ಆ ರಾಜ್ಯದಲ್ಲಿ ಇರಲಿಲ್ಲ. ವಸುಂಧರೆ ಎಂದರೆ ಹಣವನ್ನು ತುಂಬಿಕೊಂಡಿರುವದೆಂದರ್ಥ. ಈ ದೇಶದ ಭೂಮಿಯು ವಸುಂಧರೆಯೆಂಬ ಹೆಸರನ್ನು ಅನ್ವರ್ಥಮಾಡಿಕೊಂಡಿರುತ್ತಿತ್ತು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯವಜ್ರಸಂವಾದದಲ್ಲಿ ಕೋಸಲವರ್ಣನವೆಂಬ ಹೆಸರಿನ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ತ್ರಯೋದಶೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಕೋಸಲಾ ವಿಷಯೇ ಸ್ಫೀತೇ ತಸ್ಮಿನ್ ಮನುಜಪುಂಗವ ।
ದೇವಾನಾಮಪ್ಯಯೋಧ್ಯಾಽಸ್ತಿ ತ್ವಯೋಧ್ಯಾನಾಮತಃ ಪುರೀ ॥ ೧ ॥

ಪ್ರಾಕಾರಪರಿಖೋಪೇತಾ ಸರಯೂತೀರಶೋಭಿತಾ ।
ಶೋಭಿತಾ ಭವನೈರ್ಮುಖ್ಯೈಃ ಸುವಿಭಕ್ತಮಹಾಪಥಾ ॥ ೨ ॥

ನಿತ್ಯಪ್ರಸನ್ನೈರ್ಮಾತಂಗೈರಂಜಲಾಚಲಸಂನಿಭೈಃ ।
ದೇವನಾಗಕುಲೋತ್ಪನ್ನೈಃ ಶತಸಂಖ್ಯೈರ್ವಿರಾಜಿತಾ ॥ ೩ ॥

---

### ಹದಿಮೂರನೆಯ ಅಧ್ಯಾಯವು

೧. ಸುಂದರವಾದ ಆ ಕೋಸಲದೇಶದಲ್ಲಿ, ದೇವತೆಗಳ ಊರಿಗೆ ಅಯೋಧ್ಯೆಯೆಂಬ ಹೆಸರೆಂತು ಬಂದಿರುವುದೋ ಅದರಂತೆ ಅಯೋಧ್ಯೆಯೆಂಬ ಒಂದಾನೊಂದು ನಗರವಿರುವುದು. ಕೇಳಯ್ಯ ! ವಜ್ರಮಹಾರಾಜ !

೨. ಸರಯೂನದಿಯ ತೀರದಲ್ಲಿರುವ ಆ ಅಯೋಧ್ಯಾಪಟ್ಟಣವು ಸುತ್ತಲೂ ಕೋಟೆಗಳಿಂದಲೂ ಕಂದಕಗಳಿಂದಲೂ ಸುತ್ತುವರೆಯಲ್ಪಟ್ಟಿರುವುದು. ಬೀದಿಗಳು ಬಹು ಅಂದವಾಗಿ ವಿಭಾಗಿಸಲ್ಪಟ್ಟಿರುವಾಪಟ್ಟಣದಲ್ಲಿ ಸುಂದರವಾದ ಮಹಡೀಮನೆಗಳು ಶೋಭಿಸುತ್ತಿರುವುವು.

೩. ಆ ಅಯೋಧ್ಯಾಪಟ್ಟಣದಲ್ಲಿರುವ ಆನೆಗಳು ದೇವನಾಗಕುಲದಲ್ಲಿ ಉತ್ಪನ್ನವಾದುವುಗಳಾಗಿಯೂ ಅಂಜನಾಪರ್ವತದಂತೆ ಪ್ರಕಾಶಿಸುತ್ತಲಿರುವವುಗಳೂ, ಬಹು ಸೌಮ್ಯಸ್ವಭಾವವುಳ್ಳವುಗಳಾಗಿಯೂ ಕಂಗೊಳಿಸುತ್ತಲಿವೆ.

ನಿರ್ಮಾಂಸವಕ್ತ್ರೈಸ್ತುರಗೈಃ ಸುಕರ್ಣೈಶ್ಚ ಮನೋಜವೈಃ ।
ದೀರ್ಘಗ್ರೀವಾಕ್ಷಕೊಟೈಶ್ಚ ಮಹೋರುಜಘನೈರ್ವೃತಾ ॥ ೪ ॥

ಪದ್ಮಗರ್ಭಸವರ್ಣಾಂಗ್ಯಃ ಪೂರ್ಣಚಂದ್ರನಿಭಾನನಾಃ ।
ಸಂಲಾಪೋಲ್ಲಾಸ ಕುಶಲಾ ಯತ್ರ ವೇಶ್ಯಾಸ್ಸಹಸ್ರಶಃ ॥ ೫ ॥

ನ ತತ್ಪುಣ್ಯಂ ನ ಸಾ ವಿದ್ಯಾ ನ ತಚ್ಛಿಲ್ಪಂ ನ ಸಾ ಕ್ರಿಯಾ ।
ಅಯೋಧ್ಯಾಂ ಪ್ರಾಪ್ಯ ಯಸ್ಯಾರ್ಥೀ ನಿರಾಶಃ ಪ್ರತಿಗಚ್ಛತಿ ॥ ೬ ॥

ಉದ್ಯಾನಶತಸಂಬಾಧಾ ಸಮಾಜೋತ್ಸವಶಾಲಿನೀ ।
ಅರೋಗವೀರಪುರುಷಾ ಸರ್ವತರ್ಕವಿವರ್ಜಿತಾ ॥ ೭ ॥

---

೪. ಆ ಅಯೋಧ್ಯಾನಗರದಲ್ಲಿರುವ ಕುದುರೆಗಳು ಮಾಂಸರಹಿತಮುಖಗಳಿಂದಲೂ, ಸುಂದರವಾದ ಕಿವಿಗಳಿಂದಲೂ, ಉದ್ದವಾದ ಕತ್ತುಗಳಿಂದಲೂ, ಅಗಲವಾದ ತೊಡೆ ಮತ್ತು ಜಘನಗಳಿಂದಲೂ, ಕೂಡಿ ವಾಯುವೇಗಸಮಾನವಾದ ನಡಿಗೆಯಿಂದ ಕೂಡಿರುವುವು.

೫. ಅಯೋಧ್ಯಾಪಟ್ಟಣದಲ್ಲಿರುವ ವೇಶ್ಯೆ (ಸೂಳೆ) ಯರು ಕಮಲದೆಸಳಿನಂತಿರುವ ಮೈಕಾಂತಿಯಿಂದಲೂ ಪೂರ್ಣಚಂದ್ರನಂತಿರುವ ಮುಖಕಮಲಗಳಿಂದಲೂ, ಮಾತನಾಡುವುದರಲ್ಲಿ ಉಲ್ಲಾಸವನ್ನು ತೋರಿಸುವ ಕೌಶಲ್ಯವುಳ್ಳವರಾಗಿಯೂ, ಸಹಸ್ರಸಂಖ್ಯಾತರಾಗಿರುವರು.

೬. ಅಯೋಧ್ಯಾಪಟ್ಟಣದಲ್ಲಿ ಅತಿಥಿಯಾದವನು ಯಾವನಾದರೂ ಯಾವ ಗೃಹಸ್ಥನ ಮನೆಗೆ ಹೋಗಿ ನಿರಾಶನಾಗಿ ಹಿಂತಿರುಗುವನೋ ಅಂತಹ ಗೃಹಸ್ಥನ ಪುಣ್ಯವು ನಾಶವಾಗುವುದು. ಅವನ ವಿದ್ಯೆಯು ವಿದ್ಯೆಯೇ ಅಲ್ಲ. ಅವನ ಕೌಶಲವು ಕೌಶಲವೇ ಅಲ್ಲ. ಅವನ ಕೆಲಸವು ಕೆಲಸವೇ ಅಲ್ಲ.

೭. ಆ ಮಹಾನಗರವು ನೂರಾರು ಉದ್ಯಾನವನಗಳಿಂದ ತುಂಬಿದೆ. ಗುಂಪು ಗುಂಪಾಗಿ ಉತ್ಸವ ಮತ್ತು ಭಜನೆಗಳನ್ನು ಮಾಡುವ ಜನರಿಂದ ತುಂಬಿದೆ. ಆರೋಗ್ಯಶಾಲಿಗಳಾದ ವೀರಪುರುಷರಿಂದೊಡಗೂಡಿದ್ದ ಅದು ಯಾವ ಚರ್ಚೆಯೂ ಇಲ್ಲದ ಪಟ್ಟಣವಾಗಿದೆ.

ವೀಣಾವೇಣುಮೃದಂಗಾನಾಂ ಶಬ್ದೈಸ್ಸತತನಾದಿತಾ ।
ಸದಾ ಪ್ರಹೃಷ್ಟಮನುಜಾ ಬಹುರತ್ನೋಪಶೋಭಿತಾ　　॥ ೮ ॥

ಬ್ರಹ್ಮಘೋಷಮಹಾಘೋಷಾ ದ್ವಿಜಬೃಂದೋಪಶೋಭಿತಾ ।
ಸಾಜ್ಯಧೂಮೋದ್ಗಮಾಢ್ಯೇನ ವಾಯುನಾ ನಷ್ಟಕಿಲ್ಬಿಷಾ　　॥ ೯ ॥

ಸುಗಂಧಿಧೂಪವಿಕ್ಷೇಪ ಸುರಭೀಕೃತಮಾರುತಾ ।
ಸುಗಂಧಿಮನುಜಾಕೀರ್ಣಾ ನಿತ್ಯಮಾಪಣವೀಥಿಷು　　॥ ೧೦ ॥

ಯತ್ರ ದೀನೋ ಜನೋ ನಾಸ್ತಿ ಮಲಿನಃ ಕೃಶಿತೋಽಪಿ ವಾ ।
ವೇದನಿಂದಾಪರಃ ಕ್ಷುದ್ರೋ ಭಿನ್ನಸೇತು—ರ್ನ ನಾಸ್ತಿಕಃ　　॥ ೧೧ ॥

ವಿಸ್ತೀರ್ಣಾ ದಶ ಮಧ್ಯೇ ಚ ಯೋಜನಾನಾಂ ಮಹಾಪುರೀ ।
ಸರಯೂತೀರಮಾಶ್ರಿತ್ಯ ಯೋಜನತ್ರಯಮಾಯತಾ　　॥ ೧೨ ॥

---

೮. ಯಾವಾಗಲೂ ಆ ನಗರದಲ್ಲಿ ವೀಣೆ, ಕೊಳಲು, ಮೃದಂಗಗಳ ಶಬ್ದಗಳು ಕೇಳಿಬರುತಲಿವೆ ಅಲ್ಲಿ ಮನುಷ್ಯರು ಯಾವಾಗಲೂ ಸಂತೋಷವಾದ ಮನಸ್ಸಿನಿಂದ ಕೂಡಿದಾರೆ. ಆ ಊರು ಬಹು ವಿಧವಾದ ರತ್ನಗಳಿಂದ ಕಾಂತಿಯುತವಾಗಿದೆ.

೯. ಬ್ರಾಹ್ಮಣರು ಮಾಡುತ್ತಿರುವ ಮಹಾವೇದಘೋಷಗಳಿಂದಲೂ, ತುಪ್ಪ ದೊಡನೆ ಸೇರಿ ಸುವಾಸನೆಯುಳ್ಳ ಅಗರು ಗುಗ್ಗುಳುಗಳ ಸುವಾಸನೆಯಿಂದ ಆ ನಗರದ ಗಾಳಿಯು ಸಕಲ ದುರ್ಗಂಧಗಳನ್ನು ನಾಶಮಾಡುತ್ತಲೂ ಇದೆ.

೧೦-೧೩. ಸುಗಂಧವಾದ ಧೂಪದಿಂದ ಆ ಊರಿನ ಗಾಳಿಯೆಲ್ಲಾ ಘಮಘಮಾ ಯಿಸುತಲಿರುವುದು ಅಂಗಡೀಬೀದಿಯಲ್ಲಿ ತಿರುಗಾಡುವ ಜನರ ಮೈಯಿಂದ ಹೊರ ಡುವ ವಾಸನೆಯೂ ಸುಗಂಧವಾಗಿಯೇ ಇರುವುದು. ಯಾವ ದುರ್ವಾಸನೆಯೂ ಆ ನಗರದಲ್ಲಿಲ್ಲ. ಆ ಮಹಾನಗರದಲ್ಲಿ ದೀನ (ದರಿದ್ರ) ಜನರೇ ಇಲ್ಲ. ಕೊಳಕಾದ ವನೂ, ನಾಸ್ತಿಕನೂ, ವೇದವನ್ನು ನಿಂದಿಸುವವನೂ, ಚಾಡಿಕೋರನೂ, ಸೇತುವೆ ಮುಂತಾದ್ದನ್ನು ಒಡೆಯುವವನೂ ಆ ಊರಲ್ಲಿಲ್ಲ. ಈ ಅಯೋಧ್ಯಾಪಟ್ಟಣವು ಮಧ್ಯ ಭಾಗದಲ್ಲಿ ಹತ್ತುಯೋಜನ ಅಗಲವಾಗಿದೆ. ಸರಯೂತೀರವನ್ನನುಸರಿಸಿದ ಆ ಊರಿನ ಉದ್ದವಾದ ಅಳತೆಯು ಮೂರು ಯೋಜನವೆಂದು ತಿಳಿ. ಈ ನಗರವು ಈ ವೈವಸ್ವತಮನ್ವಂತರದಲ್ಲಿ ಮನು ಚಕ್ರವರ್ತಿಯಿಂದ ನಿರ್ಮಿತವಾಗಿದೆ. ಮನು

**ಮನ್ವಂತರೇಸ್ಮಿನ್ ಪುನರೇವ ರಾಜ್ಞಾ ವಿನಿರ್ಮಿತಾ**
**ಸಾ ಮನುನಾ ನೃವೀರ । ಮನ್ವಂತರಂ ಯೇನ ಜಗತ್ಸಮಗ್ರಂ**
**ಪಾಲ್ಯಂ ಯಥಾವದ್ಯದುವೃಂದನಾಥ ॥ ೧೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ**
**ತ್ರಯೋದಶೋಽಧ್ಯಾಯಃ**

---

ಚಕ್ರವರ್ತಿಗಳಿಂದ ಹೊರತಾಗಿ ಈ ಮೂರುಲೋಕವೂ ಇನ್ನಾವ ರಾಜನಿಂದಲೂ ಆಳಲ್ಪಡಲಾರದು. ಇದು ಹೇಗೆಂಬುದನ್ನು ಯಥಾಸ್ಥಿತಿಯಾಗಿ ನಿನ್ನೊಡನೆ ವಿವರಿಸುವೆನು. ಕೇಳಯ್ಯ! ವಜ್ರಭೂಪಾಲ!

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಅಯೋಧ್ಯಾವರ್ಣನೆಯೆಂಬ ಹೆಸರಿನ ಹದಿಮೂರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಚತುರ್ದಶೋಽಧ್ಯಾಯಃ

---

**॥ ಮಾರ್ಕಂಡೇಯ ಉವಾಚ ॥**

**ವೈವಸ್ವತೇನ ಮನುನಾ ಯೇನ ಸಾ ನಿರ್ಮಿತಾ ಪುರೀ ।**
**ಸ ತು ಕೃತ್ವಾ ಚಿರಂ ರಾಜ್ಯಮಿಕ್ಷ್ವಾಕುಮಭಿಷಿಚ್ಯ ಚ ॥ ೧ ॥**

**ಪುತ್ರೇ ಭಾರಂ ಸಮಾವೇಶ್ಯ ಸಶರೀರೋ ದಿವಂ ಗತಃ ।**
**ತತ್ರಸ್ಥಃ ಪಾಲಯನ್ನಾಸ್ತೇ ತ್ರೈಲೋಕ್ಯಂ ಸ ಚರಾಚರಂ ॥ ೨ ॥**

**ತೇನ ಮನ್ವಂತರಂ ಸರ್ವಂ ಪಾಲನೀಯಮಿದಂ ಜಗತ್ ।**
**ಇಕ್ಷ್ವಾಕುಸ್ತಸ್ಯ ತನಯಃ ಪಾಲಯಾಮಾಸ ಮೇದಿನೀಂ ॥ ೩ ॥**

---

## ಹದಿನಾಲ್ಕನೆಯ ಅಧ್ಯಾಯವು

೧-೩. ಅದಾವ ವೈವಸ್ವತಮನುವಿನಿಂದ ಅಯೋಧ್ಯಾನಗರವು ನಿರ್ಮಿತವಾಯಿತೋ ಅಂತಹ ಆ ವೈವಸ್ವತಮನುವು ಬಹುಕಾಲ ರಾಜ್ಯಭಾರವನ್ನು ಮಾಡಿ ತನ್ನ ಮಗನಾದ ಇಕ್ಷ್ವಾಕುಮಹಾರಾಜನಿಗೆ ಪಟ್ಟವನ್ನು ಕಟ್ಟಿ ತಾನು ಸ್ವರ್ಗಾರೂಢನಾದನು ಆ ಇಕ್ಷ್ವಾಕುವೂ ಸಹ, ಚರಾಚರಗಳಿಂದೊಡಗೂಡಿದ ಈ ಮೂರು ಲೋಕವನ್ನೂ ಸಹ ಧರ್ಮದಿಂದ ಪರಿಪಾಲಿಸುತ್ತಿದ್ದನು ಆ ಮಹಾರಾಜನಿಂದ ಈ ಸಕಲ ಜಗತ್ತೂ ಮನ್ವಂತರವಾಗಿಯೇ ಇದ್ದಿತು. ಆತನ ಮಗನಿಗೂ ಇಕ್ಷ್ವಾಕುವೆಂದೇ ಹೆಸರು ಆತನೂ ಭೂಪತಿಯೆನಿಸಿ ರಾಜ್ಯಭಾರಮಾಡುತ್ತಿದ್ದನು.

ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾದೀ ಜಿತೇಂದ್ರಿಯಃ ।
ಸುದರ್ಶಸ್ಸರ್ವಭೂತಾನಾಂ ನಯಾಪನಯಕೋವಿದಃ ॥ ೪ ॥

ಬ್ರಹ್ಮಣ್ಯಶ್ಚ ಶರಣ್ಯಶ್ಚ ದೀನಾನಾಥಾನುಕಂಪಕಃ ।
ದೈವಮಂತ್ರಪ್ರಭೂತ್ಸಾಹಶಕ್ತಿಭಿಶ್ಚ ಸಮನ್ವಿತಃ ॥ ೫ ॥

ಷಾಡ್ಗುಣ್ಯವಿನ್ಮಹೋತ್ಸಾಹಃ ಸ್ಮಿತಪೂರ್ವಾಭಿಭಾಷಣಃ ॥
ಯುಕ್ತದಂಡೋ ನ ನಿರ್ದಂಡೋ ನ ಚ ದಂಡರತಿಸ್ತಥಾ ॥ ೬ ॥

ವೇದವೇದಾಂಗತತ್ವಜ್ಞೋ ಯಜ್ಞಯಾಜೀ ತಪೋರತಃ ।
ಅಕ್ಷುದ್ರಲೀಲೋಭಿಮತಃ ಸರ್ವಸತ್ವೋ ನ ಹಿಂಸಕಃ ॥ ೭ ॥

ಮಾನ್ಯೋ ಮಾನಯಿತುಂ ಶಕ್ಯಃ ಸುಖಃಪೂಜ್ಯಪ್ರಪೂಜಕಃ ॥
ಕಾಮಃಕ್ರೋಧೋ ಮದೋ ಮಾನೋ ಲೋಭೋಹರ್ಷಸ್ತಥೈವ ಚ॥ ೮ ॥

---

೪-೯. ಆ ಇಕ್ಷ್ವಾಕು ಮಹಾರಾಜನ ಗುಣಗಳನ್ನು ವಿವರಿಸುವೆನು. ಧರ್ಮದ ರಹಸ್ಯವನ್ನು ಆತನು ತಿಳಿದಿದ್ದನು. ಮಾಡಿದ ಉಪಕಾರವನ್ನು ಸ್ಮರಣೆಯಲ್ಲಿಟ್ಟಿದ್ದನು. ಯಾವಾಗಲೂ ಸುಳ್ಳು ಹೇಳುತ್ತಿರಲಿಲ್ಲ. ಇಂದ್ರಿಯಗಳನ್ನು ಜಯಿಸಿ ವಿಷಯಸುಖಗಳನ್ನು ಕ್ಷಣಭಂಗುರವೆಂದು ತಿಳಿದಿದ್ದನು. ನೋಡುವುದಕ್ಕೆ ಸುಂದರನಾಗಿದ್ದನು. ಸಕಲ ಪ್ರಾಣಿಗಳನ್ನೂ ನಯವಿನಯಗಳಲ್ಲಿಟ್ಟಿದ್ದನು. ಬ್ರಹ್ಮವಿಚಾರಮಾಡುತ್ತಾ ಶರಣಾಗತರನ್ನು ಪರಿಪಾಲಿಸುತ್ತಾ ದೀನರ ವಿಷಯದಲ್ಲಿ ದಯೆಯನ್ನು ತೋರಿಸುತ್ತಾ ದೈವಶಕ್ತಿ, ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿಗಳಿಂದ ಕೂಡಿದವನಾಗಿದ್ದನು. ಷಡ್ಗುಣಗಳು ಅವನಲ್ಲಿ ಮೂರ್ತಿಭವಿಸಿದ್ದವು. ಯಾರನ್ನಾದರೂ ಕಂಡರೆ ಮಂದಹಾಸದಿಂದೊಡಗೂಡಿ ತಾನೇ ಅವರನ್ನು ಮೊದಲು ಮಾತನಾಡಿಸುತ್ತಿದ್ದನು ಯುಕ್ತವಾಗಿ ಅಪರಾಧಿಗಳಿಗೆ ದಂಡವನ್ನು ವಿಧಿಸುತ್ತಿದ್ದನಾದರೂ ನಿರ್ದಂಡ (ಶಿಕ್ಷೆಮಾಡದೆ) ನಾಗಿ ಇರುತ್ತಿರಲಿಲ್ಲ. ಯಾವಾಗಲೂ ದಂಡದಲ್ಲಿ ಆಸಕ್ತನಾಗಿಯೂ ಇರುತ್ತಿರಲಿಲ್ಲ. ಮತ್ತು ವೇದವೇದಾಂಗತತ್ವಗಳನ್ನು ತಿಳಿದವನಾಗಿದ್ದನು. ಯಜ್ಞಯಾಗಾದಿಗಳನ್ನು ಮಾಡುತ್ತಾ ತಪಸ್ಸಿನಲ್ಲಿ ಆಸಕ್ತನಾಗಿದ್ದನು. ಕ್ಷುದ್ರಜನರ ಜತೆ ಸೇರುತ್ತಿರಲಿಲ್ಲ. ಸಕಲ ಸತ್ವಗಳನ್ನೂ ಸ್ವಾಧೀನಮಾಡಿಕೊಂಡಿದ್ದನು. ಯಾರನ್ನೂ ಹಿಂಸಿಸುತ್ತಿರಲಿಲ್ಲ. ಮಾನವಂತರನ್ನು ವಿಶೇಷವಾಗಿ ಗೌರವಿಸುತ್ತಿದ್ದನು. ಪೂಜ್ಯರಾದ ಜನರನ್ನು ಪೂಜೆ ಮಾಡು

ನಿತ್ಯಂ ಶರೀರಪ್ರಭವಾ ರಿಪವಸ್ತೇನ ಷಡ್‌ಜಿತಾಃ ।
ಸರ್ವತ್ರ ವಿಧಿನಾ ದೃಶ್ಯಃ ಸುಭಗಃ ಪ್ರಿಯದರ್ಶನಃ ॥ ೯ ॥

ಬಹುಧಾನ್ಯೋ ಬಹುಧನೋ ಬಹುನಾಗಾಶ್ವಪೂರುಷಃ ।
ಅಯೋಧ್ಯಾನಿಲಯೋ ನಿತ್ಯಂ ದೇವಾರಿಗಣದರ್ಪಹಾ ॥ ೧೦ ॥

ಸ ತದಾ ಪಾಲಯಾಮಾಸ ಪುತ್ರವತ್ಸಕಲಾಃ ಪ್ರಜಾಃ ।
ನಾಽಧರ್ಮಃ ಕಶ್ಚಿದಪ್ಯಾಸೀತ್ತಸ್ಮಿನ್ರಾಜನಿ ಮಾನವಃ ॥ ೧೧ ॥

ದೀನೋ ವಾ ವ್ಯಾಧಿತೋ ವಾಪಿ ಸ್ವಲ್ಪಾಯುರ್ವಾ ಚ ದುಃಖಿತಃ ।
ಮೂರ್ಖೋ ವಾ ಮಂದರೂಪೋ ವಾ ದುರ್ಭಗೋ ವಾ ನಿರಾಕೃತಿಃ ॥ ೧೨ ॥

ಏಕತ್ರ ದೇಹೇ ಸಕಲಂ ಗುಣೌಘಂ
ದ್ರಷ್ಟಾಹ ಮಿತ್ಯೇವ ವಿಶಿಷ್ಟಬುದ್ಧಿಃ ।

---

ತ್ತಿದ್ದನು. ಮತ್ತು ಸುಖವಾಗಿದ್ದನು. ಪ್ರತಿದಿನವೂ ತನ್ನ ದೇಹದಲ್ಲಿ ಉತ್ಪತ್ತಿಯಾಗುತ್ತಿದ್ದ ಕಾಮಕ್ರೋಧಾದಿ ಷಡ್ರಿಪುಗಳನ್ನು ಗೆದ್ದಿದ್ದನು. ಯಾವ ಕೆಲಸವನ್ನೂ ಶಾಸ್ತ್ರೀಯವಾಗಿಯೇ ನಡೆಸುತ್ತಿದ್ದನು. ಸೌಭಾಗ್ಯಶಾಲಿಯೆನಿಸಿ ಎಲ್ಲರಿಂದಲೂ ಇಷ್ಟನೆನಿಸಿಕೊಂಡಿದ್ದನು.

೧೦–೧೩. ಧನಧಾನ್ಯಗಳು ಅಪರಿಮಿತವಾಗಿ ಆ ರಾಜನ ಕೋಶಗಳಲ್ಲಿ ತುಂಬಿದ್ದುವು. ಆನೆ, ಕುದುರೆ, ಕಾಲಾಳು, ರಥಗಳೆಂಬ, ಚತುರಂಗಬಲಗಳೂ ಅಗಣಿತವಾಗಿದ್ದುವು. ಅಯೋಧ್ಯಾವಾಸಿಯಾದ ಆ ಇಕ್ಷ್ವಾಕುವು ನಿತ್ಯವೂ ರಾಕ್ಷಸರ ಗರ್ವವನ್ನು ಮುರಿಯುತ್ತಿದ್ದನು. ಸಕಲ ಪ್ರಜೆಗಳನ್ನೂ ಮಕ್ಕಳಂತೆ ಕಾಪಾಡುತ್ತಿದ್ದನು. ಅಧರ್ಮದ ಹೆಸರೇ ಆ ನಗರದಲ್ಲಿರಲಿಲ್ಲ. ಆ ಇಕ್ಷ್ವಾಕುವು ರಾಜ್ಯಭಾರಮಾಡುತ್ತಿದ್ದಾಗ ದರಿದ್ರನೂ, ರೋಗಗ್ರಸ್ತನೂ, ಅಲ್ಪಾಯುವೂ, ದುಃಖಿಯೂ, ಮೂರ್ಖನೂ, ಕುರೂಪಿಯೂ, ದೌರ್ಭಾಗ್ಯನೂ, ಆಕಾರವಿಹೀನನೂ, ಆ ರಾಜ್ಯದಲ್ಲಿರಲಿಲ್ಲ. ಸಕಲ ಜಗತ್ತಿಗೂ ಪ್ರಧಾನಪುರುಷನಾದ ಬ್ರಹ್ಮನು, ಒಂದೇ ದೇಹದಲ್ಲಿ ಸಕಲ ಸದ್ಗುಣಗಳೂ ವಾಸವಾಗಿ

**ಸಸರ್ಜ ಯಂ ರಾಜವರಂ ಮಹಾತ್ಮಾ**
**ಪ್ರಜಾಪತಿಸ್ಸರ್ವಜಗತ್ಪ್ರಧಾನಃ** ॥ ೧೩ ॥

**ಇತಿ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ**
**ಚತುರ್ದಶೋಽಧ್ಯಾಯಃ**

---

ರಲೆಂಬ ವಿಶಿಷ್ಟ (ವಿಶೇಷಾಭಿಮಾನ) ಬುದ್ಧಿಯಿಂದ ಈ ಇಕ್ಷ್ವಾಕು ಮಹಾರಾಜನನು ಸೃಷ್ಟಿಮಾಡಿರುವನೋ ಎಂಬಂತೆ ತೋರುತ್ತಿತ್ತು.

ಇಲ್ಲಿಗೆ ಶ್ರೀ ವಿಷ್ಣು ಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಇಕ್ಷ್ವಾಕುಕುಲವರ್ಣನೆಯೆಂಬ ಹೆಸರಿನ ಹದಿನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
## ಪಂಚದಶೋಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಇಕ್ಷ್ವಾಕೋ ರಭವತ್ಪುತ್ರೋ ವಿಕುಕ್ಷಿರ್ನಾಮ ಧಾರ್ಮಿಕಃ ।
ಕಕುತ್ಸ್ಥಸ್ತನಯಸ್ತಸ್ಯ ಚಾನೇನಾಸ್ತಸ್ಯ ಚಾತ್ಮಜಃ ॥ ೧ ॥

ತಸ್ಯ ಪುತ್ರಃ ಪೃಥುಃ ಶ್ರೀಮಾನ್ ವಿಶ್ವದಾಸಸ್ತದಾತ್ಮಜಃ ।
ತಸ್ಯ ಶ್ರಾವಸ್ತಕೋ ನಾಮ ಶ್ರಾವಸ್ತೀಯೇನ ನಿರ್ಮಿತಾ ॥ ೨ ॥

ಬೃಹದಶ್ವಸ್ಸುತಸ್ತಸ್ಯ ಕುವಲಾಶ್ವಸ್ತದಾತ್ಮಜಃ ।
ಕುವಲಾಶ್ವೋ ಮಹಾತೇಜಾ ಧುಂಧ ಮಾರತ್ವಮಾಗತಃ ॥ ೩ ॥

ಧುಂಧುಂ ಹತ್ವಾ ಮಹಾಕಾಯಮುದಕೇ ಜಲರಾಕ್ಷಸಂ ।

---

## ಹದಿನೈದನೆಯ ಅಧ್ಯಾಯವು

**ಮಾರ್ಕಂಡೇಯನು ಹೇಳುವನು**

೧-೩ ಇಕ್ಷ್ವಾಕುವಿಗೆ ಧರ್ಮಾತ್ಮನಾದ ವಿಕುಕ್ಷಿಯೆಂಬ ಮಗನೂ, ಅವನಿಗೆ ಕಕುತ್ಸ್ಥನೆಂಬ ಮಗನೂ, ಆತನಿಗೆ ಚಾನೇನನೆಂಬ ಮಗನೂ, ಆತನಿಗೆ ಪೃಥುವೂ, ಪೃಥುವಿಗೆ ವಿಶ್ವದಾಸನೂ, ಆತನಿಗೆ ಶ್ರಾವಸ್ತಕನೂ, ಮಕ್ಕಳಾಗಿದ್ದರು. ಶ್ರಾವಸ್ತಿಯೆಂಬ ಪಟ್ಟಣವನ್ನು ನಿರ್ಮಿಸಿದವನಾದ್ದರಿಂದ ಆ ರಾಜನಿಗೆ ಶ್ರಾವಸ್ತಕನೆಂದು ಹೆಸರಾಯಿತು. ಆತನಿಗೆ ಬೃಹದಶ್ವನೂ ಅವನಿಗೆ ಕುವಲಾಶ್ವನೂ ಮಕ್ಕಳಾದರು. ಈ ಕುವಲಾಶ್ವನಿಗೆ ಧುಂಧುಮಾರನೆಂಬ ಹೆಸರುಂಟಾಯಿತು. ಏಕೆಂದರೆ ನೀರಿನಲ್ಲಿದ್ದುಕೊಂಡು ಪ್ರಾಣಿಗಳನ್ನು ಹಿಂಸಿಸುತ್ತಿದ್ದ ಧುಂಧುವೆಂಬ ಜಲರಾಕ್ಷಸನನ್ನು ಸಂಹರಿಸಿ ಕ್ಷೇಮವನ್ನು

॥ ವಜ್ರ ಉವಾಚ ॥

ಕಥಂ ಧುಂಧುರ್ಮಹಾತೇಜಾಃ ಕುವಲಾಶ್ವೇನ ಘಾತಿತಃ ।
ಕಶ್ಚಾಯಂ ಧುಂಧುರಿತ್ಯೇಷ ವಿಶ್ರುತೋ ಜಲರಾಕ್ಷಸಃ ॥ ೪ ॥

॥ ಮಾರ್ಕಂಡೇಯ ಉವಾಚ ॥

ಏಕಾರ್ಣವೇ ಪುರಾ ಲೋಕೇ ನಷ್ಟೇಸ್ಥಾವರಜಂಗಮೇ ॥ ೫ ॥

ನಷ್ಟಚಂದ್ರಾಗ್ನಿಪವನೇ ವಿನಷ್ಟಗ್ರಹತಾರಕೇ ।
ಶೇಷಪರ್ಯಂಕಮಾಸಾದ್ಯ ಸುಪ್ತೋ ದೇವೋ ಜನಾರ್ದನಃ ॥ ೬ ॥

ನಾಭೌ ತಸ್ಯ ಸಮುತ್ಪನ್ನಂ ದೇವಸ್ಯ ಕಮಲಂ ಶುಭಂ ।
ತತ್ರ ಜಜ್ಞೇ ಸ್ವಯಂ ಬ್ರಹ್ಮಾ ದೇವಶ್ಚುಭಚತುರ್ಮುಖಃ ॥ ೭ ॥

ತತ್ರಾಸ್ತೇ ಸೋಽಭ್ಯಸನ್ ವೇದಾನ್ ಸುಪ್ತೇ ದೇವೇ ಜನಾರ್ದನೇ ।
ಉಪಾಸಾಂ ಚಕ್ರಿರೇ ತಸ್ಯ ವೇದಾ ದೇಹಭೃತಸ್ತದಾ ॥ ೮ ॥

---

ಉಂಟುಮಾಡಿದವನಾದ್ದರಿಂದ ಧುಂಧುಮಾರನೆಂಬ ಹೆಸರುಂಟಾಯಿತು. ಕೇಳೈ ; ವಜ್ರಮಹಾರಾಜನೇ, ಎಂದು ಮಾರ್ಕಂಡೇಯನು ಹೇಳುತ್ತಿರಲು ವಜ್ರನು ಮಧ್ಯೇ ಬಾಯಿಹಾಕಿ ಕೇಳುತ್ತಾನೆ.

**ವಜ್ರಮಹಾರಾಜನು ಹೇಳುತ್ತಾನೆ**

೪. ಕುವಲಾಶ್ವನೆಂಬ ಮಹಾರಾಜನಿಂದ ಸಂಹೃತನಾದ ಧುಂಧುವೆಂಬ ರಾಕ್ಷಸನು ಯಾರು ? ಜಲರಾಕ್ಷಸನೆಂಬ ಹೆಸರು ಅವನಿಗೆಂತು ಬಂದಿತು ?

೫-೮ ಮಾರ್ಕಂಡೇಯ ಋಷಿಯು ಹೇಳುತ್ತಾನೆ- ಪೂರ್ವದಲ್ಲಿ ಲೋಕಪ್ರಳಯವಾದಾಗ ತಾನೇತಾನಾಗಿ ಸಮುದ್ರವೇ ಏಕಾರ್ಣವವಾಗಿತ್ತು. ಆಗ ಸ್ಥಾವರಜಂಗಮಪ್ರಾಣಿಗಳೆಲ್ಲವೂ ನಾಶವಾಗಿ ಹೋದುವು. ಚಂದ್ರ, ಅಗ್ನಿ, ವಾಯುಗಳು ನಷ್ಟವಾದುವು. ನಕ್ಷತ್ರಗ್ರಹಾದಿಗಳೆಲ್ಲಾ ನಾಶವಾಗಿ ಹೋದವು. ಆದಿಪುರುಷನಾದ ಜನಾರ್ದನನು ಆ ಕಾಲದಲ್ಲಿ ಆದಿಶೇಷನೆಂಬ ಮಂಚದಮೇಲೆ ಮಲಗಿಕೊಂಡು ಬಿಟ್ಟನು. ಆ ಮಹಾವಿಷ್ಣುವಿನ ನಾಭಿಪ್ರದೇಶದಲ್ಲಿ ಒಂದು ದೇವತಾಕಮಲವು ಹುಟ್ಟಿತು. ಆ ಕಮಲದದೆಸೆಯಿಂದ ಚತುರ್ಮುಖಬ್ರಹ್ಮನು ಹುಟ್ಟಿದನು. ಆ ಹುಟ್ಟಿದ ಬ್ರಹ್ಮನು ಮಲಗಿದ್ದ ಸ್ವಾಮಿಯ ಮುಂದೆ ವೇದಾಭ್ಯಾಸಮಾಡುತ್ತಿದ್ದನು. ಆ ಕಾಲದಲ್ಲಿ ನಾಲ್ಕು ವೇದಗಳೂ ದೇಹವನ್ನು ಧರಿಸಿಕೊಂಡು ಆ ಬ್ರಹ್ಮನ ಸೇವೆಯನ್ನು ಮಾಡುತ್ತಿದ್ದುವು.

ವೇದಾಭ್ಯಾಸರತೇ ತತ್ರ ಸ್ವೇದಬಿಂದುರಜಾಯತ ।
ಸ ಪದ್ಮಪತ್ರಮಾಸಾದ್ಯ ದ್ವಿಧಾಭೂತೋಽಭವನ್ನೃಪ　　॥ ೯ ॥

ರಜಸ್ತಮೋಮಯೌ ತಸ್ಮಾಜ್ಜಾತೌ ದೈತ್ಯೌ ಬಲೋತ್ಕಟೌ ।
ಮಧುಕೈಟಭನಾಮಾನೌ ಮಹಾಬಲಪರಾಕ್ರಮೌ　　॥ ೧೦ ॥

ತತಸ್ತೌ ಜಹ್ರತುರ್ವೇದಾನ್ ಬ್ರಹ್ಮಣಃ ಪಾಪನಿಶ್ಚಯೌ ।
ಸಶರೀರೇಷು ವೇದೇಷು ಹೃತೇಷ್ವಥ ಪಿತಾಮಹಃ　　॥ ೧೧ ॥

ಬೋಧಯಾಮಾಸ ದೇವೇಶಂ ಪದ್ಮನಾಭಂ ಸ ಚಾನಘಃ ।
ಸ ವಿಬುದ್ಧಸ್ತದಾ ದೇವಃ ಕೃತ್ವಾ ಹಯಶಿರೋಧರಂ　　॥ ೧೨ ॥

ಶಶಾಂಕಶತಸಂಕಾಶಂ ನಾನಾಭರಣಶೋಭಿತಂ ।
ದ್ವಿತೀಯೇನ ಶರೀರೇಣ ರಸಾತಲತಲಂ ಗತಃ　　॥ ೧೩ ॥

---

೯-೧೧. ಹೀಗೆ ನಾರಾಯಣನ ಮುಂದೆ ಬ್ರಹ್ಮನು ವೇದಗಳಿಂದುಪಾಸಿಸಲ್ಪಡುತ್ತಿರುವಲ್ಲಿ ಅವನ ಮೈಯಿಂದ ಬೆವರು ಹನಿಯೊಂದು ಉತ್ಪತ್ತಿಯಾಯಿತು. ಆ ಬೆವರು ಹನಿಯು ಕಮಲದಳದ ಮೇಲೆ ಬಿದ್ದು ಎರಡು ಭಾಗವಾಯಿತು. ಆ ಎರಡು ಭಾಗಗಳೂ ರಜೋಗುಣತಮೋಗುಣಗಳಿಂದ ಕೂಡಿದ ಮಹಾಪರಾಕ್ರಮಶಾಲಿಗಳಾದ ರಾಕ್ಷಸರಾಗಿ ಪರಿವರ್ತಿತರಾದರು. ಅವರ ಹೆಸರು ಮಧುಕೈಟಭರೆಂದು ಪ್ರಸಿದ್ಧವಾಯಿತು. ಆ ಮಹಾಶೂರರಾದ ರಾಕ್ಷಸರು ಮೂರ್ತಿಮತ್ತಾಗಿ ನಿಂತಿದ್ದ ಬ್ರಹ್ಮನ ಚತುರ್ವೇದಗಳನ್ನು ಅಪಹರಿಸಿದರು. ಪಾಪಿಗಳಾದ ಆ ರಾಕ್ಷಸರಿಂದ ಸಶರೀರವಾದ ವೇದಗಳು ಅಪಹೃತವಾದ ಮೇಲೆ ಬ್ರಹ್ಮನು ಈ ವೃತ್ತಾಂತವನ್ನು ಮಲಗಿದ್ದ ವಿಷ್ಣುವನ್ನೆಬ್ಬಿಸಿ ಆತನಿಗೆ ತಿಳಿಸಿದನು. ಆಗ ಆ ಮಹಾಪ್ರಭುವು ಹಯಗ್ರೀವ (ಕುದುರೆ ಕತ್ತಿನ ಆಕಾರ) ನಾಗಿ ಹುಟ್ಟಿದನು.

೧೩-೧೬. ಆ ಹಯಗ್ರೀವಮೂರ್ತಿಯು ನೂರು ಚಂದ್ರರಂತೆ ಪ್ರಕಾಶಮಾನವಾಗಿಯೂ ನಾನಾಭರಣಗಳಿಂದ ಭೂಷಿತವಾಗಿಯೂ ಇತ್ತು. ಆ ಮೂರ್ತಿಯು ಇನ್ನೊಂದು ದೇಹವನ್ನು ಧರಿಸಿ ಪಾತಾಳಲೋಕವನ್ನು ಪ್ರವೇಶಿಸಿತು. ರಸಾತಲ

**ತೇನಾಶ್ವಶಿರಸಾ ಗತ್ವಾ ವೇದಾನಾದಾಯ ಶಾಶ್ವತಾನ್ ।**
**ಪಿತಾಮಹಾಯ ಪ್ರದದೌ ಭೂಯ ಏವ ಜಗದ್ಗುರುಃ ॥ ೧೪ ॥**

**ತತೋ ಹಯಶಿರೋಧಾರೀ ಗತೋಽನ್ತರ್ಧಾನ ಮೀಶ್ವರಃ ।**
**ಆಜಗ್ಮತುಸ್ತತೋ ದೇಶಂ ದಾನವೌ ಮಧುಕೈಟಭೌ ॥ ೧೫ ॥**

**ವಿಷ್ಣುಶ್ಚಕಾರ ದೇಹೌ ದ್ವೌ ವಿಷ್ಣುರ್ಜಿಷ್ಣುರಿತಿ ಸ್ಮೃತೌ ।**
**ಮಧುನಾ ಯುಯುಧೇ ಜಿಷ್ಣುರ್ವಿಷ್ಣುರ್ವೈ ಕೈಟಭೇನ ಚ ॥ ೧೬ ॥**

**ತತಸ್ತಯೋ ಸ್ಸುಯುದ್ಧೇನ ತುಷ್ಟೋ ದೇವೋ ಜನಾರ್ದನಃ ।**
**ಉವಾಚ ತೌ ಮಹಾಕಾಯೌ ದಾನವೌ ಮಧುಕೈಟಭೌ ॥ ೧೭ ॥**

**ವರಂ ವರಯತಾಂ ಶ್ರೇಷ್ಠಂ ಭವಂತಾವಪರಾಜಿತೌ ।**
**ತಾವಬ್ರೂತಾಂ ತತೋ ದೇವಂ ವಿಷ್ಣುಂ ಕಮಲಲೋಚನಂ ॥ ೧೮ ॥**

---

ವನ್ನು ಪ್ರವೇಶಿಸಿದಾಗ ಹಯಗ್ರೀವಮೂರ್ತಿಯು ಶಾಶ್ವತವಾದ ಚತುರ್ವೇದಗಳನ್ನು ತೆಗೆದುಕೊಂಡು ಮೇಲಕ್ಕೆ ಬಂದು ಬ್ರಹ್ಮನ ವಶಕ್ಕೆ ಕೊಟ್ಟಿತು. ಬಳಿಕ ಆ ಹಯಗ್ರೀವಮೂರ್ತಿಯು ನೋಡುನೋಡುತ್ತಿದ್ದಂತೆ ಕಣ್ಮರೆಯಾಯಿತು. ಆಗ ಮಧುಕೈಟಭರು ಆ ಸ್ಥಳಕ್ಕೆ ಬಂದರು. ರಾಕ್ಷಸರು ಬಂದದ್ದನ್ನು ನೋಡಿ ಮಹಾವಿಷ್ಣುವು ವಿಷ್ಣು ಜಿಷ್ಣುಗಳೆಂಬ ಹೆಸರಿನ ಎರಡು ದೇಹವನ್ನು ಧರಿಸಿದನು. ಜಿಷ್ಣುವು ಮಧುದೈತ್ಯನೊಡನೆಯೂ, ವಿಷ್ಣುವು ಕೈಟಭನೊಡನೆಯೂ, ಯುದ್ಧಕ್ಕೆ ಆರಂಭಿಸಿದರು.

೧೭-೨೧ ಯುದ್ಧನಿಪುಣರಾದ ಮಧುಕೈಟಭರ ಕೌಶಲವಂ ನೋಡಿ ಜನಾರ್ದನನು ಸಂತುಷ್ಟನಾಗಿ ನಿಮ್ಮ ಯುದ್ಧಕ್ಕೆ ಮೆಚ್ಚಿದೆನು ವರವನ್ನು ಕೇಳಿಕೊಳ್ಳಿರೆಂದು ಆ ಅಪರಾಜಿತ [ಗೆಲ್ಲಲು ಅಶಕ್ಯರಾದ ದಾನವ] ರನ್ನು ಕುರಿತು ಹೇಳಲು ಆ ಮಹಾವಿಷ್ಣುವನ್ನು ಕುರಿತು ಆ ಮಧುಕೈಟಭರು ಇಂತು ಹೇಳಿದರು:- ನವ ಗೆ ಮಹಾಬಲಶಾಲಿಯಾದ ಪುತ್ರನಾಗಬೇಕೆನ್ನಲು. ಹಾಗೆಯೇ ಆಗಲೆಂದು ಭಗವಂತನು ವರವನ್ನು ಕೊಟ್ಟನು. ಮಗನು [ಧುಂಧುವು] ಹುಟ್ಟಿದ ಬಳಿಕ ಆ ಮಧುಕೈಟಭರಿಬ್ಬರನ್ನೂ ಮಹಾವಿಷ್ಣುವು ವಿಷ್ಣು, ಜಿಷ್ಣುಗಳ ರೂಪದಿಂದ ಸಂಹರಿಸಿದನು. ಸಂಹೃತರಾದ ರಾಕ್ಷಸರೀರ್ವರೂ ದೇಹವನ್ನು ತ್ಯಾಗಮಾಡಿ ಜಲವನ್ನು ಪ್ರವೇಶಿಸಿದರು. ಆಗ ಅವರ

ಪುತ್ರೌಽಸ್ಮಾಕಂ ಭವದ್ದೇವ ಮಹಾಬಲಪರಾಕ್ರಮಃ ।
ಪುತ್ರೇ ಜಾತೇ ತು ಯೌ ತೌ ದ್ವೌ ವಿಷ್ಣುನಾ ಜಿಷ್ಣುನಾ ಪುರಾ ॥ ೧೯ ॥

ನಿಹತೌ ಚ ತದಾ ವೀರೌ ಹ್ಯುದಕಂ ಚ ಸಮಾಶ್ರಿತೌ ।
ಮೇದೌ ಮುಮುಚತುಸ್ತತ್ರ ವ್ಯಾಪ್ತಾ ಯೇನಾಽಭವನ್ಮಹೀ ॥ ೨೦ ॥

ಮೇದಿನೀಽತಿ ತತಃ ಖ್ಯಾತಾ ಲೋಕೇಽಸ್ಮಿಂಸ್ತತ್ವಚಿಂತಕೈಃ ।
ವರಾಹರೂಪೇಣ ತದಾ ಚೋದ್ಧೃತಾ ವಸುಧಾ ತತಃ ॥ ೨೧ ॥

ತೇನೈವ ದೇವದೇವೇನ ಪೂರ್ವಸ್ಥಾನೇ ನಿವೇಶಿತಾ ।
ಸರ್ಗಂ ಚಕ್ರೇ ತತೋ ಬ್ರಹ್ಮಾ ದೇವದೇವಸ್ಯ ಶಾಸನಾತ್ ॥ ೨೨ ॥

ಏವಂ ತದಾ ದೇವವರಸ್ಯ ಯುದ್ಧೇ
ನಿಪಾತಿತೌ ತೌ ಮಧುಕೈಟಭಾಖ್ಯೌ ।

---

ದೇಹದಿಂದ ಹೊರಟ ಮೇದಸ್ಸು [ಕೊಬ್ಬು] ಭೂಮಿಯಲ್ಲೆಲ್ಲಾ ವಿಸ್ತರಿಸಿಕೊಂಡಿತು. ಈ ಕಾರಣದಿಂದಲೇ ಭೂಮಿಗೆ ಮೇದಿನೀ ಎಂಬ ಹೆಸರುಂಟಾಯಿತೆಂದು ತತ್ವಶಾಸ್ತ್ರಜ್ಞರ ಹೇಳುವರು. ಆ ಕಾಲದಲ್ಲಿ ರಸಾತಲದಲ್ಲಿದ್ದ ಭೂಮಿಯು ವರಹಾವತಾರಮಾಡಿದ ಮಹಾವಿಷ್ಣುವಿನಿಂದ ಮೇಲಕ್ಕೆತ್ತಲ್ಪಟ್ಟಿತು.

೨೨-೨೩. ಈ ರೀತಿ ಯಜ್ಞವರಾಹಸ್ವಾಮಿಯಿಂದ ಭೂಮಿಯು ಉದ್ಧರಿಸಲ್ಪಟ್ಟು ಪೂರ್ವಸ್ಥಳದಲ್ಲಿ ಇರಿಸಲ್ಪಟ್ಟಿತು. ಅನಂತರದಲ್ಲಿ ಬ್ರಹ್ಮನು ಮಹಾವಿಷ್ಣುವಿನ ಅಪ್ಪಣೆಯಂತೆ ಸೃಷ್ಟಿಯನ್ನು ಮಾಡಲು ಆರಂಭಿಸಿದನು. ಈ ರೀತಿಯಾಗಿ ಮಹಾವಿಷ್ಣುವಿನೊಡನೆ ಯುದ್ಧಮಾಡಿ ಮಧುಕೈಟಭರು ಸಂಹೃತರಾಗಿ ಆ ಮಹಾವಿಷ್ಣುವಿನ ಲೋಕವಾದ ವೈಕುಂಠದಲ್ಲಿ ಪ್ರವೇಶಿಸಿ ಆ ಮಹಾಪುರುಷನ ಸಾನ್ನಿಧ್ಯವನ್ನೇ ಸೇರಿದರು.

**ದೇವಸ್ಯ ವಿಷ್ಣೋಸ್ಸದನಂ ಪ್ರಯಾತೌ**
**ಕ್ಷೀರಾರ್ಣವೇ ತಸ್ಯ ಸಮೀಪಗೌ ಚ** ॥ ೨೩ ॥

**ಇತಿ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ**
**ಪಂಚದಶೋಽಧ್ಯಾಯಃ**

---

ಈಗಲೂ ಕ್ಷೀರಸಮುದ್ರದಲ್ಲಿ ಮಲಗಿರುವ ಮಹಾವಿಷ್ಣುವಿನ ಬಳಿಯಲ್ಲಿ ಮಧುಕೈಟಭರು ಸ್ಥಿರವಾಗಿದಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಮಧುಕೈಟಭವಧೋಪಾಖ್ಯಾನವೆಂಬ ಹೆಸರಿನ ಹದಿನೈದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

## ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
### ಷೋಡಶೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

**ಭಾರತಸ್ಯಾಸ್ಯ ವರ್ಷಸ್ಯ ಭಾಗೇಸ್ಮಿನ್ನವಮೇ ನೃಪ ।**
**ಸಮುದ್ರೋ ವಾಲುಕಾಪೂರ್ಣ ಉಜ್ಜಾಲಕ ಇತಿ ಶ್ರುತಿಃ ॥ ೧ ॥**

**ತಸ್ಯ ಮಧ್ಯೇ ಸಮುದ್ರಸ್ಯ ಧುಂಧುಪ್ರಸ್ಥಪತೇಸ್ಸದಾ ।**
**ಸಂವತ್ಸರಸ್ಯ ಸೋಂತೇ ತು ಮಹೋಚ್ಛ್ವಾಸಂ ಪ್ರಮುಂಚತಿ ॥ ೨ ॥**

**ಯದಾ ತದಾ ಭೂಃ ಸ್ಖಲತಿ ಸಶೈಲವನಕಾನನಾ ।**
**ಪ್ರಾಣಿನೋ ಯೇಽಲ್ಪಸತ್ವಾಶ್ಚ ತೇ ಯಾಂತಿ ಯಮಸಾದನಂ ॥ ೩ ॥**

---

### ಹದಿನಾರನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳುವನು- ಈ ಭಾರತವರ್ಷದ ಒಂಭತ್ತನೇಭಾಗದಲ್ಲಿ ಸಮುದ್ರವು ಮರಳಿನಿಂದ ತುಂಬಿಹೋಗಿ ಉಜ್ಜಾಲಕವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆಯೆಂದು ವೇದದಲ್ಲಿ ಹೇಳಲ್ಪಟ್ಟಿದೆ.

೨. ಆ ಮರಳಿನ ಸಮುದ್ರಮಧ್ಯದಲ್ಲಿ ಮಧುಕೈಟಭಪುತ್ರನಾದ ಧುಂಧು ರಾಕ್ಷಸನ ವಿಸ್ತಾರವಾದ ತಪ್ಪಲಿದೆ. ಆ ಸ್ಥಳದಲ್ಲಿ ಆ ಧುಂಧುವು ವರ್ಷದ ಕೊನೆಯಲ್ಲಿ ದೊಡ್ಡದಾಗಿ ಒಂದಾವರ್ತಿ ಉಸಿರೆಳೆಯುತ್ತಾನೆ.

೩. ಹಾಗೆ ಉಸಿರೆಳೆದಾಗ ಬೆಟ್ಟಕಾಡುಗಳಿಂದ ಕೂಡಿದ ಭೂ ಪ್ರದೇಶವೆಲ್ಲವೂ ಸ್ವಲ್ಪ ಜರುಗುತ್ತದೆ. ಆ ಕಾಲದಲ್ಲಿ ಅಲ್ಪಸತ್ವವಾದ ಪ್ರಾಣಿಗಳೆಲ್ಲವೂ ನಾಶವಾಗಿ ಹೋಗುತ್ತವೆ.

**ಯದಾ ವಿಬುದ್ಧೋ ಭವತಿ ಕಿಂಚಿಚ್ಛೇಷಾ ಮಹೀ ತದಾ ।**
**ಆಹಾರಾರ್ಥಂ ಕರೋತ್ಯುಗ್ರಃ ಪಾಪಾತ್ಮಾ ಜಲರಾಕ್ಷಸಃ ॥ ೪ ॥**

**ಏತಸ್ಮಿನ್ನೇವ ಕಾಲೇ ತು ಚೋತ್ತುಂಕಸ್ತಪ್ಯತೇ ತಪಃ ।**
**ತಪಸೋಂತೇ ಮಹಾತ್ಮಾನಂ ದದರ್ಶ ಮಧುಸೂದನಂ ॥ ೫ ॥**

**ತಮುವಾಚಾ ಹರ್ಷದೇವೋ ವರಂ ವರಯ ಭಾರ್ಗವ ।**
**ಉತ್ತುಂಕಃ ಪ್ರಾಂಜಲಿರ್ಭೂತ್ವಾ ತುಷ್ಟಾವ ಮಧುಸೂದನಂ ॥ ೬ ॥**

**ಉವಾಚ ವರದಂ ದೇವಂ ಏಷ ಏವ ವರೋ ಮಮ ।**
**ಯದಹಂ ದೇವದೇವಸ್ಯ ದೃಷ್ಟವಾಂಶ್ಚರಣಾಂಬುಜೌ ॥ ೭ ॥**

**॥ ಶ್ರೀ ಭಗವಾನುವಾಚ ॥**

**ಅವಶ್ಯಂ ತೇ ವರೋ ದೇಯೋ ಮಯಾ ಭೃಗುಕುಲೋದ್ವಹ ।**
**ಅಜರಶ್ಚಾಮರಶ್ಚೈವಮತ್ಪ್ರಸಾದ್ಭವಿಷ್ಯಸಿ ॥ ೮ ॥**

---

೪. ಆ ಜಲರಾಕ್ಷಸನು ಯಾವಾಗ ಎಚ್ಚರವಾಗಿರುತ್ತಾನೋ ಆಗ ಭೂಮಿಯು ಸ್ವಲ್ಪಭಾಗ ಉಳಿದಿರುತ್ತದೆ. ಆಗ ಪಾಪಾತ್ಮನಾದ ಕ್ರೂರರಕ್ಕಸನು ಆಹಾರಾರ್ಥವಾಗಿ ಆ ಭೂಮಿಯನ್ನೇ ಕಬಳಿಸಲು ಪ್ರಯತ್ನಪಡುತ್ತಾನೆ.

೫. ಈ ಮಧ್ಯಕಾಲದಲ್ಲಿಯೇ ಉತ್ತುಂಕಋಷಿಯು ತಪಸ್ಸುಮಾಡುತ್ತಿದ್ದು ಆ ತಪೋವಸಾನದಲ್ಲಿ ಮಧುಸೂದನನಾದ ಮಹಾವಿಷ್ಣುವನ್ನು ಸಂದರ್ಶಿಸಿದನು.

೬. ಉತ್ತುಂಕನ ತಪಸ್ಸಿಗೆ ಮೆಚ್ಚಿ ಮಧುಸೂದನನು ಎಲೈ! ಉತ್ತುಂಕನೇ, ನಿನಗೆ ಬೇಕಾದ ವರವನ್ನು ಕೇಳಿಕೋ, ಎನಲು ಉತ್ತುಂಕನು ಕೈಮುಗಿದುಕೊಂಡು ಆ ಮಧುಸೂದನನನ್ನು ಸ್ತೋತ್ರಮಾಡಿದನು.

೭. ಬಳಿಕ ಆ ಭೃಗುಪುತ್ರನಾದ ಉತ್ತುಂಕನು ಪರಮಾತ್ಮನನ್ನು ಕುರಿತು, ದೇವದೇವೋತ್ತಮನಾದ ಮಹಾಪ್ರಭುವಿನ ಚರಣಕಮಲಗಳನ್ನು ಸಂದರ್ಶಿಸಿದುದೇ ನನಗೆ ವರಪ್ರದಾನವಾಯಿತೆಂದು ಹೇಳಿದನು.

೮. ಮಹಾವಿಷ್ಣುವು ಹೇಳಿದನು--ಎಲೈ! ಉತ್ತುಂಕನೇ, ನೀನು ಕೇಳದಿದ್ದರೂ ನಾನು ನಿನಗೆ ವರವನ್ನು ಕೊಟ್ಟೇ ಕೊಡುತ್ತೇನೆ. ನೀನು ನನ್ನ ಅನುಗ್ರಹರೂಪ ಪ್ರಸಾದದಿಂದ ಮುಪ್ಪು, ಸಾವುಗಳಿಲ್ಲದೆ ದೇವತ್ವವನ್ನು ಧರಿಸಿ ಸುಖವಾಗಿರು.

ಯತ್ರೇಚ್ಛಸಿ ಜಲಂ ತತ್ರ ಭವಿಷ್ಯತಿ ತಥಾ ತವ ।
ದೇವತಾನಾಂ ಮಹತ್ಕಾರ್ಯಂ ತಥೈವ ಚ ಕರಿಷ್ಯಸಿ ॥ ೯ ॥

ಆಶ್ರಮಸ್ಯಾಸ್ಯ ತೇ ಬಾಧಾಂ ಯಃ ಕರೋತಿ ಸದಾನಘ ।
ಕುವಲಾಶ್ವೇನ ತಂ ಗತ್ವಾ ಧುಂಧುಂ ಘಾತಯ ಮಾಚಿರಂ ॥ ೧೦ ॥

ಅಹಂ ಚಾಸ್ಯ ಪ್ರವೇಕ್ಷ್ಯಾಮಿ ಕುವಲಾಶ್ವಸ್ಯ ವಿಗ್ರಹಂ ।
ತೇಜಸಾ ಸ ಮದೀಯೇನ ಧುಂಧುಮಾಜೌ ಹನಿಷ್ಯತಿ ॥ ೧೧ ॥

ನ ಹ್ಯಲ್ಪತೇಜಸಾ ಹಂತುಂ ಧುಂಧಂಶಕ್ಯೋ ಭೃಗೂತ್ತಮ ।

॥ ಮಾರ್ಕಂಡೇಯ ಉವಾಚ ॥

ಏತಾವದುಕ್ತ್ವಾ ಭಗವಾನ್ ಗತೋಂಧರ್ಾನಮೀಶ್ವರಃ ॥ ೧೨ ॥

ಜಗಾಮ ಚ ತಥಾಽಯೋಧ್ಯಾಮುತ್ತಂಕೋಽಪಿ ಮಹಾತಪಾಃ ।
ಪೂಜಿತೋ ಬೃಹದಶ್ವೇನ ಬೃಹದಶ್ವಮಭಾಷತ ॥ ೧೩ ॥

---

೯. ಎಲೈ ಋಷಿಯೇ, ನೀನು ಕೋರಿದ ಕಡೆಯಲ್ಲಿ ಜಲವು ತಾನೇ ಉಕ್ಕಿ ಬರುತ್ತದೆ. ನೀನು ದೇವತೆಗಳಿಗೋಸ್ಕರ ಮಹತ್ತಾದ ಉಪಕಾರವನ್ನು ಸಹ ಮಾಡುತ್ತೀಯೆ.

೧೦. ಈ ನಿನ್ನ ಆಶ್ರಮಕ್ಕೆ ಯಾವನಾದರೂ ಏನಾದರೂ ತೊಂದರೆಯನ್ನುಂಟು ಮಾಡುವನಾದರೆ ಆ ಕೂಡಲೆ ಕುವಲಾಶ್ವರಾಜನೊಡನೆ ಸಹಾಯಪಡೆದು ಹೊರಟು ನೀನು ಆ ಧುಂಧುವನ್ನು ಸಂಹಾರಮಾಡಿಸು.

೧೧. ನಾನು ಆ ಸಮಯದಲ್ಲಿ ನನ್ನ ತೇಜಸ್ಸಿನಿಂದ ಕುವಲಾಶ್ವನ ದೇಹವನ್ನು ಪ್ರವೇಶಿಸಿ ಪೂರ್ಣಪರಾಕ್ರಮವನ್ನು ಅವನಿಗೆ ಕೊಡುತ್ತೇನೆ. ಆಗ ಕುವಲಾಶ್ವನು ಧುಂಧುವನ್ನು ಯುದ್ಧದಲ್ಲಿ ಸಂಹರಿಸಿ ವಿಜಯವನ್ನು ಪಡೆಯುತ್ತಾನೆ.

೧೨. ಮಾರ್ಕಂಡೇಯನು ಹೇಳುತ್ತಾನೆ—ಸ್ವಲ್ಪ ತೇಜಸ್ಸಿನಿಂದ ಧುಂಧುವನ್ನು ಸಂಹರಿಸಲಾಗುವುದಿಲ್ಲ. ಇಷ್ಟು ಮಾತನ್ನು ಹೇಳಿ ಪರಮಾತ್ಮನು ಅಂತರ್ಧಾನನಾದನು.

೧೩. ಬಳಿಕ ಮಹಾತಪಸ್ವಿಯಾದ ಉತ್ತಂಕನು ಅಯೋಧ್ಯಾಪಟ್ಟಣಕ್ಕೆ ಹೋದನು. ಅಲ್ಲಿ ಬೃಹದಶ್ವರಾಜನಿಂದ ಪೂಜಿತನಾಗಿ ಆ ರಾಜನನ್ನು ಕುರಿತಿಂತೆಂದನು.

॥ ಉತ್ತಂಕ ಉವಾಚ ॥

ಕಥಂ ನಿದ್ರಾಸಿ ರಾಜೇಂದ್ರ ಸುಖಂ ಪರ್ಯಂಕಮಾಸ್ಥಿತಃ ।
ಧುಂಧೋಶ್ಚರಿತಮಾಲೋಕ್ಯ ಬದ್ಧಕಕ್ಷೋ ಭವಾಧುನಾ ॥ ೧೪ ॥

ವಚನಾನ್ಮಮ ರಾಜೇಂದ್ರ ಧುಂಧುಂ ಹಂತಿ ತವಾಸ್ತಿ ಭೋಃ ।
ಶಕ್ತಿಃ ಕಿಮುದ್ಯಮಾದ್ರಾಜ್ಞಾ ದುಷ್ಕರಂ ತೇ ಪುನಃ ಕಥಂ ॥ ೧೫ ॥

ಜಹಿ ಧುಂಧುಂ ಮಹಾಕಾಯಂ ನೃಪತೇ ದ್ವಿಜಬಾಧಕಂ ।
ಶ್ರುತ್ವಾ ಮುನಿವಚೋ ರಾಜಾ ಕುವಲಾಶ್ವಮಭಾಷತ ॥ ೧೬ ॥

ಅಹಂ ವನಪ್ರವೃತ್ತಸ್ತು ತ್ಯಕ್ತದಂಡಸ್ತಥೈವ ಚ ।
ಜಹಿ ತಂ ದಾನವಶ್ರೇಷ್ಠಂ ತ್ವಮುತ್ತಂಕೇನ ಪಾಲಿತಃ ॥ ೧೭ ॥

ಏವಮುಕ್ತಃ ಪರಿಷ್ವಕ್ತಃ ಪಿತ್ರಾ ಪ್ರಕೃತಿವತ್ಸಲಃ ।
ಉತ್ತಂಕಸಹಿತೋ ಗತ್ವಾ ಯುದ್ಧಾಯೋದಕರಾಕ್ಷಸಂ ॥ ೧೮ ॥

---

೧೪. ಉತ್ತಂಕನು ಹೇಳುತ್ತಾನೆ—ಏನಯ್ಯ ಮಹಾರಾಜ, ಧುಂಧುವಿನ ಚರಿತ್ರೆಯನ್ನು ನೋಡಿಯೂ ನೀನು ಸುಖವಾಗಿ ಮಂಚದ ಮೇಲೆ ಮಲಗಿಕೊಂಡು ನಿದ್ದೆಮಾಡುತ್ತಿರುವೆಯಲ್ಲ! ಇದು ಸರಿಯಲ್ಲ. ಹೊರಡು ಸೊಂಟಕಟ್ಟಿ ಯುದ್ಧಕ್ಕೆ ನಡಿ.

೧೫-೧೬. ಎಲೈ ದೊರೆಯೇ, ನನ್ನ ಮಾತನ್ನು ನಂಬಿ ಯುದ್ಧಮಾಡು. ಧುಂಧುವನ್ನು ಸಂಹರಿಸಲು ನಿನಗೆ ಶಕ್ತಿಯಿದೆ. ಪ್ರಯತ್ನಕ್ಕಿಂತ ಬೇರೆ ಕೆಲಸ ರಾಜರಿಗೇನಿದೆ? ಎಲೈ! ರಾಜನೇ, ಬ್ರಾಹ್ಮಣರನ್ನು ಹಿಂಸಿಸುತ್ತಿರುವ ಆ ಮಹಾಕಾಯನಾದ ಅಸುರನನ್ನು ಸಂಹರಿಸು. ಹೀಗೆನ್ನಲು ಆ ಋಷಿಯ ಮಾತನ್ನು ಕೇಳಿ ಬೃಹದಶ್ವರಾಜನು ತನ್ನ ಮಗನಾದ ಕುವಲಾಶ್ವನನ್ನು ಕುರಿತು ಹೇಳಿದುದೇನೆಂದರೆ:-

೧೭. ಎಲೈ ಮಗನೇ! ಕೇಳು ನಾನು ವಾನಪ್ರಸ್ಥಾಶ್ರಮವನ್ನು ಧರಿಸಿ ತ್ಯಕ್ತದಂಡ (ಯುದ್ಧವನ್ನು ಬಿಟ್ಟವ) ನಾಗಿದೇನೆ. ನೀನು ಉತ್ತಂಕನಿಂದ ಪಾಲಿಸಲ್ಪಟ್ಟವನಾಗಿ ಯುದ್ಧಕ್ಕೆ ಹೋಗಿ, ಆ ರಾಕ್ಷಸರಾಜನನ್ನು ಸಂಹರಿಸಿ ಬಾ.

೧೮-೧೯. ತಂದೆಯಿಂದಾಜ್ಞಪ್ತನಾದಾ ಕುವಲಾಶ್ವನು ತಂದೆಯಿಂದಾಲಿಂಗಿತನಾಗಿ ಉತ್ತಂಕಸಹಿತನಾಗಿ ರಣರಂಗಕ್ಕೆ ಹೊರಟು ಧುಂಧುವಿನೊಡನೆ ಯುದ್ಧಮಾಡಿ

ಯುಯುಧೇ ತಂ ಚ ಧರ್ಮಾತ್ಮಾ ಧುಂಧುಂ ತೇನೈವ ಕೇಶವಃ ।
ಉತ್ತಂಕಾನುಮತೇ ಪಶ್ಚಾದ್ಬ್ರಹ್ಮಾಸ್ತ್ರೇಣ ಜಘಾನ ತಂ　　॥ ೧೯ ॥
ಹತ್ವಾ ತಂ ರಾಕ್ಷಸಂ ಲೇಭೇ ತ್ರಿದಶೇಭ್ಯಸ್ತದಾ ವರಾನ್ ।
ಕೃಷ್ಣೇ ಭಕ್ತಿಂ ಸ್ಥಿತಿಂ ಧರ್ಮೇ ವಾಸಂ ಸ್ವರ್ಗೇ ತಥಾಽಕ್ಷಯಂ　　॥ ೨೦ ॥
ಮಧುಕೈಟಭಯೋಃ ಪುತ್ರಂ ಘಾತಯಿತ್ವಾ ನರಾಧಿಪ ।
ಧುಂಧುಮಾರತ್ವಮಗಮದಶೋಭತ ತಥಾ ಪುರೀಂ　　॥ ೨೧ ॥

ತಸ್ಮಿನ್ ಹತೇ ದೈತ್ಯವರೇ ಪ್ರಸನ್ನಾ
ದಿಶೋ ಬಭೂವುರ್ಮುದಿತಾಶ್ಚ ದೇವಾಃ ।
ವಿನಷ್ಟವಿಘ್ನಂ ಚ ಜಗತ್ತದಾಸ
ರಾಜಾ ಚ ಕೀರ್ತಿಂ ಪರಮಾಮವಾಪ　　॥ ೨೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಧುಂಧುಮಾರೋಪಾಖ್ಯಾನಂ ನಾಮ ಷೋಡಶೋಧ್ಯಾಯಃ

---

ದನು. ಧರ್ಮಾತ್ಮನಾದ ಕೇಶವನಾಮಕ ಪರಮಾತ್ಮನು ಆ ರಾಜನಲ್ಲಿ ಪ್ರವೇಶಿಸಿ ಬ್ರಹ್ಮಾಸ್ತ್ರದಿಂದ ಆ ರಾಜನಿಂದಲೇ ಧುಂಧುವನ್ನು ಉತ್ತಂಕನ ಅಪ್ಪಣೆ ಪಡೆದು ಸಂಹಾರಮಾಡಿಸಿದನು.

೨೦. ಆ ರಾಕ್ಷಸನನ್ನು ಸಂಹರಿಸಿದ್ದನ್ನು ನೋಡಿ ದೇವತೆಗಳು ಕುವಲಾಶ್ವನಿಗೆ ವರವನ್ನು ಕೊಟ್ಟರು. ಕೃಷ್ಣಪರಮಾತ್ಮನಲ್ಲಿ ಸರ್ವದಾ ಭಕ್ತಿಯೂ, ಧರ್ಮರಕ್ಷಣೆಯಲ್ಲೇ ಸರ್ವದಾ ಪ್ರವೃತ್ತಿಯೂ, ಸ್ವರ್ಗದಲ್ಲಿ ಅಕ್ಷಯವಾದ ವಾಸವೂ, ಆ ವರದಾನದ ಮುಖ್ಯಾಶಯವಾಗಿದ್ದಿತು.

೨೧. ಈ ರೀತಿ ಕುವಲಾಶ್ವನು ಮಧುಕೈಟಭರ ವರಪುತ್ರನಾದ ಧುಂಧುವನ್ನು ಸಂಹರಿಸಿ ಅಂದಿನಿಂದ ಧುಂಧುಮಾರನೆಂಬ ಹೆಸರನ್ನು ಸಂಪಾದಿಸಿ ಊರಿನಲ್ಲಿ ಸುಖವಾಗಿದ್ದನು

೨೨. ಆ ರಾಕ್ಷಸನು ಹತನಾದ ಮೇಲೆ ಸಕಲ ದಿಕ್ಕುಗಳಲ್ಲೂ ಶಾಂತಿಯು ನೆಲೆಸಿತು. ದೇವತೆಗಳು ಸಂತೋಷಪಟ್ಟರು. ಲೋಕವು ವಿಘ್ನದಿಂದ ಬಿಡುಗಡೆಯಾಯಿತು. ಆ ಕುವಲಾಶ್ವರಾಜನು ಮಹತ್ತಾದ ಯಶಸ್ಸನ್ನು ಹೊಂದಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಧುಂಧುಮಾರೋಪಾಖ್ಯಾನವೆಂಬ ಹೆಸರಿನ ಹದಿನಾರನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

---

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಸಪ್ತದಶೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ಧುಂಧುಮಾರಾದ್ದೃಢಾಶ್ವಸ್ತು ಹರ್ಯಶ್ವಸ್ತಸ್ಯ ಚಾತ್ಮಜಃ ।
ನಿಕುಂಭಸ್ತಸ್ಯ ತನಯಃ ಸುಹಿತಶ್ಚ ತದಾತ್ಮಜಃ ॥ ೧ ॥

ಭೃಶಾಶ್ವಸ್ತನಯಸ್ತಸ್ಯ ಮಾಂಧಾತಾ ತಸ್ಯ ಚಾತ್ಮಜಃ ।
ದೈವೇನ ವಿಧಿನಾ ರಾಜಾ ಜಾತಸ್ತಸ್ಯೈವ ಚೋದರಾತ್ ॥ ೨ ॥

ಪುರುಕುತ್ಸಸ್ಸುತಸ್ತಸ್ಯ ತ್ರಸದಸ್ಯುಸ್ತದಾತ್ಮಜಃ ।
ಶಂಭುಸ್ತಸ್ಯಾತ್ಮಜಶ್ಶ್ರೀಮಾನನರಣ್ಯೇತಿ ವಿಶ್ರುತಃ ॥ ೩ ॥

---

## ಹದಿನೇಳನೆಯ ಅಧ್ಯಾಯವು

೧-೯. ಮಾರ್ಕಂಡೇಯನು ಹೇಳುತ್ತಾನೆ:- ಎಲೈ ! ವಜ್ರರಾಜನೇ ! ಇಕ್ಷ್ವಾಕುವಂಶೋತ್ಪನ್ನರಾದ ಮುಂದಿನ ರಾಜರುಗಳ ಹೆಸರುಗಳನ್ನು ಹೇಳುತ್ತೇನೆ ಕೇಳು:- ಧುಂಧುಮಾರನ ಮಗ ದೃಢಾಶ್ವ, ದೃಢಾಶ್ವನ ಮಗ ಹರ್ಯಶ್ವ, ಅವನ ಮಗ ನಿಕುಂಭ, ನಿಕುಂಭನ ಮಗ ಸುಹಿತ, ಅವನ ಮಗ ಭೃಶಾಶ್ವ, ಅವನ ಮಗ ಮಾಂಧಾತಾ. ಈ ಮಾಂಧಾತನು ದೈವೇಚ್ಛೆಯಿಂದ ತಂದೆಯ ಹೊಟ್ಟೆಯಲ್ಲಿಯೇ ಹುಟ್ಟಿದನು. ಈ ಗ್ರಂಥದ ೧೭೦ ನೆಯ ಅಧ್ಯಾಯವನ್ನೋದಿರಿ. ಈ ಕಥೆಯು ಅದರಲ್ಲಿದೆ. ಮಾಂಧಾತನ ಮಗ ಪುರುಕುತ್ಸ, ಈತನ ಮಗ ತ್ರಸದ್ದಸ್ಯು, ಆತನ ಮಗ ಶಂಭು, ಶಂಭುವಿನ ಮಗನೇ ಅನರಣ್ಯ, ತ್ರಿಲೋಕವಿಜಯಿಯಾದ ಅನರಣ್ಯನು ಪೂರ್ವದಲ್ಲಿ, ರಾವಣನಿಂದ ಸಂಹರಿಸಲ್ಪಟ್ಟನು. ಅನರಣ್ಯನ ಮಗ ದೃಷದಶ್ವ, ಅವನ ಮಗ ವಸು

ರಾವಣೇನ ಹತೋ ಯೋಽಸೌ ತ್ರಿಲೋಕವಿಜಯೀಪುರಾ ।
ದೃಷದಶ್ವಸ್ಸುತಸ್ತಸ್ಯ ತಸ್ಮಾದ್ವಸುಮನಾ ನೃಪಃ ॥ ೪ ॥

ತಸ್ಯ ಪುತ್ರಸ್ತ್ರಿಧನ್ವಾಖ್ಯಸ್ತಸ್ಮಾತ್ತ್ರಯ್ಯಾರಣಿಸ್ಸ್ಮೃತಃ ।
ತಸ್ಯ ಸತ್ಯವ್ರತಃ ಪುತ್ರ ಸ್ತ್ರಿಶಂಕುಂ ಯಂ ಪ್ರಚಕ್ಷತೇ ॥ ೫ ॥

ಹರಿಶ್ಚಂದ್ರಸ್ಸುತಸ್ತಸ್ಯ ರೋಹಿತಾಶ್ವಸ್ತದಾತ್ಮಜಃ ।
ಹರಿತಸ್ತತ್ಸುತೋ ರಾಜಾ ಚಂಚುಹಾರೀತ ಉಚ್ಯತೇ ॥ ೬ ॥

ವಿಜಯಸ್ತಸ್ಯ ತನಯಶ್ಚಾಲರ್ಕಸ್ತಸ್ಯ ಚಾತ್ಮಜಃ ।
ಅಲರ್ಕಸ್ಯ ವೃಕಃ ಪುತ್ರಸ್ತಸ್ಮಾದ್ಬಾಹುಸ್ತು ಜಜ್ಞಿವಾನ್ ॥ ೭ ॥

ಪಾನಸ್ತ್ರೀವ್ಮೃಗಯಾಕ್ಷೇಷು ಸ ಬಹುವ್ಯಸನಾನ್ವಿತಃ ।
ವ್ಯಸನೇ ತಸ್ಯ ಸಕ್ತಸ್ಯ ನರೇಂದ್ರಸ್ಯಾರಿಭಿಸ್ತದಾ ॥ ೮ ॥

ಹೈಹಯೈಸ್ತಾಳಜಂಘೈಶ್ಚ ಸರ್ವಮ್ಲೇಚ್ಛಗಣಾವೃತೈಃ ।
ಛಲೇನಾಪಹೃತಂ ರಾಜ್ಯಂ ಹೃತರಾಜ್ಯೋ ವನಂ ಗತಃ ॥ ೯ ॥

---

ಪಾನ, ಅವನ ಮಗ ಸ್ತ್ರಿಧನ್ವ, ಅವನ ಮಗ ತ್ರಯ್ಯಾರಣಿಯೆಂದು ತಿಳಿದುಕೋ. ಅವನ ಮಗ ಸತ್ಯವ್ರತ. ಸತ್ಯವ್ರತನಮಗನಾದ ತ್ರಿಶಂಕುವು ಬಹು ಪ್ರಸಿದ್ಧನಾದ ಮಹಾರಾಜನು. ತ್ರಿಶಂಕುವಿನ ಮಗ ಸತ್ಯಹರಿಶ್ಚಂದ್ರ, ಈ ಧರ್ಮಾತ್ಮನ ಮಗನೇ ರೋಹಿತಾಶ್ವ, ಈತನ ಮಗ ಹರಿತ, ಈತನ ಮಗ ಚಂಚುಹಾರೀತ, ಈತನ ಮಗ ವಿಜಯ, ವಿಜಯನ ಮಗನೇ ಅಳರ್ಕ, ಈತನ ಮಗ ವೃಕ, ವೃಕನ ಮಗ ಬಾಹು, ಈ ಬಾಹು ರಾಜನು ಹಿಂದಿನವರ ಮೇಲ್ಪಂಕ್ತಿಯನ್ನು ಬಿಟ್ಟು ದುಷ್ಟರೊಡನೆ ಸೇರಿ, ಕುಡಿತ, ವ್ಯಭಿಚಾರ, ಜೂಜು, ಬೇಟೆಗಳಿಂದಲೂ ದುರ್ವಿಷಯಗಳಿಂದಲೂ, ಕೂಡಿದುದರಿಂದ ಈತನ ವೃತ್ತಾಂತವನ್ನು ತಿಳಿದ ಶತ್ರುರಾಜರಾದ ಹೈಹಯ, ತಾಳಜಂಘ, ಮುಂತಾದ ಮ್ಲೇಚ್ಛ ರಾಜರು ಇವನ ರಾಜ್ಯದ ಮೇಲೆ ಬಿದ್ದು ಹಠದಿಂದ ರಾಜ್ಯವನ್ನು ಅಪಹರಿಸಿದುದರಿಂದ ಈ ಬಾಹುವು ದಿಕ್ಕುತೋರದೆ ಕಾಡಿಗೆ ಕಾಲುನಡಿಗೆಯಿಂದಲೇ ಹೊರಡಬೇಕಾಗಿ ಬಂತು.

ಪದ್ಭ್ಯಾಮನುಯಯೌ ತಸ್ಯ ವನಂ ಭಾರ್ಯಾ ಗುಣಾನ್ವಿತಾ ।
ಗುರ್ವಿಣೀ ಪ್ರಾಗ್ದದೌ ಯಸ್ಯಾಃ ಸಪತ್ನೀ ತು ಗರಂ ಕಿಲ ॥ ೧೦ ॥

ತತಸ್ಸಾ ಸಗರಂ ಪುತ್ರಂ ಸುಷಾವ ವನಗಾ ಶುಭಾ ।
ಜಾತಪುತ್ರೋ ನರಪತಿಃ ಸಂಯುಕ್ತಃ ಕಾಲಕರ್ಮಣಾ ॥ ೧೧ ॥

ಅನ್ವಾರುರೋಹ ತಂ ರಾಜ್ಞೀ ಯಾದವೀ ಧರ್ಮವತ್ಸಲಾ ।
ಸಂಸ್ಕೃತಸ್ಸರ್ವಸಂಸ್ಕಾರೈಸ್ಸಗರಶ್ಚ್ಯವನೇನ ಚ ॥ ೧೨ ॥

ಶಾಸ್ತ್ರಗ್ರಾಮೇ ಧನುರ್ವೇದೇ ನೀತಃ ಪಾರಂ ತಥಾಪರಂ ।
ಸ ಯೌವನ ಮನುಪ್ರಾಪ್ಯ ಏಕ ಏವ ನರಾಧಿಪಃ ॥ ೧೩ ॥

ಪದಾತಿರ್ಬದ್ಧನಿಸ್ತ್ರಿಂಶಃ ಚ್ಯವನಸ್ಯ ಪ್ರಸಾದತಃ ।
ಹೈಹಯಾಂಸ್ತಾಲ ಜಂಘಾಂಶ್ಚ ನಿಜಘಾನ ಪರಂತಪಃ ॥ ೧೪ ॥

---

೧೦-೧೨. ಯಾವಾಗ ಬಾಹುರಾಜನು ಕಾಡಿಗೆ ಹೊರಟನೋ ಯಾದವಿಯೆಂಬ ಆತನ ಧರ್ಮಪತ್ನಿಯು ತಾನೂ ಗಂಡನನ್ನು ಅನುಸರಿಸಿ ಕಾಲುನಡಿಗೆಯಿಂದ ವನಕ್ಕೆ ಪ್ರಯಾಣಮಾಡಿದಳು. ಈಕೆಯು ಕಾಡಿಗೆ ಹೊರಟಾಗ ಗರ್ಭಿಣಿಯಾಗಿದ್ದಳು. ಇವಳು ಗರ್ಭಿಣಿಯಾಗಿರುವುದನ್ನು ತಿಳಿದ ಸವತಿಯೊಬ್ಬಳು ಅಸೂಯೆಯಿಂದ ಈಕೆಗೆ ಆಹಾರಪದಾರ್ಥದಲ್ಲಿ ವಿಷವನ್ನು ಬೆರಸಿ ಕೊಟ್ಟುಬಿಟ್ಟಳು. ಈ ವಿಷದಿಂದ ಆ ಮಹಾ ಪತಿವ್ರತೆಯು ಸಾಯಲಿಲ್ಲ. ನವಮಾಸಪೂರ್ತಿಯಾದ ಮೇಲೆ ವಿಷಸಹಿತನಾದ ಮಗನನ್ನು ಪ್ರಸುವಿಸಿದಳು. ವಿಷದೊಡನೆ ಹುಟ್ಟಿದ ಮಗನಿಗೆ ಬಾಹುವು ಸಗರ (ವಿಷದಿಂದ ಕೂಡಿದವ) ನೆಂದೇ ನಾಮಕರಣಮಾಡಿದನು. ಕಾಲಕರ್ಮಸಂಯೋಗದಿಂದ ಸಗರನು ಹುಟ್ಟಿದೊಡನೆಯೇ ಬಾಹುರಾಜನು ಮೃತನಾಗಲು ಧರ್ಮವಲತ್ಸಳಾದ ಯಾದವಿಯು ಮಗನಾದ ಸಗರನೊಡನೆ ಚ್ಯವನನ ಆಶ್ರಮವನ್ನು ಸೇರಿದಳು. ಆಗ ಚ್ಯವನ ಋಷಿಯು ಸಗರನಿಗೆ ಜಾತಕರ್ಮಾದಿ ಸಕಲ ಸಂಸ್ಕಾರಗಳನ್ನೂ ಮಾಡಿಸಿದನು.

೧೩-೧೪. ಚ್ಯವನಮಹರ್ಷಿಯು ಸಗರನಿಗೆ ಬಾಲ್ಯದಿಂದಲೂ ತಾನೇ ವಿದ್ಯಾಭ್ಯಾಸಮಾಡಿಸುತ್ತಾ ವಯಸ್ಸಿಗೆ ಬರುವ ತನಕ ಸಕಲ ಶಾಸ್ತ್ರಗಳನ್ನೂ, ಧನುರ್ವೇದವನ್ನೂ, ಹೇಳಿಕೊಟ್ಟು ಸಗರನನ್ನು ಪೂರ್ಣವಿದ್ಯಾವಂತನನ್ನಾಗಿ ಮಾಡಿದನು.

**ತತಸ್ತ್ವಯೋಧ್ಯಾಂ ಸಂಪ್ರಾಪ್ಯ ಲೇಭೇರಾಜ್ಯಮಕಂಟಕಂ ।**
**ಸಗರೋ ರಾಜ್ಯಮಾಸಾದ್ಯ ಬಲೇನ ಚತುರಂಗಿಣಾ ॥ ೧೫ ॥**

**ವಿಜಿತ್ಯ ಸಕಲಾನ್ಮ್ಲೇಚ್ಛಾನ್ ವಶಂ ಚಕ್ರೇ ಸ ಪಾರ್ಥಿವಾನ್ ।**
**ವಿಜಿತ್ಯ ಪೃಥಿವೀಂ ಕೃತ್ಸ್ನಾಂ ಪ್ರಾಪ್ಯ ರಾಜಮಕಂಟಕಂ ॥ ೧೬ ॥**

**ಚ್ಯವನಂ ಪೂಜಯಾಮಾಸ ಸತ್ಕಾರೇಣ ಪುನಃಪುನಃ ।**
**ಚ್ಯವನೇನಾಭ್ಯನುಜ್ಞಾತಃ ಸ ಚಕ್ರೇ ದಾರಸಂಗ್ರಹಂ ॥ ೧೭ ॥**

**ಆಸೀದ್ಭಾರ್ಯಾದ್ವಯಂ ತಸ್ಯ ಸಗರಸ್ಯ ಮಹಾತ್ಮನಃ ।**
**ಸ ತಾಭ್ಯಾಂ ಸಹಿತೋ ರಾಜಾ ಪುತ್ರಾರ್ಥಂ ತಪ್ತವಾಂಸ್ತಪಃ ॥ ೧೮ ॥**

**ತಪಸೋಂತೇ ಹರಃ ಪ್ರಾಹ ರಾಜಾನಂ ತಪಸಾ ಕೃಶಂ ।**
**ಏಕಂ ವಂಶಕರಂ ಪುತ್ರಮೇಕಾ ತೇ ಜನಯಿಷ್ಯತಿ ॥ ೧೯ ॥**

---

ಪ್ರಾಯಕ್ಕೆ ಬಂದಮೇಲೆ ಸಗರನು ಚ್ಯವನನ ಅನುಗ್ರಹದಿಂದ ಚತುರಂಗಬಲಸಹಿತನಾಗಿ ಯುದ್ಧಕ್ಕೆ ಹೊರಟು ಮ್ಲೇಚ್ಛರಾಜರಾದ ಹೈಹಯು, ಕಾಳಜಂಘರನ್ನು ಸಂಹಾರ ಮಾಡಿದನು.

೧೫-೧೭. ಅನಂತರ ಸಗರನು ಅಯೋಧ್ಯಾಪಟ್ಟಣಕ್ಕೆ ಹೋಗಿ ಸಿಂಹಾಸನಾರೂಢನಾಗಿ ಚತುರಂಗಬಲವನ್ನು ಕೂಡಿಸಿಕೊಂಡು ಸಕಲ ಮ್ಲೇಚ್ಛರಾಜರನ್ನೂ ತನ್ನ ಅಧೀನರಾಜರನ್ನಾಗಿ ಮಾಡಿಕೊಂಡನು. ಬಳಿಕ ಸಕಲ ಭೂಮಂಡಲವನ್ನೂ ಜಯಿಸಿ ರಾಜ್ಯವನ್ನು ನಿಷ್ಕಂಟಕವನ್ನಾಗಿ ಮಾಡಿಕೊಂಡನು. ಬಳಿಕ ಚ್ಯವನ ಮಹರ್ಷಿಗಳನ್ನು ಅರಮನೆಗೆ ಕರೆಯಿಸಿಕೊಂಡು ವಿವಿಧವಾದ ಸತ್ಕಾರದಿಂದ ಪುನಃಪುನಃ ಪೂಜೆ ಮಾಡಿ ಸಂತೋಷಪಟ್ಟವನಾಗಿ ಆ ಋಷಿಯ ಅಣೆಪ್ಪಯನ್ನು ಪಡೆದು ಮದುವೆಮಾಡಿಕೊಂಡನು.

೧೮-೨೨. ಮಹಾತ್ಮನಾದ ಸಗರನಿಗೆ ಇಬ್ಬರು ಹೆಂಡತಿಯರಿದ್ದರು. ಆ ಹೆಂಡತಿಯರೀರ್ವರಿಂದಲೂ ಕೂಡಿ ಸಗರನು ಪುತ್ರಾರ್ಥಿಯಾಗಿ ಈಶ್ವರನನ್ನು ಕುರಿತು ತಪಸ್ಸನ್ನು ಮಾಡಿದನು. ತಪಸ್ಸಿನ ಕಡೇ ಭಾಗದಲ್ಲಿ ಈಶ್ವರನು ಪ್ರತ್ಯಕ್ಷನಾಗಿ ತಪಸ್ಸಿನಿಂದ ಕೃಶನಾಗಿದ್ದ ರಾಜನನ್ನು ಕುರಿತು ಇಂತು ಹೇಳಿದನು. “ ಎಲೈ ಧೊರೆಯೇ,

ಷಷ್ಟಿಃ ಪುತ್ರಸಹಸ್ರಾಣಿ ದ್ವಿತೀಯಾ ಜನಯಿಷ್ಯತಿ ।
ಏವಂ ಲಬ್ಧವರೋ ರಾಜಾ ಸಭಾರ್ಯಸ್ಸ್ವಪುರಂಗತಃ ॥ ೨೦ ॥

ಪುತ್ರಂ ಪುತ್ರಾಂಶ್ಚ ಧರ್ಮಾತ್ಮಾ ಜನಯಾಮಾಸ ವೀರ್ಯವಾನ್ ।
ಕರ್ಮಣಾ ಚೈವ ನಾಮ್ನಾ ಚ ರಾಜಪುತ್ರೋಽಸಮಂಜಸಃ ॥ ೨೧ ॥

ಪಿತ್ರಾ ವಿವಾಸಿತೋ ರಾಜ್ಯಾತ್ಪೌರಾಣಾಮಹಿತೇ ರತಃ ।
ತಸ್ಯ ಪುತ್ರೋಂಽಶುಮಾನ್ನಾಮ ಸರ್ವೈಸ್ಸಮುದಿತೋ ಗುಣೈಃ ॥ ೨೨ ॥

ಪೌತ್ರೇಣ ತೇನಾ ನಘ ಸೇವ್ಯಮಾನಃ
ಪುತ್ರೈರ್ಮಹಾವೀರ್ಯ ಪರಾಕ್ರಮೈಶ್ಚ ।

---

ನಿನ್ನ ಹೆಂಡತಿಯರೀರ್ವರಲ್ಲಿ ಒಬ್ಬಳು ವಂಶಾಭಿವೃದ್ಧಿಕರನಾದ ಮಗನನ್ನು ಪ್ರಸವಿಸುವಳು. ಮತ್ತೊಬ್ಬಳು ಅರವತ್ತುಸಾವಿರ ಗಂಡುಮಕ್ಕಳನ್ನು ಹೆರುವಳು ಈ ರೀತಿಯಾಗಿ ವರವನ್ನು ಹರನಿಂದ ಪಡೆದಾ ಸಗರರಾಜನು ಸಪತ್ನೀಕನಾಗಿ ಪಟ್ಟಣಕ್ಕೆ ಬಂದನು. ಈಶ್ವರನ ಮಾತಿನಂತೆ ಕ್ರಮವಾಗಿ ಇಬ್ಬರು ಹೆಂಡಿರಲ್ಲೂ, ಒಬ್ಬಳ ಹೊಟ್ಟೆಯಲ್ಲಿ ಒಬ್ಬನೇ ಮಗನೂ, ಮತ್ತೊಬ್ಬಳಲ್ಲಿ ಅರವತ್ತುಸಾವಿರ ಮಕ್ಕಳೂ ಹುಟ್ಟಿದರು. ಒಬ್ಬನೇ ಮಗನಿಗೆ ರಾಜನು ಅಸಮಂಜನೆಂದು ನಾಮಕರಣ ಮಾಡಿದನು ಈ ಮಗನು ಹೆಸರಿಗೆ ತಕ್ಕಂತೆ ಸಮಂಜಸವಿಲ್ಲದ ಕೆಲಸಗಳನ್ನು (ಲೋಕಹಿಂಸೆಯನ್ನು) ಮಾಡತೊಡಗಿದನ (ದಾರಿಕಾರರಾದಜನರ ತಲೆಯಮೇಲೆ ಹೊಡೆಯುವುದು, ಕಂಡವರ ಮಕ್ಕಳನ್ನು ಕೆರೆಗೆ ಮುಳುಗಿಸಿ ಅವು ಪ್ರಾಣಬಿಡುವುದನ್ನು ನೋಡಿ ಕೇಕೆ ಹಾಕಿಕೊಂಡು ನಗುವುದು, ಯಾರಾದರೂ ಹೀಗೆ ಮಾಡಬಹುದೇ? ಎಂದು ಆಕ್ಷೇಪಿಸಿದರೆ ಕೆರೆಯ ಆಳವನ್ನು ನೋಡಲಿಕ್ಕಾಗಿ ಮಕ್ಕಳನ್ನು ಹಳ್ಳಕ್ಕೆ ತಳ್ಳಿಬಿಟ್ಟೆನೆಂದು ಚಪ್ಪಾಳೆ ತಟ್ಟಿಕೊಂಡು ಹುಚ್ಚುಹುಚ್ಚಾಗಿ ನಗುವುದು ಇತ್ಯಾದಿ ಕೆಲಸಗಳು) ಈ ಅಸಮಂಜನ ಹಾವಳಿಯನ್ನು ನೋಡಿ ಸಂಕಟಕ್ಕೊಳಗಾದ ಜನರು ದೊರೆಯ ಬಳಿ ದೂರು ಹೇಳಲು ತಂದೆಯು ಅವನನ್ನು ದೇಶದಿಂದಾಚೆಗೆ ಬಲಾತ್ಕಾರವಾಗಿ ತಳ್ಳಿಸಿಬಿಟ್ಟನು. ಮುಳ್ಳುಗಿಡದಿಂದಲೂ ಒಳ್ಳೆಯ ಗುಲಾಬಿ ಹೂ ಬಿಡುವಂತೆ ಅಸಮಂಜನ ಹೊಟ್ಟೆಯಲ್ಲಿ ಸಕಲ ಗುಣಾಲಂಕೃತನಾದ ಅಂಶುಮಂತನೆಂಬ ಮಗನು ಉತ್ಪನ್ನನಾದನು.

೨೩. ಮಹಾಪುಣ್ಯಶಾಲಿಯಾದ ಸಗರಚಕ್ರವರ್ತಿಯು ಮಹಾಪರಾಕ್ರಮಶಾಲಿ

**ಸ ರಂಜಯನ್ರಾಜವರೋ ಜಿತಾರಿಃ**
**ಶಶಾಸ ಪೃಥ್ವೀಂ ಸಕಲಾಂ ಮಹಾತ್ಮಾ** ॥ ೨೩ ॥

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಸಗರೋಪಾಖ್ಯಾನಂ ನಾಮ ಸಪ್ತದಶೋಽಧ್ಯಾಯಃ**

---

ಗಳಾದ ಮಕ್ಕಳು, ಮೊಮ್ಮಕ್ಕಳಿಂದ ಸೇವಿತನಾಗಿ ಶತ್ರುಗಳನ್ನು ನಿರ್ಮೂಲಮಾಡಿ ಭೂಲೋಕವನ್ನು ಪರಿಪಾಲಿಸುತ್ತ ಸುಖವಾಗಿದ್ದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಇಕ್ಷ್ವಾಕುಕುಲವರ್ಣನೆ ಎಂಬ ಹೆಸರಿನ ಹದಿನೇಳನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಅಷ್ಟಾದಶೋಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

**ಸಗರಸ್ಯತು ತೇ ಪುತ್ರಾಸ್ಸಂಹಿತಾ ವೀರ್ಯಸಂಯುತಾಃ**
**ಸಂಜಾತಾ ದೈವಯೋಗೇನ ದೇವಬ್ರಾಹ್ಮಣಕಂಟಕಾಃ** ॥ ೧ ॥

**ತೇಷಾಂತು ಕರ್ಮಣೋದ್ವಿಗ್ನಾ ದೇವಾಸ್ಸರ್ವೇ ಪಿತಾಮಹಂ ।**
**ಅಬ್ರುವನ್ ಸಾಗರೈಸರ್ವೈರ್ದೇವ ಬಾಧ್ಯಾಮ ಸಂಯುತೈಃ** ॥ ೨ ॥

**ಏವ ಮುಕ್ತಸ್ತದಾ ಬ್ರಹ್ಮಾ ಸರ್ವಲೋಕಪಿತಾಮಹಃ ।**
**ಉವಾಚ ದೇವಾನ್ ಸಕಲಾನ್ ಸಾಗರೈಃ ಪ್ರತ್ಯಮರ್ಷಿತಾನ್** ॥ ೩ ॥

---

## ಹದಿನೆಂಟನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳಿದನು—ಸಗರಚಕ್ರವರ್ತಿಯ ಆ ಅರವತ್ತು ಸಾವಿರ ಮಕ್ಕಳೂ ಸಹ ದೇವರಲ್ಲೂ ಬ್ರಾಹ್ಮಣರಲ್ಲೂ ದ್ವೇಷಮಾಡುತ್ತಾ, ಮಹಾ ಪರಾಕ್ರಮಶಾಲಿಗಳಾಗಿ ಒಗ್ಗಟ್ಟಾಗಿದ್ದರೂ ದೈವೇಚ್ಛೆಯಿಂದ ಲೋಕಕಂಟಕರಾಗಿ ಪರಿಣಮಿಸಿದರು.

೨. ಆ ಸಗರಪುತ್ರರ ಹಿಂಸಾತ್ಯದಿಂದ ದೇವತೆಗಳು ವ್ಯಥೆಪಟ್ಟವರಾಗಿ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಕುರಿತು, ಸ್ವಾಮಿ ! ಸಾಗರರ ಗುಂಪಿನಿಂದ ನಮಗೆ ಬಹಳ ಬಾಧೆಯುಂಟಾಗಿದೆಯೆಂದು ಹೇಳಿಕೊಂಡರು.

೩. ಸಕಲ ಲೋಕಕ್ಕೂ ತಾತನೆನಿಸಿಕೊಂಡ ಆ ಬ್ರಹ್ಮನು ದೇವತೆಗಳ ಮಾತನ್ನು ಕೇಳಿ ಸಗರನ ಮಕ್ಕಳಿಂದ ಬಾಧಿಸಲ್ಪಟ್ಟ ಅವರುಗಳನ್ನು ಕುರಿತು ಹೀಗೆ ಹೇಳಿದನು.

**ಯಸ್ತ್ವಸ್ಯ ಜಗತೋ ನಾಥಃ ಪರಮಾತ್ಮಾ ಸನಾತನಃ ।**
**ವಾಸುದೇವಸ್ಯ ಕಪಿಲಃ ಸುತಾಸ್ತಾನ್ ಘಾತಯಿಷ್ಯತಿ ॥ ೪ ॥**

**ಏವಮುಕ್ತಾಃಸುರಾಸ್ತೇನ ಯಯುಸ್ಸರ್ವೇ ತ್ರಿವಿಷ್ಟಪಂ ।**
**ಏತಸ್ಮಿನ್ನೇವ ಕಾಲೇ ತು ಸಗರಸ್ಸಮಹೀಪತಿಃ ॥ ೫ ॥**

**ದೀಕ್ಷಿತೋ ವಾಜಿಮೇಧಾಯ ವಿಧಿವದ್ವೇದಪಾರಗೈಃ ।**
**ತುರಂಗಂ ಚಾರಯಾಮಾಸುರ್ಯಜ್ಞೀಯಂ ತನಯಾ ಮಹೀಂ ॥ ೬ ॥**

**ತೇಷಾಂ ಚಾರಯತಾಂ ಸೋಽಶ್ವಃ ಕಪಿಲೇನ ತಥಾ ಹೃತಃ ।**
**ಕಪಿಲೇನ ಹೃತಂ ನಾಶ್ವಂ ತೇ ಜಾನಂತಿ ವಿಮೋಹಿತಾಃ ॥ ೭ ॥**

**ಅನ್ವೇಷಂತೋಽಪಿ ಯತ್ನೇನ ನಾಪುಸ್ತೇ ತುರಗಂ ಯತಃ ।**
**ಪಿತ್ರೇ ನಿವೇದ್ಯ ತೇ ಸರ್ವೇ ನಿಚಖ್ನುಃ ಪೃಥಿವೀತಲಂ ॥ ೮ ॥**

---

೪. ಯಾವ ಮಹಾವಿಷ್ಣುವು ಈ ಸಕಲ ಲೋಕಗಳಿಗೂ ಒಡೆಯನಾಗಿರುವನೋ ಆ ಸನಾತನನಾದ ಪರಮಾತ್ಮನು ಕಪಿಲರೂಪದಿಂದ ಆ ಕಂಟಕರನ್ನು ಸಂಹರಿಸುತ್ತಾನೆ.

೫-೬. ಈ ರೀತಿ ಬ್ರಹ್ಮನು ಹೇಳಿದೊಡನೆ ದೇವತೆಗಳು ಸಮಾಧಾನಚಿತ್ತರಾಗಿ ಸ್ವರ್ಗಲೋಕಕ್ಕೆ ಪ್ರಯಾಣಬೆಳಸಿದರು. ಇದೇಕಾಲದಲ್ಲಿಯೇ ಸಗರಚಕ್ರವರ್ತಿಯೂ ಅಶ್ವಮೇಧಯಾಗ ಮಾಡಬೇಕೆಂದು ಸಂಕಲ್ಪಿಸಿದವನಾಗಿ ವೇದಾಧ್ಯಯನ ಮಾಡಿದ ಋತ್ವಿಜರಿಂದ ಕೂಡಿ ಅಶ್ವಮೇಧಾರ್ಥಪಶುವಾದ ಯಜ್ಞದ ಕುದುರೆಯನ್ನು ಭೂಪ್ರದಕ್ಷಿಣೆಮಾಡಲು ಮಕ್ಕಳ ಕಾವಲಿನಿಂದ ಕಳುಹಿಸಿದನು.

೭. ಸಾಗರರೊಡನೆ ಸುತ್ತುತ್ತಿದ್ದ ಆ ಅಶ್ವವನ್ನು ಪಾತಾಳದಲ್ಲಿದ್ದ ಕಪಿಲಮಹರ್ಷಿಯು ಹರಣಮಾಡಿ ತನ್ನ ಪರ್ಣಶಾಲೆಯಲ್ಲಿ ಕಟ್ಟಿಕೊಂಡನು. ಈ ವೃತ್ತಾಂತವು ಸಗರನ ಮಕ್ಕಳಿಗೆ ತಿಳಿಯಲೇ ಇಲ್ಲ.

೮. ಎಲ್ಲಿ ಹುಡುಕಿದರೂ ಕುದುರೆಯು ಸಿಕ್ಕದೆ ಹೋಗಲು ಈ ವೃತ್ತಾಂತವನ್ನು ತಂದೆಯೊಡನೆ ಹೇಳಿದರು. ಸಗರನು ಜ್ಞಾನದೃಷ್ಟಿಯಿಂದ ಅಶ್ವವಿರುವ ಸ್ಥಳವನ್ನು ತಿಳಿಸಲು ಆ ಸಾಗರರೆಲ್ಲರೂ ಗುಂಪಾಗಿ ಭೂಮಿಯನ್ನು ಅಗೆಯತೊಡಗಿದರು.

**ಭಾರತಸ್ಯಾಸ್ಯ ವರ್ಷಸ್ಯ ಭೇದೇಸ್ಮಿನ್ನವಮೇ ನೃಪ ।**
**ಸಮಂತತಸ್ತತಶ್ಚಕ್ರುಃ ಖಾತಕರ್ಮ ಬಲಾನ್ವಿತಾಃ ॥ ೯ ॥**

**ವಿಸ್ತರಾದ್ಯೋಜನಶತಂ ಪಾತಾಳತಲಗಾಮಿನಂ ।**
**ವೈಡೂರ್ಯಪರ್ವತಾನ್ಪೂರ್ವಮುತ್ತರೇಣ ಹಿಮಾಚಲಾತ್ ॥ ೧೦ ॥**

**ಪಶ್ಚಾರ್ಧೇ ಕಾಂಚನಗಿರೇರುದಗೇವ ಚ ಲಾವಣಾತ್ ।**
**ಹಿಮಾಚಲಶ್ಚ ತೈರ್ವೀರೈ ರಾಜನ್ದೇಶದ್ವಯೇಕ್ಷತಃ ॥ ೧೧ ॥**
**ಹಿಮಾಚಲಸ್ಯ ಖಂಡಶ್ಚ ಖಾತಸ್ಯಾಂತಃ ಪ್ರವೇಶಿತಃ ।**

**ಉತ್ತರಸ್ಸಾಗರಸ್ತಸ್ಮಾದ್ಧಿಮಶ್ಶೈಲೇನ ದುರ್ಗಮಃ ॥ ೧೨ ॥**

**ಏವಂ ವಿಧೇನ ಖಾತೇನ ತೇ ಪ್ರವಿಶ್ಯ ಪೃಥಕ್ಪೃಥಕ್ ।**
**ಏಕೀಕೃತಾ ದೈವಯೋಗಾತ್ಕಪಿಲೋ ಯತ್ರ ವೈ ಸ್ಥಿತಃ ॥ ೧೩ ॥**

---

೯. ಈ ಭರತವರ್ಷದ ಒಂಭತ್ತನೇ ಭಾಗವಾದ ಭರತಖಂಡದ ಎಲ್ಲಾ ಕಡೆಯಲ್ಲೂ ಬಲಶಾಲಿಗಳಾದ ಆ ಸಗರಪುತ್ರರು ಗುದ್ದಲಿಯಿಂದ ಪಾತಾಳವನ್ನು ಅಗೆಯಲಾರಂಭಮಾಡಿದರು.

೧೦. ಹಿಮಾಚಲದ ಉತ್ತರದಿಂದ ಹಿಡಿದು ಪೂರ್ವಕ್ಕೆ ವೈಡೂರ್ಯಪರ್ವತದವರಿವಿಗಿರುವ ನೂರು ಯೋಜನ ವಿಸ್ತಾರವಾದ ಪಾತಾಳತಲದವರಿಗಿನ ಭೂಮಿಯನ್ನು ಅವರು ಅಗೆದರು.

೧೧. ಮೇರುಪರ್ವತದ ಪಶ್ಚಿಮಕ್ಕೂ ಲವಣಸಮುದ್ರದ ಉತ್ತರಕ್ಕೂ ಇರುವ ಹಿಮವತ್ಪರ್ವತವು ಆ ವೀರರಿಂದ ಎರಡು ದೇಶಗಳಲ್ಲೂ ಅಗೆಯಲ್ಪಟ್ಟಿತು. ಕೇಳೈ ವಜ್ರನೃಪಾಲಕ!

೧೨. ಆ ರೀತಿ ಅಗೆಯಲ್ಪಟ್ಟ ಹಿಮಾಲಯದ ಖಂಡವು ಉತ್ತರಸಾಗರದ ಬಳಿ ಬಹು ದುರ್ಗಮವಾದ ಪ್ರದೇಶವೆನಿಸಿದೆ. ಅದರಲ್ಲಿ ಭೂಮಿಯಲ್ಲಿ ಬೇರೆ ಬೇರೆ ಕಡೆ ಕೊರೆದು ಸಗರನ ಮಕ್ಕಳೆಲ್ಲರೂ ಪಾತಾಳಲೋಕಕ್ಕೆ ಪ್ರವೇಶಿಸಿದರು.

೧೩. ಬೇರೆಬೇರೆಯಾಗಿ ಪಾತಾಳವನ್ನು ಹೊಕ್ಕ ಆ ಸಾಗರರೆಲ್ಲರೂ ದೈವಯೋಗದಿಂದ ಒಟ್ಟಾಗಿಯೇ ಒಂದೇಕಡೆ ಪ್ರವೇಶಿಸಿ ಕಪಿಲ ಋಷಿಯು ಎಲ್ಲಿ ತಪಸ್ಸು ಮಾಡುತ್ತಿದ್ದನೋ ಆ ಸ್ಥಳದಲ್ಲಿ ಬಂದು ಸೇರಿದರು.

**ಕಪಿಲಸ್ಯ ಸಮೀಪಸ್ಥಂ ದದೃಶುಸ್ತೇ ತುರಂಗಮಂ ।**
**ತುರಂಗಸಹಿತಂ ದೃಷ್ಟ್ವಾ ಕಪಿಲಂ ತೇ ತ್ವಮರ್ಷಿತಾಃ ॥ ೧೪ ॥**

**ಕುದ್ದಾಲಲೇಪಿಕಾಹಸ್ತಾಸ್ತತ್ರ ಜಗ್ಮುರ್ವಧೇಚ್ಛಯಾ ।**
**ತಾನ್ಬಾಧಮಾನಾನ್ದುರ್ಬುದ್ಧೀನ್ಸಂದದರ್ಶ ತದಾ ಋಷಿಃ ॥ ೧೫ ॥**

**ಚಕ್ಷುಷಾ ದೃಷ್ಟಮಾತ್ರಾಸ್ತೇ ಭಸ್ಮೀಭೂತಾಸ್ತು ಸಾಗರಾಃ ।**
**ನರಕಂ ಚ ಗತಾಸ್ಸರ್ವೇ ದೇವಬ್ರಾಹ್ಮಣಕಂಟಕಾಃ ॥ ೧೬ ॥**

**ವಿಜ್ಞಾಯ ತನಯಾನ್ನಷ್ಟಾನ್ನಾರದಾತ್ಸಗರೋ ನೃಪಃ ।**
**ಪ್ರೇಷಯಾಮಾಸ ತಂ ದೇಶಂ ಅಂಶುಮಂತಂ ಸ ಧಾರ್ಮಿಕಂ ॥ ೧೭ ॥**

**ಅಂಶುಮಾನಪಿ ಸಂಪ್ರಾಪ್ಯ ಕಪಿಲಂ ಮುನಿಸತ್ತಮಂ ।**
**ಅಭಿವಾದ್ಯ ಮಹಾತೇಜಾಸ್ತುಷ್ಟಾವ ಯದುನಂದನಃ ॥ ೧೮ ॥**

---

೧೪. ಅಲ್ಲಿ ಕಪಿಲನ ಬಳಿಯಲ್ಲಿಯೇ ಯಜ್ಞಾಶ್ವವೂ ಕಂಡು ಬಂದಿತು. ಕುದುರೆಯೊಡನೆ ಕುಳಿತಿದ್ದ ಕಪಿಲನನ್ನು ನೋಡಿ ಆ ಸಗರನ ಮಕ್ಕಳಿಗೆಲ್ಲರಿಗೂ ಬಹಳವಾಗಿ ಕೋಪವುಂಟಾಯಿತು.

೧೫. ಕೂಡಲೇ ಅವರೆಲ್ಲರೂ ಕೈಲಿದ್ದ ಗುದ್ದಲಿಯಿಂದಲೇ ಕಪಿಲನನ್ನು ಕೊಂದುಬಿಡಬೇಕೆಂದು ಎಲ್ಲರೂ ಒಟ್ಟಾಗಿ ಆ ಋಷಿಯ ಮೇಲೆ ಬೀಳತೊಡಗಿದರು. ಅಂತಹ ದುರ್ಬುದ್ಧಿಯುಳ್ಳ ಆ ಸಾಗರರನ್ನು ಋಷಿಯು ಒಂದಾವರ್ತಿ ಕಣ್ಣುಬಿಟ್ಟು ನೋಡಿದನು.

೧೬ ಕಣ್ಣುಬಿಟ್ಟು ನೋಡಿದ ಮಾತ್ರದಿಂದಲೇ ಆ ನೇತ್ರಾಗ್ನಿಯಿಂದ ಅರವತ್ತು ಸಾವಿರ ಮಂದಿ ಸಾಗರರೂ ಸುಟ್ಟು ಬೂದಿಯಾಗಿ ಹೋದರಲ್ಲದೆ ದೇವಬ್ರಾಹ್ಮಣ ಹಿಂಸಕರಾದ ಅವರೆಲ್ಲರೂ ನರಕಕ್ಕೆ ಹೋದರು.

೧೭. ಮಕ್ಕಳೆಲ್ಲರೂ ಮಡಿದ ವೃತ್ತಾಂತವನ್ನು ನಾರದರ ಮುಖದಿಂದ ತಿಳಿದೊಡನೆಯೇ ಸಗರಚಕ್ರವರ್ತಿಯು ಉಳಿದಿದ್ದ ಒಬ್ಬನೇ ಒಬ್ಬ ಮಗನಾದ ಧಾರ್ಮಿಕನಾದ ಅಂಶುವಂತನನ್ನು ಪಾತಾಳದಲ್ಲಿದ್ದ ಕಪಿಲರ ಆಶ್ರಮಕ್ಕೆ ಕಳುಹಿಸಿದನು.

೧೮ ತಂದೆಯಿಂದಾಜ್ಞಪ್ತನಾದ ಅಂಶುಮಂತನು ಋಷಿಶ್ರೇಷ್ಠನಾದ ಕಪಿಲನ ಬಳಿಗೆ ಬಂದು ನಮಸ್ಕರಿಸಿ ಬಹಳವಾಗಿ ಸ್ತೋತ್ರಮಾಡಿದನು.

**ತಸ್ಯ ತುಷ್ಟೋಽಥತುರಗಂ ದತ್ತವಾನ್ಕಪಿಲೋಮುನಿಃ ।**
**ಅಂಶುಮಂತಂ ತದೋವಾಚ ಪಿತೄಣಾಂ ಸಲಿಲಾರ್ಥಿನಾಂ ॥ ೧೯ ॥**

**ಪೌತ್ರಸ್ತೇ ಭವಿತಾ ರಾಜನ್ತಪಸಾ ತಸ್ಯ ತೋಷಿತಾ ।**
**ಆಗಮಿಷ್ಯತಿ ಸಾ ದೇವೀ ಗಂಗಾ ಗಗನಮೇಖಲಾ ॥ ೨೦ ॥**

**ತಯಾಕ್ಲಿನ್ನಮಿದಂ ಭಸ್ಮ ಸಾಗರಾಣಾಂ ದುರಾತ್ಮನಾಂ । ॥ ೨೧ ॥**

**ಯದಾ ಭವಿಷ್ಯತಿ ತದಾ ಸಾಗರಾಸ್ಸ್ವರ್ಗಗಾಮಿನಃ ।**
**ಅನ್ಯಸ್ಯಾಪಿ ಯದಾ ತ್ವಸ್ಥಿ ಗಂಗಾತೋಯೇ ಪತಿಷ್ಯತಿ ॥ ೨೨ ॥**

**ತಸ್ಯಾಪಿ ಸ್ವರ್ಲೋಕಗತಿರ್ಭವಿಷ್ಯತಿ ನ ಸಂಶಯಃ ।**
**ಏವಮುಕ್ತೋಂಽಶುಮಾನ್ಶೀಘ್ರಂ ಚಾಭಿವಾದ್ಯ ಜಗದ್ಗುರುಂ ॥ ೨೩ ॥**

**ಆಗತ್ಯ ಯೋಜಯಾಮಾಸ ತುರಗೇಣ ಪಿತಾಮಹಂ ।**
**ಯಜ್ಞಂ ಸಮಾಪಯಾಮಾಸ ಸಗರೋಽಪಿ ಮಹೀಪತಿಃ ॥ ೨೪ ॥**

---

೧೯-೨೦. ಅಂಶುಮಂತನ ಸ್ತೋತ್ರಕ್ಕೆ ಮೆಚ್ಚಿ ಕಪಿಲನು ಸಗರನ ಯಜ್ಞದ ಕುದುರೆಯನ್ನು ಅವನ ವಶಕ್ಕೆ ಕೊಟ್ಟನು. ಮತ್ತು ಅವನನ್ನು ಕುರಿತು ಹೇಳಿದನು :— ಸಲಿಲೋದಕಾಪೇಕ್ಷಿಗಳಾದ, ಇಲ್ಲಿ ಸತ್ತು ಬೂದಿಯಾದ ಪಿತೃಗಳನ್ನು ನಿನ್ನ ಮೊಮ್ಮಗನೊಬ್ಬನು ಹುಟ್ಟಿ ಉದ್ಧಾರ ಮಾಡುವನು. ಆ ಮಹಾನುಭಾವನು ತಪಸ್ಸಿನಿಂದ ದೇವಗಂಗೆಯನ್ನು ಮೆಚ್ಚಿಸಿ ಆ ಗಂಗೆಯನ್ನು ಈ ಬೂದಿರಾಶಿಯ ಮೇಲೆ ಹರಿಯಿಸಿ ಈ ಪ್ರದೇಶವನ್ನು ಪವಿತ್ರ ಮಾಡುವನು.

೨೧-೨೪. ದುರಾತ್ಮರಾದ ಸಾಗರರ ಬೂದಿಯು ಅದೆಂದು ಗಂಗೆಯೊಡನೆ ಮಿಶ್ರವಾಗುವುದೋ ಆಗ ಈ ಸಾಗರರೆಲ್ಲರೂ ಸ್ವರ್ಗಲೋಕಕ್ಕೆ ಹೋಗುವರು. ಇಷ್ಟೇ ಅಲ್ಲದೆ, ಯಾವನಾದರೂ ಒಬ್ಬನ ಮೂಳೆಯು ಈ ಗಂಗೆಯಲ್ಲಿ ಯಾವ ಕಾರಣದಿಂದ ಬಿದ್ದರೂ, ಅಂತಹವನಿಗೂ ಸ್ವರ್ಗಲೋಕವಾಸವುಂಟಾಗುತ್ತದೆ. ಹೀಗೆಂದು ಜಗದ್ಗುರುವಾದ ಕಪಿಲಾಚಾರ್ಯನು ಅಪ್ಪಣೆ ಕೊಡಲು ಕೂಡಲೆ ಅಂಶುಮಂತನು ಪುನಃ ಕಪಿಲನಿಗೆ ನಮಸ್ಕರಿಸಿ ತುರಗದೊಡನೆ ಯಜ್ಞಶಾಲೆಗೆ ಬಂದನು. ಬಳಿಕ ಸಗರನು ಅಶ್ವಮೇಧಯಾಗವನ್ನು ಪೂರ್ತಿಯಾಗಿ ಮಾಡಿ ಕೃತಾರ್ಥನಾದನು

**ಏವಂ ಹಿ ಸಾಗರೈರ್ಮರ್ತ್ಯೈಃ ಖಾತಕೋ ನೃಪಸತ್ತಮ ।**
**ಯೇನ ಕ್ಲಿಪ್ತಮಿದಂ ದ್ವೀಪಂ ಸಾಗರಂ ನೃಪ ಕಥ್ಯತೇ ॥ ೨೫ ॥**

**ಲವಣೋದಾತ್ಸಮುದ್ರಾಚ್ಚ ತೋಯೇನ ನೃಪ ಸಾಗರಃ ।**
**ಯದಾ ಪೂರ್ಣಸ್ತದಾ ಜಾತೋ ಲವಣೋದೋ ನರಾಧಿಪ ॥ ೨೬ ॥**

**ಕೃತ್ಸ್ನಂ ಯ ಏವಂ ಜಯತಿ ಸ ಸಮ್ರಾಡಿತಿ ಕೀರ್ತ್ಯತೇ ।**
**ತತೋ ಗತಸ್ಸಧರ್ಮಾತ್ಮಾ ಕಾಲೇನ ಮಹತಾ ದಿವಂ ॥ ೨೭ ॥**

**ದಿಲೀಪೇ ಭಾರಮಾಸಜ್ಯ ಜಗಾಮ ತನಯೇ ಸ್ವಕೇ ।**
**ದಿಲೀಪೋಽಪಿ ಸಮಾದಾಯ ರಾಜ್ಯಂ ಪುತ್ರಂ ಭಗೀರಥಂ ॥ ೨೮ ॥**

**ಜಗಾಮ ತ್ರಿದಿವಂ ರಾಜಾ ವನೇ ತಪ್ತ್ವಾ ಮಹತ್ತಪಃ ॥ ೨೯ ॥**

---

೨೫-೨೭. ಈ ರೀತಿಯಾಗಿ ಮದೋನ್ಮತ್ತರಾದ ಸಾಗರರಿಂದ ಎಷ್ಟು ಸ್ಥಳವು ಅಗೆಯಲ್ಪಟ್ಟಿತೋ, ಯಾರಿಂದ ಈ ಜಂಬೂದ್ವೀಪವು ಕ್ಲುಪ್ತಪಡಿಸಲ್ಪಟ್ಟಿದೆಯೋ ಅಷ್ಟು ಸ್ಥಳಕ್ಕೆ ಸಾಗರವೆಂಬ ಹೆಸರಾಗಿದೆ. ಲವಣ ಸಮುದ್ರದಿಂದಲೂ ಸಾಗರಗಳ ಬೇರೆ ನೀರಿನಿಂದಲೂ ತುಂಬಲ್ಪಟ್ಟ ಸ್ಥಳಕ್ಕೆ ಲವಣೋದಧಿಯೆಂಬ ಹೆಸರಾಗಿದೆ. ಯಾವ ರಾಜನು ಈ ಸಮಸ್ತವಾದ ಆಸಾಗರಾಂತ ಭೂಭಾಗವನ್ನು ಜಯಿಸುವನೋ ಅವನನ್ನು ಸಕಲಲೋಕಸಮ್ರಾಟನೆಂದು (ಚಕ್ರವರ್ತಿಯೆಂದು) ಕರೆಯಬೇಕು. ಇಂತು ಸುಪ್ರಸಿದ್ಧನಾದ ಸಗರಚಕ್ರವರ್ತಿಯು ಬಹುಕಾಲ ಭೂಮಿಯಲ್ಲಿ ರಾಜ್ಯಭಾರ ಮಾಡುತ್ತಿದ್ದು ಕೊನೆಗೆ ಸ್ವರ್ಗವನ್ನಡರಿದನು

ಸಗರನ ಮಗ ಅಂಶುಮಂತನೂ ಸಹ ಇದೇ ಮೇರೆ ರಾಜ್ಯಭಾರಮಾಡುತ್ತಿದ್ದು ಕಾಲಗತಿಯನ್ನು ಹೊಂದಿದನು.

೨೮-೩೧. ಅಂಶುಮಂತನ ಮಗ ದಿಲೀಪ. ತಂದೆಯಿಂದ ದಿಲೀಪನು ರಾಜ್ಯವನ್ನು ಸ್ವೀಕರಿಸಿ ಬಹುಕಾಲ ರಾಜ್ಯವನ್ನಾಳಿ ತನ್ನ ಮಗನಾದ ಭಗೀರಥನಿಗೆ ಪಟ್ಟಾಭಿಷೇಕ ಮಾಡಿ ಬಳಿಕ ಬಹುಕಾಲ ತಪಸ್ಸು ಮಾಡಿ ಸ್ವರ್ಗಕ್ಕೆ ಪ್ರಯಾಣ ಬೆಳಸಿದನು. ಎಲೈ ! ಯಾದವಕುಲರಾಜಶ್ರೇಷ್ಠನಾದ ವಜ್ರಭೂಪಾಲಕನೇ, ಕೇಳು:

ಆಸಾದ್ಯ ರಾಜ್ಯಂ ಸ ಭಗೀರಥೋಽಪಿ
ಆನೀಯ ಗಂಗಾಂ ತಪಸಾ ಚ ಭೂಮಿಂ ।
ಸಂಪ್ಲಾವಯಾಮಾಸ ಜಲೇನ ಭಸ್ಮ
ತತ್ಸಾಗರಾಣಾಂ ಯದುವೃಂದನಾಥ ॥ ೩೦ ॥

ಸಂಪ್ಲಾವಿತೇ ಭಸ್ಮನಿ ರಾಜಪುತ್ರಾ
ಗಂಗಾಜಲೌಘೇನ ದಿವಂ ಪ್ರಯಾತಾಃ ।
ಸ್ವಲೋಕಮಾಸಾದ್ಯ ತಥಾಽಕ್ಷಯಂ ತೇ
ವಸಂತಿ ಹೃಷ್ಟಾಸ್ತ್ರಿದಶೈಸ್ಸಮೇತಾಃ ॥ ೩೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಸಗರೋಪಾಖ್ಯಾನಂ ನಾಮ
ಅಷ್ಟಾದಶೋಽಧ್ಯಾಯಃ

---

ಭಗೀರಥನು ತನ್ನ ತಂದೆಯಿಂದ ರಾಜ್ಯವನ್ನು ಪಡೆದು ತಪಸ್ಸಿನಿಂದ ಗಂಗಾಮಾತೆಯನ್ನು ಮೆಚ್ಚಿಸಿ ಆ ಗಂಗಾಜಲದಿಂದ ತನ್ನ ಪೂರ್ವ ಪಿತೃಗಳಾದ ಅರವತ್ತು ಸಾವಿರ ಸಂಖ್ಯಾಕರಾದ ಸಾಗರರ ಬೂದಿಯನ್ನು ತೇಲಿಸಿಬಿಟ್ಟನು. ಆ ಭಸ್ಮರಾಶಿಯು ಯಾವಾಗ ಗಂಗಾಜಲದಿಂದ ಮಿಶ್ರವಾಗಿ ಪ್ರವಾಹರೂಪದಿಂದ ಹರಿದುಹೋಯಿತೋ ಆ ಜಲದ ಜತೆಯಲ್ಲಿಯೇ ಸಕಲ ಮಂದಿ ಸಾಗರರೂ ಸ್ವರ್ಗಲೋಕದ ಹಾದಿಯನ್ನು ಹಿಡಿದು ಪ್ರಯಾಣಮಾಡಿದರು. ಮತ್ತು ದೇವತೆಗಳೊಡನೆ ಸೇರಿ ಸಂತೋಷಪಡುತ್ತಾ ಅಕ್ಷಯವಾದ ಪುಣ್ಯಲೋಕಗಳನ್ನು ಸಹ ಹೊಂದುವಂಥಾವರಾದರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಸಗರೋಪಾಖ್ಯಾನವೆಂಬ ಹೆಸರಿನ ಹದಿನೆಂಟನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಏಕೋನವಿಂಶೋಽಧ್ಯಾಯಃ

ರಾಜ್ಯಂ ಪ್ರಾಪ್ಯ ಮಹಾತೇಜಾ ದಿಲೀಪತನಯೋ ನೃಪಃ ।
ನರಕಸ್ಥಾನ್ಪಿತೄನ್ಶ್ರುತ್ವಾ ರಾಜ್ಯಂ ನ್ಯಸ್ಯಾಶು ವೃದ್ಧಯೇ ॥ ೧ ॥

ಗಂಗಾಮಾರಾಧಯಾಮಾಸ ತಪಸಾ ಮಹತಾ ತದಾ ।
ಯಮೈಶ್ಚ ನಿಯಮೈ ರಾಜನ್ನಪರ್ಣಾಶನಕೈಸ್ತಥಾ ॥ ೨ ॥

ದಶವರ್ಷಸಹಸ್ರಾಣಿ ತಪಸ್ತೇಪೇ ಭೃಶಂ ನೃಪಃ
ಅಥ ಗಂಗಾಮಹಾದೇವೀ ಪ್ರಸನ್ನಾಽಭೂದ್ಗತಕ್ಲಮಾ ॥ ೩ ॥

---

## ಹತ್ತೊಂಬತ್ತನೆಯ ಅಧ್ಯಾಯವು

### ಗಂಗಾವತರಣ ವೃತ್ತಾಂತ

೧-೩. ಮಾರ್ಕಂಡೇಯ ಋಷಿಯು ಹೇಳುತ್ತಾನೆ:- ಮಹಾ ಪರಾಕ್ರಮಶಾಲಿಯಾದ ಭಗೀರಥನು ತನ್ನ ತಂದೆಯಾದ ದಿಲೀಪನಿಂದ ರಾಜ್ಯವನ್ನು ಪಡೆದ ಬಳಿಕ ತನ್ನ ಪಿತೃಗಳು ನರಕದಲ್ಲಿ ಬಿದ್ದಿದ್ದಾರೆಂಬ ವರ್ತಮಾನವನ್ನು ಕೇಳಿದವನಾಗಿ ರಾಜ್ಯಾಡಳಿತವನ್ನು ಮಂತ್ರಿಗಳಿಗೆ ವಹಿಸಿ ಮಹತ್ತರವಾದ ತಪಸ್ಸಿನಿಂದ ಗಂಗಾದೇವಿಯನ್ನು ಕುರಿತು ಧ್ಯಾನಮಾಡತೊಡಗಿದನು. ಅಷ್ಟಾಂಗಯೋಗಗಳಿಂದಲೂ (ಯಮ, ನಿಯಮ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳು) ವಾಯ್ವಾಹಾರ ನಿರಾಹಾರಗಳಿಂದಲೂ ಹತ್ತುಸಾವಿರ ವರ್ಷಕಾಲ ಬಿಡದೆ ತಪಸ್ಸುಮಾಡಿದನು. ಈ ಮಹಾತಪಸ್ಸಿಗೆ ಮೆಚ್ಚಿ ಗಂಗಾದೇವಿಯು ಪ್ರಸನ್ನಳಾಗಿ ಎದುರಿಗೆ ಬಂದು ನಿಂತಳು.

ಭಗೀರಥೋಽಪಿ ಧರ್ಮಾತ್ಮಾ ವರಂ ಲೇಭೇ ಕುತೂಹಲೀ ।
ತತೋ ಲೇಖನದೀ ದೇವೀ ಪ್ರಾಪ್ರೋಚತ್ತಂ ಭಗೀರಥಂ ॥ ೪ ॥

ಪತಂತ್ಯಾ ಗಗನಾತ್ಸೋಢುಂ ಮಮ ವೇಗಂ ವಸುಂಧರಾ ।
ನ ಸಮರ್ಥಾ ಯದಾ ತಸ್ಮಾತ್ತ್ವೋಷಯಸ್ವಾಶು ಶಂಕರಂ ॥ ॥ ೫ ॥

ಸ ಹಿ ಶಕ್ತಃ ಪತಂತ್ಯಾ ಮೇ ವೇಗಂ ಸೋಢುಂ ನರೇಶ್ವರ ॥ ೬ ॥

ಏವಮುಕ್ತ್ವಾ ಯಯೌ ದೇವೀ ತದಾಂತರ್ಧಾನಮೀಶ್ವರೀ ।
ಭಗೀರಥೋಽಪಿ ಧರ್ಮಾತ್ಮಾ ತಪಸ್ತೇಪೇ ಸುದಾರುಣಂ ॥ ೭

ಆರಾಧನಾರ್ಥಂ ದೇವಸ್ಯ ಶಂಕರಸ್ಯ ಮಹಾತ್ಮನಃ ।
ತಪಸೋಂತೇ ಮಹಾತೇಜಾ ದೃಷ್ಟವಾನ್ಜಗದೀಶ್ವರಂ ॥ ೮ ॥

॥ ದೇವದೇವ ಉವಾಚ ॥

ತಪಸೋಗ್ರೇಣ ತೇ ರಾಜನ್ಪ್ರಸನ್ನೋಽಸ್ಮಿ ಯಥೇಪ್ಸಿತಂ ।
ದದಾಮಿ ತೇ ಯತೋ ಭಕ್ತಿಂ ಪಿತೄಣಾಂ ಚಾಕ್ಷಯಂ ಯಶಃ ॥ ೯ ॥

---

೪–೮. ಭಗೀರಥನು ಕುತೂಹಲಿಯಾಗಿ ವರವನ್ನು ಪಡೆದನು. ಆಗ ಆ ಲೇಖನದಿಯೆನಿಸಿದ ಗಂಗಾನದಿಯು ಭಗೀರಥನನ್ನು ಕುರಿತು ಇಂತು ಹೇಳಿದಳು. ಅಯ್ಯಾ! ಭಗೀರಥ! ನಾನು ನಿನ್ನ ಮಾತಿನಿಂದ ಆಕಾಶದಿಂದ ಕೆಳಗಿಳಿದೇನೋ ಬರುತ್ತೇನೆ. ಆದರೆ ನನ್ನ ಪತನವೇಗವನ್ನು ಭೂಮಿಯು ಸಹಿಸಲಾರಳು. ಆದ್ದರಿಂದ ನೀನು ಈಶ್ವರನನ್ನು ಕುರಿತು ತಪಸ್ಸುಮಾಡಿ ಅವನನ್ನು ಮೆಚ್ಚಿಸು. ಭೂಲೋಕಕ್ಕೆ ಇಳಿದು ಬರುವ ನನ್ನ ವೇಗವನ್ನು ತಡೆಯಲು ಅವನಿಗೊಬ್ಬನಿಗೇ ವಿನಹಾ ಬೇರೆಯವರಿಗೆ ಶಕ್ತಿಯಿಲ್ಲ. ಈರೀತಿಯಾಗಿ ಹೇಳಿ ಗಂಗಾದೇವಿಯು ಅಂತರ್ಧಾನಳಾದ ಬಳಿಕ ಧರ್ಮಾತ್ಮನಾದ ಭಗೀರಥನು ಮಹೇಶ್ವರನನ್ನು ಕುರಿತು ಭಯಂಕರವಾದ ತಪಸ್ಸನ್ನು ಮಾಡಿದನು. ಈರೀತಿ ಮಹಾತ್ಮನಾದ ಈಶ್ವರನನ್ನು ಕುರಿತು ಧ್ಯಾನಮಾಡುತ್ತಿರುವಲ್ಲಿ ಈಶ್ವರನು ಭಗೀರಥನ ಕಣ್ಣಿಗೆ ಗೋಚರನಾದನು.

೯. ಈಶ್ವರನು ಹೇಳುತ್ತಾನೆ:— ಎಲೈ! ಭಗೀರಥಮಹಾರಾಜನೇ, ನಿನ್ನ ಅತ್ಯುಗ್ರವಾದ ತಪಸ್ಸಿಗೆ ಪ್ರಸನ್ನನಾಗಿದೇನೆ. ನಿನಗೆ ಬೇಕಾದ ವರವನ್ನು ಕೊಡುತ್ತೇನೆ. ಮತ್ತುನನ್ನಲ್ಲಿ ಭಕ್ತಿಯನ್ನೂ ನಿನ್ನ ಪಿತೃಗಳಿಗೆ ಅಕ್ಷಯ ಪುಣ್ಯಲೋಕವನ್ನೂ ಅನುಗ್ರಹಿಸುತ್ತೇನೆ.

**ಏವಮುಕ್ತಸ್ತು ದೇವೇನ ಪೂಜಯಿತ್ವಾ ಮಹೇಶ್ವರಂ ।**
**ಜಗಾಮ ಗಂಗಾಂ ಮನಸಾ ರಾಜಾ ಪೂರ್ಣಮನೋರಥಃ　　॥ ೧೦ ॥**

**ಶಂಕರಾಧಿಷ್ಠಿತಂ ಜ್ಞಾತ್ವಾ ನೃಪತೇಶ್ಚ ಚಿಕೀರ್ಷಿತಂ ।**
**ಪಪಾತ ಗಗನಾದ್ಗಂಗಾ ತದಾ ರಾಜೀವಲೋಚನ　　॥ ೧೧ ॥**

**ಗಂಗಾಯಾಃ ಪತನಂ ಜ್ಞಾತ್ವಾ ಬ್ರಹ್ಮಾ ತಂ ದೇಶಮಾಗತಃ ।**
**ಯಮೇಂದ್ರವರುಣಾನ್ದೇವಾನ್ಪುರಸ್ಕೃತ್ಯಾಮಿತೌಜಸಃ　　॥ ೧೨ ॥**

**ಋಷಯೋ ನಾಗಗಂಧರ್ವವಿದ್ಯಾಧರಮಹೋರಗಾಃ ।**
**ಸುಪರ್ಣಕಿನ್ನರಗಣಾಸ್ತಥೈವಾಪ್ಸರಸಾಂ ಗಣಾಃ　　॥ ೧೩ ॥**

**ವಿಮಾನಶತಸಂಬಾಧಂ ತದ್ಬಭೂವ ನಭಸ್ಥಲಂ ।**
**ಪ್ರಕೀರ್ಯಮಾಣಂ ಕುಸುಮೈರ್ದೇವನಾಗವಿರಾಜಿತಂ　　॥ ೧೪ ॥**

---

೧೦–೧೪　ಮಾರ್ಕಂಡೇಯನು ಹೇಳುವನು:—ಈಶ್ವರಾನುಗ್ರಹವಾದ ಬಳಿಕ ಭಗೀರಥನು ಮಹೇಶ್ವರನನ್ನು ಪುನಃ ಪೂಜಿಸಿ ತನ್ನ ಮನೋರಥವು ಪೂರ್ಣವಾಯಿತೆಂದು ತಿಳಿದು ಗಂಗಾದೇವಿಯನ್ನು ಮನಸ್ಸಿನಿಂದ ಅಚಲವಾಗಿ ಧ್ಯಾನಿಸಿದನು. ಪರಮಪಾವನಳೂ ತ್ರಿಕಾಲಜ್ಞಾನಿಯೂ ಆದ ಗಂಗಾದೇವಿಯು ಈಶ್ವರನಿಂದ ವರಪಡೆದ ಭಗೀರಥನು ತನ್ನನ್ನು ಧ್ಯಾನಿಸುತ್ತಿರುವುದನ್ನು ತಿಳಿದವಳಾಗಿ ಈಶ್ವರನಿರುವ ಸ್ಥಳದಲ್ಲಿ ಆಕಾಶದಿಂದಿಳಿದು ಬಂದಳು. ಆ ಗಂಗಾವತರಣಕಾಲದಲ್ಲಿ ನಡೆದ ವೃತ್ತಾಂತವನ್ನು ಇಲ್ಲಿ ವರ್ಣಿಸಲಾಗಿದೆ:— ಗಂಗೆಯು ಆಕಾಶದಿಂದ ಭೂಲೋಕಕ್ಕೆ ಹೊರಟ ಸಂಗತಿಯನ್ನು ತಿಳಿದು ಇದನ್ನು ನೋಡುವುದಕ್ಕಾಗಿ ಬ್ರಹ್ಮನು, ಯಮ ವರುಣ ಇಂದ್ರನೇ ಮೊದಲಾದ ದೇವತೆಗಳಿಗೆ ಈ ವೃತ್ತಾಂತವನ್ನು ತಿಳಿಸಿ ಅವರನ್ನು ಜೊತೆಯಲ್ಲಿ ಕರೆದುಕೊಂಡು ಬಂದನು. ಅದೇ ಸಮಯಕ್ಕೆ ಸರಿಯಾಗಿ ಋಷಿಗಳೂ, ನಾಗರೂ, ಗಂಧರ್ವ ವಿದ್ಯಾಧರ ಮಹೋರಗಾದಿ ಸಕಲದೇವತೆಗಳೂ ಹಾಗೂ ಅಪ್ಸರ ಸ್ತ್ರೀಯರೂ ನೂರಾರು ಆಕಾಶ ವಿಮಾನಗಳಲ್ಲಿ ಕುಳಿತು ಭೂಮಿಗೆ ಇಳಿದು ಬಂದರು. ಗಂಗಾವತರಣ ಕಾಲದಲ್ಲಿ ದೇವನಾಗಾದಿಗಳು ಆ ಮಹಾಶಾಯಿಯಮೇಲೆ ಹೂಗಳನ್ನೆರಚಿ ಹೂ ಮಳೆಗಳನ್ನು ಕರೆದರು.

**ಸುರಪ್ರಭಾ ದುರ್ನಿರೀಕ್ಷ್ಯಂ ತದಾಭರಣಭೂಸುರಂ ।**
**ಸುಗಂಧಿಚಾರುಪವನಂ ಸುರತೂರ್ಯನಿನಾದಿತಂ ।**
**ನಭಸಸ್ತಸ್ಯ ಮಧ್ಯೇನ ಪಪಾತ ಗಗನಾನ್ನದೀ** ॥ ೧೫ ॥

**ವಿಶಾಮಿ ಭಿತ್ವಾ ಪಾತಾಳಂ ಸ್ರೋತಸಾ ಗೃಹ್ಯ ಶಂಕರಂ ।**
**ಇತ್ಯೇವಂ ದುಷ್ಟಭಾವಾ ಸಾ ಪಪಾತ ಹರಮೂರ್ಧನಿ** ॥ ೧೬ ॥

**ಜ್ಞಾತ್ವಾ ಕ್ರೂರಮಭಿಪ್ರಾಯಂ ದೇವ್ಯಾ ದೇವಃ ಪಿನಾಕಭೃತ್ ।**
**ಜಟಾಕಲಾಪೇ ತಾಂ ದೇವೀಂ ತಿರಶ್ಚಕ್ರೇ ಚತುರ್ಮುಖಃ** ॥ ೧೭ ॥

**ಬಭ್ರಾಮ ಸಾ ತಿರೋಭೂತ್ವಾ ತತ್ರೈವ ತ್ವಚಿರಂ ನದೀ ।**
**ತಸ್ಯಾಃ ಪತಂತ್ಯಾ ಯೇ ಕೇಚಿದ್ಬಿಂದವಃ ಕ್ಷಿತಿಮಾಗತಾಃ** ॥ ೧೮ ॥

**ತೈಃ ಕೃತಂ ಪೃಥಿವೀಪಾಲ ತದಾ ಬಿಂದುಸರಶ್ಶುಭಂ ।**
**ದೇವೋಽಪಿ ದೃಷ್ಟ್ವಾ ರಾಜಾನಂ ಕ್ಷುಧಯಾ ವ್ಯಾಕುಲೇಂದ್ರಿಯಂ** ॥ ೧೯ ॥

---

೧೫-೧೬. ಆಗ ಆಕಾಶವು ದೇವ ಪ್ರಭೆಯಿಂದ ಕೂಡಿ ನೋಡುವುದಕ್ಕೇ ಆಗುತ್ತಿರಲಿಲ್ಲ. ವಿವಿಧಾಭರಣಗಳಿಂದ ಸುಂದರವಾಗಿಯೂ ಸುಗಂಧ ವಾಯುವಿನಿಂದ ಸುವಾಸಿತವಾಗಿಯೂ ನೃತ್ಯಗೀತವಾದ್ಯಗಳಿಂದ ಯುಕ್ತವಾಗಿಯೂ ಇದ್ದ ಗಗನಮಾರ್ಗದಿಂದ ಗಂಗಾನದಿಯು ಕೆಳಗಿಳಿದು ಶಂಕರನ ಸಹಿತವಾಗಿ ಕೊಚ್ಚಿಕೊಂಡು ಪಾತಾಳಕ್ಕಿಳಿಯಬೇಕೆಂದು ಯೋಚಿಸುತ್ತಾ ಈಶ್ವರನ ಜಟೆಯಮೇಲೆ ಬಿದ್ದಳು

೧೭-೧೮. ಈ ರೀತಿಯಾದ ಗಂಗೆಯ ಕ್ರೂರಾಭಿಪ್ರಾಯವನ್ನು ತಿಳಿದ ಚತುರ್ಮುಖ ಬ್ರಹ್ಮನು ಆ ಗಂಗೆಯನ್ನು ಈಶ್ವರನ ಜಟಾಜೂಟದಲ್ಲಿ ಅಡಗಿಸಿ ಬಿಟ್ಟನು. ಆ ರೀತಿ ಗಂಗಾದೇವಿಯು ಅಲ್ಲೇ ಅಡಗಿ ತಿರುಗುತ್ತಿದ್ದಳು. ಹೀಗೆ ಬಹುಕಾಲ ಹರನ ಜಡೆಯಲ್ಲಡಗಿದ್ದ ಗಂಗೆಯಿಂದ ಕೆಲವು ತೊಟ್ಟು ನೀರುಗಳು ನೆಲದಲ್ಲಿ ಬಿದ್ದುವು.

೧೯-೨೦. ಆ ನೀರುಗಳ ತೊಟ್ಟುಗಳಿಂದ ಒಂದು ಸರೋವರವಾಯಿತು ಅದಕ್ಕೆ ಬಿಂದು ಸರೋವರವೆಂದು ಹೆಸರಾಯಿತು. ಮಹಾದೇವನು ಹಸಿವಿನಿಂದ ಪೀಡಿತ

ತಸ್ಯಾಜ ತಾಂ ತದಾ ಶೀಘ್ರಂ ಜಟಾಗ್ರೇಣ ಮಹೇಶ್ವರಃ ॥ ೨೦ ॥

ಧೃತಗಂಗೋ ಜಗಾಮಾಥ ತತೋಽಂತರ್ಧಾನಮೀಶ್ವರಃ ।
ಮಹೇಶ್ವರಶಿರೋ ಭ್ರಷ್ಟಾ ಪ್ರವಿಷ್ಟಾಚ ಸರಶ್ಶುಭಂ ॥ ೨೧ ॥

ತಸ್ಮಾದ್ವಿನಿಸ್ಸೃತಾ ಭೂಯಃ ಸಪ್ತಧಾ ದೇವನಿಮ್ನಗಾ ।
ಹ್ಲಾದಿನೀ ಹ್ರಾದಿನೀ ಚೈವ ಪ್ಲಾವಿನೀ ಚೇತಿ ಪ್ರಾಚ್ಯಗಾ ॥ ೨೨ ॥

ಸೀತಾವಕ್ತ್ರಶ್ಚ ಸಿಂಧುಶ್ಚ ಪ್ರತೀಚ್ಯಭಿಮುಖಾ ಗತಾಃ ।
ದಕ್ಷಿಣೇನ ತಥಾ ಗಂಗಾ ಭಗೀರಥಪಥಾನುಗಾ ॥ ೨೩ ॥

ಕ್ವಚಿದ್ವೇಗೇನ ಮಹತಾ ಕ್ವಚಿನ್ಮಂದವಿಸರ್ಪಿಣೀ ।
ಕ್ವಚಿತ್ಫೇನಾಕುಲಜಲಾ ಕ್ವಚಿದಾವರ್ತಮಾಲಿನೀ ॥
ಕ್ವಚಿದ್ಗಂಭೀರ ಶಬ್ದಾಢ್ಯಾ ನಿಶ್ಶಬ್ದಾ ಚ ತಥಾ ಕ್ವಚಿತ್ ॥ ೨೪ ॥

---

ನಾಗಿ ಬಳಲುತ್ತಿದ್ದ ಭಗೀರಥನನ್ನು ನೋಡಿ ಅವನ ಮೇಲಿನ ಕನಿಕರದಿಂದ ಕೂಡಿ ಜಟಾಗ್ರಭಾಗದಿಂದ ಗಂಗೆಯನ್ನು ಕೆಳಗೆ ಬಿಟ್ಟು ಬಿಟ್ಟನು.

೨೧-೨೨. ಈ ರೀತಿಯಾಗಿ ಗಂಗಾನದಿಯನ್ನು ಸಂಪಾದಿಸಿ ಭಗೀರಥನು ಪಾತಾಳಲೋಕಕ್ಕೆ ಹೊರಟನು. ಗಂಗೆಯನ್ನು ಕೆಳಗೆ ಬಿಟ್ಟೊಡನೆ ಈಶ್ವರನು ಅಂತರ್ಧಾನನಾದನು. ಮಹೇಶ್ವರನ ಶಿರಸ್ಸಿನಿಂದ ಕೆಳಗೆ ಬಿದ್ದ ಗಂಗೆಯು ಆ ಬಿಂದು ಸರೋವರವನ್ನು ಹೊಕ್ಕಳು. ಆ ಸರೋವರದಿಂದ ಆ ದೇವಗಂಗೆಯು ಏಳು ಭಾಗವಾಗಿ ಹೊರಕ್ಕೆ ಹೊರಟಳು. ಪೂರ್ವಕ್ಕೆ ಹೊರಟ ಮೂರು ಭಾಗಕ್ಕೆ ಹ್ರಾದಿನೀ, ಹ್ಲಾದಿನೀ, ಪ್ಲಾವಿನೀ ಎಂದು ಮೂರು ಹೆಸರಾಯಿತು.

೨೩-೨೭. ಪಶ್ಚಿಮದಿಕ್ಕಿಗೆ ಸೀತಾವಕ್ತ್ರ, ಸಿಂಧು ಎಂಬ ಎರಡು ನದಿಗಳು ಹೊರಟವು. ದಕ್ಷಿಣ ದಿಕ್ಕಿನಿಂದ ಹೊರಟ ಗಂಗಾನದಿಯು ಭಗೀರಥನ ಹಿಂದೆ ಅವನು ಹೊರಟ ಮಾರ್ಗದಲ್ಲಿ ಹೊರಟಳು. ಆ ಗಂಗೆಯು ಕೆಲವು ದೂರ ಮಹಾವೇಗದಿಂದಲೂ ಇನ್ನು ಕೆಲವು ದೂರ ಮಂದಗಮನದಿಂದಲೂ ಕೆಲವು ದೂರ ನೊರೆನೊರೆಯಾದ ನೀರಿನಿಂದಲೂ ಇನ್ನೂ ಕೆಲವು ದೂರ ಸುಳಿಸುಳಿಗಳಾಗಿ ಹರಿಯುತ್ತಲೂ ಮತ್ತು ಕೆಲ

ಕ್ವಚಿದ್ಧಂಸರವೋದ್ದಾಮಾ ಚಕ್ರವಾಕಯುಗಾ ಕ್ವಚಿತ್ ।
ಊರ್ಮಿಮಾಲಾಕುಲಜಲಾ ಕುಸುಮೋತ್ಕರಮಂಡಿತಾ ॥ ೨೫ ॥

ಜಲಸತ್ವಶತಾಕೀರ್ಣಾ ಸುರಸಿದ್ಧಸುಖಪ್ರದಾ ।
ಅಮೃತಸ್ವಾದುಸಲಿಲಾ ಹರಸಂಪರ್ಕನಿರ್ಮಲಾ ॥ ೨೬ ॥

ವಿಷ್ಣುಪಾದಪ್ರಹಾರೋತ್ಥಾ ಸರ್ವಪಾತಕನಾಶಿನೀ ।
ಏವಂ ಸಂಪ್ರಾಪ್ಯ ಸಾ ವಿಂಧ್ಯಂ ಪ್ರವಿಷ್ಟಾ ಪೂರ್ವಸಾಗರಂ ॥ ೨೭ ॥

ಸಾಗರೇಣ ಸಮಾಸಾದ್ಯ ಪಾತಾಳಂ ಭೀಮದರ್ಶನಂ ।
ಪ್ಲಾವಯಾಮಾಸ ತದ್ಭಸ್ಮ ಸಾಗರಾಣಾಂ ಮಹಾತ್ಮನಾಂ ॥ ೨೮ ॥

ಭಸ್ಮನಿ ಪ್ಲಾವಿತೇ ಸರ್ವೇ ಗತಾಸ್ತೇ ಸಾಗರಾ ದಿವಂ ॥ ೨೯ ॥

---

ವುಗೂರದ ತನಕ ಗಂಭೀರಶಬ್ದದಿಂದಲೂ ಇನ್ನು ಕೆಲವುದೂರ ನಿಶ್ಶಬ್ದವಾಗಿಯೂ ಹರಿದುಹೋಯಿತು. ಆ ಗಂಗೆಯು ಕೆಲವುಕಡೆ ಹಂಸಧ್ವನಿಗಳನ್ನನುಸರಿಸಿ ಮತ್ತೆ ಕೆಲವೆಡೆಗಳಲ್ಲಿ ಚಕ್ರವಾಕ ಪಕ್ಷಿಯಂತೆ ಜೋಡಿಜೋಡಿಧಾರೆಯಾಗಿ ಹರಿದಳು. ವಿಷ್ಣುಪಾದ [ಆಕಾಶ] ಪ್ರಹಾರದಿಂದ ಹುಟ್ಟಿದ ಆ ಗಂಗೆಯು ಅಮೃತೋಪಮವಾದ ನೀರಿನಿಂದ ಕೂಡಿ ಸರ್ವಪಾಪಗಳನ್ನೂ ಪರಿಹರಿಸುತ್ತಾ ವಿಂಧ್ಯಪರ್ವತ ಪ್ರಾಂತ್ಯದಲ್ಲಿ ಪ್ರವಹಿಸಿ ಪೂರ್ವಸಾಗರವನ್ನು ಸೇರಿಕೊಂಡಳು.

೨೮-೩೧ ಪೂರ್ವಸಾಗರವನ್ನು ಸೇರಿದೊಡನೆ ಆ ಗಂಗಾನದಿಯು ಅಲ್ಲಿಂದ ಭಗೀರಥನ ಜೊತೆಯಲ್ಲಿ ಭಯಂಕರವಾದ ಪಾತಾಳವನ್ನು ಪ್ರವೇಶಿಸಿ ಮಹಾತ್ಮರಾದ ಸಾಗರರ ಬೂದಿರಾಶಿಯಮೇಲೆ ಹರಿದುಹೋಯಿತು. ಯಾವಾಗ ಸಾಗರರ ಬೂದಿಯು ಗಂಗೆಯೊಡನೆ ಬೆರೆಯಿತೋ ಆ ಕೂಡಲೇ ಸಗರನ ೬೦ ಸಾವಿರ ಮಕ್ಕಳೂ ಸಹ ಸ್ವರ್ಗಲೋಕವನ್ನು ಪ್ರವೇಶಿಸಿದರು. ಈ ರೀತಿಯಾಗಿ ದೇವಗಂಗಾನದಿಯು ಭೂಲೋಕವನ್ನು ಪ್ರವೇಶಿಸಿ ತನ್ನ ಪುಣ್ಯೋದಕದಿಂದ ಸಕಲ ಋಷಿಗಳನ್ನೂ ಸಂತೋಷ

ಏವಂ ಧರಾಂ ದೇವನದೀ ಪ್ರಯಾತಾ
ಸುಪುಣ್ಯತೋಯಾ ಋಷಿವರ್ಯಜುಷ್ಟಾ ।
ಮಹಾನುಭಾವಾ ನೃಪ ಜಹ್ನು ಕನ್ಯಾ
ನಿಶ್ರೇಣಿಭೂತಾ ತ್ರಿದಿವಪ್ರಯಾಣೇ　　　　॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಗಂಗಾವತರಣಂ ನಾಮ ಏಕೋನವಿಂಶೋಽಧ್ಯಾಯಃ

---

ಗೊಳಿಸುತ್ತಾ ಮಹಾನುಭಾವಳೆನಿಸಿಕೊಂಡಳು. ಎಲೈ! ವಜ್ರನೇ ಕೇಳು. ಆ ಜಾಹ್ನವೀನಾಮಕ ಗಂಗೆಯು ಸಾಗರರ ಸ್ವರ್ಗ ಪ್ರಯಾಣಕ್ಕೆ ಏಣಿಯ ಮೆಟ್ಟಲುಗಳಂತೆ ಪರಿಣಮಿಸಿದಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಗಂಗಾವತರಣವೆಂಬ ಹೆಸರಿನ ಪ್ರಥಮಖಂಡದಲ್ಲಿ ಹತ್ತೊಂಬತ್ತನೆಯಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ವಿಂಶೋಧ್ಯಾಯಃ

---

॥ ವಜ್ರ ಉವಾಚ ॥

ಭಾಗೀರಥೀತ್ವಂ ಗಂಗಾತ್ವಂ ದೇವನದ್ಯಾ ಮಯಾಶ್ರುತಂ ।
ಕಿಮರ್ಥಂ ಜಾಹ್ನವೀ ಲೋಕೇ ಕಥ್ಯತೇ ಸಾಗರಂಗಮಾ ॥ ೧ ॥

॥ ಮಾರ್ಕಂಡೇಯ ಉವಾಚ ॥

ಪಂಚಾಲಾಖ್ಯೋಽಸ್ತಿ ವಿಷಯೋ ಮಧ್ಯದೇಶೇ ಮಹೀಪತೇ ।
ಸ್ವಧರ್ಮಕರ್ಮನಿರತೈರ್ಯುತೋ ವರ್ಣಾಶ್ರಮೈಸ್ಸಹ ॥ ೨ ॥

ಮಹೋದಯಂ ಪುರಂ ತತ್ರ ಕುಶಸ್ತಂಭೇನ ನಿರ್ಮಿತಂ
ಸರ್ವರತ್ನಮಯಾಕೀರ್ಣಂ ಕಾನ್ಯಕುಬ್ಜೇತಿ ವಿಶ್ರುತಂ ॥ ೩ ॥

---

### ಇಪ್ಪತ್ತನೆಯ ಅಧ್ಯಾಯವು

೧. ವಜ್ರಮಹಾರಾಜನು ಹೇಳಿದನು— ಎಲೈ ಮಾರ್ಕಂಡೇಯನೇ, ಭಾಗೀರಥೀ ಗಂಗೆಯೆಂಬ ಎರಡು ಹೆಸರುಗಳು ದೇವನದಿಗೆ ಬಂದ ಕಥೆಗಳನ್ನು ಕೇಳಿದೆನು. ಆದರೆ ಸಮುದ್ರಗಾಮಿಯಾದ ಗಂಗೆಗೆ ಜಾಹ್ನವಿಯೆಂದು ಹೆಸರೇಕೆ ಬಂದಿತು ? ದಯ ಮಾಡಿ ಹೇಳು.

೨. ಮಾರ್ಕಂಡೇಯನು ಹೇಳಿದನು— ಮಧ್ಯ ದೇಶದಲ್ಲಿ ವರ್ಣಾಶ್ರಮಧರ್ಮನಿರತರಾದ ಪ್ರಜೆಗಳಿಂದ ಕೂಡಿದ ಪಂಚಾಲವೆಂಬ ರಾಜ್ಯವಿದೆ.

೩-೪. ಆ ರಾಜ್ಯದಲ್ಲಿ ಮಹೋದಯವೆಂಬ ಪಟ್ಟಣವಿದೆ. ಅದು ಕುಶಸ್ತಂಭ ಮಹಾರಾಜನಿಂದ ನಿರ್ಮಿತವಾದುದು. ಸರ್ವರತ್ನ ಸಮೃದ್ಧಿಯಾದ ಆ ಪೂರಿಗೆ

ತಸ್ಮಿನ್ನಭೂವ ಭೂಪಾಲೋ ಜಹ್ನುಃ ಪರಮಧಾರ್ಮಿಕಃ ।
ಯಸ್ಯ ಕೀರ್ತಿಮತಃ ಕೀರ್ತಿರ್ಬ್ರಹ್ಮಾಂಡಂ ವ್ಯಾಪ್ಯ ತಿಷ್ಠತಿ ॥ ೪ ॥

ಸ ಕದಾಚಿನ್ಮಹೀಪಾಲೋ ಹಯಮೇಧಮುಪಾಹರತ್ ।
ದೀಕ್ಷಿತಸ್ಯ ನರೇಂದ್ರಸ್ಯ ಯಜ್ಞವಾಟಂ ತು ನಿಮ್ನಗಾ ॥ ೫ ॥

ಪ್ಲಾವಯಾಮಾಸ ವೇಗೇನ ಜಲೌಘೈರ್ಯದುಸತ್ತಮ ।
ಪ್ಲಾವಿತೇ ಯಜ್ಞವಾಟೇ ತು ರಾಜಾ ಗಂಗಾಂ ತದಾಽಬ್ರವೀತ್ ॥ ೬ ॥

ಅಸ್ಯ ಗಂಗೇಽವಲೇಪಸ್ಯ ಸದ್ಯಃ ಫಲಮವಾಪ್ನುಹಿ ।
ಪಿಬಾಮಿ ಸಕಲಂ ತೋಯಂ ಸಹ ಸಾಗರವಲ್ಲಭೇ ॥ ೭ ॥

ಏವಮುಕ್ತ್ವಾ ಪಪೌ ರಾಜಾ ಸರ್ವಂ ಭಾಗೀರಥೀಜಲಂ ।
ತಪಸಾ ಮಹತಾ ರಾಜಂ ಸ್ತಥಾ ಯೋಗಬಲೇನ ಚ ॥ ೮ ॥

---

ಕಾನ್ಯಕುಬ್ಜವೆಂಬ ಮತ್ತೊಂದು ಹೆಸರೂ ಇದೆ. ಆ ವೂರಿನಲ್ಲಿ ಜಹ್ನುವೆಂಬ ಧೊರೆ ಇದ್ದನು. ಆತನಿಗೆ ಪರಮಧಾರ್ಮಿಕನೆಂಬ ಕೀರ್ತಿಯುಂಟಾಗಿ ಈಯಶಸ್ಸು ಬ್ರಹ್ಮಾಂಡದಲ್ಲೆಲ್ಲಾ ವ್ಯಾಪಿಸಿಕೊಂಡಿತ್ತು.

೫-೬. ಈ ಧೊರೆಯು ಒಂದಾನೊಂದು ಕಾಲದಲ್ಲಿ ಅಶ್ವಮೇಧಯಾಗಕ್ಕೆ ಆರಂಭಿಸಿ ಯಜ್ಞಶಾಲೆಯಲ್ಲಿ ದೀಕ್ಷಿತನಾಗಿ ಕುಳಿತುಕೊಂಡಿದ್ದನು: ಆ ಸಮಯದಲ್ಲಿ ಗಂಗಾನದಿಯು ವೇಗವಾಗಿ ಹರಿದುಕೊಂಡು ಬಂದು ಯಜ್ಞ ಶಾಲೆಯನ್ನು ತೇಲಿಸಿ ಬಿಟ್ಟಿತು. ಆಗ ಇದನ್ನು ನೋಡಿ ಜಹ್ನುವು ಗಂಗೆಯನ್ನು ಕುರಿತು ಇಂತೆಂದನು.

೭-೮. ಎಲೌ ಗಂಗೆಯೇ! ನನ್ನ ಯಜ್ಞಶಾಲೆಯನ್ನು ತೇಲಿಸಿದ್ದಕ್ಕೆ ತಕ್ಕಫಲವನ್ನು ಈಗಲೇ ನೀನು ಪಡೆಯುತ್ತೀಯೆ! ನಿನ್ನ ನೀರೆಲ್ಲವನ್ನೂ ನಾನು ಈಗಲೇ ಕುಡಿದುಬಿಡುವೆನೆಂದು ಹೇಳಿ ತನ್ನ ಮಹತ್ತರವಾದ ತಪೋಯೋಗಬಲಗಳಿಂದ ಭಾಗೀರಥೀ ನದಿಯ ನೀರನ್ನೆಲ್ಲಾ ಏಕಾಪೋಶನವಾಗಿ ಕುಡಿದುಬಿಟ್ಟನು.

**ದೃಷ್ಟ್ವೈವ ಗಂಗಾಂ ನಿಸ್ತೋಯಾಂ ದೀನೈರ್ಮುನಿಜನೈಸ್ತತಃ ।**
**ಪ್ರಸಾದಿತಸ್ತು ಗಂಗಾರ್ಥೇ ತತ್ಯಾಜ ಶ್ರವಣೇನ ತಾಂ ॥ ೯ ॥**

**ದುಹಿತೃತ್ವೇ ಚ ಜಗ್ರಾಹ ರಾಜಾ ಭಾಗೀರಥೀಂ ತದಾ ।**
**ತೇನ ಸಾ ಕಥಿತಾ ಲೋಕೇ ಜಾಹ್ನವೀ ಯದುನಂದನ ॥ ೧೦ ॥**

**ಅತೀವ ದರ್ಪಿತೋ ರಾಜಾ ಗಂಗಾಯಾಸ್ಸ ಯದಾ ನೃಪ ।**
**ಯಶೋರ್ಥಂ ಪ್ಲಾವಯಾಮಾಸ ಯಜ್ಞವಾಟಂ ತದಾನಘ ॥ ೧೧ ॥**

**ಏವಂ ತ್ರಿಲೋಕೇ ನೃಪ ಜಹ್ನುಕನ್ಯಾ**
**ಪ್ರೋಕ್ತಾ ಬುಧೈರ್ವಿಷ್ಣುಪದೀ ಪವಿತ್ರಾ ।**

---

೯-೧೦. ನೀರಿಲ್ಲದ ಗಂಗಾನದಿಯನ್ನು ಋಷಿಜನರು ನೋಡಿ ಅಳುತ್ತಾ ಜಹ್ನು ರಾಜರನ್ನು ಪ್ರಾರ್ಥಿಸಿದರು. ಋಷಿಗಳ ದೈನ್ಯವನ್ನು ನೋಡಿ ಜಹ್ನುವು ಕರುಣಾರ್ದ್ರನಾಗಿ ಕಿವಿಯಿಂದ ಗಂಗೆಯನ್ನು ಈಚೆಗೆ ಬಿಟ್ಟನು. ಅಲ್ಲಿಂದಾಚೆಗೆ ಗಂಗೆಯನ್ನು ತನ್ನ ಮಗಳನ್ನಾಗಿ ಗ್ರಹಿಸಿದ್ದರಿಂದ ಗಂಗೆಗೆ ಅಂದಿನಿಂದ ಜಾಹ್ನವಿಯೆಂಬ ಹೆಸರು ಪ್ರಸಿದ್ಧವಾಯಿತು.

೧೧-೧೨. ಗಂಗೆಯು ತನ್ನ ಮಗಳಾದ ಮೇಲೆ ಜಹ್ನುವು ದರ್ಪಿತನಾಗಿ ಒಳ್ಳೇ ಯಶಸ್ಸು ಬಂದದ್ದೇ ಸಾಕೆಂದು ಯಜ್ಞಶಾಲೆಯನ್ನು ಗಂಗೆಯಲ್ಲಿ ತೇಲಿ ಬಿಟ್ಟುಬಿಟ್ಟನು ಈ ರೀತಿಯಾಗಿ ಎಲೈ ವಜ್ರನರಪತಿಯೇ! ಗಂಗೆಯು ಜಹ್ನುವಿನ ಮಗಳಾಗಿ ಜಾಹ್ನವಿ ಎಂಬ ಹೆಸರನ್ನು ಹೊಂದಿದ ಚರಿತ್ರೆಯನ್ನು ಹೇಳಿದೆನು. ವಿಷ್ಣುಪಾದದಿಂದ ಜನಿಸಿದ

**ಹಿಮಾಲಯಸ್ಯಾದ್ರಿಪತೇಸ್ತನೂಜಾ**
**ಸಮುದ್ರಪತ್ನೀ ವರದಾ ವಿಶೋಕಾ ॥ ೧೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಮಾರ್ಕಂಡೇಯ ವಜ್ರ ಸಂವಾದೇ ಜಹ್ನುಕನ್ಯೋಪಾಖ್ಯಾನಂ ನಾಮ ವಿಂಶತಿತಮೋಧ್ಯಾಯಃ**

---

ಪರಮ ಪವಿತ್ರಳೂ, ಸಮುದ್ರಪತ್ನಿಯೂ ಆದ, ಹಿಮಾಚಲಪುತ್ರಿಯಾದ ಗಂಗೆಯು ಕೇಳಿದ ಇಷ್ಟಾರ್ಥಗಳನ್ನು ಕೊಡುತ್ತಾ ಜನರ ದುಃಖ ಪರಿಹಾರಮಾಡುತ್ತಿರುವಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಸಗರೋಪಾಖ್ಯಾನವೆಂಬ ಹೆಸರಿನ ಇಪ್ಪತ್ತನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

---

# ಅಥ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಏಕವಿಂಶತಿತಮೋಽಧ್ಯಾಯಃ

---

|| ವಜ್ರ ಉವಾಚ ||

ಗಂಗಾವಿಷ್ಣುಪದೀ ಲೋಕೇ ಕಿಮರ್ಥಂ ಕಥಿತಾ ಬುಧೈಃ ।
ತನ್ಮಮಾಚಕ್ಷ್ವ ತತ್ತ್ವೇನ ಭೃಗುವಂಶವಿವರ್ಧನ || ೧ ||

|| ಮಾರ್ಕಂಡೇಯ ಉವಾಚ ||

ಸ್ವಾಯಂಭುವೇಽಂತರೇ ಪೂರ್ವಂ ಚತ್ವಾರೋ ದೇವತಾಗಣಾಃ ।
ಜಯಾಖ್ಯಾಶ್ಚಾಜಿತಾಖ್ಯಾಶ್ಚ ಶುಕ್ರಾಖ್ಯಾಶ್ಚ ಪ್ರಕೀರ್ತಿತಾಃ || ೨ ||

ತೇಷಾಂ ಬಭೂವ ದೇವೇಂದ್ರೋ ವಿಶ್ವಭುಗ್ಲೋಕಪೂಜಿತಃ ।
ಅಸಂಸ್ತಸ್ಯಾಸುರಾ ಘೋರಾಸ್ತದಾ ದಾಯಾದಬಾಂಧವಾಃ || ೩ ||

---

## ಇಪ್ಪತ್ತೊಂದನೆಯ ಅಧ್ಯಾಯವು

೧. ವಜ್ರಮಹಾರಾಜನು ಹೇಳಿದನು— ಭೃಗುವಂಶವನ್ನು ಅಭಿವೃದ್ಧಿಮಾಡುವ ಎಲೈ ಮಾರ್ಕಂಡೇಯನೇ, ಜನರು ಗಂಗಾನದಿಯನ್ನು ವಿಷ್ಣುಪದೀ ಎಂದು ಕರೆಯುತ್ತಾರಲ್ಲ ; ಆ ಹೆಸರು ಬಂದುದರ ಕಾರಣವನ್ನು ದಯಮಾಡಿ ನನಗೆ ತಿಳಿಸಬೇಕೆಂದು ಪ್ರಾರ್ಥಿಸಿದನು.

೨-೩. ಮಾರ್ಕಂಡೇಯನು ಹೇಳಿದನು—ಪೂರ್ವದಲ್ಲಿ ಸ್ವಾಯಂಭುವಮನ್ವಂತರದಲ್ಲಿ ನಾಲ್ಕು ಮಂದಿ ದೇವತಾಗಣಗಳಿದ್ದರು. ಜಯ, ಅಜಿತ, ಶುಕ್ರರೆಂಬ ಮೂವರೂ ಇವರುಗಳಿಗೊಡೆಯನಾದ ಲೋಕಪೂಜಿತನಾದ ವಿಶ್ವಭುಜನಾಮಕ ದೇವೇಂದ್ರನೂ ಸೇರಿ ನಾಲ್ಕು ಜನರು. ಇವರುಗಳಿಗೆ ದಾಯಾದಿಗಳಾದ ರಾಕ್ಷಸರು ಅನೇಕಮಂದಿ ಇದ್ದರು.

ಬಭೂವ ರಾಜಾ ತೇಷಾಂ ಚ ಬಾಷ್ಕಲಿರ್ನಾಮ ನಾಮತಃ ।
ಯೇನ ವಿಕ್ರಮ್ಯ ಶಕ್ರಸ್ಯ ಹೃತಂ ರಾಜ್ಯಂ ತದಾ ಬಲಾತ್　　॥ ೪ ॥

ಹೃತರಾಜ್ಯಸ್ತು ದೇವೇಂದ್ರೋ ಬ್ರಹ್ಮಾಣಂ ಶರಣಂ ಗತಃ ।
ಬ್ರಹ್ಮಾಽಪಿ ಶಕ್ರಮಾದಾಯ ಜಗಾಮ ಶರಣಂ ಹರಿಂ　　॥ ೫ ॥

ನಿವೇದಯಾಮಾಸ ತದಾ ದೇವದೇವಾಯ ಶಾರ್ಙ್ಗಿಣೇ ।
ಬಾಷ್ಕಳೇರ್ವಿಜಯಂ ಸರ್ವಂ ಬ್ರಹ್ಮಾ ಶುಭಚತುರ್ಮುಖಃ　　॥ ೬ ॥

॥ ಶ್ರೀ ಭಗವಾನುವಾಚ ॥

ಬ್ರಹ್ಮನ್ ಪ್ರತ್ಯಾಹರಿಷ್ಯಾಮಿ ರಾಜ್ಯಮಸ್ಯ ಶತಕ್ರತೋಃ ।
ದಿವಿ ದೇವೇಷು ಧರ್ಮಾತ್ಮನ್! ನಿರ್ವೃತೋ ಭವ ಮಾಚಿರಂ　　॥ ೭ ॥

ಅಹಂ ವಾಮನರೂಪೇಣ ಪ್ರಯಾಸ್ಯೇ ಬಾಷ್ಕಲಿಂ ನೃಪಂ ।
ಮಾಂ ದೃಷ್ಟ್ವಾ ವಿಸ್ಮಿತಂ ತಂ ತು ಗತ್ವಾ ಯಾಚತು ದೇವರಾಟ್　　॥ ೮ ॥

---

೪. ಆ ರಾಕ್ಷಸರಿಗೆ ಬಾಷ್ಕಲಿಯೆಂಬ ಹೆಸರಿನ ರಾಜನಿದ್ದನು. (ಬಲಿ) ಈ ರಾಕ್ಷಸರಾಜನಿಂದ ಇಂದ್ರನ ಅಮರಾವತೀರಾಜ್ಯವು ಬಲಾತ್ಕಾರದಿಂದ ಅಪಹರಿಸಲ್ಪಟ್ಟಿತು.

೫. ದೇವೇಂದ್ರನು ರಾಜ್ಯವನ್ನು ಕಳೆದುಕೊಂಡು ಬ್ರಹ್ಮನನ್ನು ಮರೆಹೊಕ್ಕನು ಬ್ರಹ್ಮನು ಆಗ ಇಂದ್ರನನ್ನು ಜೊತೆಯಲ್ಲಿ ಕರೆದುಕೊಂಡು ಶ್ರೀಮನ್ನಾರಾಯಣನನ್ನು ಇಬ್ಬರೂ ಮರೆಹೊಕ್ಕರು.

೬. ಬಾಷ್ಕಲಿರಾಕ್ಷಸನು ಇಂದ್ರನನ್ನು ಜಯಿಸಿದ ವೃತ್ತಾಂತವನ್ನು ಚತುರ್ಮುಖಬ್ರಹ್ಮನು ದೇವದೇವೋತ್ತಮನಾದ ಶ್ರೀಮನ್ನಾರಾಯಣನಿಗೆ ವಿಜ್ಞಾಪನೆ ಮಾಡಿಕೊಂಡನು.

೭-೧೦. ಭಗವಂತನು ಹೇಳುತ್ತಾನೆ— ಎಲೈ ಬ್ರಹ್ಮನೇ, ಹೆದರಬೇಡ. ನಾನು ದೇವೇಂದ್ರನ ರಾಜ್ಯವನ್ನು ಹಿಂತಿರುಗಿ ಕೊಡಿಸುತ್ತೇನೆ. ಮತ್ತು ದೇವತೆಗಳು ಅವರವರ ಸ್ಥಾನಗಳಲ್ಲಿರುವಂತೆ ಮಾಡುತ್ತೇನೆ. ನೀನು ಜಾಗ್ರತೆ ಹಿಂತಿರುಗಿ ಹೊರಡು. ನಾನು

ಲೋಕತ್ರಯಂ ಮನು ಹೃತಂ ತ್ವಯಾ ವಿಕ್ರಮ್ಯ ಬಾಷ್ಕಲೇ ।
ತತ್ರಾಗ್ನಿ ಶರಣಾರ್ಥಾಯ ದೀಯತಾಂ ಮೇ ಕ್ರಮತ್ರಯಂ ॥ ೯ ॥

ಅತೀವ ಹ್ರಸ್ವಗಾತ್ರಸ್ಯ ವಾಮನಸ್ಯಾಸ್ಯ ಮಾಚಿರಂ ।
ಏವಮುಕ್ತಸ್ತು ಶಕ್ರೇಣ ತದಾ ದಾತಾ ಕ್ರಮತ್ರಯಂ ॥ ೧೦ ॥

॥ ಮಾರ್ಕಂಡೇಯ ಉವಾಚ ॥

ಇತ್ಯೇವ ಮುಕ್ತೋ ದೇವೇನ ಬ್ರಹ್ಮಾ ಸ್ವಭವನಂ ಗತಃ ।
ದೇವೋಽಪಿ ವಾಮನೋ ಭೂತ್ವಾ ಪ್ರಯಾತೋ ಯತ್ರ ಬಾಷ್ಕಲಿಃ ॥ ೧೧ ॥

ಬಾಷ್ಕಲಿರ್ವಾಮನಂ ದೃಷ್ಟ್ವಾ ವಿಸ್ಮಯೋತ್ಫುಲ್ಲಲೋಚನಃ ।
ನಿರೀಕ್ಷ್ಯ ತಂ ಯಥಾಕಾಮಮಸುರೈರ್ಬಹುಭಿರ್ವೃತಃ ॥ ೧೨ ॥

---

ಕುಳ್ಳಬ್ರಾಹ್ಮಣನಾಗಿ ಬಾಷ್ಕಲಿ (ಬಲಿಚಕ್ರವರ್ತಿ) ರಾಜನಹತ್ತಿರಕ್ಕೆ ಹೋಗುತ್ತೇನೆ. ನನ್ನನ್ನು ನೋಡಿ ಬಾಷ್ಕಲಿಯು ಪರಮಾಶ್ಚರ್ಯಪಡುತ್ತಿರುತ್ತಾನೆ. ಆಗ ಇಂದ್ರನು ಬಾಷ್ಕಲಿ (ಬಲಿ)ಯ ಹತ್ತಿರಕ್ಕೆ ಹೋಗಿ ಹೀಗೆಂದು ಕೇಳಲಿ!—ಎಲೈ ಬಾಷ್ಕಲಿಯೇ, ನಿನ್ನಿಂದ ನನ್ನ ಮೂರು ಲೋಕವೂ ಅಪಹೃತವಾಯಿತು. ಆ ಮೂರುಲೋಕದಲ್ಲೆಲ್ಲಿ ಯಾದರೂ ಅಗ್ನಿರಕ್ಷಣೆ (ಔಪಾಸನ)ಕ್ಕಾಗಿ ಮೂರು ಹೆಜ್ಜೆಯಷ್ಟು ನೆಲವನ್ನು ಈ ಹ್ರಸ್ವ ಶರೀರಿಯಾದ ವಾಮನನಿಗೆ ದಾನಕೊಡು ಹೀಗೆಂದು ಕೇಳಿದೊಡನೆ ಬಾಷ್ಕಲಿಯು ನಿನ್ನ ಮಾತಿನಂತೆ ಮೂರು ಹೆಜ್ಜೆ ನೆಲವನ್ನು ದಾನವಾಗಿ ಕೊಡುತ್ತಾನೆ.

೧೧. ಮಾರ್ಕಂಡೇಯನು ಹೇಳುತ್ತಾನೆ—ಈ ರೀತಿ ಮಹಾವಿಷ್ಣುವು ಹೇಳಿ ದೊಡನೆ ಬ್ರಹ್ಮನು ತನ್ನ ಲೋಕಕ್ಕೆ ಹೊರಟುಹೋದನು. ಶ್ರೀಮನ್ನಾರಾಯಣನೂ ಸಹ ವಾಮನ (ಕುಳ್ಳ) ಮೂರ್ತಿಯಾಗಿ ಬಾಷ್ಕಲಿ (ಬಲಿ) ರಾಜನು ಇದ್ದ ಸ್ಥಳಕ್ಕೆ ಪ್ರಯಾಣಮಾಡಿದನು

೧೨. ಬಾಷ್ಕಲಿ (ಬಲಿ)ಯು ಆ ವಾಮನಮೂರ್ತಿಯನ್ನು ನೋಡಿ ತೃಪ್ತಿಪಡ ಲಾರದೆ ವಿಸ್ಮಯವಿಸ್ಫಾರಿತನೇತ್ರಗಳಿಂದ ಎವೆಯಿಕ್ಕದೆ ಆ ಮೂರ್ತಿಯನ್ನು ಯಥೇಚ್ಛ ವಾಗಿ ಪುನಃ ಪುನಃ ರಾಕ್ಷಸವೃಂದದಿಂದ ಸುತ್ತುವರಿಯಲ್ಪಟ್ಟವನಾಗಿ ನೋಡುತ್ತಲೇ ಇದ್ದನು.

ಏತಸ್ಮಿನ್ನೇವ ಕಾಲೇ ತು ಶಕ್ರಸ್ತಂ ದೇಶಮಾಯಯೌ ।
ಪಾದ್ಯಾರ್ಘ್ಯಾಚಮನೀಯಾದ್ಯೈಃ ಶಕ್ರಂ ಸಂಪೂಜ್ಯ ಬಾಷ್ಕಲಿಃ ॥ ೧೩ ॥

ಕಿಮಾಗಮನಕಾರ್ಯಂ ತೇ ತಮುವಾಚ ಪ್ರಹೃಷ್ಟವಾಕ್ ।
ಅತ್ಯಾಶ್ಚರ್ಯಮಿದಂ ಮನ್ಯೇ ತವಾಗಮನಕಾರಣಂ ॥ ೧೪ ॥

॥ ಶಕ್ರ ಉವಾಚ ॥

ಲೋಕತ್ರಯಂ ಮೇಽಪಹೃತಂ ವಿಕ್ರಮೇಣ ತು ಬಾಷ್ಕಲೇ ।
ತತ್ರಾಗ್ನಿಶರಣಾರ್ಥಾಯ ದೀಯತಾಂ ಮೇ ಕ್ರಮತ್ರಯಂ ॥ ೧೫ ॥

ಅತೀವ ಹ್ರಸ್ವಗಾತ್ರಸ್ಯ ವಾಮನಸ್ಯಾಸ್ಯ ಪಾರ್ಥಿವ ।
ಭೂಮಿಭಾಗೇ ತು ಪಾರಕ್ಯೇ ವಸ್ತುಂ ನ ತ್ವಹಮುತ್ಸಹೇ ॥ ೧೬ ॥

॥ ಬಾಷ್ಕಲಿ ರುವಾಚ ॥

ಕ್ರಮತ್ರಯಂ ವಾಮನಕೇ ದೇವರಾಜ ಕೃತಂ ಶುಭಂ ।
ತತ್ರಾಸ್ವಮುದಿತಃ ಪ್ರಾಪ್ತಃ ಸುಖೀ ಸುರಪತೇ ಭವ ॥ ೧೭ ॥

---

೧೩-೧೪. ಹೀಗೆ ವಾಮನನನ್ನು ನೋಡುತ್ತಿರುವ ಸಮಯದಲ್ಲಿಯೇ ದೇವೇಂದ್ರನೂ ಆ ಸ್ಥಳಕ್ಕೆ ಬಂದನು. ದೇವೇಂದ್ರನು ಬಂದುದನ್ನು ನೋಡಿ ಬಾಷ್ಕಲಿಯು (ಬಲಿ) ಇಂದ್ರನು ತನ್ನ ಶತ್ರುವಾದಾಗ್ಯೂ ಧರ್ಮಾತ್ಮನಾದ್ದರಿಂದ ಇಂದ್ರನನ್ನು ಪಾದ್ಯಾರ್ಘ್ಯಾದ್ಯಾಚಮನೀಯಗಳಿಂದ ಯಥಾವಿಧಿಯಾಗಿ ಪೂಜಿಸಿ ಆತನನ್ನಿಂತು ಪ್ರಶ್ನಿಸಿದನು---ಎಲೈ ದೇವೇಂದ್ರನೇ, ನೀನು ಬಂದುದನ್ನು ನೋಡಿ ಅತ್ಯಾಶ್ಚರ್ಯವುಂಟಾಗಿದೆ. ನೀನು ಬಂದ ಕಾರಣವೇನೆಂದು ಸಂತೋಷದಿಂದ ಕೇಳಿದನು.

೧೫-೧೬. ಇಂದ್ರನು ಹೇಳುತ್ತಾನೆ—ಎಲೈ ಬಾಷ್ಕಲಿಯೇ ! ನೀನು ಪರಾಕ್ರಮದಿಂದ ನನ್ನ ಮೂರು ಲೋಕ (ಸ್ವರ್ಗ, ಮರ್ತ್ಯ, ಪಾತಾಳ)ಗಳನ್ನು ಅಪಹರಿಸಿರುತ್ತೀಯೆ. ಆ ಮೂರು ಲೋಕತ್ರಯದಲ್ಲೆಲ್ಲಿಯಾದರೂ ಅಗ್ನಿಸಂರಕ್ಷಣೆಗೋಸ್ಕರ ಮೂರು ಹೆಜ್ಜೆ ಭೂಮಿಯನ್ನು ಇಲ್ಲಿ ನಿಂತಿರುವ ಹ್ರಸ್ವಗಾತ್ರನಾದ ವಾಮನನಿಗೆ ದಾನವಾಗಿ ಕೊಡು. ಹಾಗಲ್ಲದೆ ಪರಕೀಯರ ರಾಜ್ಯದಲ್ಲಿ ನಾನು ವಾಸಮಾಡಲಿಚ್ಛಿಸುವುದಿಲ್ಲವೆನಲು,

೧೭. ಬಾಷ್ಕಲಿಯು ಹೇಳುತ್ತಾನೆ—ಎಲೈ ದೇವರಾಜನಾದ ಇಂದ್ರನೇ, ನಿನ್ನ

॥ ಮಾರ್ಕಂಡೇಯ ಉವಾಚ ॥

ಏವಮುಕ್ತೋ ಬಾಷ್ಕಲಿನಾ ತ್ಯಕ್ತ್ವಾ ರೂಪಂ ತು ವಾಮನಂ ।
ಹರಿರ್ವಿಚಕ್ರಮೇ ಲೋಕಾನ್ ದೇವಾನಾಂ ಹಿತಕಾಮ್ಯಯಾ ॥ ೧೮ ॥

ಬ್ರಹ್ಮಲೋಕಂ ತತೋ ಗತ್ವಾ ಪಾತಾಳಂ ಚ ತತಃ ಪರಂ ।
ದೇವಸ್ಯ ವಾಮಶ್ಚರಣೋ ನಿವಿಷ್ಟೋ ದಾನವಾಲಯೇ ॥ ೧೯ ॥

ತತಃ ಕ್ರಮಂ ಸ ಪ್ರಥಮಂ ದದೌ ಸೂರ್ಯೇ ಜಗತ್ಪತಿಃ ।
ದ್ವಿತೀಯಂ ಚ ಧ್ರುವೇ ದೇವಃ ತೃತೀಯೇನ ಚ ಯಾದವ ॥ ೨೦ ॥

ಬ್ರಹ್ಮಾಂಡಂ ತಾಡಯಾಮಾಸ ಹ್ಯಸಂಪೂರ್ಣೇನ ಕೇಶವಃ ।
ಬ್ರಹ್ಮಾಂಡಸ್ತಾಡಿತಸ್ತೇನ ಛಿದ್ರತಾಮಗಮತ್ಪ್ರಭೋ ॥ ೨೧ ॥

ಬ್ರಹ್ಮಾಂಡಬಾಹ್ಯತೋ ಯೇನ ಶತಘ್ನೇನಾಂಭಸಾವೃತಂ ।
ತೇನಚ್ಛಿದ್ರೇಣ ತತ್ತೋಯಂ ವಿವೇಶಾಂಡಂ ಮಹೀಪತೇ ॥ ೨೨ ॥

---

ಮಾತಿನಂತೆ ಈ ವಾಮನನಿಗೆ ಮೂರು ಹೆಜ್ಜೆ ಭೂಮಿಯನ್ನು ಕೊಟ್ಟಿರುತ್ತೇನೆ. ನೀನು ಸಂತೋಷದಿಂದ ಈ ವಾಮನನೊಡನೆ ಬೇಕಾದಕಡೆ ಮೂರು ಹೆಜ್ಜೆ ಜಾಗದಲ್ಲಿ ಸುಖವಾಗಿ ವಾಸಮಾಡು.

೧೮. ಮಾರ್ಕಂಡೇಯನು ಹೇಳಿದನು—ಈ ರೀತಿ ಬಾಷ್ಕಲಿಯಿಂದ ಹೇಳಲ್ಪಡಲು, ಸಾಕ್ಷಾನ್ಮಹಾವಿಷ್ಣುವು ತಾನು ಧರಿಸಿದ್ದ ವಾಮನರೂಪವನ್ನು ಕೂಡಲೆ ತ್ಯಜಿಸಿ ದೇವತೆಗಳ ಹಿತದೃಷ್ಟಿಯಿಂದ "ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಳ್ಹಮಸ್ಯ ಪಾಂಸುರೇ" ಎಂಬ ಪುರುಷಸೂಕ್ತಮಂತ್ರದಂತೆ ಲೋಕಗಳನ್ನೆಲ್ಲಾ ತನ್ನ ಮೂರು ಹೆಜ್ಜೆಯಿಂದ ಅಳೆದನು.

೧೯=೨೨. ಮೊದಲು ಭಗವಾನ್ ಮಹಾವಿಷ್ಣುವು ಬ್ರಹ್ಮಲೋಕಕ್ಕೆ ಹೋದನು. ಬಳಿಕ ಪಾತಾಳಲೋಕಕ್ಕೆ ಹೋಗಿ ಅಲ್ಲಿ ದಾನವಾಲಯದಲ್ಲಿ ಎಡ ಹೆಜ್ಜೆಯನ್ನಿಟ್ಟನು. ಬಳಿಕ ಸೂರ್ಯಮಂಡಲಕ್ಕೆ ಹೋಗಿ ಮೊದಲನೇ ಹೆಜ್ಜೆಯನ್ನಿಟ್ಟು ಅಳೆದನು. ಎರಡನೇ ಹೆಜ್ಜೆಯನ್ನು ಧ್ರುವಮಂಡಲದಲ್ಲಿಟ್ಟನು. ಮೂರನೇ ಹೆಜ್ಜೆಗೆ ಜಾಗವಿಲ್ಲದೆ ಹೋಗಲು ಸಕಲ ಬ್ರಹ್ಮಾಂಡವನ್ನೂ ಮೂರನೇ ಹೆಜ್ಜೆಯಿಂದ ಒಡೆದನು. ಬ್ರಹ್ಮಾಂಡವು ಈ ಪಾದಘಾತದಿಂದ ಒಡೆದುಹೋಗಲು ಬ್ರಹ್ಮಾಂಡದ ಹೊರಗಿದ್ದ ಜಲವೆಲ್ಲವೂ

ಅಂಗುಷ್ಠಾಗ್ರಕ್ಷತಾದಂಡಾದ್ಯತ್ಪ್ರವಿಷ್ಟಂ ಜಲಂ ಶುಚಿ ।
ಪ್ರಾಪ್ತಾ ದೇವನದೀತ್ವಂ ತು ಸಾ ತು ವಿಷ್ಣುಪದೀ ನದೀ ॥ ೨೩ ॥

ದೇವನದ್ಯಾ ತಯಾ ವ್ಯಾಪ್ತಂ ಬ್ರಹ್ಮಾಂಡಂ ಸಕಲಂ ನೃಪ ।
ವಿಭೂತಿಭಿರ್ಮಹಾಭಾಗ ಸರ್ವಾನುಗ್ರಹಕಾಮ್ಯಯಾ ॥ ೨೪ ॥

ವಾಮನೇನ ಸಮಾಕ್ರಾಂತಾಃ ಸರ್ವೇಲೋಕಾ ಯದಾಽನಘ ।
ಅಸುರೈಸ್ತೇ ತದಾ ತ್ಯಕ್ತಾ ದೇವಾನಾಂ ಸತ್ಯಬಾಂಧವೈಃ ॥ ೨೫ ॥

ಪಾತಾಳಶ್ಚ ಯದಾ ತೇನ ನಾಕ್ರಾಂತಂ ಹರಿಮೇಧಸಾ ।
ಅಸುರೈಸ್ತೈಸ್ತದಾಘೋರೈರುಷ್ಯತೇ ಯದುನಂದನ ॥ ೨೬ ॥

ದೇವೋಽಪಿ ಹೃತ್ವಾ ತ್ರೈಲೋಕ್ಯಂ ಜಗಾಮಾಽದರ್ಶನಂ ತದಾ ।
ಪಾತಾಳನಿಲಯಶ್ಚಾಪಿ ಸುಖಮಾಸ್ತೇ ಸ ಬಾಷ್ಕಲಿಃ ॥ ೨೭ ॥

---

ಈ ವಿಷ್ಣುಪಾದದಿಂದಾದ ರಂಧ್ರದಿಂದ ಬ್ರಹ್ಮಾಂಡದೊಳಕ್ಕೆ ನುಗ್ಗಿ ಜಲಮಯವಾಯಿತು. ಹೆಬ್ಬೆರಳಿನ ತುದಿಯಿಂದ ಆದ ಏಟಿನಿಂದಲೇ ಬ್ರಹ್ಮಾಂಡವು ತೂತಾಗಿ ಜಲವು ಒಳನುಗ್ಗಿ ಪ್ರವಾಹರೂಪವಾಗಿ ಹರಿದ ಪವಿತ್ರವಾದ ಜಲವೇ ದೇವಗಂಗಾನದಿಯಾಯಿತು. ಈ ರೀತಿ ವಿಷ್ಣುಪಾದಘಾತದಿಂದುತ್ಪನ್ನವಾದುದರಿಂದ ಗಂಗೆಗೆ ವಿಷ್ಣುಪದೀ ನದಿಯೆಂದು ಲೋಕದಲ್ಲಿ ಸುಪ್ರಸಿದ್ಧವಾದ ನಾಮವುಂಟಾಯಿತು.

೨೪-೨೭. ಇದರಿಂದಲೇ ಸಕಲಬ್ರಹ್ಮಾಂಡವೂ ದೇವನದಿಯಿಂದ ವ್ಯಾಪ್ತವಾಯಿತು. ಸರ್ವಾನುಗ್ರಹಬುದ್ಧಿಯಿಂದ ವಾಮನಾವತಾರೀ ಪರಮಾತ್ಮನಿಂದ ಸಕಲ ಲೋಕಗಳೂ ಯಾವಾಗ ಆಕ್ರಮಿಸಲ್ಪಟ್ಟವೋ ಆ ಕೂಡಲೆ ಮಹಾ ವಿಭೂತಿಪುರುಷರಿಂದಲೂ ಮಹಾತ್ಮರಾದ ದೇವತೆಗಳಿಂದಲೂ ಸ್ವರ್ಗ ಭೂಮಿಗಳು ಆಕ್ರಾಂತವಾದವು. ದೇವತೆಗಳನ್ನು ಜಯಿಸಲಾರದೆ ಆಗ ದಾನವರೆಲ್ಲರೂ ಪಾತಾಳಲೋಕಕ್ಕೆ ಹೋಗಿ ಸೇರಿಕೊಂಡರು. ಯಾವಾಗ ತ್ರಿಲೋಕವೂ ವಶವಾಯಿತೋ ಆ ಕೂಡಲೇ ಪರಮಾತ್ಮನು ಅಂತರ್ಧಾನನಾದನು. ಬಾಷ್ಕಲಿರಾಜನು ಪಾತಾಳಲೋಕದಲ್ಲಿ ಮನೆಯನ್ನು ಮಾಡಿಕೊಂಡು ಈಗಲೂ ಸುಖವಾಗಿ ವಾಸವಾಗಿದಾನೆ.

**ಶಕ್ರೋಽಪಿ ಪಾಲಯಾಮಾಸ ವಿಪಶ್ಚಿದ್ಭುವನಂ ತದಾ ।**
**ಇಮಂ ತ್ರಿವಿಕ್ರಮಂ ನಾಮ ಪ್ರಾದುರ್ಭಾವಂ ಜಗದ್ಗುರೋಃ || ೨೮ ||**

**ಗಂಗಾಸಂಭವಸಂಯುಕ್ತಂ ಸರ್ವಕಿಲ್ಬಿಷನಾಶನಂ ।**
**ತೇನೈವ ದೇವದೇವೇನ ಪ್ರಾಪ್ತೇ ವೈವಸ್ವತೇಽಂತರೇ ।**
**ಭೂಯೋ ಲೋಕಾಸ್ತ್ರಯಃ ಕ್ರಾಂತಾಃ ಪದಾ ಸಂಯಮಿನೋಽನೃಪ || ೩೦ ||**

**ಅನೇನ ಕಾರಣೇನೋಕ್ತಾ ಗಂಗಾ ವಿಷ್ಣುಪದೀ ನೃಪ ।**
**ಯಯಾ ಸರ್ವಮಿದಂ ವ್ಯಾಪ್ತಂ ತ್ರೈಲೋಕ್ಯಂ ಸ ಚರಾಚರಂ || ೩೧ ||**

**ಗಂಗಾಸಮುತ್ಪತ್ತಿರಿಯಂ ಮಯೋಕ್ತಾ**
**ಶ್ರುತ್ವೈವ ಯಾಂ ಮುಂಚತಿ ಸರ್ವಪಾಪಂ ।**

---

೨೮-೩೦. ದೇವೇಂದ್ರನೂ ಕೂಡ ಸ್ವರ್ಗಲೋಕವನ್ನು ಮರಳಿ ಪಡೆದು ಸುಖವಾಗಿ ರಾಜ್ಯಭಾರಮಾಡುತ್ತಿದ್ದನು. ಈ ರೀತಿಯಾದ ಭಗವಂತನ ತ್ರಿವಿಕ್ರಮಾವತಾರ ಕಥೆಯನ್ನೂ, ಗಂಗಾವತರಣವನ್ನೂ, ಯಾರು ತಿಳಿದುಕೊಳ್ಳುವರೋ ಅವರು ತಾವು ಹಿಂದೆ ಮಾಡಿದ ಸಕಲ ಪಾಪಗಳನ್ನೂ ಕಳೆದುಕೊಂಡು ಪುಣ್ಯವಂತರಾಗುತ್ತಾರೆ. ಅದೇ ದೇವದೇವೋತ್ತಮನಾದ ಮಹಾವಿಷ್ಣುವಿನಿಂದ ಈ ವೈವಸ್ವತಮನ್ವಂತರದಲ್ಲೂ ಸಹ ಮೂರುಲೋಕಗಳೂ ವಿಷ್ಣುಪದಗಳಿಂದಲೇ ಆಕ್ರಮಿಸಲ್ಪಟ್ಟಿರುತ್ತವೆ. ಕೇಳಯ್ಯಾ ! ವಜ್ರಮಹಾರಾಜ.

೩೧-೩೨. ಈ ಕಾರಣದಿಂದಲೇ ಗಂಗೆಗೆ ವಿಷ್ಣುಪದಿಯೆಂಬ ಹೆಸರು ಬಂದಿದೆ. ಸಚರಾಚರವಾದ ಮೂರುಲೋಕವೂ ಈ ಗಂಗೆಯಿಂದಲೇ ವ್ಯಾಪ್ತವಾಗಿದೆ. ನಾನು ಹೇಳಿದ ಈ ಗಂಗೋತ್ಪತ್ತಿಯ ಕಥೆಯನ್ನು ಯಾರು ಕೇಳುವರೋ ಅವರು ಸರ್ವ

ಪಾಪೈರ್ವಿಶಿಷ್ಟೋಽಪಿ ನರೋ ನೃವೀರ
ಸಾಧುವ್ರತಸ್ತು ತ್ರಿದಿವಂ ಪ್ರಯಾತಿ　　॥ ೩೨ ॥

ಇತಿ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ತ್ರಿವಿಕ್ರಮೋಪಾಖ್ಯಾನಂ ನಾಮ
ಏಕವಿಂಶತಿತಮೋಽಧ್ಯಾಯಃ

---

ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಪಾಪಕಾರ್ಯಮಾಡುತ್ತಿರುವ ಜನರು ಕೇಳುವ ಪರಾವರೆ ಒಳ್ಳೇ ಬುದ್ಧಿಯನ್ನು ಕಲಿತುಕೊಂಡು ಈ ದೇಹಾವಸಾನದಲ್ಲಿ ಸ್ವರ್ಗವನ್ನು ಪಡರುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ತ್ರಿವಿಕ್ರಮೋಪಾಖ್ಯಾನವೆಂಬ ಹೆಸರಿನ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ದ್ವಾವಿಂಶತಿತಮೋಧ್ಯಾಯಃ

---

**॥ ವಜ್ರ ಉವಾಚ ॥**

**ಯಥಾ ವಿಷ್ಣುಪದೀ ಗಂಗಾ ತ್ರೈಲೋಕ್ಯಂ ವ್ಯಾಪ್ಯ ತಿಷ್ಠತಿ ।**
**ಯಥಾ ತಥಾ ಭೃಗುಶ್ರೇಷ್ಠ ಸರ್ವಮೇವ ಪ್ರಕೀರ್ತಯ** ॥ ೧ ॥

**॥ ಮಾರ್ಕಂಡೇಯ ಉವಾಚ ॥**

**ಪ್ರವಿಶ್ಯ ದೇವೀ ಬ್ರಹ್ಮಾಂಡಂ ವಿಷ್ಣುಲೋಕಮುಪಾಗತಾ ।**
**ಬ್ರಾಹ್ಮೀಂ ಸಭಾಂ ಪ್ಲಾವಯಿತ್ವಾ ತಪೋಲೋಕಮುಪಾಗತಾ** ॥ ೨ ॥

**ಜನಲೋಕಂ ಗತಾ ತಸ್ಮಾನ್ಮಹರ್ಲೋಕಂ ತತೋ ಗತಾ ।**
**ಸ್ವರ್ಗಲೋಕಂ ಸಮಾಸಾದ್ಯ ಪ್ರವಿಷ್ಟಾ ಚಂದ್ರಮಂಡಲಂ** ॥ ೩ ॥

---

## ಇಪ್ಪತ್ತೆರಡನೆಯ ಅಧ್ಯಾಯವು

೧. ವಜ್ರಭೂಪಾಲಕನು ಹೇಳಿದನು—ಎಲೈ ಮಾರ್ಕಂಡೇಯನೇ, ವಿಷ್ಣು ಪಾದೋದ್ಭವಳಾದ ಗಂಗೆಯು ತ್ರಿಲೋಕವನ್ನು ವ್ಯಾಪಿಸಿಕೊಂಡಿರುವಳೆಂದು ಹೇಳಿದೆಯಷ್ಟೆ? ಆ ಕ್ರಮವನ್ನೆಲ್ಲಾ ಸಂಪೂರ್ಣವಾಗಿ ನನಗೆ ತಿಳಿಸು.

೨-೫. ಮಾರ್ಕಂಡೇಯನು ಹೇಳಿದನು—ಗಂಗಾನದಿಯು ಬ್ರಹ್ಮಾಂಡವನ್ನು ಹೊಕ್ಕೊಡನೆ ವಿಷ್ಣುಲೋಕಕ್ಕೆ ಮೊದಲು ಹೋಗಿ, ಅಲ್ಲಿಂದ ಬ್ರಹ್ಮಲೋಕ, ಕ್ರಮವಾಗಿ ತಪೋಲೋಕ, ಜನಲೋಕಗಳನ್ನು ಬಳಸಿಕೊಂಡು ಅಲ್ಲಿಂದ ಮಹರ್ಲೋಕಕ್ಕೆ ಬಂದಳು. ಮುಂದೆ ಹೊರಟ ಆ ಮಹಾಭಾಗೆಯು ಸ್ವರ್ಗಲೋಕವನ್ನು ಪ್ರವೇಶಿಸಿ ಅಲ್ಲಿಂದ ಚಂದ್ರಮಂಡಲಕ್ಕೆ ಪ್ರಯಾಣಮಾಡಿದಳು. ಬಳಿಕ ಚಂದ್ರಮಂಡಲದಿಂದ

**ಚಂದ್ರಮಂಡಲವಿಭ್ರಷ್ಟಾ ಭುವರ್ಲೋಕ ಮುಪಾಗತಾ ।**
**ಆಕಾಶ ಗಂಗಾ ಕಥಿತಾ ತತ್ರ ಸಾ ರತಿವರ್ಧಿನೀ ॥ ೪ ॥**

**ತಸ್ಯಾಸ್ತು ದೃಶ್ಯತೇ ಪಂಥಾಸ್ಸತತಂ ವ್ಯೋಮ್ನಿ ನಿರ್ಮಲೇ ।**
**ಆಕಾಶಗಂಗಾ ಮಧ್ಯೇ ಸಾ ಮೇರೌ ನಿಪತಿತಾ ಗಿರೌ ॥ ೫ ॥**

**ಮೇರುಮಧ್ಯಾದದೃಶ್ಯಂತೀ ದೃಶ್ಯಂತೀ ಚ ತಥಾ ಕ್ವಚಿತ್ ।**
**ಪ್ರಯಾತಾ ಸರ್ವವರ್ಷಾಣಿ ದ್ವೀಪಾನಿ ಚ ಮಹಾಮತೇ ॥ ೬ ॥**

**ಸಾ ತು ದೇವೀ ಜಯಾ ನಾಮ ಕುರುವರ್ಷೇ ಹ್ರದಾಸ್ತು ತೇ ।**
**ತೇಭ್ಯಃ ಶಾಂತಾ ಚ ಸಾಧ್ವೀ ಚ ದ್ವಿಧಾ ಗಂಗಾ ವಿನಿಸ್ಸೃತಾ ॥ ೭ ॥**

**ಜ್ಯೋತ್ಸ್ನಾ ಚ ಮೃಗಮಂದಾ ಚ ಸ್ಮೃತಾ ಹೈರಣ್ವತೀ ಶುಭಾ ।**
**ಪುಂಡರೀಕಾ ಪಯೋದಾ ಚ ರಮ್ಯೇ ವರ್ಷೇ ನಿಗದ್ಯತೇ ॥ ೮ ॥**

---

ಹೊರಹೊರಟು ಅಲ್ಲಿಂದ ಭುವರ್ಲೋಕಕ್ಕೆ ಬಂದಳು. ಅಲ್ಲಿ ಅವಳು ಆಹ್ಲಾದವನ್ನು ಉಂಟುಮಾಡುತ್ತಾ ಆಕಾಶಗಂಗೆಯೆಂದು ಹೆಸರನ್ನು ಪಡೆದಳು. ಈಗಲೂ ಆಕಾಶ ಗಂಗೆಯು ಹರಿಯುವ ದಾರಿಯು ನಿರ್ಮಲವಾದ ಆಕಾಶದಲ್ಲಿ ಕಾಣುತ್ತಾ ಇದೆ. ಬಳಿಕ ಆ ಆಕಾಶಗಂಗೆಯು ಅಲ್ಲಿಂದ ಹೊರಟು ಮೇರುಪರ್ವತದಲ್ಲಿ ಪ್ರವೇಶಿಸಿದಳು.

೬-೧೦. ಮೇರುಮಧ್ಯಸಂಭವಳಾದ ಒಡನೆಯೇ-ಗಂಗೆಯು ಕೆಲವು ದೂರದ ತನಕ ಕಣ್ಣಿಗೆ ಕಾಣಿಸದೆಯೂ ಅಲ್ಲಿಂದಾಚೆಗೆ ಕಣ್ಣಿಗೆ ಗೋಚರವಾಗಿಯೂ ಪ್ರವಹಿಸಿ ಸಕಲ ವರ್ಷಗಳಲ್ಲಿಯೂ ಸಕಲ ದ್ವೀಪಗಳಲ್ಲಿಯೂ ಸಂಚರಿಸಿ ಅಲ್ಲಿಂದಾಚೆಗೆ ಜಯಾ ಎಂಬ ಹೆಸರಿನಿಂದ ಹರಿದು ಮುಂದೆ ಕುರುವರ್ಷದಲ್ಲಿ ಮಡುವಾಗಿ ಹರಿದು ಮುಂದಕ್ಕೆ ಶಾಂತಾ, ಸಾಧ್ವೀ ಎಂಬ ಎರಡು ಹೆಸರುಗಳಿಂದ ಎರಡು ಭಾಗವಾಗಿ ಹೊರಟಳು ಮೊದಲು ಗಂಗೆಯು ರಮ್ಯವರ್ಷದಲ್ಲಿ ಜ್ಯೋತ್ಸ್ನಾ, ಮೃಗಮಂದಾ, ಹಿರಣ್ವತೀ, ಪುಂಡರೀಕಾ, ಪಯೋದಾ ಎಂಬ ಹೆಸರುಗಳಿಂದ ಹರಿದಳು. ಬಳಿಕ ಇಳಾವೃತ ವರ್ಷ ದಲ್ಲಿ ಭದ್ರಾ, ಗಾಂಧರ್ವೀ, ಜಾಂಬವತೀ ಮೊದಲಾದ ಹೆಸರುಗಳಿಂದ ಪ್ರವಹಿಸಿದಳು.

ಭದ್ರಾ ಚ ಕಥಿತಾ ದೇವೀ ಗಾಂಧರ್ವೀ ಚ ಮನೋನುಗಾ ।
ಇಳಾವೃತೇ ತಥಾ ಸೈವ ಪ್ರೋಕ್ತಾ ಜಾಂಬವತೀ ಶುಭಾ ॥ ೯ ॥

ತಸ್ಯಾಸ್ತೀರಭವಂ ಮೂರ್ಧ್ನಿ ಕನಕಂ ಧಾರ್ಯತೇ ಸುರೈಃ ।
ಕೇತುಮಾಲಾ ಚ ಕಥಿತಾ ನಿರ್ಮಲಾಽನಡ್ವಲಾ ತಥಾ ॥ ೧೦ ॥

ಮನಸ್ವಿನೀ ಜ್ಯೋತಿಷ್ಮತೀ ಹರಿವರ್ಷೇ ನಿಗದ್ಯತೇ ।
ತಥಾ ಕಿಂಪುರುಷಾಖ್ಯೇ ತು ರಂಭಾ ಚಂದ್ರವತೀ ಶುಭಾ ॥ ೧೧ ॥

ಇಂದ್ರದ್ಯುಮ್ನೇ ಪಯೋದಾ ಸಾ ಕಾಶ್ಯೆಕಾ ಮತಿಪಾವನೀ ।
ಮನೋಜವಾ ತಾಮ್ರಪರ್ಣೀ ಗಭಸ್ತಿ ಮತಿಮಾಲಿನೀ ॥ ೧೨ ॥

ನಾಗದ್ವೀಪೇ ನಾಗವತೀ ಸೌಮ್ಯೇ ಸೋಮಪ್ರಭಾ ತಥಾ ।
ರುದ್ರಲೋಕಂ ತತಃ ಪ್ರಾಪ್ತಾ ಬ್ರಹ್ಮಲೋಕಂ ತತೋ ಗತಾ ॥ ೧೩ ॥

---

ಆ ನದಿಯ ತೀರಗಳಲ್ಲೆಲ್ಲಾ ಚಿನ್ನವು ತನ್ನಷ್ಟಕ್ಕೆ ತಾನೇ ಉತ್ಪತ್ತಿಯಾಗಿ ದೇವತೆಗಳಿಂದ ಆ ಸುವರ್ಣವು ಸರ್ವದಾ ಧರಿಸಲ್ಪಡುತ್ತಲಿದೆ. ಬಳಿಕ ಕೇತುಮಾಲಾ, ನಿರ್ಮಲೋದಕಪೂರಿತವಾದ ಅನಡ್ವಲಾ ಎಂಬ ಹೆಸರುಗಳುಂಟಾಗುತ್ತವೆ.

೧೧-೧೩. ಹರಿವರ್ಷದಲ್ಲಿ ಹರಿಯುವ ಗಂಗೆಗೆ ಮನಸ್ವಿನೀ, ಜ್ಯೋತಿಷ್ಮತೀ ಎಂದು ಹೆಸರು. ಕಿಂಪುರುಷವರ್ಷದಲ್ಲಿ ಹರಿಯುವ ಗಂಗೆಗೆ ರಂಭಾ, ಚಂದ್ರವತೀ ಎಂಬ ಹೆಸರುಗಳಿವೆ. ಇಂದ್ರದ್ಯುಮ್ನವರ್ಷದಲ್ಲಿ ಹರಿದುಹೋಗುವ ಗಂಗಾನದಿಗೆ ಮತಿಪಾವನೀ, ಮನೋಜವಾ, ತಾಮ್ರಪರ್ಣೀ, ಗಭಸ್ತಿ, ಮತಿಮಾಲಿನೀ ಎಂಬ ಹೆಸರುಗಳಿವೆ ನಾಗದ್ವೀಪದಲ್ಲಿ ನಾಗವತಿಯೂ, ಸೌಮ್ಯದ್ವೀಪದಲ್ಲಿ ಸೋಮಪ್ರಭೆಯೂ ಗಂಗಾನದಿಗಳಾಗಿ ಹರಿಯುತ್ತವೆ. ಈ ರೀತಿ ಹರಿದ ಬಳಿಕ ಗಂಗಾದೇವಿಯು ರುದ್ರಲೋಕ, ಬ್ರಹ್ಮಲೋಕಗಳಿಗೆ ಹೊರಟು ಮುಂದೆ ಗಂಧರ್ವಲೋಕದಲ್ಲಿ ಗಾಂಧರ್ವೀನದಿಯಾಗಿಯೂ, ವರುಣಲೋಕದಲ್ಲಿ ವರುಣಹ್ರದಾ ನದಿಯಾಗಿಯೂ

**ಗಾಂಧರ್ವಿೀ ಚೈವ ಗಾಂಧರ್ವಿೀ ವಾರುಣೀ ವರುಣಪ್ರದಾ ।**
**ಹ್ರಾದಿನೀ ಹ್ಲಾದಿನೀ ಚೈವ ಪುಣ್ಯತೋಯಾ ಚ ವರ್ಷಿಣೀ　　॥ ೧೪ ॥**

**ಸೀತಾಚಕ್ಷುಶ್ಚ ಸಿಂಧುಶ್ಚ ಗಂಗಾಚಾಸ್ಮಿನ್ ಪ್ರಕೀರ್ತಿತಾ ।**
**ಅಮರಾನ್ನಿಷಧಾನ್ಸರ್ವಾನ್ಧೀವರಾ ನೃಷಿಕಾಂಸ್ತಥಾ　　॥ ೧೫ ॥**

**ಓಷ್ಠಪ್ರಾವರಣಾನ್ಸೌಮ್ಯಾನ್ ಕರ್ಣಪ್ರಾವರಣಾಂಸ್ತಥಾ ।**
**ಕಾಲೋದರಾನ್ವಿಕರ್ಣಾಂಶ್ಚ ಹ್ರಾದಿನೀ ತು ನಿಷೇವತೇ　　॥ ೧೬ ॥**

**ಇಂದ್ರದ್ಯುಮ್ನಸರಃ ಪುಣ್ಯಮುಪಚಾರಾದಜಾಯತ ।**
**ತದಾ ಖರಪದಾನ್ದೇಶಾನ್ವೇತ್ರಶಂಕುಪದಾನಪಿ　　॥ ೧೭ ॥**

**ತಂಜಾನಕಾಮುತಂ ಚೈವ ಹ್ಲಾದಿನೀ ತು ನಿಷೇವತೇ ।**
**ದರದಾನ್ ಜುಹುಡಾಂಶ್ಚೈವ ಕಾಶ್ಮೀರಾನ್ಕೈರಸಾನ್ಕುರೂನ್　　॥ ೧೮ ॥**

---

ಹರಿದು ಮುಂದಕ್ಕೆ ಹ್ರಾದಿನೀ, ಹ್ಲಾದಿನೀ, ಪುಣ್ಯತೋಯಾ, ವರ್ಷಿಣೀ, ಸೀತಾಚಕ್ಷು ಸಿಂಧೂ ಎಂಬ ಹೆಸರುಗಳಿಂದ ಪ್ರವಹಿಸುವಳು.

೧೫-೧೬. ಹ್ರಾದಿನೀ ಎಂಬ ಗಂಗಾನದಿಯು ಅಮರಾವತಿ, ನಿಷಧ, ಧೀವರ, ಋಷಿಕ, ಓಷ್ಠಪ್ರಾವರಣ, ಕಾಲೋದರ, ವಿಕರ್ಣಗಳೆಂಬ ದೇಶಗಳಲ್ಲಿ ಹರಿದು ಆ ದೇಶದ ಜನರನ್ನು ಪುನೀತರನ್ನಾಗಿ ಮಾಡುತ್ತದೆ.

೧೭. ಮುಂದೆ ಗಂಗೆಯು ಇಂದ್ರದ್ಯುಮ್ನ ಸರೋವರವೆಂಬ ಪುಣ್ಯಸರಸ್ಸಾಗಿ ಜನ್ಮಿಸಿ, ಖರಪದ, ವೇತ್ರಶಂಕುಪದ, ತಂಜಾ ಮುಂತಾದ ದೇಶಗಳಲ್ಲಿ ಹ್ಲಾದಿನೀ ಎಂಬ ಹೆಸರಿನಿಂದ ಜನರನ್ನು ಆಹ್ಲಾದಗೊಳಿಸುತ್ತದೆ.

೧೮-೧೯. ಈ ಗಂಗಾನದಿಯು ದರದ, ಜುಹುಡ, ಕಾಶ್ಮೀರ, ಕುಪರ್ವ,

ಗಾಂಧಾರಾನ್ದರದಾನ್ಭೀರಾನ್ಕಪರ್ವಾನ್ಭೀಮಕೌರವಾನ್ ।
ಶಿವಪರ್ವಾನಿಂದ್ರಪರ್ವಾನ್ಸಿಂಧುತೀರಾನ್ನಿಷೇವತೇ ॥ ೧೯ ॥

ದೈವಾನ್ ದೈತ್ಯಾನ್ ಕಾಲಕೇಯಾನ್ ಗಾಂಧರ್ವಾನ್ ಕಿನ್ನರಾಂಸ್ತಥಾ ।
ವಿದ್ಯಾಧರಾಂಸ್ತಥಾ ನಾಗಾನ್ಸುಪರ್ವಾನ್ಸುಮನೋಹರಾನ್ ॥ ೨೦ ॥

ಕಲಾಪಗ್ರಾಮಕಾಂಶ್ಚೈವ ನರನಾರಾಯಣಾಶ್ರಮಂ ।
ಕಿರಾತಾಂಶ್ಚ ಪುಳಿಂದಾಂಶ್ಚ ಮಯಸ್ಯ ನಗರೀಂ ತಥಾ ॥ ೨೧ ॥

ಕುತೂನ್ಸಭಾರತಾಂಶ್ಚೈವ ಪುಳಿಂದಾಂಶ್ಚೈವ ಭಾಗಶಃ ।
ಪಾಂಚಾಲಾನ್ಕಾಶಯಾನ್ವತ್ಸಾನ್ಮಾಗಧಾಂಸ್ತಾಮ್ರಲಿಪ್ತಕಾನ್ ॥ ೨೨ ॥

ಸಹ್ಯೋತ್ತರಾಂಶ್ಚ ವಂಗಾಂಶ್ಚ ತಥಾ ಶ್ರಾವಸ್ತಿವಾಸಿನಃ ।
ಅಂಗಾನ್ವಂಗಾನ್ಸಪುಂಡ್ರಾಂಶ್ಚ ಗಂಗಾ ಭಾವಯತೇ ಶುಭಾ ॥ ೨೩ ॥

ಹ್ರಾದಿನೀ ಹ್ಲಾದಿನೀ ಚೈವ ಪಾವನೀ ಜಾಹ್ನವೀ ತಥಾ ।
ಪ್ರವಿಷ್ಟಾ ಸಾಗರಂ ಪೂರ್ವಂ ದ್ವೀಪೇಽಸ್ಮಿನ್ನೃಪಸತ್ತಮ ॥ ೨೪ ॥

---

ಭೀಮ, ರೌರವ, ಶಿವಪರ್ವ, ಇಂದ್ರಪರ್ವ ಮುಂತಾದ ದೇಶದ ಜನರನ್ನು ಸಿಂಧೂನದೀ ರೂಪದಿಂದ ಸೇವಿಸುತ್ತಲಿದೆ.

೨೦-೨೩. ಇನ್ನೂ ಗಂಗಾನದಿಯು ವ್ಯಾಪಿಸಿರುವ ಪ್ರದೇಶಗಳನ್ನು ಹೇಳುತ್ತೇನೆ. ದೇವನಗರ, ದೈತ್ಯನಗರ, ಕಾಲಕೇಯದೇಶ, ಗಂಧರ್ವನಗರ, ಕಿನ್ನರದೇಶ, ವಿದ್ಯಾಧರನಗರ, ನಾಗಲೋಕ, ಕಲಾಪಗ್ರಾಮ, ನರನಾರಾಯಣಾಶ್ರಮ, (ಬದರಿಕಾಶ್ರಮ) ಕಿರಾತದೇಶ, ಪುಳಿಂದದೇಶ, ಮಯನಗರ, ಭರತಖಂಡಸಹಿತವಾದ ಕುತೂದೇಶ, ಪುಳಿಂದ, ಪಾಂಚಾಲ, ಕಾಶಯ, ವತ್ಸ, ಮಗಧ, ತಾಮ್ರಲಿಪ್ತ, ಸಹ್ಯಪರ್ವತದ ಉತ್ತರದಲ್ಲಿರುವ ವಂಗ, ಶ್ರಾವಸ್ತಿ, ಅಂಗ, ಪುಂಡ್ರ ಮುಂತಾದ ದೇಶಗಳು.

೨೪-೨೫. ಈ ದ್ವೀಪದಲ್ಲಿ ಹ್ರಾದಿನೀ, ಹ್ಲಾದಿನೀ, ಪಾವನೀ, ಜಾಹ್ನವೀ ನದಿಗಳು ಹರಿದು ಪೂರ್ವಸಾಗರವನ್ನು ಸೇರುವುವು. ಸೀತಾಚಕ್ಷು ಸಿಂಧೂ ನದಿಗಳು

ಸೀತಾಚಕ್ಷುಶ್ಚ ಸಿಂಧುಶ್ಚ ಪಶ್ಚಿಮಂ ನೃಪ ಸಾಗರಂ ।
ಗಂಗಾವ್ಯಾಪ್ತಿಸ್ತವ ಪ್ರೋಕ್ತಾ ಜಂಬೂದ್ವೀಪೇ ಮಯಾನಘ ॥ ೨೫ ॥

ಲೋಕೇಷು ಚ ತಥಾ ರಾಜನ್ದ್ವೀಪೇಷ್ವನ್ಯೇಷು ಮೇ ಶ್ರುಣು ।
ಸುಕುಮಾರೀ ಕುಮಾರೀ ಚ ಸುಕೃತಾ ಸೇವಿನೀ ತಥಾ ॥ ೨೬ ॥

ಇಕ್ಷುಶ್ಚ ವೇಣುಕಾ ನಂದಾ ಶಾಕದ್ವೀಪೇ ಚ ಸಪ್ತಧಾ ।
ಶಾಲ್ಮಲೇ ತ್ವಥ ಗೋಮೇದೇ ದ್ವೀಪೇ ಪುಷ್ಕರಸಂಜ್ಞಿಕೇ ॥ ೨೭ ॥

ನದೀತ್ವಂ ಸಾ ಸಮುತ್ಸೃಜ್ಯ ಚೋದಧಿತ್ವಮುಪಾಗತಾ ।
ತಸ್ಮಿನ್ದ್ವೀಪತ್ರಯೇ ನದ್ಯೋ ನ ಸಂತಿ ಯದುನಂದನ ॥ ೨೮ ॥

ಉದಕಾನ್ಯುದ್ಭಿಧಾನ್ಯೇವ ತೇಷು ಸಂತಿ ಸಹಸ್ರಶಃ ।
ಏವಂ ಭೂಮಿತಲಂ ಪ್ಲಾವ್ಯ ಪಾತಾಳಂ ಕೃಷ್ಣಮೃತ್ತಿಕಂ ॥ ೨೯ ॥

ಏಕೀಭೂತಾ ಪ್ರವಿಷ್ಟಾ ಸಾ ಭೋಗವತ್ಯಾಂ ಸಮೀಪತಃ ।
ಶ್ವೇತ ಭೌಮಂ ಗತಾ ತಸ್ಮಾದ್ರಕ್ತಭೌಮಂ ತತೋ ಗತಾ ॥ ೩೦ ॥

---

ಪಶ್ಚಿಮಸಾಗರವನ್ನು ಸೇರುವುವು. ಎಲೈ ವಜ್ರಮಹಾರಾಜನೇ, ಜಂಬೂದ್ವೀಪದಲ್ಲಿ ಗಂಗಾವ್ಯಾಪ್ತಿಯಿರುವ ಪ್ರದೇಶಗಳನ್ನು ನಿನಗೆ ತಿಳಿಸಿರುತ್ತೇನೆ.

೨೬-೨೮. ಎಲೈ ವಜ್ರಭೂಪಾಲನೇ ! ಕೇಳು. ಬೇರೆ ದ್ವೀಪಗಳಲ್ಲಿಯೂ, ಬೇರೆ ಲೋಕಗಳಲ್ಲಿಯೂ ಇರುವ ಗಂಗಾಭೇದಗಳನ್ನು ತಿಳಿಸುತ್ತೇನೆ. ಸುಕುಮಾರಿ, ಕುಮಾರೀ, ಸುಕೃತಾ, ಸೇವಿನೀ, ಇಕ್ಷು, ವೇಣುಕಾ, ನಂದಾ ಈ ಏಳೂ ಶಾಕದ್ವೀಪದಲ್ಲಿ ಹರಿಯುತ್ತವೆ. ಮತ್ತು ಈ ಗಂಗೆಯು ಪುಷ್ಕರ ಸಂಜ್ಞೆಯುಳ್ಳ ಶಾಲ್ಮಲೀ ಮತ್ತು ಗೋಮೇದ ದ್ವೀಪಗಳಲ್ಲಿ ನದಿಯ ಭಾವವನ್ನು ಬಿಟ್ಟು ಸಮುದ್ರವಾಗಿ ಪರಿಣಮಿಸುವುವು. ಈ ಪುಷ್ಕರ, ಶಾಲ್ಮಲೀ ಗೋಮೇದ ದ್ವೀಪಗಳಲ್ಲಿ ನದಿಗಳೇ ಇಲ್ಲ.

೨೯-೩೧. ಆದರೆ ಆ ದ್ವೀಪಗಳಲ್ಲಿ ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆ ಹೊರಟ ಬುಗ್ಗೆಗಳು ಸಾವಿರಾರು ಸಂಖ್ಯೆಯಿಂದ ತುಂಬಿವೆ. ಈ ರೀತಿ ಗಂಗಾನದಿಯು ಭೂಲೋಕವನ್ನೆಲ್ಲಾ ಪವಿತ್ರಮಾಡಿ ಕಪ್ಪುಮಣ್ಣಿನ ಪಾತಾಳವನ್ನು ಪ್ರವೇಶಿಸಿ

**ಶಿಲಾಭೌಮಂ ಗತಾ ತಸ್ಮಾದ್ರುಕ್ಮಭೌಮಂ ತತೋ ಗತಾ ।**
**ರುಕ್ಮಭೌಮಾದಪಿ ಗತಾ ರೌದ್ರಂ ತೇಜಸ್ಸುದಾರುಣಂ ॥ ೩೧ ॥**

**ತತೋಽಪಿ ವಿಲಯಂ ಗತ್ವಾ ವಾರಾಹಂ ಲೋಕಮಾಗತಾ ।**
**ವಾರಾಹಲೋಕಾದ್ಬ್ರಹ್ಮಾಂಡಂ ತದರ್ಥಂ ಭಿನ್ನವಾಹಿನೀ ॥ ೩೨ ॥**

**ಛಿದ್ರೇಣ ತೇನ ಸಾ ದೇವೀ ಸ್ವಾಂ ಯೋನಿಂ ಪುನರಾಗತಾ ।**
**ಏವಂ ನರೇಂದ್ರೇಶ ಜಗತ್ಸಮಗ್ರ—**
**ಮಾಕ್ರಮ್ಯ ಗಂಗಾ ಸತತಂ ಸ್ಥಿತಾ ಯಾ ।**
**ತಸ್ಯಾಃ ಪ್ರಭಾವಶ್ರವಣಾದಶೇಷಂ**
**ಪಾಪಂ ನರಾಣಾಂ ಸಮುಪೈತಿ ಶಾಂತಿಂ ॥ ೩೪ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಗಂಗಾವ್ಯಾಪ್ತಿರ್ನಾಮ ದ್ವಾವಿಂಶತಿತಮೋಽಧ್ಯಾಯಃ**

---

ಏಕಾಕಾರವಾಗಿ ಬಿಳೀಮಣ್ಣಿನ ಭೋಗವತೀ ಪಟ್ಟಣವನ್ನೂ ಬಳಿಕ ಕೆಂಪುಮಣ್ಣಿನ ಪಾತಾಳವನ್ನೂ ಹೊಕ್ಕು ಬಳಿಕ ಶಿಲಾಭೌಮ, ರುಕ್ಮಭೌಮವೆನಿಸಿದ ಪಾತಾಳಗಳಲ್ಲಿ ಪ್ರವೇಶಿಸಿ ಅಲ್ಲಿ ಭಯಂಕರವಾದ ಈಶ್ವರನ ತೇಜಸ್ಸನ್ನು ಸೇರುವುದು.

೩೨–೩೪. ಅನಂತರ ವಾರಾಹಲೋಕಕ್ಕೆ ಪ್ರವೇಶಿಸಿ ಅಲ್ಲಿಂದ ಬ್ರಹ್ಮಾಂಡವನ್ನು ಹೊಕ್ಕು ಅಲ್ಲಿ ಭಿನ್ನವಾಹಿನಿಯಾಗಿ ಹರಿದು ಅಲ್ಲಿನ ರಂಧ್ರದಿಂದ ತನ್ನ ಪೂರ್ವಸ್ಥಳವನ್ನು ಸೇರಿಸಿಕೊಳ್ಳುವಳು. ಎಲೈ, ವಜ್ರ ನರೇಂದ್ರನೇ: ಸಮುಸ್ತ ಜಗತ್ತಿನಲ್ಲೂ ವ್ಯಾಪಿಸಿ ಸರ್ವದಾ ಇರುವ ಗಂಗಾನದಿಯು ಈ ಮಹಿಮೆಯನ್ನು ಮನುಷ್ಯರು ಕೇಳಿದ ಒಡನೆಯೇ ತಮ್ಮ ಪಾಪಶೇಷಗಳನ್ನು ಕಳೆದುಕೊಂಡು ಶಾಂತಿಯನ್ನು ಹೊಂದುವರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಗಂಗಾವ್ಯಾಪ್ತಿಯೆಂಬ ಹೆಸರಿನ ಇಪ್ಪತ್ತೆರಡನೇ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ತ್ರಯೋವಿಂಶೋಽಧ್ಯಾಯಃ

॥ ವಜ್ರ ಉವಾಚ ॥

ಭಗೀರಥಸ್ಯ ರಾಜರ್ಷೇರ್ವಂಶಮುತ್ತಮಪೂರುಷ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ಗಂಗಾ ಯೇನಾವತಾರಿತಾ ॥ ೧ ॥

॥ ಮಾರ್ಕಂಡೇಯ ಉವಾಚ ॥

ಭಗೀರಥಸುತಶ್ಶ್ರೀಮಾನ್ವಿಶ್ರುತೋ ನಾಮ ಧಾರ್ಮಿಕಃ ।
ವಿಶ್ರುತಸ್ಯಾತ್ಮಜಶ್ಶ್ರೀಮಾನ್ನಾಭಾಗ ಇತಿ ವಿಶ್ರುತಃ । ॥ ೨ ॥

ಅಂಬರೀಷಸ್ತು ನಾಭಾಗಿರಯುತಾರಿಸ್ತದಾತ್ಮಜಃ ।
ತತ್ಸುತೋ ಋತುಪರ್ಣಶ್ಚ ರಾಜಾನಲಸಖೋ ಬಲೀ ॥ ೩ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧. ವಜ್ರ ನರೇಂದ್ರನು ಹೇಳುತ್ತಾನೆ— ರಾಜರ್ಷಿಯಾದ ಭಗೀರಥಮಹಾರಾಯನ ವಂಶಕಥೆಯನ್ನು ಕೇಳಲಪೇಕ್ಷಿಸುತ್ತೇನೆ. ಎಲೈ, ಮಾರ್ಕಂಡೇಯನೇ! ಗಂಗಾವತರಣಕ್ಕೆ ಮೂಲ ಭೂತನಾದ ಆ ಮಹಾರಾಜನ ಮುಂದಿನ ವೃತ್ತಾಂತವನ್ನು ತಿಳಿಸು.

೨. ಮಾರ್ಕಂಡೇಯನು ಹೇಳಿದನು— ಭಗೀರಥನಿಗೆ ವಿಶ್ರುತನೆಂಬ ಮಗನಿದ್ದನು. ಆ ವಿಶ್ರುತನಿಗೆ ನಾಭಾಗನೆಂಬ ಪ್ರಸಿದ್ಧನಾದ ಮಗನಿದ್ದನು.

೩-೬. ನಾಭಾಗನ ಮಗ ಅಂಬರೀಷ. ಅಂಬರೀಷನ ಮಗಅಯುತಾರಿ ಅವನ ಮಗ ನಳಚಕ್ರವರ್ತಿಯ ಮಿತ್ರನಾದ ಋತುಪರ್ಣ, ಋತುಪರ್ಣನ ಮಗ ಶರ್ವಕಾಮ

**ಶರ್ವಕಾಮುಸ್ಸುತಸ್ತಸ್ಯ ಸುದಾಸಸ್ತಸ್ಯ ಚಾತ್ಮಜಃ ।**
**ತಸ್ಯ ಮಿತ್ರಸಹಃ ಪುತ್ರಸ್ತಸ್ಯ ಪುತ್ರೋऽಶ್ಮಕೋ ನೃಪ ॥ ೪ ॥**

**ಮೂಲಕಸ್ತತ್ಸುತೋ ರಾಜಾ ಮಹಾಬುದ್ಧಿರ್ನರೇಶ್ವರಃ ।**
**ಕ್ಷತ್ರಿಯಾಣಾಂ ವಧೇ ಘೋರೇ ರಾಮೇಣ ವಿನಿಪಾತಿತಃ ॥ ೫ ॥**

**ಪುರಾ ಪಿತೃವಧಾಮರ್ಷಾದ್ರಾಮೋ ಭಾರ್ಗವನಂದನಃ ।**
**ತ್ರಿಸ್ಸಪ್ತಕೃತ್ವಃ ಪೃಥಿವೀಂ ಚಕ್ರೇ ನಿಃಕ್ಷತ್ರಿಯಾಮಿಮಾಂ ॥ ೬ ॥**
**ಭಗೀರಥಕುಲೋತ್ಪನ್ನಂ ಮೂಲಕಂ ನಾಮ ಜಘ್ನಿವಾನ್ ॥**

**॥ ವಜ್ರ ಉವಾಚ ॥**

**ಕಥಂ ರಾಮೇಣ ವಸುಧಾ ಪುರಾ ನಿಃಕ್ಷತ್ರಿಯಾ ಕೃತಾ ।**
**ಕಿಮರ್ಥಂ ಚ ಮಹಾಭಾಗ ತನ್ಮಮಾಚಕ್ಷ್ವ ಪೃಚ್ಛತಃ ॥ ೭ ॥**

---

ಅವನ ಮಗ ಸುದಾಸ, ಅವನ ಮಗ ಮಿತ್ರಸಹ, ಮಿತ್ರಸಹನ ಮಗ ಅಶ್ಮಕ, ಅಶ್ಮಕನ ಮಗ ಮೂಲಕ: ಈ ಮೂಲಕನು ಮಹಾ ಬುದ್ಧಿಶಾಲಿಯಾದ ರಾಜನಾಗಿದ್ದನು. ಕ್ಷತ್ರಿಯರನ್ನು ಪರಶುರಾಮನು ಸಂಹರಿಸುತ್ತಿದ್ದ ಕಾಲದಲ್ಲಿ ಇವನೂ ಆ ಪರಶುರಾಮನ ಕೊಡಲಿಗೆ ಆಹುತಿಯಾದನು.

ಪೂರ್ವದಲ್ಲಿ ಭಾರ್ಗವ ರಾಮನು ತನ್ನ ತಂದೆಯನ್ನು ಕೊಂದ ಕೋಪದಿಂದ ಕ್ಷತ್ರಿಯಮಂಡಲವನ್ನು ಇಪ್ಪತ್ತೊಂದು ಬಾರಿ ಸಂಹರಿಸಿದನು. ಆ ಸಮಯದಲ್ಲಿಯೇ ಭಗೀರಥ ವಂಶೋತ್ಪನ್ನನಾದ ಈ ಮೂಲಕರಾಜನನ್ನು ಸಂಹರಿಸಿಬಿಟ್ಟನು.

೭. ವಜ್ರನರೇಂದ್ರನು ಕೇಳುತ್ತಾನೆ— ಎಲೈ, ಮಾರ್ಕಂಡೇಯನೇ ! ಪರಶುರಾಮನಿಂದ ಭೂಲೋಕವು ಕ್ಷತ್ರಿಯರಹಿತವಾಗಿ ಮಾಡಲ್ಪಟ್ಟಿತೆಂದು ಹೇಳಿದೆಯಷ್ಟೆ ! ಅದು ಹೇಗೆ? ಏತರಿಂದ ಇದು ಸಂಭವಿಸಿತು ? ದಯವಿಟ್ಟು ನನ್ನ ಪ್ರಶ್ನೆಗೆ ಉತ್ತರ ಕೊಟ್ಟು ಕಥೆಯನ್ನು ಮುಂಬರಿಸಬೇಕೆನಲು

॥ ಮಾರ್ಕಂಡೇಯ ಉವಾಚ ॥

**ಸೋಮವಂಶಸಮುತ್ಪನ್ನೋ ಯಯಾತಿರ್ನಾಮ ಪಾರ್ಥಿವಃ ।**
**ತಸ್ಯಾಪಿ ಸಂಹತಃ ಪುತ್ರೋ ಬಭೂವ ಪೃಥಿವೀಪತಿಃ ॥ ೮ ॥**

**ಸಹಸ್ರಜಿತ್ಸುತಸ್ತಸ್ಯ ನಭಜಿತ್ತಸ್ಯ ಚಾತ್ಮಜಃ ।**
**ತಸ್ಯಾಪಿ ಹೈಹಯಃ ಪುತ್ರಃ ಕುಂತಿಸ್ತಸ್ಯಾಪಿ ಚಾತ್ಮಜಃ ॥ ೯ ॥**

**ತಸ್ಯಾಪಿ ಸಂಹತಃ ಪುತ್ರೋ ಮಹಿಷ್ಮಾಂಸ್ತಸ್ಯ ಚಾತ್ಮಜಃ ।**
**ಮಾಹಿಷ್ಮತೀ ಕೃತಾ ಯೇನ ನಗರೀ ಸುಮನೋಹರಾ ॥ ೧೦ ॥**

**ಭದ್ರಶ್ರೇಣ್ಯಸ್ಸುತಸ್ತಸ್ಯ ದುರ್ಮದಸ್ತಸ್ಯ ಚಾತ್ಮಜಃ ।**
**ಕನಕಸ್ತತ್ಸುತೋ ರಾಜಾ ಕೃತವೀರ್ಯಸ್ತದಾತ್ಮಜಃ ॥ ೧೧ ॥**

**ಅರ್ಜುನಸ್ತನಯಸ್ತಸ್ಯ ಸಪ್ತದ್ವೀಪೇಶ್ವರೋ ಭವತ್ ।**
**ದತ್ತಾತ್ರೇಯೋಥ ಭಗವಾನ್ವಿಷ್ಣುರೂಪಾನುರೂಪಧೃಕ್ ॥ ೧೨ ॥**

---

೮-೧೨. ಎಲೈ, ವಜ್ರನರಪತಿಯೇ ! ಚಂದ್ರವಂಶದ ರಾಜರ ವೃತ್ತಾಂತವನ್ನು ಪ್ರಸಂಗಾನುಸಾರವಾಗಿ ಹೇಳುತ್ತೇನೆ. ಕೇಳು, ಪೂರ್ವದಲ್ಲಿ ಚಂದ್ರವಂಶೋತ್ಪನ್ನನಾದ ಯಯಾತಿಮಹಾರಾಜನಿಗೆ ಸಂಹತನೆಂಬ ಮಗನಿದ್ದನು. ಅವನ ಮಗ ಸಹಸ್ರಜಿತ್. ಅವನ ಮಗ ನಭಜಿತ್. ಅವನ ಮಗ ಹೈಹಯ, ಅವನ ಮಗ ಕುಂತಿ. ಕುಂತಿಯ ಮಗ ಸಂಹತ, ಅವನ ಮಗ ಮಹಿಷ್ಮಂತ, ಈತನೇ ಮಾಹಿಷ್ಮತೀ ಎಂಬ ಹೆಸರಿನ ಮನೋಹರವಾದ ನಗರವನ್ನು ನಿರ್ಮಿಸಿದನು. ಇವನ ಮಗ ಭದ್ರಶ್ರೇಣ್ಯ, ಇವನ ಮಗ ದುರ್ಮದ, ದುರ್ಮದನ ಮಗ ಕನಕ, ಇವನ ಮಗ ಕೃತವೀರ್ಯ, ಇವನ ಮಗನೇ ಅರ್ಜುನ ಈ ಅರ್ಜುನನು ತನ್ನ ಪರಾಕ್ರಮದಿಂದ ಸಪ್ತದ್ವೀಪಗಳಿಗೂ ಒಡೆಯನಾದನು. ಈ ಅರ್ಜುನನು ದತ್ತಾತ್ರೇಯನೆಂಬ ಹೆಸರಿನಿಂದ ಪ್ರಸಿದ್ಧನಾದ ಮಹಾವಿಷ್ಣುವನ್ನು ತಪಸ್ಸಿನಿಂದಾರಾಧಿಸಿ ಇತರರಿಂದ ಸಂಪಾದಿಸಲು ದುರ್ಲಭವಾದ ರಾಜ್ಯವನ್ನು ಸಂಪಾದಿಸಿದನು ಮತ್ತು ತನ್ನ ಬಾಹು ಬಲಕ್ಕೆ ತಕ್ಕಂತೆ ಶೌರ್ಯ

ಆರಾಧ್ಯ ತಪಸಾ ತೇನ ಪ್ರಾಪ್ತಂ ರಾಜ್ಯಂ ಸುದುರ್ಲಭಂ ।
ತಥಾ ಬಾಹುಸಹಸ್ರಂ ಚ ಮತಿಂ ಧರ್ಮೇ ತಥೋತ್ತಮಾಮ್ ॥ ೧೩ ॥

ಅಧರ್ಮೇ ವರ್ತಮಾನಸ್ಯ ಮರಣಂ ಚ ಜನಾರ್ದನಾತ್ ।
ಯುದ್ಧೇನ ಪೃಥಿವೀಂ ಜಿತ್ವಾ ಧರ್ಮೇಣೈವಾನುರಂಜಯನ್ ॥ ೧೪ ॥

ತೇನೇಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ ।
ಸಪ್ತೋದಧಿಪರಿಕ್ಷಿಪ್ತಾ ಕ್ಷಾತ್ರೇಣ ವಿಧಿನಾ ಜಿತಾ ॥ ೧೫ ॥

ಪಾತಾಲನಗರೇ ಶೈಲೇ ವಸುಧಾಯಾಂ ರಸಾತಲೇ ।
ತಸ್ಯ ಪಾರ್ಥಿವಸಿಂಹಸ್ಯ ಚಕ್ರಂ ನ ಪ್ರತಿಹನ್ಯತೇ ॥ ೧೬ ॥

ದ್ವೀಪೇಷು ಸಹಿ ಸರ್ವೇಷು ಖಾತಂ ಖಾತಮುಥಾಕರೋತ್ ।
ಯೂಪಚಿಹ್ನಾನಿ ಚ ತಥಾ ಖಡ್ಗೀ ಶತಶನೀ ರಥೀ ॥ ೧೭ ॥

---

ನ್ವಿತವಾದ ಸಾವಿರ ತೋಳುಗಳನ್ನು ಸಂಪಾದಿಸಿದನು. ಹಾಗೂ ಧರ್ಮದಲ್ಲಿ ಉತ್ತಮವಾದ ಬುದ್ಧಿಯನ್ನು ಸಹ ಸಂಪಾದಿಸಿದನು.

೧೪-೨೩. ಅಧರ್ಮದಲ್ಲಿ ತೊಡಗಿದ ಜನರನ್ನು ಸಂಹರಿಸುತ್ತಾ ಆ ಕಾರ್ತವೀರ್ಯಾರ್ಜುನನು ಜನಾರ್ದನನ ವರಬಲದಿಂದ ಸಕಲ ಭೂಭಾಗವನ್ನೂ ಯುದ್ಧದಲ್ಲಿ ಗೆದ್ದು ರಸಾತಲ ಪಾತಾಳಗಳಲ್ಲೂ ಸಹ ತನ್ನ ಶೌರ್ಯದಿಂದ ಚಕ್ರೇಶ್ವರನೆನಿಸಿಕೊಂಡನು. ಇವನ ಎದುರಾಳಿಗಳೇ ಯಾರೂ ಇರಲಿಲ್ಲ. ಸಕಲ ದ್ವೀಪಗಳಲ್ಲೂ ಅನೇಕ ಯಜ್ಞಗಳನ್ನು ಮಾಡಿ ಯೂಪಸ್ತಂಭದ ಚಿಹ್ನೆಗಳನ್ನು ನೆಡಿಸಿದನು. ಹಾಗೂ ಖಡ್ಗ ಬಾಣ, ರಥ ಯುದ್ಧಗಳಲ್ಲಿ ಅದ್ವಿತೀಯನೂ ಆಗಿ ಅನೇಕದೇಶಗಳನ್ನು ಸಂಚರಿಸಿ ಅಲ್ಲಿ ಕಳ್ಳರನ್ನು ಕಂಡು ಹಿಡಿಯುತ್ತಿದ್ದನು. ಅವನು ಪಶುಪಾಲನಾಗಿಯೂ ಕ್ಷೇತ್ರಪಾಲಕನಾಗಿಯೂ ಇದ್ದನು. ವೃಷ್ಟಿಯನ್ನುಂಟುಮಾಡೋಣದರಲ್ಲಿ ತಾನೇ ಪರ್ಜನ್ಯನಾಗಿದ್ದನು. ಯೋಗಶಾಸ್ತ್ರವೇತ್ತರಲ್ಲಿ ಸಾಕ್ಷಾದರ್ಜುನನೇ ಆಗಿದ್ದನು. ಧನುಸ್ಸಿನ ಹೆದೆಯಂತೆ ಒರಟಾದ ಚರ್ಮವುಳ್ಳ ಸಹಸ್ರಬಾಹುಗಳೊಡನೆ ಕೂಡಿದೀ ಕಾರ್ತವೀರ್ಯಾರ್ಜುನನು

ದೇಶಾನನುಚರರ್ ಯೋಗಾತ್ಸದಾ ಪಶ್ಯತಿ ತಸ್ಕರಾರ್ ।
ಸ ಏವ ಪಶುಪಾಲೋऽಭೂತ್ ಕ್ಷೇತ್ರಪಾಲಸ್ಸ ಏವ ಚ　　॥ ೧೮ ॥

ಸ ಏವ ವೃಷ್ಟ್ಯಾ ಪರ್ಜನ್ಯೋ ಯೋಗಿತ್ವಾದರ್ಜುನೋऽಭವತ್ ।
ಸ ತು ಬಾಹುಸಹಸ್ರೇಣ ಜ್ಯಾಘಾತಕಠಿನತ್ವಚಾ　　॥ ೧೯ ॥

ಭಾತಿ ರಶ್ಮಿಸಹಸ್ರೇಣ ಶಾರದೇನೇವ ಭಾಸ್ಕರಃ ।
ರಾಕ್ಷಸಾ ನಿರ್ಜಿತಾಸ್ತೇನ ತೇನ ಬದ್ಧಶ್ಚ ರಾವಣಃ　　॥ ೨೦ ॥

ಜಿತಾ ಭೋಗವತೀ ತೇನ ಕರ್ಕೋಟಕಸುತಾ ಹೃತಾ ।
ತಸ್ಯ ಬಾಹುಸಹಸ್ರೇಣ ಕ್ಷೋಭ್ಯಮಾಣೇ ಮಹೋದಧೌ　　॥ ೨೧ ॥

ಭವಂತಿ ಲೀನಾ ನಿಶ್ಚೇಷ್ಟಾಃ ಪಾತಾಳಸ್ಥಾ ಮಹಾಸುರಾಃ ।
ಮಂದರಕ್ಷೋಭ ಚಕಿತಾ ಅಮೃತೋತ್ಪಾದಶಂಕಿತಾಃ　　॥ ೨೨ ॥

---

ಸಹಸ್ರಕಿರಣನಾದ ಶರತ್ಕಾಲದ ಸೂರ್ಯನಂತೆ ಪ್ರಕಾಶಮಾನನಾಗಿದ್ದನು. ಸಕಲ ರಾಕ್ಷಸರನ್ನೂ ಈತನು ಗೆದ್ದಿದ್ದನು. ರಾವಣನು ಇವನಿಂದ ಕಟ್ಟಲ್ಪಟ್ಟಿದ್ದನು. ಇವನು ಭೋಗವತೀ ಪಟ್ಟಣವನ್ನು ಗೆದ್ದು ಅಲ್ಲಿಯ ರಾಜನಾದ ಕರ್ಕೋಟಕನ ಮಗಳನ್ನು ಅಪಹರಿಸಿದನು. ಇವನು ಸಾವಿರ ತೋಳುಗಳಿಂದಲೂ ಒಮ್ಮೆ ಮಹೋದಧಿಯನ್ನು ಕಲಕಲಾರಂಭಿಸಿದನೆಂದರೆ ಪಾತಾಳದಲ್ಲಿದ್ದ ರಾಕ್ಷಸರೆಲ್ಲರೂ ಗಾಬರಿಯಿಂದ ನಿಶ್ಚೇಷ್ಟಿತರಾಗಿ ಇದ್ದಲ್ಲಿಯೇ ಅಡಗಿಕೊಳ್ಳುತಲಿದ್ದರು. ಮಹೋರಗರು ಈ ಸಾಗರ ಕ್ಷೋಭೆಯನ್ನು ನೋಡಿ ಈ ಅರ್ಜುನನು ಪುನಃ ಮಂದರಪರ್ವತವನ್ನು ನಮ್ಮಿಂದ ಕಡೆಯಿಸಿ ಎಲ್ಲಿ ಅಮೃತವನ್ನು ಉತ್ಪತ್ತಿಮಾಡುವನೋ ಎಂದು ಹೆದರಿ ಹೆಡೆಗಳನ್ನು ಅಲ್ಲಲ್ಲಿಯೇ ಅಡಗಿಸಿ ನಿಶ್ಚೇಷ್ಟಿತರಾಗಿ ಮಲಗಿ ಬಿಡುತ್ತಿದ್ದರು ಈ ಕಾರ್ತ

ನತನಿಶ್ಚಲಮೂರ್ಧಾನೋ ಭವಂತಿ ಚ ಮಹೋರಗಾಃ ।
ದಶಯಜ್ಞಸಹಸ್ರಾಣಿ ತೇನೇಷ್ಟಾನಿ ಮಹೀಕ್ಷಿತಾ ।
ದ್ವೀಪೇ ದ್ವೀಪೇ ಮಹಾರಾಜ ಧರ್ಮಜ್ಞೇನ ಮಹಾತ್ಮನಾ ॥ ೨೩ ॥

ಸರ್ವೇ ಯಜ್ಞಾ ಮಹಾರಾಜ ತಸ್ಯಾಸನ್ ಭೂರಿದಕ್ಷಿಣಾಃ ।
ಸರ್ವೇ ಕಾಂಚನವೇದೀಕಾ ಸ್ಸರ್ವೇ ಯೂಪೈಶ್ಚ ಕಾಂಚನೈಃ ॥ ೨೪ ॥

ದ್ವಿಜಾನಾಂ ಪರಿವೇಷ್ಟಾರಸ್ತಸ್ಯ ಯಜ್ಞೇಷು ದೇವತಾಃ ।
ಸ್ವಯಮಾಸನ್ ಮಹಾರಾಜ ಸ್ವಯಂ ಭಾಗಹರಾಸ್ತಥಾ ॥ ೨೫ ॥

ತಸ್ಯ ಯಜ್ಞೇ ಜಗೌ ಗಾಥಾಂ ನಾರದಸ್ಸುಮಹಾತಪಾಃ ।
ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ ॥ ೨೬ ॥

ಪಂಚಾಶೀತಿ ಸಹಸ್ರಾಣಿ ವರ್ಷಾಣಾಂ ಸ ಮಹೀಪತಿಃ ।
ಸಪ್ತದ್ವೀಪೇಶ್ವರಸ್ಸಮ್ರಾಟ್ಚಕ್ರವರ್ತೀ ಬಭೂವ ಹ ॥ ೨೭ ॥

---

ವೀರ್ಯನು ಈ ಭೂಲೋಕದಲ್ಲಲ್ಲದೆ ಬೇರೆಬೇರೆ ದ್ವೀಪಗಳಲ್ಲಿಯೂ ಸಹ ಒಟ್ಟು ಹತ್ತುಸಾವಿರಯಜ್ಞಗಳನ್ನು ಮಾಡಿದನು

೨೪-೨೬. ಈ ಕಾರ್ತವೀರ್ಯನು ಮಾಡಿದ ಯಜ್ಞಗಳಲ್ಲೆಲ್ಲಾ ಭೂರಿದಕ್ಷಿಣೆಯನ್ನು ಹಂಚಿದನು. ಯಜ್ಞವೇದಿ (ಜಗಲಿ) ಗಳನ್ನೂ ಯೂಪಸ್ತಂಭಗಳನ್ನೂ ಚಿನ್ನದಿಂದ ಮಾಡಿಸಿದ್ದನು. ದೇವತೆಗಳು ಇವನು ಮಾಡಿದ ಯಜ್ಞದಲ್ಲಿ ಆನೆಗಳ ಮೇಲೆ ತಾವೇ ಸ್ವಂತವಾಗಿ ಕುಳಿತುಕೊಂಡು ಬಂದು ತಮ್ಮ ತಮ್ಮ ಭಾಗದ ಆಹುತಿಗಳನ್ನು ತಾವೇ ಪ್ರತ್ಯಕ್ಷವಾಗಿ ತೆಗೆದುಕೊಳ್ಳುತ್ತಿದ್ದರು. ಆ ಯಜ್ಞಗಳನ್ನು ಕಣ್ಣಾರೆ ಕಂಡ ಮಹಾ ತಪಸ್ವಿಯಾದ ನಾರದಋಷಿಯು ಒಂದು ಗಾದೆಯನ್ನು ರಚಿಸಿ ಹಾಡಿದನು. ಅದೇನೆಂದರೆ: ಯಾವ ರಾಜನೇ ಆಗಲಿ ಕಾರ್ತವೀರ್ಯನನ್ನನುಸರಿಸಿ ಸರಿಹೋಲಲೂ ಆರನು. ಅವನ ಗತಿಯನ್ನು ಪಡೆಯಲೂ ಆರನು. ಇದು ನಿಶ್ಚಯವೆಂದು ಹೇಳಿರುತ್ತಾನೆ.

೨೭-೩೨. ಈ ಕಾರ್ತವೀರ್ಯಾರ್ಜುನನು ಐವತ್ತು ಸಹಸ್ರವರ್ಷ ರಾಜ್ಯಭಾರ ಮಾಡಿದನು. ಯಜ್ಞದಾನ ತಪಸ್ಸು ಪರಾಕ್ರಮ ವಿದ್ಯೆಗಳಲ್ಲಿ ಇವನಿಗೆ ಸಮಾನ

ತಸ್ಯ ರಾಜ್ಞಸ್ತು ವಸುಧಾ ಬಹು ಪಾರ್ಥಿವಸಂಕುಲಾ ।
ಭರಾಕ್ರಾಂತಾ ವಿಲುಲಿತಾ ಬಭೂವ ಪೃಥಿವೀಪತೇ ॥ ೨೮ ॥

ಯುಕ್ತೈರ್ದಾನೈಸ್ತಪೋಭಿರ್ವಾ ವಿಕ್ರಮೇಣ ಶ್ರುತೇನ ವಾ ।
ತಸ್ಯ ರಾಜ್ಞೋ ಗತಾತಂಕೈರ್ಬಹುಪುತ್ರೈರ್ನರೋತ್ತಮ ॥ ೨೯ ॥

ತೇಜೋಯುಕ್ತೈಸ್ಸಮಾಕೀರ್ಣಾ ವಸುಧಾ ವಸುಧಾಧಿಪ ।
ಬಹುನಾಗಾಶ್ವಸಂಕೀರ್ಣಾ ಬಹುಗೋಕುಲಸಂಕುಲಾ ॥ ೩೦ ॥

ನ ಶಕ್ತಾ ನೃಪತೇ ಸೋಢುಂ ತೇಜಸ್ತದತಿಮಾನುಷಂ ।
ಜ್ವಾಲಾವಳಿಸಮಾಕ್ರಾಂತಾ ಖಿನ್ನಾ ನಾಕಮುಪಾಗತಾ ॥ ೩೧ ॥

ಏವಂ ಪ್ರಭಾವೇ ನರದೇವನಾಥೇ
ಪೃಥ್ವೀಂ ಸಮಗ್ರಾಂ ಪರಿಪಾಲ್ಯಮಾನೇ ।

---

ರಾದವರು ಯಾರೂ ಇರಲೇ ಇಲ್ಲ. ಇವನು ಸಪ್ತದ್ವೀಪಪರಿವೃತವಾದ ಅಖಂಡ ಭೂಮಂಡಲಕ್ಕೇ ಚಕ್ರವರ್ತಿಯಾಗಿದ್ದನು. ಇವನ ರಾಜ್ಯಭಾರಕಾಲದಲ್ಲಿ ಭೂಮಿಯು ಬಹುಜನ ರಾಜರಿಂದ ತುಂಬಿಹೋಗಿತ್ತು. ಎಲೈ! ವಜ್ರನರೇಂದ್ರನೇ, ಕೇಳು. ಈ ವಿಧವಾಗ ಅಸಂಖ್ಯಾತರಾದ ರಾಜರನ್ನು ಹೊತ್ತ ಭೂದೇವಿಯು ಭಾರವನ್ನು ತಡೆ ಯದೆ ಜಾರುತ್ತಾ ಜಗ್ಗುತ್ತಾ ಇದ್ದಳು. ಆ ಅರ್ಜುನನು ಆತಂಕವೇ ಇಲ್ಲದ ತೇಜೋ ವಿಶಿಷ್ಟರಾದ ಬಹುಜನ ಪುತ್ರರಿಂದ ಕೂಡಿದ್ದನು. ಅನೇಕ ಆನೆಗಳೂ ಲೆಖ್ಖವಿಲ್ಲ ದಷ್ಟು ಕುದುರೆಗಳ ಅಗಣಿತವಾದ ಗೋವೃಂದವೂ ಆ ರಾಜ್ಯದಲ್ಲಿತ್ತು. ಮನುಷ್ಯಾ ತೀತವಾದ ತೇಜಸ್ಸಿನಿಂದ ಕೂಡಿದ ಆ ವಿವಿಧ ಜೀವರಾಶಿಗಳನ್ನು ಹೊರಲು ಭೂಮಿಗೆ ಶಕ್ತಿಯಿಲ್ಲದೆ ಹೋಯಿತು. ಈ ಜ್ವಾಲೆಗಳಿಂದ ಕೂಡಿದ ಭೂಮಿಯು ಸ್ವರ್ಗಕ್ಕೆ ಪ್ರಯಾಣಮಾಡಿದಳು.

**ಭಾರೇಣ ಸನ್ನಾ ಪೃಥಿವೀ ಜಗಾಮ**
**ಮಹೇಂದ್ರಲೋಕಂ ಮುನಿದೇವ ಜುಷ್ಟಂ** ॥ ೩೨

**ಇತಿ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ**
**ಮಾರ್ಕಂಡೇಯ ವಜ್ರಸಂವಾದೇ ಅರ್ಜುನೋಪಾಖ್ಯಾನಂ ನಾಮ**
**ತ್ರಯೋವಿಂಶೋಽಧ್ಯಾಯಃ**

---

ಕೇಳೈ ವಜ್ರೇಂದ್ರನೇ, ಸಹಸ್ರಬಾಹುರಾಜನು ಭೂಮಿಯನ್ನು ಪರಿಪಾಲಿಸುತ್ತಿದ್ದಾಗ ಮೇಲ್ಕಂಡಂತೆ ಪೃಥಿವಿಯು ದೇವರ್ಷಿಗಣದಿಂದ ಕೂಡಿದವಳಾಗಿ ಮಹೇಂದ್ರಲೋಕಕ್ಕೆ ಹೋಗಿ ಮಹೇಂದ್ರನ ಮುಂದೆ ನಿಂತುಕೊಂಡಳೆಂಬಲ್ಲಿಗೆ :—

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಅರ್ಜುನೋಪಾಖ್ಯಾನವೆಂಬ ಹೆಸರಿನ ಇಪ್ಪತ್ತುಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಚತುರ್ವಿಂಶತಿತಮೋಧ್ಯಾಯಃ

---

॥ ವಜ್ರ ಉವಾಚ ॥

ದೇವಕಾರ್ಯಂ ವಿನಾ ವಿಷ್ಣುರ್ನೋತ್ಪತ್ಸ್ಯತಿ ಮಹೀತಲೇ ।
ಕಸ್ಮಿನ್ ಕಾಲೇ ಬಭೂವಾಸೌ ದತ್ತಾತ್ರೇಯ ಇತಿ ಶ್ರುತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಶಕ್ರೇಣ ಚ ಯದಾ ವೃತ್ರೋ ಹತೋ ವೀರ್ಯೋಪಬೃಂಹಿತಃ ।
ತಸ್ಮಿನ್ ಹತೇಽಸುರೇ ತ್ವಷ್ಟಾ ವಿಶ್ವರೂಪಮವಾಸೃಜತ್ ॥ ೨ ॥

ತಪಸ್ಯಂತಂ ಚ ತಂ ಗತ್ವಾ ಜಘಾನ ಚ ಶಚೀಪತಿಃ ।
ತಸ್ಮಿನ್ ಹತೇ ಬ್ರಹ್ಮಹತ್ಯಾ ಜಗಾಮ ಬಲಸೂದನಂ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ವಜ್ರಮಹಾರಾಜನು ಹೇಳುತ್ತಾನೆ—ಮಹಾವಿಷ್ಣುವು ದೇವತೆಗಳ ಕಾರ್ಯದ ಹೊರತಾಗಿ ಬೇರೆ ಸಂದರ್ಭದಲ್ಲಿ ಭೂಲೋಕದಲ್ಲಿ ಅವತರಿಸುವುದಿಲ್ಲವೆಂಬ ವಿಚಾರವನ್ನು ತಿಳಿದುಕೊಂಡಿದೇನೆ. ಯಾವ ಕಾಲದಲ್ಲಿ ಯಾವ ಕೆಲಸಕ್ಕಾಗಿ ದತ್ತಾತ್ರೇಯರೂಪಿಯಾಗಿ ಭಗವಂತನು ಅವತಾರಮಾಡಿದ್ದನೆಂಬುದನ್ನು ತಿಳಿಸಬೇಕು.

೨. ಮಾರ್ಕಂಡೇಯನು ಹೇಳುತ್ತಾನೆ—ಮಹಾಪರಾಕ್ರಮಶಾಲಿಯಾದ ವೃತ್ರಾಸುರನನ್ನು ಇಂದ್ರನು ಸಂಹರಿಸಿದನು. ಯಾವಾಗ ವೃತ್ರಾಸುರನನ್ನು ಸಂಹರಿದನೋ ಆಗ ಬ್ರಹ್ಮನು ಒಂದು ವಿಶ್ವರೂಪವನ್ನು ಸೃಷ್ಟಿಸಿದನು.

೩-೪. ತಪಸ್ಸಿನಲ್ಲಿದ್ದ ಆತನ ಬಳಿಗೆ ಹೋಗಿ ಇಂದ್ರನು ಆತನನ್ನು ಸಂಹರಿಸಿದನು. ಕೂಡಲೆ ಇಂದ್ರನಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಯಿತು. ಆ ದೋಷ

**ಬ್ರಹ್ಮಹತ್ಯಾಭಿಭೂತಸ್ತು ರಾಜ್ಯಂ ತ್ಯಕ್ತ್ವಾ ತ್ರಿವಿಷ್ಟಪೇ ।**
**ಮಾನಸೇ ಬಿಸತಂತುಸ್ಥೋ ಬಭೂವ ಸ ಪುರಂದರಃ** ॥ ೪ ॥

**ರಾಜಾಕೃತಶ್ಚಕ್ರಹೀನೈರ್ದೇವೈಸ್ತು ನಹುಷಸ್ತದಾ** ॥ ೫ ॥

**ಸೋಽಕಾಮಯತ ಪೌಲೋಮೀಂ ಶಕ್ರಸ್ಯ ಮಹಿಷೀಂ ಪ್ರಿಯಾಂ ।**
**ಕಾಲಾಲಾಭಪರಾ ಪ್ರಾಹ ಶಕ್ರಂ ದೇವೀ ಯಥಾ ಶಚೀ** ॥ ೬ ॥

**ಅಪೂರ್ವೇಣ ವಿಮಾನೇನ ಸಮೀಪಂ ಮೇ ಸುರೇಶ್ವರ ।**
**ಋಷಿಭಿಃ ಶಿಬಿಕಾಂ ಯುಕ್ತ್ವಾ ಸ ಜಗಾಮ ತದಂತಿಕಂ** ॥ ೭ ॥

---

ದಿಂದ ಕಾಂತಿಹೀನನಾದ ಇಂದ್ರನು ಸ್ವರ್ಗದಲ್ಲಿರಲು ಹಿಂಜರಿದು ಸ್ವರ್ಗವನ್ನು ಬಿಟ್ಟು ಮಾನಸಸರೋವರಕ್ಕೆ ಓಡಿಹೋಗಿ ತನ್ನ ಸ್ಥೂಲದೇಹವನ್ನು ಮರೆಯಿಸಿಕೊಂಡು ತಾವರೇದಂಟಿನಲ್ಲಿ ಮರೆಯಾಗಿ ಸೂಕ್ಷ್ಮರೂಪದಿಂದ ಅಡಗಿಕೊಂಡನು.

೫-೮. ಇಂದ್ರನು ಮರೆಯಾದ ಮೇಲೆ ದೇವತೆಗಳೂ ಸ್ವರ್ಗವನ್ನು ಬಿಟ್ಟು ಹೊರಟುಹೋದರು. ಇಂದ್ರನೂ ದೇವತೆಗಳೂ ಇಲ್ಲದೆ ಸ್ವರ್ಗವು ದಿಕ್ಕಿಲ್ಲದೆ ಇದ್ದ ಸಮಯವನ್ನು ನೋಡಿ, ಆಗತಾನೇ ನೂರು ಅಶ್ವಮೇಧಯಾಗಗಳನ್ನು ಮಾಡಿ ಮುಗಿಸಿದ್ದ ನಹುಷಚಕ್ರವರ್ತಿಯು ಸ್ವರ್ಗಲೋಕವನ್ನು ನ್ಯಾಯವಾದ ತನ್ನ ಹಕ್ಕಿನಿಂದ (ನೂರು ಅಶ್ವಮೇಧಯಾಗ ಮಾಡಿದವನು ಇಂದ್ರನಾಗುವನೆಂದು ವೇದದಲ್ಲಿ ಹೇಳಿದೆ) ಆಕ್ರಮಿಸಿದನು ತಾನು ಇಂದ್ರನಾದ ಮೇಲೆ ಇಂದ್ರನ ಹೆಂಡತಿಯಾದ ಶಚೀದೇವಿಯ ಮೇಲೂ ತನಗೆ ಅಧಿಕಾರವಿದೆಯೆಂದು ತಿಳಿದು ಆ ನಹುಷನು ಶಚೀದೇವಿಯನ್ನು ತನ್ನ ವಶಳಾಗುವಂತೆ ಪೀಡಿಸಿದನು ಇವನ ದುರಭಿಪ್ರಾಯವನ್ನು ತಿಳಿದ ಮಹಾಪತಿವ್ರತೆಯಾದ ಇಂದ್ರಾಣಿಯು ಕಾಲಾನುಸಾರವಾಗಿ ಒಂದು ಯುಕ್ತಿಯ ಮಾತನ್ನಾಡಿದಳು. ಅದೇನೆಂದರೆ - ಒಂದು ಅಪರೂಪವಾದ ವಿಮಾನ (ಯಾನ ಅಥವಾ ಶಿಬಿಕೆ ಅಂದರೆ ಪಲ್ಲಕ್ಕಿ) ವನ್ನು ನಿರ್ಮಿಸಿ ಅದರಲ್ಲಿ ದರ್ಪದಿಂದ ಕುಳಿತು ಮಹರ್ಷಿಗಳಿಂದ ಅದನ್ನು ಹೊರಿಸಿಕೊಂಡು ನನ್ನ ಬಳಿಗೆ ಬಂದರೆ ಆಮೇಲೆ ನಿನಗೆ ವಶಳಾಗುತ್ತೇನೆಂದು ಮುಂದಿನ ಆಲೋಚನೆಯನ್ನಿಟ್ಟು ಮಾತನಾಡಲು ಅದರಂತೆ ಆ ರಜೋಗುಣವಿಶಿಷ್ಟನಾದ ನಹುಷನು ಒಂದು ಶಿಬಿಕೆಯನ್ನು ನಿರ್ಮಿಸಿ ಅದರಲ್ಲಿ ಕುಳಿತು ಮಹರ್ಷಿಗಳ ಹೆಗಲಮೇಲೆ ಅದನ್ನು ಹೊರಿಸಿಕೊಂಡು ಹೊರಟು ದಾರಿಯಲ್ಲಿ

**ಶಿಬಿಕಾಂ ವಹಮಾನಂ ತು ಮಂದಂಮಂದಂ ದ್ವಿಜೋತ್ತಮಂ ।**
**ಪಾದೇನ ತಾಡಯಾಮಾಸ ಸೋಽಗಸ್ತ್ಯಂ ಪಾಪನಿಶ್ಚಯಃ ॥ ೮ ॥**

**ಅಗಸ್ತ್ಯೇನ ತದಾ ಶಪ್ತೋ ಭವಸರ್ಪೋ ಮಹೀಪತೇ ।**
**ಯುಧಿಷ್ಠಿರೇಣ ಸಂಗಮ್ಯ ಶಾಪಮೋಕ್ಷಮವಾಪ್ಸ್ಯಸಿ ॥ ೯ ॥**

**ಏವಮುಕ್ತೋ ತು ಮುನಿನಾ ಸರ್ಪತ್ವಂ ಸ ಜಗಾಮ ವೈ ।**
**ನಷ್ಟೇ ಶಕ್ರೇ ಚ ಪತಿತೇ ನಹುಷೇ ಪಾಪನಿಶ್ಚಯೇ ॥ ೧೦ ॥**

**ರಜಸ್ತಮೋಭ್ಯಾಮಾಕ್ರಾಂತಾ ಬಭೂವುಸ್ತ್ರಿದಶಾಲಯಾಃ ।**
**ತತಃ ಪ್ರವೃತ್ತಾ ಲೋಕೇಽಸ್ಮಿನ್ನನಾವೃಷ್ಟಿಸ್ಸುದಾರುಣಾ ॥ ೧೧ ॥**

**ದುರ್ಭಿಕ್ಷಮರಣೌ ಚೋಭೌ ವಿಷಣ್ಣಾಸ್ತ್ರಿದಶಾಲಯಾಃ ।**
**ನಷ್ಟೋತ್ಸವಮಹಾಯಜ್ಞಂ ನಿರ್ವಷಟ್ಕಾರಮಂಗಳಂ ॥ ೧೨ ॥**

---

ಮೆಲ್ಲಗೆ ತನ್ನ ಕಾಲಿನಿಂದ ಅದನ್ನು ಹೊತ್ತಿದ್ದವರಲ್ಲೊಬ್ಬನಾದ ಅಗಸ್ತ್ಯಮಹರ್ಷಿಯನ್ನು ಒದ್ದುಬಿಟ್ಟನು.

೯-೧೫. ಯಾವಾಗ ನಹುಷನು ಕಾಲಿನಿಂದೊದ್ದನೋ ಆ ಅಗಸ್ತ್ಯರು ಆ ಕೂಡಲೆ ನಹುಷನಿಗೆ ನೀನು ತಮೋಗುಣವುಳ್ಳ ಸರ್ಪ (ಅಜಗರ)ವಾಗೆಂದು ಶಾಪ ಕೊಟ್ಟದ್ದಲ್ಲದೆ ಕೂಡಲೇ ವಿಶಾಪವನ್ನು ಅನುಗ್ರಹಿಸಿದರು. ನೀನು ಯುಧಿಷ್ಠಿರ ಮಹಾರಾಜನನ್ನು ಅದೆಂದು ಸಂಧಿಸುವಿಯೋ ಆಗ ನಿನಗೆ ಈ ಶಾಪವಿಮೋಚನೆಯಾಗುವುದೆನ್ನಲು ಕೂಡಲೆ ನಹುಷನು ಆ ಕಾಡಿನಲ್ಲಿ ಹಾವಾಗಿ ಹರಿದುಹೋದನು

ಸ್ವರ್ಗದಲ್ಲಿದ್ದ ಇಂದ್ರನು ತಾವರೇ ದಂಟಿನಲ್ಲಿ ನಿಂತು ಮಹಾವಿಷ್ಣುವನ್ನು ಕುರಿತು ಬ್ರಹ್ಮಹತ್ಯಾದೋಷನಿವಾರಣೆಗಾಗಿ ತಪಸ್ಸುಮಾಡತೊಡಗಿದ್ದರಿಂದಲೂ, ನಹುಷನಿಗೆ ಸರ್ಪತ್ವಬಂದುದರಿಂದಲೂ, ದೇವಲೋಕದಲ್ಲಿ ಯಜಮಾನರೇ ಇಲ್ಲದಂತಾಯಿತು. ಅಲ್ಲಿ ಉಳಿದಿದ್ದ ದೇವತೆಗಳಿಗೆ ರಜೋಗುಣತಮೋಗುಣಗಳು ಆವರಿಸಿಕೊಂಡುದರಿಂದ ಸತ್ಕರ್ಮಾನುಷ್ಠಾನಗಳು ಮಾಯವಾದುವು. ಇದರಿಂದ ಲೋಕದಲ್ಲಿ ಅನಾವೃಷ್ಟಿಗೆ ಆರಂಭವಾಯಿತು. ದುರ್ಭಿಕ್ಷಮರಣಗಳು ಲೋಕದಲ್ಲಿ ಹೆಚ್ಚಾದುವು.

**ಅನಾವೃಷ್ಟಿಹತಂ ಸರ್ವಂ ಬಭೂವ ವಸುಧಾತಲಂ ।**
**ಕ್ಷುತ್ಕ್ಷಾಮ ಮಾನುಷಪ್ರಾಯಂ ವಿನಷ್ಟಪಶುಸಂಚಯಂ ॥ ೧೩ ॥**

**ಕಾಷ್ಠಾಸ್ಥಿಸಮಾಕೀರ್ಣಂ ಕೇಶಶೈವಾಲಸಂಕುಲಂ ।**
**ಸ್ನಾಯುಭಗ್ನದ್ವಿಜಗಣೈಃ ಕ್ರವ್ಯಾದೈರಪಿಸಂಕುಲಂ ॥ ೧೪ ॥**

**ನಿರ್ಗಂಧಿ ಕುಣಪಾಕೀರ್ಣಂ ಶೂನ್ಯಪ್ರಾಯಂ ವಿಭೀಷಣಂ ।**
**ಕ್ಷುತ್ಕ್ಷಾಮ ಭೂತಸಂಘಾಭ್ಯಾಂ ವಿಪೃತ್ತವಣಿಕ್ಪಥಂ ॥ ೧೫ ॥**

**ಪ್ರಣಷ್ಟ ಕೃಷಿವಾರ್ತಂ ಚ ದಾತೃಭಿಶ್ಚ ವಿವರ್ಜಿತಂ ।**
**ನರಕೇಽಪಿ ಮಹಾಘೋರೇ ನಿರಾಕ್ರಂದೈರ್ಜನೈರ್ಯುತೈಃ ॥ ೧೬ ॥**

**ದುರ್ಲಭಾನ್ನಂ ನಿರಾನಂದಂ ಸ್ಕಂಧಾಸಕ್ತಕುಮಾರಕೈಃ ।**
**ಇತಶ್ಚೇತಶ್ಚ ಧಾವದ್ಭಿರ್ದಾನವೈರತಿಸಂಕುಲಂ ॥ ೧೭ ॥**

---

ದೇವತೆಗಳಿಗೆ ಮಹದ್ದುಃಖ ಪ್ರಾಪ್ತವಾಯಿತು. ಭೂಲೋಕದಲ್ಲಿ ನಡೆಯುತ್ತಿದ್ದ ಯಜ್ಞಯಾಗಾದಿಗಳು ನಾಮಾವಶೇಷವಾದುವು. ಇದರಿಂದ ಸ್ವಾಹಾಸ್ವಧಾವಷಟ್ಕಾರ ಗಳ ಸೊಲ್ಲು ಕೇಳಿಬರುತ್ತಲೇ ಇರಲಿಲ್ಲ. ಭೂಲೋಕವೆಲ್ಲ ಅನಾವೃಷ್ಟಿಯಿಂದ ಹತ ವಾಗುತ್ತಿರಲು ಜನರು ಹಶಿವಿನಿಂದ ಹೊಟ್ಟೆಗೆ ಆಹಾರವಿಲ್ಲದೆ ಸಾಯುವಗತಿ ಬಂದಿತು. ಗೋಧನ (ಹಸು)ಗಳು ನಷ್ಟವಾಗುತ್ತ ಬಂದವು. ಜನಗಳು ಚಕ್ಕಳ ಮೂಳೆಗಳಿಂದ ಕೂಡಿ ಜೀವಚ್ಛವದಂತೆ ಕಾಣಬಂದರು. ಇಂತು ಕಂಕಾಳರೂಪದ ಬ್ರಾಹ್ಮಣ ವೃಂದದಿಂದಲೂ ನರರಾಕ್ಷಸರಿಂದಲೂ ನಿರ್ಗಂಧವಾದ ಹೆಣಗಳ ರಾಶಿಗಳಿಂದಲೂ ಭೂಲೋಕವು ಶೂನ್ಯಪ್ರಾಯವಾಗಿ ಭಯಂಕರವಾಗಿ ಕಾಣಿಸುತ್ತಿತ್ತು. ಅಂಗಡಿಬೀದಿ ಗಳಲ್ಲೆಲ್ಲಿಯೂ ಹೊಟ್ಟೆಗೆ ಅನ್ನವಿಲ್ಲದೆ ಪ್ರಾಣಬಿಡುತ್ತಿರುವ ಜನರು ಕಾಣಬರುತ್ತಿದ್ದರು.

೧೬-೨೪. ಭೂವ್ಯವಸಾಯದ ಮಾತೇ ಅಡಗಿಹೋಯಿತು. ದಾತೃ (ದಾನ ಮಾಡುವವ)ಗಳ ಹೆಸರೇ ಹುಟ್ಟಡಗಿಹೋಯಿತು. ನರಕದಲ್ಲಿ ಇರುವ ಜನರಿಗಾದರೂ ಘಟ್ಟಿಯಾಗಿ ಅಳುವುದಕ್ಕೇ ಶಕ್ತಿಯಿರಲಿಲ್ಲ. ಅನ್ನ ಸಿಕ್ಕುವುದೇ ದುರ್ಲಭವಾಗಿರುವಲ್ಲಿ ಜನರಿಗೆ ಆನಂದವೆಲ್ಲಿಂದ ಬಂದೀತು? ಜನರು ಹೊಟ್ಟೆಗಿಲ್ಲದೆ ಅಳುತ್ತಿರುವ ತಮ್ಮ ಮಕ್ಕಳನ್ನು ಹೆಗಲಮೇಲೆ ಹೊತ್ತುಕೊಂಡು ಅತ್ತಲೂ ಇತ್ತಲೂ ಸುತ್ತುತ್ತಾ ತುತ್ತಿಗೆ

**ಶುಷ್ಕತೋಯಾಶಯಂ ಭೀಮಂ ನಾಮಶೇಷಮಹಾಪಗಂ ।**
**ತಸ್ಮಿನ್ ಕಾಲೇ ಮಹಾಘೋರೇ ಚೋತ್ಸೃಷ್ಟನಿಯಮಾ ದ್ವಿಜಾಃ ॥ ೧೮ ॥**

**ಆರ್ಯಾವರ್ತಂ ಪರಿತ್ಯಜ್ಯ ಮ್ಲೇಚ್ಛ-ದೇಶಮುಪಾಶ್ರಿತಾಃ ।**
**ಭಕ್ಷ್ಯಾಭಕ್ಷ್ಯಂ ಪರಿತ್ಯಜ್ಯ ಕುರ್ವಾಣಾಃ ಪ್ರಾಣಧಾರಣಂ ॥ ೧೯ ॥**

**ಪ್ರಾಣಧಾರಣಸಕ್ತಾನಾಂ ಕ್ಷುಧಾವ್ಯಾಕುಲಚೇತಸಾಂ ।**
**ತೇಷಾಂ ಬ್ರಹ್ಮ ತದಾ ನಷ್ಟಂ ಧಾವತಾಂ ಚ ಇತಸ್ತತಃ ॥ ೨೦ ॥**

**ತದಾ ನಷ್ಟೇಷು ದೇವೇಷು ಮ್ಲೇಚ್ಛೀಭೂತಮಿದಂ ಜಗತ್ ।**
**ಮ್ಲೇಚ್ಛೀಭೂತೇ ಜಗತ್ಯಸ್ಮಿನ್ ಸ್ವಧಾಸ್ವಾಹಾ ವಿವರ್ಜಿತಾಃ ॥ ೨೧ ॥**

**ಯದಾ ಮರ್ತ್ಯಾಸ್ತಥಾ ಜಾತಾಃ ಸರ್ವೇ ವೈ ದೇವತಾಗಣಾಃ ।**
**ಕ್ಷುತ್ಕ್ಷಾಮಕಂಠೈಸ್ತ್ರಿದಶೈಃ ಪ್ರಾರ್ಥಿತಶ್ಚ ಜನಾರ್ದನಃ ॥ ೨೨ ॥**

---

ಗತಿಯಿಲ್ಲದೆ ತಳಮಳಿಸುತ್ತಿದ್ದರು. ಈ ಹೊಟ್ಟೆಗಿಲ್ಲದ ಜನರೆಲ್ಲರೂ ದಾನವಾಂಶರೇ ಆಗಿದ್ದರು. ಯಾವ ಕೆರೆಕಟ್ಟೆಗಳಲ್ಲಾಗಲೀ ನೀರಿಲ್ಲದೆ ಬತ್ತಿಹೋಗಿತ್ತು. ಮಹಾನದಿಗಳು ನೀರಿಲ್ಲದೆ ನಾಮಾವಶೇಷವಾಗಿದ್ದುವು. ಬ್ರಾಹ್ಮಣರು ವಿಧಿನಿಷೇಧಗಳನ್ನು ತ್ಯಾಗಮಾಡಿ ವರ್ಣಾಶ್ರಮಧರ್ಮಗಳನ್ನು ದೂರಮಾಡಿ ಬಿಟ್ಟಿದ್ದರು. ಮತ್ತು ಬ್ರಾಹ್ಮಣರೆನಿಸಿಕೊಂಡ ಎಷ್ಟೋ ಮಂದಿ ಆರ್ಯಾವರ್ತ [ಭರತಖಂಡ] ವನ್ನು ಬಿಟ್ಟು ಮ್ಲೇಚ್ಛದೇಶಗಳಿಗೆ ಹೋಗಿ ವಾಸಮಾಡತೊಡಗಿದರು. ಭಕ್ಷ್ಯಾಭಕ್ಷ್ಯವಿವೇಚನೆಯನ್ನು ಬಿಟ್ಟು ಸಿಕ್ಕಿದ ದುರಾಹಾರವನ್ನು ತಿಂದು ಜೀವಿಸುತ್ತಿದ್ದರು. ಪ್ರಾಣಧಾರಣೆ ಮಾಡಲು ಆಸಕ್ತರಾದ ಹೊಟ್ಟೆಹಸಿವಿನಿಂದ ಸಂಕಟಪಡುತ್ತಿರುವ ಅಲ್ಲಿಇಲ್ಲಿ ಅಲೆಯುತ್ತಾ ಅನ್ನವಿಲ್ಲದೆ ಅಳುತ್ತಿರುವ, ಬ್ರಾಹ್ಮಣ್ಯವನ್ನು ಹೋಗಲಾಡಿಸಿಕೊಂಡ ಜನರು ಎಲ್ಲೆಲ್ಲೂ ಹೆಚ್ಚುತ್ತ ಬಂದರು. ದೇವಲೋಕದ ದೇವತೆಗಳ ಗತಿಯನ್ನು ಈ ಮೊದಲೇ ವರ್ಣಿಸಿದ್ದೇವೆ. ದೇವತೆಗಳೂ ನಷ್ಟರಾಗಿ ಪ್ರಪಂಚವು ಮ್ಲೇಚ್ಛಭೂತವಾದೀ ಸನ್ನಿವೇಶದಲ್ಲಿ ದೇವಲೋಕದಲ್ಲಿ ಉಳಿದಿದ್ದ ದೇವತೆಗಳು ವೈಕುಂಠಕ್ಕೆ ಹೋಗಿ ನಾರಾಯಣನನ್ನು ಕುರಿತು ಇಂದ್ರನನ್ನು ತ್ರಿಲೋಕಹಿತಸಾಧನೆಗಾಗಿ ಎಲ್ಲಿದ್ದರೂ ಬರಮಾಡಿಕೊಡಬೇಕೆಂದು ಪ್ರಾರ್ಥಿಸಿದರು. ಆಗ ಮಹಾವಿಷ್ಣುವು ಅವರೆಲ್ಲರನ್ನೂ ಕುರಿತು ನೀವೆಲ್ಲರೂ ಕೂಡಲೆ ಮಾನ

ಶಕ್ರಾರ್ಥಂ ತ್ರಿದಶಾ ಗತ್ವಾ ತ್ರೈಲೋಕ್ಯಹಿತಕಾಮ್ಯಯಾ ॥ ೨೩ ॥

ತಾನುವಾಚ- ಹರಿರ್ದೇವಃ ಸರ್ವೇ ಗಚ್ಛಂತು ಮಾನಸಂ ।
ಬಿಸತಂತುಗತಂ ಶಕ್ರಂ ತಸ್ಮಾಲ್ಲಪ್ಸ್ಯಥ ಮಾಚಿರಂ ॥ ೨೪ ॥

ಯಜತಾಂ ಸೋಽಶ್ವಮೇಧೇನ ಮಾಮೇವ ಸುರಸತ್ತಮಾಃ ।
ಅಹಮೇವ ಕರಿಷ್ಯಾಮಿ ವಿಪಾಪ್ಮಾನಂ ಬಿಡೌಜಸಂ ॥ ೨೫ ॥

ತತ್ಕೃತಾಂ ಬ್ರಹ್ಮಹತ್ಯಾಂ ತು ಚತುರ್ಧಾ ಸ ಕರಿಷ್ಯತಿ ।
ಅಮೇಧ್ಯಕ್ಷೇಪಕೇ ವಹ್ನೌ ಪಾದೇನೈಕೇನ ಯಾಸ್ಯತಿ ॥ ೨೬ ॥

ತಥಾ ಚೈಕೇನ ಪಾದೇನ ಹ್ಯಶುಚಿ-ಕ್ಷೇಪಕೇ ಜಲೇ ।
ಪಾದೇನೈಕೇನ ಚ ತಥಾ ಸರ್ವಕಾಲೇ ದ್ರುಮಚ್ಛಿದಂ ॥ ೨೭ ॥

---

ನಸರೋವರಕ್ಕೆ ಪ್ರಯಾಣಮಾಡಿರಿ. ಅಲ್ಲೊಂದು ಕಮಲದ ದಂಟಿನಲ್ಲಿ ಸೂಕ್ಷ್ಮರೂಪದಿಂದ ಬ್ರಹ್ಮಹತ್ಯಾನಿವಾರಣೆಗಾಗಿ ನನ್ನನ್ನು ಕುರಿತು ಧ್ಯಾನಯೋಗದಿಂದ ತಪಸ್ಸು ಮಾಡುತ್ತಿರುವ ಇಂದ್ರನನ್ನು ನೀವು ನಿಸ್ಸಂದೇಹವಾಗಿ ಪಡೆಯುತ್ತೀರೆಂದು ಹೇಳಿದನು.

೨೫-೩೦. ಎಲೈ, ದೇವತೆಗಳಿರಾ ! ನೂರು ಅಶ್ವಮೇಧಯಾಗಗಳಿಂದ ಹೊಂದಬೇಕಾದ ಇಂದ್ರಪದವಿಯನ್ನು ನಾನು ಬಿಸತಂತುವಿನಲ್ಲಡಗಿ ನನ್ನನ್ನು ಧ್ಯಾನ ಮಾಡಿ ಶುದ್ಧಾತ್ಮನಾದ ಇಂದ್ರನಿಗೆ ಕೊಟ್ಟು ಅವನ ಪಾಪವನ್ನು ಪರಿಹಾರಮಾಡಿರುತ್ತೇನೆ. ಆ ಇಂದ್ರನು ಮಾಡಿದ ಬ್ರಹ್ಮಹತ್ಯಾಪಾಪವು ಈಗ ನಾಲ್ಕುಭಾಗವಾಗಿ ವಿಂಗಡವಾಗುತ್ತದೆ. ಒಂದು ಭಾಗವು ಅಮೇಧ್ಯ ಕ್ಷೇಪಕ [ ಅಶುಚಿಯನ್ನು ಗುಡಿಸುವವನು ] ರನ್ನು ಆಶ್ರಯಿಸುತ್ತದೆ. ಇಂದ್ರನು ಮಾಡಿದ ಬ್ರಹ್ಮಹತ್ಯೆಯ ಎರಡನೇ ಭಾಗವು ಅಗ್ನಿಯ ಕಪ್ಪಾದ ಮೊದಲನೇ ಜ್ವಾಲೆಯಲ್ಲಿ ಅಡಗಿಹೋಗುವುದು. ಮೂರನೇ ಭಾಗವು ದ್ರುಮಚ್ಛಿದ [ಮರಕಡಿಯುವವ] ರ ಸಮೀಪಕ್ಕೆ ಹೋಗಿ ಅವರನ್ನು ಆಶ್ರಯಿಸುವುದು. ನಾಲ್ಕನೇಪಾದವು ರಜಸ್ವಲಾ [ಮುಟ್ಟಾದ] ಸ್ತ್ರೀಯರ ರಜಸ್ಸನ್ನು ಸೇರಿಕೊಳ್ಳಲಿ.

ರಜಸ್ವಲಾಂಗಂ ಪಾದೇನ ತಥಾ ಚೈಕೇನ ಯಾಸ್ಯತಿ ।
ಅಹಮಂಶೇನ ಯಾಸ್ಯಾಮಿ ಭೂತಲಂ ಸುರಕಾರಣಾತ್ ॥ ೨೮ ॥

ನಷ್ಟೇ ಚ ಭೂತಲೇ ಧರ್ಮಂ ಸ್ಥಾಪಯಿಷ್ಯಾಮ್ಯಹಂ ಪುನಃ ।
ಏತತ್ಸರ್ವಂ ಯಥೋದ್ದಿಷ್ಟಂ ದೇವದೇವೇನ ಶಾರ್ಙ್ಗಿಣಾ ।
ಚಕ್ರುಸ್ಸುರಗಣಾಸ್ಸರ್ವೇ ರಾಜ್ಯಂ ಚಾವಾಪ ವೃತ್ರಹಾ ॥ ೩೦ ॥

ಶಕ್ರೇಣ ನಿತ್ಯಂ ಬಿಸತಂತುಗೇನ
ಧ್ಯಾತೋ ಮಹಾತ್ಮಾ ಹರಿರಪ್ರಮೇಯಃ ।

---

[ಆದ್ದರಿಂದ ಈ ನಾಲ್ಕು ಸನ್ನಿವೇಶಗಳಲ್ಲೂ ಅಸ್ಪೃಶ್ಯತಾ ದೋಷವಿದೆಯೆಂದು ತಿಳಿಯಬೇಕು]

ಈ ರೀತಿ ನಿರ್ದೋಷಿಯಾದ ಇಂದ್ರನನ್ನು ಸ್ವರ್ಗದ ಸಿಂಹಾಸನದಲ್ಲಿ ಕುಳ್ಳಿರಿಸಿ ನಾನು ದೇವತೆಗಳಾದ ನಿಮ್ಮ ಕಾರ್ಯಸಾಧನೆಗಾಗಿ ಭೂಲೋಕದಲ್ಲಿ ಅವತರಿಸುತ್ತೇನೆ. ಭೂಭಾಗದಲ್ಲಿ ನಷ್ಟವಾಗಿ ಹೋಗಿರುವ ವೇದ [ಆರ್ಯ] ಧರ್ಮವನ್ನು ಪುನಃ ಸ್ಥಾಪಿಸುತ್ತೇನೆ.

ಈ ರೀತಿ ಹೇಳಿ ಮಹಾವಿಷ್ಣುವು ಸುರರನ್ನು ಬೀಳ್ಕೊಡಲು ಭಗವಂತನ ಸಂಕಲ್ಪದಂತೆ ಸಕಲಕಾರ್ಯಗಳನ್ನೂ ದೇವತೆಗಳು ನಡೆಸಿ ಇಂದ್ರನನ್ನು ತಂದು ಸಿಂಹಾಸನದಲ್ಲಿ ಕುಳ್ಳಿರಿಸಿ ಸ್ವರ್ಗರಾಜ್ಯಾಭಿಷೇಕವನ್ನು ಮಾಡಿದರು. ಈ ರೀತಿಯಾಗಿ ಇಂದ್ರನು ವೃತ್ರಹತ್ಯಾದೋಷದಿಂದ ಮುಕ್ತನಾಗಿ ತನ್ನ ಸ್ವರ್ಗರಾಜ್ಯವನ್ನು ಪುನಃ ಸಂಪಾದಿಸಿಕೊಂಡನು.

೩೧. ಬ್ರಾಹ್ಮಣಶ್ರೇಷ್ಠನಾದ ವೃತ್ರಾಸುರನನ್ನು ಮನಃಪೂರ್ವಕವಾಗಿ ಸಂಹರಿಸಿ ಬ್ರಹ್ಮಹತ್ಯಾಪಾಪವನ್ನು ಹೊಂದಿದವನಾದಾಗ್ಯೂ ಇಂದ್ರನು ಪ್ರತಿದಿನವೂ ತಾವರೆ ದಂಟಿನಲ್ಲಿ ಅಡಗಿ ಸೂಕ್ಷ್ಮದೇಹದಿಂದ ಅಪ್ರಮೇಯನೂ,ಅನಾದ್ಯಂತನೂ ಆದ ಶ್ರೀಹರಿ

**ಹತ್ವಾಽಪಿ ಕಾಮೇನ ಸ ವಿಪ್ರಮುಖ್ಯಂ**
**ಲೇಭೇ ತ್ರಿಲೋಕೀಂ ಪುನರೇವ ತಸ್ಮಾತ್** ॥ ೩೧ ॥

**ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ವೃತ್ರವಧೋಪಾಖ್ಯಾನಂ ನಾಮಚತುರ್ವಿಂಶತಿತಮೋಽಧ್ಯಾಯಃ**

---

ಯನ್ನು ಧ್ಯಾನಿಸುತ್ತಿದ್ದನಾದುದರಿಂದ ಪುನಃ ತ್ರಿಲೋಕಾಧಿಪತ್ಯವನ್ನು ಸಂಪಾದಿಸಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ವೃತ್ರವಧೋಪಾಖ್ಯಾನವೆಂಬ ಹೆಸರಿನ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಪಂಚವಿಂಶತಿತಮೋಽಧ್ಯಾಯಃ

—·—

**ಮಾರ್ಕಂಡೇಯ ಉವಾಚ ||**

**ಬ್ರಹ್ಮಣೋಽತ್ರಿಸ್ಸುತಶ್ಶ್ರೀಮಾನ್ ಪ್ರಭಾವಾದ್ಬ್ರಹ್ಮಣಾ ಸಮಃ ।**
**ಪ್ರಭಾಕರಸ್ತಸ್ಯ ಸುತಃ ಪಿತಾಮಹಸಮೋ ಗುಣೈಃ || ೧ ||**

**ಸ್ವರ್ಭಾನುನಾ ಹತೇ ಸೂರ್ಯೇ ಪತಮಾನೇ ದಿವೋ ಮಹೀಂ ।**
**ತಮೋಽಭಿಭೂತೇ ತಪಸಾ ಪ್ರಭಾ ಯೇನ ವಿವರ್ಧಿತಾ || ೨ ||**

**ಸ್ವಸ್ತ್ಯಸ್ತ್ವಿತಿ ಸಹೋವಾಚ- ಪತಮಾನಂ ದಿವಾಕರಂ ।**
**ವಚನಾತ್ತಸ್ಯ ಬ್ರಹ್ಮರ್ಷೇಃ (ವಿಪ್ರರ್ಷೇಃ) ಸ್ನಪಪಾತ ದಿವೋ ಮಹೀಂ || ೩ ||**

---

ಇಪ್ಪತ್ತೈದನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳಿದನು— ಬ್ರಹ್ಮನಿಗೆ ತನ್ನ ಪ್ರಭಾವದಿಂದಲೇ ಬ್ರಹ್ಮತೇಜಸ್ಸಿನಿಂದೊಡಗೂಡಿದ ಶ್ರೀಮಂತನಾದ ಅತ್ರಿಋಷಿಯು ಮಗನಾಗಿ ಹುಟ್ಟಿದನು. ಆ ಅತ್ರಿಗೆ ಗುಣಗಳಲ್ಲಿ ತಾತನಿಗೆ ಸಮನಾದ ಗುಣಗಳಿಂದೊಡಗೂಡಿದ ಪ್ರಭಾಕರನೆಂಬ ಹೆಸರಿನ ಮಗನು ಹುಟ್ಟಿದನು.

೨-೩. ಈ ಪ್ರಭಾಕರನೆಂಬ ಬ್ರಹ್ಮರ್ಷಿಯ ವಿಷಯವನ್ನಿಲ್ಲಿ ಸ್ವಲ್ಪ ಬರೆಯುತ್ತೇವೆ. ಒಂದಾನೊಂದು ಕಾಲದಲ್ಲಿ ಈ ಪ್ರಭಾಕರನಿಂದ ಸೂರ್ಯನು ಹೊಡೆಯಲ್ಪಟ್ಟು ಅಂತರಿಕ್ಷದಿಂದ ಕಳಚಿಕೊಂಡು ಭೂಮಿಗೆ ಬಿದ್ದುಬಿಟ್ಟನು. ಸೂರ್ಯನಿಲ್ಲದ ಭೂಮಿಯೂ ಸ್ವರ್ಗವೂ ಕತ್ತಲೆಯಾಗಿ ಹೋಯಿತು. ಆ ಕಾಲದಲ್ಲಿ ಈ ಪ್ರಭಾಕರಋಷಿಯು ತನ್ನ ತಪಃಪ್ರಭೆಯಿಂದ ಸ್ವರ್ಗಲೋಕ ಭೂಲೋಕಗಳಿಗೆ ಬೆಳಕನ್ನು ಕೊಟ್ಟು ಸೂರ್ಯ

**ಅತ್ರಿಶ್ರೇಷ್ಠಾನಿ ಗೋತ್ರಾಣಿ ಯಶ್ಚಕಾರ ಮಹಾಯಶಾಃ ।**
**ಯಜ್ಞೇಷ್ವತ್ರಿವರಂ ಯಶ್ಚ ಸುರೈರ್ಯಸ್ಯ ಪ್ರಕೀರ್ತಿತಂ ॥ ೪ ॥**

**ತಸ್ಯ ಪುತ್ರತ್ವಮಾಪನ್ನೌ ಜನಾರ್ದನ ಮಹೇಶ್ವರೌ ।**
**ದತ್ತಾತ್ರೇಯೋಥ ದೂರ್ವಾಸಃ ಲೋಕೇ ಖ್ಯಾತಿಮುಪಾಗತೌ ॥ ೫ ॥**

**ದತ್ತಾತ್ರೇಯತ್ವಮಾಸಾದ್ಯ ಭಗವಾನ್ಮಧುಸೂದನಃ ।**
**ವೇದಾನಧ್ಯಾಪಯಾಮಾಸ ಬ್ರಾಹ್ಮಣಾಂಶ್ಚರಿತ ವ್ರತಾನ್ ॥ ೬ ॥**

**ತೇಷು ನಷ್ಟೇಷು ವೇದೇಷು ಕ್ರಿಯಾಸು ಚ ಮುಖೇಷು ಚ- ।**
**ಚಾತುರ್ವರ್ಣ್ಯೇ ಸಮಾಕೀರ್ಣೇ ಧರ್ಮೇ ಶಿಥಿಲತಾಂ ಗತೇ ॥ ೭ ॥**

**ಅಭಿವರ್ಧತಿ ಚಾಧರ್ಮೇ ಸತ್ಯೇ ನಷ್ಟೇಽನೃತೇ ಸ್ಥಿತೇ ।**
**ಪ್ರಜಾಸು ಶೀರ್ಯಮಾಣಾಸು ಧರ್ಮೇ ಚಾಕುಲತಾಂ ಗತೇ ॥ ೮ ॥**

---

ನನ್ನು ಕುರಿತು ನಿನಗೆ ಮಂಗಳವಾಗಲಿ, ಹೋಗಿ ಬಾರೈ ! ಎಂದೊಡನೆ ಸೂರ್ಯನು ಸುತರಾಂ ಭೂಮಿಯಲ್ಲಿ ಅಡಗಿಹೋದನು.

೪. ಈ ಪ್ರಭಾಕರನು ಅತ್ರಿಶ್ರೇಷ್ಠನೆನಿಸಿಕೊಂಡವನಾಗಿ ಆತ್ರೇಯಸ ಗೋತ್ರವನ್ನೇ ನಿರ್ಮಾಣಮಾಡಿ ಯಶಸ್ಸನ್ನು ಸಂಪಾದಿಸಿದನು. ದೇವತೆಗಳೂ ಕೂಡ ಯಜ್ಞಗಳಲ್ಲಿ ಕೂಡ ಈ ಅತ್ರಿಶ್ರೇಷ್ಠನಾದ ಪ್ರಭಾಕರನನ್ನು ಹೊಗಳಿರುತ್ತಾರೆ

೫. ಆತನಿಗೆ ಜನಾರ್ದನನೂ (ವಿಷ್ಣುವೂ,) ಪರಮೇಶ್ವರನೂ, ಮಕ್ಕಳಾಗಿ ಹುಟ್ಟಿ, ದತ್ತಾತ್ರೇಯನೆಂದೂ, ದೂರ್ವಾಸರೆಂದೂ ಹೆಸರು ಪಡೆದು ಕೀರ್ತಿಯನ್ನು ಗಳಿಸಿದರು.

೬. ಭಗವಾನ್ಮಧುಸೂಧನನು ದತ್ತಾತ್ರೇಯರ ಅವತಾರವನ್ನೂ ಮಾಡಿ ನಿಯಮದಿಂದಿದ್ದ ಬ್ರಾಹ್ಮಣರಿಗೆ ವೇದಗಳನ್ನು ಕಲಿಸಿದನು

೭-೮. ಅಂತಹ ವೇದಗಳು ನಷ್ಟವಾಗಿ ಹೋಗಲು ಅವುಗಳನ್ನನುಸರಿಸಿದ್ದ ಯಜ್ಞಗಳೂ, ಯಜ್ಞಾಂಗಕರ್ಮಗಳೂ ಹೇಳ ಹೆಸರಿಲ್ಲವಾದುವು. ಚಾತುರ್ವರ್ಣ್ಯಗಳೂ ಸಂಕರವಾಗಿ ಹೋದವು. ಧರ್ಮವು ಶಿಥಿಲವಾಗಿ ಹೋಯಿತು. ಅಧರ್ಮವು ಹೆಚ್ಚುತ್ತ ಬಂದಂತೆ ಸತ್ಯವು ನಷ್ಟವಾಗಿ ಸುಳ್ಳು ಹೆಚ್ಚಾಯಿತು. ಈ ರೀತಿಯಾಗಿ

ಸಯಜ್ಞಾಸ್ಸಕ್ರಿಯಾ ವೇದಾಃ ಪ್ರತ್ಯಾನೀತಾ ಹಿ ತೇನ ವೈ ।
ಚಾತುರ್ವರ್ಣ್ಯಮಸಂಕೀರ್ಣಂ ಕೃತಂ ತೇನ ಮಹಾತ್ಮನಾ ॥ ೯ ॥

ದುರ್ಭಿಕ್ಷಮರಣೌ ನಷ್ಟೌ ತಸ್ಮಿನ್ ಜಾತೇ ಮಹೀತಲೇ ।
ಪ್ರವವರ್ಷ ಚ ದೇವೇಂದ್ರಃ ಸಹಸ್ರನಯನಃ ಕ್ಷಿತೌ ॥ ೧೦ ॥

ಭೂಯ ಏವ ಜಗದ್ವೃತ್ತಂ ಯಥಾಪೂರ್ವಂ ಜಗತ್ಪತೇ ।
ಪ್ರನಷ್ಟ ಕಲುಷೇ ಲೋಕೇ ಸನ್ಮಾರ್ಗಸ್ಥೇಷು ರಾಜಸು ॥ ೧೧ ॥

ಯಜತ್ಸು ವಿಪ್ರಮುಖ್ಯೇಷು ತಪಸ್ಯಭಿರತೇಷು ಚ ।
ವಾರ್ತಾಸಕ್ತೇಷು ವೈಶ್ಯೇಷು ಶುಶ್ರೂಷುಸ್ವಂತ್ಯಜೇಷು ಚ ॥ ೧೨ ॥

ಮುದಿತೇಷು ಚ ಲೋಕೇಷು ತ್ರೈಲೋಕ್ಯೇ ದೇವಸಾದ್ಗತೇ ।
ವಿಷ್ಣೋರ್ಭಾಗೇ ಕ್ಷಿತಿ ಗತೇ ಕಾರ್ತವೀರ್ಯಾರ್ಜುನಸ್ತದಾ ॥ ೧೩ ॥

---

ಪ್ರಜೆಗಳು ಕೆಟ್ಟುಹೋಗಿ, ಧರ್ಮವು ನಾಶವಾಗುತ್ತಿರಲು, ಯಜ್ಞಕ್ರಿಯಾಸಹಿತವಾದ ವೇದಗಳು ಪಾತಾಳವನ್ನು ಹೊಕ್ಕವು. ಇಂತಹ ಕಾಲದಲ್ಲಿ ಮಹಾವಿಷ್ಣುವು ಯಜ್ಞಾರ್ಥವಾದ ವೇದಗಳನ್ನು ಪಾತಾಳದಿಂದ ಮೇಲಕ್ಕೆತ್ತಿ ವರ್ಣಾಶ್ರಮಧರ್ಮಗಳನ್ನು ಹಿಂದಿನಂತೆ ಕ್ರಮಪಡಿಸಿದನು.

೧೦. ಆಗ ದುರ್ಭಿಕ್ಷದುರ್ಮರಣಗಳು ಹಾಳಾಗಿಹೋದುವು. ಆದೆಂದು ಭಗವಂತನು ವೇದೋದ್ಧಾರಮಾಡಿದನೋ ಆ ಕೂಡಲೆ ಸಹಸ್ರ ನಯನನಾದ ದೇವೇಂದ್ರನು ಭೂಮಿಯಲ್ಲಿ ಯಥೇಚ್ಛವಾಗಿ ಮಳೆಯನ್ನು ಕರೆದನು.

೧೧-೧೪. ಈ ರೀತಿ ಸುವೃಷ್ಟಿಯಾಗಿ ಲೋಕದ ಸ್ಥಿತಿಯು ಪೂರ್ವದಲ್ಲಿದ್ದಂತೆ ಕ್ಷೇಮಕರವಾಗಿ ಪರಿಣಮಿಸಿತು. ಸಕಲ ಕಲ್ಮಷವೂ ನಾಶವಾಗಲು ರಾಜರೆಲ್ಲರೂ ಸನ್ಮಾರ್ಗದಲ್ಲಿ ತೊಡಗಿದರು. ಬ್ರಾಹ್ಮಣರೆಲ್ಲರೂ ಯಜ್ಞಯಾಗನಿರತರಾಗಿಯೂ ತಪಸ್ವಿಗಳಾಗಿಯೂ ಇದ್ದರು. ಕ್ಷತ್ರಿಯವೈಶ್ಯರೂ ಅಂತೆಯೇ ಸ್ವಕರ್ಮಧರ್ಮನಿರತರಾದರು. ಶೂದ್ರಚಾಂಡಾಲಾದಿಗಳು ಉತ್ತಮವರ್ಣಾಶ್ರಮಿಗಳ ಶುಶ್ರೂಷೆಯಲ್ಲಿ ಆಸಕ್ತರಾದರು. ಲೋಕವೆಲ್ಲವೂ ಸಂತೋಷಚಿತ್ತದಿಂದ ಕೂಡಿತ್ತು. ಇದನ್ನು ನೋಡಿದರೆ ದೇವಲೋ

ದಶವರ್ಷಸಹಸ್ರಾಣಿ ಕೃತವಾನ್ದುಶ್ಚರಂ ತಪಃ ।
ಪ್ರಯಾಗವನಮಾಸಾದ್ಯ ದತ್ತಾತ್ರೇಯಾಶ್ರಮಂ ಪ್ರತಿ ॥ ೧೪ ॥

ಆರಾಧಯಾಮಾಸ ತದಾ ದತ್ತಂ ಶುಶ್ರೂಷಯಾ ನೃಪ ।
ತೇನ ದತ್ತವರಶ್ಚಕ್ರೇ ಸ ರಾಜ್ಯಂ ಹತಕಂಟಕಂ ॥ ೧೫ ॥

ಆರ್ಯಾವರ್ತೇಷು ನಿರ್ಮ್ಲೇಚ್ಛಾ ಕೃತಾ ತೇನ ವಸುಂಧರಾ ।
ತಸ್ಮಿನ್ ರಾಜನಿ ಧರ್ಮಜ್ಞೇ ದೈತ್ಯೈರ್ದೇವನಿಷಾತಿತೈಃ ॥ ೧೬ ॥

ಸಂಪ್ರಾಪ್ತೈರ್ಭೂಮಿಪಾಲತ್ವಂ ವಸುಧಾ ಭಾರಪೀಡಿತಾ ।
ನಾಕಪೃಷ್ಠಂ ಯಯೌ ಶೀಘ್ರಂ ಶಕ್ರದರ್ಶನಲಾಲಸಾ ॥ ೧೭ ॥

---

ಕವೇ ಭೂಮಿಗೆ ಇಳಿದು ಪ್ರತ್ಯಕ್ಷನಾಗಿ ನೆಲಸಿತೆಂದು ತೋರುತ್ತಲಿತ್ತು. ಈ ರೀತಿ ವಿಷ್ಣುವು ಒಂದುಭಾಗದಿಂದ ದತ್ತಾತ್ರೇಯನಾಗಿ ಅವತರಿಸಿದುದನ್ನು ತಿಳಿದು ಕಾರ್ತವೀರ್ಯಾರ್ಜುನನು, ಪ್ರಯಾಗದ ಹತ್ತಿರವಿರುವ ದತ್ತಾತ್ರೇಯರ ಕಾಡಿಗೆ ಪ್ರವೇಶಿಸಿ, ಅಲ್ಲಿ ದತ್ತಾಶ್ರಮದ ಬಳಿ ಕುಳಿತು, ದುಶ್ಚರವಾದ ತಪಸ್ಸನ್ನು ಹತ್ತುಸಾವಿರ ವರ್ಷಪರ್ಯಂತರ ಮಾಡಿದನು.

೧೫-೧೭. ಇಂತು ದತ್ತಾತ್ರೇಯರನ್ನು ಕುರಿತು ತಪಸ್ಸನ್ನು ಮಾಡಿದ ಬಳಿಕ ಆ ಅರ್ಜುನನ ಶುಶ್ರೂಷೆಯಿಂದ ದತ್ತನು ಅವನಿಗೆ ಸುಖವಾಗಿರೆಂದು ವರ ಕೊಟ್ಟನು. ಆಗ ಆ ರಾಜ್ಯದಲ್ಲಿ ನಿಷ್ಕಂಟಕನಾಗಿ ಅರ್ಜುನನು ರಾಜ್ಯಭಾರಮಾಡಿಕೊಂಡಿದ್ದನು. ಆಗ ಆರ್ಯಾವರ್ತದಲ್ಲಿ ಮ್ಲೇಚ್ಛರ ಹೆಸರೇ ಅಳಿದುಹೋಯಿತು. ಇಂತಹ ಧರ್ಮರಾಜ್ಯದಲ್ಲಿ ದೇವತೆಗಳಿಂದ ಏಟುತಿಂದು ಸೋತ ರಾಕ್ಷಸರೆಲ್ಲರೂ ಬಂದು ಸೇರಿಕೊಂಡರು. ಆಗ ಮಾತ್ರ ಭೂಮಿಯು ಆ ಅಸುರರ ಭಾರವನ್ನು ಹೊರಲಾರದೆ ಹೋದಳು. ಆಗ ಭೂದೇವಿಯು ಇಂದ್ರನನ್ನು ನೋಡಬೇಕೆಂದು ಬಹುವೇಗದಿಂದ ಸ್ವರ್ಗಕ್ಕೆ ಪ್ರಯಾಣಮಾಡಿದಳು.

ಅಸಾದ್ಯ ಲೋಕಂ ತ್ರಿದಿವೇಶ್ವರಸ್ಯ
ಭಾರೇಣ ಖಿನ್ನಾ ವಸುಧಾ ನರೇಂದ್ರೈಃ ।
ಕಿಂ ತತ್ರ ಚಕ್ರೇ ವದ ತನ್ಮಮಾದ್ಯ
ದೃಷ್ಟ್ವಾ ಕ್ಷಿತಿಂ ಯಚ್ಚ ಚಕಾರ ಶಕ್ರಃ　　　॥ ೧೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ದತ್ತಾತ್ರೇಯೋಪಾಖ್ಯಾನಂ ನಾಮ ಪಂಚವಿಂಶತಿತಮೋಽಧ್ಯಾಯಃ

---

೧೮. ವಜ್ರಮಹಾರಾಜನು ಹೇಳುತ್ತಾನೆ:- ಎಲೈ ! ಮಾರ್ಕಂಡೇಯನೇ ಭೂಮಿಯು ದೈತ್ಯಸದೃಶರಾದ ರಾಜರಿಂದ ಕೂಡಿ ಭಾರವನ್ನು ಹೊರಲಾರದೆ ಸ್ವರ್ಗಕ್ಕೆ ಹೋದಳೆಂದು ತಿಳಿಸಿದೆಯಷ್ಟೆ? ಅಲ್ಲಿ ಏನು ಮಾಡಿದಳು ? ಶಕ್ರನು ಏನು ಹೇಳಿದ ನೆಂಬ ವೃತ್ತಾಂತವನ್ನು ತಿಳಿಸೆಂದು ಕೇಳಿಕೊಂಡನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ದತ್ತಾತ್ರೇಯೋಪಾಖ್ಯಾನವೆಂಬ ಹೆಸರಿನ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಷಡ್ವಿಂಶತಿತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ನಾಕಪೃಷ್ಠಗತಾ ಭೂಮಿರ್ದದರ್ಶ ಮಧುಸೂಧನಂ ।
ರತ್ನಾಸನಗತಂ ವೀರಂ ಶ್ರಿಯಾ ಪರಮಯಾ ಯುತಂ ॥ ೧ ॥

ಉಪಾಸ್ಯಮಾನಂ ತ್ರಿದಶೈರ್ಭಾಸಯಂತಂ ಸಭಾಂ ಶುಭಾಂ ।
ಆದಿತ್ಯೈರ್ವಸುಭಿಸ್ಸಾಧ್ಯೈರ್ವಿಶ್ವೇದೇವೈರ್ಮರುದ್ಗಣೈಃ ॥ ೨ ॥

ದೇವೈರ್ಭೃಗ್ವಂಗಿರೋಭಿಶ್ಚ ನಾಸತ್ಯೈಶ್ಚ ಮಹಾತ್ಮಭಿಃ ।
ಋಷಿಭಿಸ್ಸೂರ್ಯಸಂಕಾಶೈಸ್ತಪಸಾ ದ್ಯೋತಿತ ಪ್ರಭೈಃ ॥ ೩ ॥

---

### ಇಪ್ಪತ್ತಾರನೆಯ ಅಧ್ಯಾಯವು

೧-೭. ಮಾರ್ಕಂಡೇಯನು ಹೇಳುತ್ತಾನೆ:- ಭೂದೇವಿಯು ಇಂದ್ರನನ್ನು ನೋಡುವುದಕ್ಕಾಗಿ ಸ್ವರ್ಗದ ಧೊರೆಯಾದ ದೇವೇಂದ್ರನ ಬಳಿಗೆ ಬಂದಳೆಂದು ಹಿಂದೆ ಹೇಳಿದೆ. ಇಲ್ಲಿ ಭೂಮಿಯು ಲಕ್ಷ್ಮೀಸಹಿತನಾದ ಮಹಾವಿಷ್ಣುವನ್ನು ನೋಡಿದಳೆಂದು ಹೇಳಲ್ಪಟ್ಟಿದೆ. ಇಂದ್ರನೂ ಮಹಾವಿಷ್ಣುವೂ ಒಂದೇ ಎಂದು ಎಲ್ಲರೂ ಭಾವಿಸಬಹುದು. ಮಹಾವಿಷ್ಣುವಿನ ಸಕಲವೈಭವಗಳೂ ಇಂದ್ರನಲ್ಲಿತ್ತೆಂದು ತಿಳಿದುಕೊಳ್ಳಬೇಕು. ತ್ರಿವಿಷ್ಟಪವೆಂಬ ಮೂರು ಲೋಕಗಳಿಗೆ ಒಡೆಯನಾದ ಈ ಭಗವಂತನು ಬೇರೆ ಬೇರೆ ರೂಪದಲ್ಲಿ ಕಾಣಿಸಿಕೊಂಡರೂ ವಿಚಾರಮಾಡಿ ನೋಡಿದರೆ ಒಬ್ಬನೇ ಪರಮಾತ್ಮನು ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಾನೆಂದು ವೇದದಲ್ಲಿ ಹೇಳಿದೆ. ಆ ವೇದಮಂತ್ರಗಳನ್ನಿಲ್ಲಿ ಜನರ ಸಂದೇಹನಿವೃತ್ತಿಗಾಗಿ ಬರೆಯಲಾಗಿದೆ.

**ಗಂಧರ್ವೈರಪ್ಸರೋಭಿಶ್ಚ ಸ್ತೂಯಮಾನಂ ಸಹಸ್ರಶಃ ।**
**ಕಿರೀಟೋತ್ತಮಸಂಛನ್ನಂ ಹಾರಕೇಯೂರ ಭೂಷಿತಂ　　॥ ೪ ॥**

**ರತ್ನಾಂಗದ ಕೃತೋದ್ಯೋತಂ ರತ್ನಗರ್ಭಸಮಪ್ರಭಂ ।**
**ಹರಿಚಂದನ ದಿಗ್ಧಾಂಗಂ ನೀಲಾಂಬರಧರಂ ಹರಿಂ　　॥ ೫ ॥**

**ತಿರ್ಯಗ್ಲಲಾಟಕೇನಾಕ್ಷ್ಣಾ ತೃತೀಯೇನ ವಿರಾಜಿತಂ ।**
**ಪಶ್ಯಂತಂ ಸರ್ವಲೋಕಸ್ಯ ಸತತಂಧರ್ಮಕರ್ಮಣಿ　　॥ ೬ ॥**

**ವಿಷ್ಣೋರಚಿಂತ್ಯಮಂಗಂ ತತ್ತ್ರೈಲೋಕ್ಯಸ್ಯೈವ ಕಾರಣಂ ।**
**ಗೋಬ್ರಾಹ್ಮಣಹಿತಾಸಕ್ತಂ ದದರ್ಶ ವಸುಧಾ ತದಾ　　॥ ೭ ॥**

---

ಇಂದ್ರಂ ಮಿತ್ರಂ ವರುಣ ಮಗ್ನಿಮಾಹು ರಥೋ ದಿವ್ಯಸ್ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾ ನಮಾಹುಃ । ೧ ॥

ಕೃಷ್ಣಂ ನಿಯಾನಂ ಹರಯಸ್ಸುಪರ್ಣಾ ಅಪೋವಸಾನಾ ದಿವಮುತ್ಪತಂತಿ । ತ ಆವ ವೃತ್ರನ್ ತ್ಸದನಾದೃತಸ್ಯಾದಿದ್ಘೃ ತೇ ನ ಪೃಥಿವೀ ವ್ಯದ್ಯತೇ ॥ (ಋಗ್ವೇದ—ಮಹಾಸೌರ).

ನಾವು ಮೇಲೆ ಉದಹರಿಸಿದ ಅರ್ಥವೇ ಈ ಮಂತ್ರದಲ್ಲಿ ಅಡಕವಾಗಿದೆ. ಇನ್ನು ಕಥಾ ಪ್ರಸ್ತಾಪದ ಕಡೆ ಲಕ್ಷ್ಯ ಕೊಡೋಣ. ಸ್ವರ್ಗದೊಡೆಯನ ಬಳಿಗೆ ಬಂದ ಭೂದೇವಿಯು ಸ್ವರ್ಗಸಿಂಹಾಸನದಲ್ಲಿ ವಿರಾಜಿತನಾದ ಇಂದ್ರರೂಪನಾಗಿ ಕಾಣಿಸುತ್ತಿದ್ದ ಶ್ರೀದೇವೀಸಹಿತನಾದ ಮಧುಸೂದನನನ್ನು ನೋಡಿದಳು.

ಆ ಭಗವಂತನು ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಿದ್ದನು ಆ ಮಹಾವಿಷ್ಣು (ಇಂದ್ರನ) ವಿನ ಸಭೆಯು ಬಹು ಪ್ರಕಾಶಮಾನವಾಗಿತ್ತು. ದ್ವಾದಶಾದಿತ್ಯರೂ, ಅಷ್ಟವಸುಗಳೂ, ಸಿದ್ಧರೂ, ಸಾಧ್ಯರೂ, ವಿಶ್ವೇದೇವತೆಗಳೂ, ಮರುದ್ಗಣಗಳೂ, ರುದ್ರನೂ, ಭೃಗು, ಅಂಗಿರಸ ಮುಂತಾದ ಋಷಿಗಳೂ, ಮಹಾತ್ಮರಾದ ಅಶ್ವಿನೀದೇವತೆಗಳೂ, ಸೂರ್ಯನಂತೆ ಹೊಳೆಯುತ್ತಿರುವ, ತಮ್ಮ ತಪಸ್ಸಿನಿಂದಲೇ ಮಹಾ ಪ್ರಕಾಶಮಾನರಾದ ಮಹರ್ಷಿಗಳೂ ಆ ಮಹಾಸಭೆಯಲ್ಲಿ ತುಂಬಿದ್ದರು.

**ಸಂಧ್ಯಾಸಹ ಸಮಾಸೀನಂ ಶ್ರಿಯಾ ಚೈವ ಜನಾರ್ದನಂ ।**
**ತಂ ವವಂದೇ ವಸುಮತೀ ದೈತ್ಯಭಾರಭರಾರ್ದಿತಾ ॥ ೮ ॥**

**ಪಾದ್ಯಾರ್ಘ್ಯಾಚಮನೀಯಾದ್ಯೈಃ ಶಕ್ರೋಽಪಿ ವಸುಧಾಂ ತದಾ ।**
**ಪೂಜಯಿತ್ವಾ ಸುಖಾಸೀನಾಂ ಪಪ್ರಚ್ಛಾಗಮನಕ್ರಿಯಾಂ ॥ ೯ ॥**

**ಪೃಷ್ಟಾ ಶಕ್ರೇಣ ಸಾ ದೇವೀ ವಕ್ತುಂ ಸಮುಪಚಕ್ರಮೇ ॥ ೧೦ ॥**

---

ಗಂಧರ್ವರೂ, ಅಪ್ಸರಸ್ತ್ರೀಯರೂ ನಾನಾ ರಾಗಗಳಿಂದ ಸಹಸ್ರ ವಿಧವಾಗಿ ಆ ಭಗವಂತನನ್ನು ಹಾಡಿ ಹೊಗಳುತ್ತಿದ್ದರು. ಮಹಾಸ್ವಾಮಿಯು, ರತ್ನಖಚಿತವಾದ ಕಿರೀಟದಿಂದಲೂ, ವಿವಿಧ ರತ್ನಾಹಾರಗಳಿಂದಲೂ, ಇನ್ನೂ ಅನೇಕ ವಿಧವಾದ ಭೂಷಣಗಳಿಂದಲೂ ಅಲಂಕೃತನಾಗಿದ್ದನು. ಸುಗಂಧ ದ್ರವ್ಯಗಳಿಂದ ಲೇಪಿಸಲ್ಪಟ್ಟ ಅವಯವದಿಂದಲೂ ನೀಲಾಂಬರದಂತೆ ಇರುವ ಬಣ್ಣದಿಂದಲೂ ಆ ಮಹಾಪ್ರಭುವು ಶೋಭಿಸುತ್ತಿದ್ದನು. ಹಣೆಯ ಮೇಲೆ ಒಂದು ಕಣ್ಣೂ ಅದರ ಕೆಳಗೆ ಅಡ್ಡಡ್ಡಲಾಗಿ ಎರಡು ಕಣ್ಣೂ ಸೇರಿ ಮೂರು ನೇತ್ರಗಳಿಂದ ಶೋಭಿತನಾಗಿದ್ದನು. ಈ ಎರಡು ಅಡ್ಡಡ್ಡಲಾದ ನೇತ್ರಗಳಿಂದ ಪ್ರಪಂಚದ ಜನರು ಮಾಡುವ ಧರ್ಮಕರ್ಮಗಳನ್ನು ನೋಡುತ್ತಿದ್ದನು. ಈ ಮಹಾವಿಷ್ಣು (ಇಂದ್ರ) ವಿನ ಚಿಂತಿಸಲಶಕ್ಯವಾದ ಈ ಅವಯವಗಳು ಮೂರು ಲೋಕರಕ್ಷಣೆಗೂ ಕಾರಣವಾಗಿದ್ದುವು. ಮತ್ತು ಗೋಬ್ರಾಹ್ಮಣಹಿತದಲ್ಲಿಯೇ ಆಸಕ್ತವಾಗಿದ್ದ ಈ ಅಭೂತಪೂರ್ವವಾದ ಮಹಾವಿಷ್ಣುವಿನಂತೆಯೇ ಕಾಣಿಸುತ್ತಿದ್ದ ಇಂದ್ರನ ದಿವ್ಯದೇಹವನ್ನು ಭೂದೇವಿಯು ಕಣ್ಣಿನಿಂದ ನೋಡಿದಳು. (ಇಲ್ಲಿ ಇಂದ್ರವಿಷ್ಣುಗಳ ಅಭೇದರೂಪವನ್ನು ಭಾವಿಸಬೇಕು )

೮-೯. ಮತ್ತು ಆ ಇಂದ್ರರೂಪೀ ಮಧುಸೂದನನು ಹೇಗಿದ್ದನೆಂದರೆ:— ಸಂಧ್ಯಾಲಕ್ಷ್ಮಿಯರಿಂದ ಕೂಡಿ ಸುಖಾಸನದಲ್ಲಿ ಕುಳಿತಿದ್ದನು. ಆ ಪರಮಾತ್ಮನನ್ನು ನೋಡಿದೊಡನೆಯೇ ದೈತ್ಯ ಭಾರಭರಾರ್ದಿತಳಾಗಿ (ಭೂಭಾರದಿಂದ ಕೂಡಿದ್ದ) ಆ ಭೂದೇವಿಯು ಸಾಷ್ಟಾಂಗವಾಗಿ ನಮಸ್ಕಾರ ಮಾಡಿದಳು. ಆ ಕೂಡಲೇ ಭಗವಂತನೂ (ಇಂದ್ರ) ಕೂಡ ಭೂಮಾತೆಯನ್ನು ಅರ್ಘ್ಯಪಾದ್ಯಾಚಮನೀಯಾದಿ ಪೂಜೆಗಳಿಂದ ಉಪಚರಿಸಿ ಸುಖಾಸನದಲ್ಲಿ ಕುಳ್ಳಿರಿಸಿ ಆಕೆಯು ಬಂದ ಕಾರಣವನ್ನು ಪ್ರಶ್ನೆ ಮಾಡಿದನು.

೧೦. ಈ ರೀತಿ ಇಂದ್ರನಿಂದ ಪ್ರಶ್ನೆಮಾಡಲ್ಪಟ್ಟ ಭೂದೇವಿಯು ತನ್ನ ವೃತ್ತಾಂತವನ್ನು ಹೇಳಿಕೊಳ್ಳುವುದಕ್ಕಾರಂಭಿಸಿದಳು.

॥ ಪೃಥಿವ್ಯುವಾಚ ॥

ಅಂತರಿಕ್ಷಂ ದಿವಂ ಯದ್ವತ್ ತದ್ವೈವಾಹಂ ಜಗತ್ಪತೇ ।
ತವಾಯತ್ತಾ ಮಹಾಭಾಗ ತ್ವಂ ಹಿ ದೇವೇಶ್ವರೋ ಹರಿಃ ॥ ೧೧ ॥

ತ್ವಯಿ ಭಾರಂ ಸಮಾಸಜ್ಯ ವೇದಾಭ್ಯಸನತತ್ಪರಃ ।
ಸುಖಮಾಸ್ತೇ ಪ್ರಶಾಂತಾತ್ಮಾ ಬ್ರಹ್ಮಾ ಶುಭ ಚತುರ್ಮುಖಃ ॥ ೧೨ ॥

ತ್ವಯಿ ಭಾರಂ ಸಮಾಸಜ್ಯ ದೇವದೇವೋಽಪಿ ಶಂಕರಃ ।
ಆಸ್ತೇ ತಪಸ್ಯಭಿರತಃ ಕೈಲಾಸೇ ಪರ್ವತೋತ್ತಮೇ ॥ ೧೩ ॥

ತ್ವಯಿ ಭಾರಂ ಸಮಾಸಜ್ಯ ಸುಖಂ ಸ್ವಪಿತಿ ಕೇಶವಃ ।
ಕ್ಷೀರೋದಶಯನೇ ನಿತ್ಯಂ ಶೇಷಪರ್ಯಂಕ ಮಾಸ್ಥಿತಃ ॥ ೧೪ ॥

ಪಿತಾಮಹಸ್ಯ ಯತ್ತೇಜಃ ಕೇಶವಸ್ಯ ಶಿವಸ್ಯ ಚ ।
ಸ್ಥಿತಂ ತತ್ಸಕಲಂ ತುಭ್ಯಂ ತ್ವಂ ಹಿ ಸರ್ವಮಯೋಽರಿಹಾ ॥ ೧೫ ॥

---

೧೧-೧೯. ಭೂದೇವಿಯು ಹೇಳಿಕೊಳ್ಳುತ್ತಾಳೆ — ಮಹಾಪ್ರಭುವಾದ ದೇವೇಂದ್ರನೇ, ನಿನಗೆ ಸ್ವರ್ಗವೂ ಆಕಾಶವೂ ಹೇಗೆ ಅಧೀನವಾಗಿದೆಯೋ ಅದರಂತೆ ನಾನೂ ನಿನ್ನ ಅಧೀನಳಾಗಿದೇನೆ, ನೀನು ದೇವತೆಗಳೊಡೆಯನು. ನಿನಗೆ ಎಲ್ಲವೂ ಅಧೀನವಾಗಿದೆ. ಚತುರ್ಮುಖ ಬ್ರಹ್ಮನು ಎಲ್ಲಾ ಜಗತ್ಸೃಷ್ಟಿಭಾರವನ್ನು ನಿನ್ನಲ್ಲಿ ನಿಲ್ಲಿಸಿ ವೇದಾಭ್ಯಾಸಮಾಡುತ್ತಾ ಶಾಂತಾತ್ಮನಾಗಿ ಸುಖದಿಂದ ಸತ್ಯಲೋಕದಲ್ಲಿ ವಾಸವಾಗಿದ್ದಾನೆ. ದೇವದೇವೋತ್ತಮನಾದ ಈಶ್ವರನೂ ಕೂಡ ನಿನ್ನಲ್ಲೇ ಎಲ್ಲಾ ಭಾರವನ್ನೂ ಇಟ್ಟು ತಪಸ್ಸುಮಾಡುತ್ತಾ ಕೈಲಾಸಪರ್ವತಶಿಖರದಲ್ಲಿ ವಾಸವಾಗಿದ್ದಾನೆ. ಆದಿದೇವನಾದ ಕೇಶವನೂ ಕೂಡ ನಿನ್ನಲ್ಲಿ ಎಲ್ಲಪ್ರಪಂಚದ ರಕ್ಷಣ ಭಾರವನ್ನು ಇರಿಸಿ ಆದಿಶೇಷನೆಂಬ ಮಂಚದ ಮೇಲೆ ಕ್ಷೀರಸಮುದ್ರದಲ್ಲಿ ಸುಖವಾಗಿ ಮಲಗಿದಾನೆ ಯಾವ ತೇಜಸ್ಸು ಬ್ರಹ್ಮನಲ್ಲಿದೆಯೋ ಹರಿಹರತೇಜಸ್ಸಾವುದುಂಟೋ ಆ ತೇಜಸ್ತ್ರಯಗಳೂ ನಿನ್ನಲ್ಲಿ ನೆಲಸಿವೆ. ನೀನು ಸಕಲ ಶತ್ರುಗಳನ್ನೂ ಗೆದ್ದಿರುವೆ. ಪಾಕಾಸುರನು ಸೈನ್ಯಸಹಿತನಾಗಿ ನಿನ್ನಿಂದ ಸಂಹರಿಸಲ್ಪಟ್ಟನು. ವೃತ್ರಾಸುರನೂ ಬಲಾಸುರನೂ ನಿನ್ನಿಂದ

ತ್ವಯಾ ವಿನಿಹತೋ ವೃತ್ರೋ ಬಲಶ್ಚಾಪಿ ನಿಷೂದಿತಃ ।
ತ್ವಯೈವ ನಾಶಿತಃ ಪಾಕಃ ತ್ವಯಾ ದೈತ್ಯಾ ನಿಷೂದಿತಾಃ ॥ ೧೬ ॥

ಬ್ರಹ್ಮಣ್ಯಸ್ತ್ವಂ ಶರಣ್ಯಸ್ತ್ವಂ ಪ್ರಣತಾರ್ತಿವಿನಾಶನಃ ।
ಸಹಸ್ರನಯನಶ್ರೀಮಾನ್ವಜ್ರಪಾಣಿರ್ಜಗತ್ಪ್ರಿಯಃ ॥ ೧೭ ॥

ತೇಜಸಾ ತಪಸಾ ಯಜ್ಞೈಃ ಶ್ರುತೇನ ಚ ದಮೇನ ಚ ।
ತ್ವತ್ತೋ ವಿಶಿಷ್ಟಂ ಲೋಕೇಽಸ್ಮಿನ್ ನ ಪಶ್ಯಾಮಿ ಶಚೀಪತೇ ॥ ೧೮ ॥

ವೇದೇಷು ಸರಹಸ್ಯೇಷು ಗೀಯಸೇ ತ್ವಂ ಪುನಃ ಪುನಃ ।
ವೇದಾಃ ಪ್ರವೃತ್ತಾ ಯಜ್ಞಾರ್ಥಂ ತದರ್ಥಂ ಕ್ರತವಸ್ತಥಾ ॥ ೧೯ ॥

ಯೇ ಹತಾ ದಾನವಾ ಯುದ್ಧೇ ತ್ವಯಾ ಶಕ್ರ ಪುನಃಪುನಃ ।
ತ ಇಮೇ ನೃಷು ಸಂಭೂತಾಃ ಕಾರ್ತವೀರ್ಯಂ ಸಮಾಶ್ರಿತಾಃ ॥ ೨೦ ॥

---

ನಾಶವನ್ನೈದಿದರು. ನೀನೇ ಬ್ರಹ್ಮಣ್ಯನೂ, ಶರಣ್ಯನೂ, ಆಗಿದ್ದೀಯೆ ! ನಮಸ್ಕರಿಸಿದವರ ದುಃಖಗಳನ್ನು ನಾಶಮಾಡಲು ನೀನೊಬ್ಬನೇ ಶಕ್ತನು. ನೀನು ವಜ್ರಾಯುಧವನ್ನು ಧರಿಸಿ ಸಾವಿರ ಕಣ್ಣುಗಳಿಂದ ಲೋಕವನ್ನು ನೋಡುತ್ತಾ ಪ್ರಪಂಚಕ್ಕೆ ಹಿತವನ್ನುಂಟುಮಾಡುತ್ತಲಿರುವೆ. ತೇಜಸ್ಸಿನಿಂದಲೂ ತಪಸ್ಸಿನಿಂದಲೂ ಯಜ್ಞಗಳಿಂದಲೂ ವೇದದಿಂದಲೂ ದಂಡದಿಂದಲೂ ನೀನೇ ಸರ್ವಸಮರ್ಥನೆನಿಸಿಕೊಂಡಿರುವೆ. ಎಲೈ ! ಶಚೀಪತಿಯೇ, ನಿನಗಿಂತ ಹೆಚ್ಚಿಗೆ ವಿಶಿಷ್ಟವಾವ ಮತ್ತೊಂದು ಪದಾರ್ಥವನ್ನು ನಾನು ಕಾಣಲಿಲ್ಲ. ರಹಸ್ಯಾರ್ಥವುಳ್ಳ ವೇದಗಳಲ್ಲಿ ನೀನು ಪದೇ ಪದೇ ಸ್ತುತಿಸಲ್ಪಡುತ್ತಲಿರುವೆ. ವೇದಗಳು ಯಜ್ಞಕ್ಕಾಗಿಯೇ ಪ್ರವೃತ್ತಿ ಹೊಂದಿವೆ. ಕ್ರತುಗಳೂ ಸಹ ಅದಕ್ಕಾಗಿಯೇ ಹುಟ್ಟಿರುತ್ತವೆ.

೨೦. ಎಲೈ ! ಇಂದ್ರನೇ, ಯುದ್ಧದಲ್ಲಿ ನಿನ್ನಿಂದ ಹತರಾದ ದಾನವರೆಲ್ಲರೂ ಈಗ ಭೂಲೋಕದಲ್ಲಿ ಮನುಷ್ಯ ಜನ್ಮವನ್ನು ಹೊಂದಿ ಕಾರ್ತವೀರ್ಯಾರ್ಜುನನನ್ನು ಆಶ್ರಯಿಸಿಕೊಂಡಿದಾರೆ.

ತೇಽದ್ಯ ಜಾತಾ ಮಮ ವಿಭೋ ಪೀಡಯಂತಿ ಚ ಮಾಂ ಭೃಶಂ ।
ಸಾಽಹಂ ಭಾರಸಮಾಕ್ರಾಂತಾ ತ್ವಾಮದ್ಯ ಶರಣಂ ಗತಾ ॥ ೨೧ ॥

॥ ಶಕ್ರ ಉವಾಚ ॥

ಜಾನಾಮಿ ಭಾರಖಿನ್ನಾಂ ತ್ವಾಂ ದೈತ್ಯೇಭ್ಯೋ ವರವರ್ಣಿನಿ ।
ತೇಷಾಂ ಗತ್ವಾ ವಧೋಪಾಯಮಹಂ ಪ್ರಷ್ಟಾಽಸ್ಮಿ ವೇಧಸಂ ॥ ೨೨ ॥

॥ ಮಾರ್ಕಂಡೇಯ ಉವಾಚ ॥

ಇತ್ಯೇವಮುಕ್ತ್ವಾ ತ್ರಿದಶಪ್ರಧಾನಃ
ಪೃಥ್ವೀಸಮೇತೋ ಗುರುಣಾ ಚ ರಾಜನ್ ।
ಯಯೌ ಸಭಾಂ ದೇವವರಸ್ಯ ತಸ್ಯ
ಪಿತಾಮಹಸ್ಯಾ ಪ್ರತಿಮಸ್ಯ ವೀರಃ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಪೃಥ್ವೀಲೋಕಗಮನಂ ನಾಮ
ಷಡ್ವಿಂಶತಿತಮೋಽಧ್ಯಾಯಃ

—:—

೨೧. ಅವರೆಲ್ಲರೂ ನನ್ನನ್ನು ಈಗ ಪೀಡಿಸುತಲಿದ್ದಾರೆ. ಅವರ ಭಾರವನ್ನು ತಡೆಯಲಾರೆ. ನಾನೀಗ ನಿನ್ನನ್ನು ಶರಣುಹೊಂದಿದೇನೆ.

೨೨. ಇಂದ್ರನು ಹೇಳುತ್ತಾನೆ— ಎಲೈ ! ಭೂದೇವಿಯೇ, ದೈತ್ಯರಿಂದ ನಿನಗೆ ಭಾರವುಂಟಾಗಿದೆಯೆಂದು ನಾನು ಬಲ್ಲೆನು. ನಾನೀಗ ಬ್ರಹ್ಮಲೋಕಕ್ಕೆ ಹೋಗಿ ಅವರ ವಧೋಪಾಯವಂ ತಿಳಿದುಕೊಂಡು ಬರಬೇಕೆಂದಿದೇನೆ.

೨೩. ಮಾರ್ಕಂಡೇಯನು ಹೇಳುತ್ತಾನೆ: ಎಲೈ ! ವಜ್ರನೃಪಾಲಕನೇ, ಕೇಳು ಹೀಗೆಂದು ಹೇಳಿ ಇಂದ್ರನು ಗುರುವಿನೊಡನೆ ಸತ್ಯಲೋಕಕ್ಕೆ ಬ್ರಹ್ಮನ ಬಳಿಗೆ ಹೊರಟನು. ಭೂದೇವಿಯೂ ಸಹ ಇಂದ್ರನನ್ನು ಅನುಸರಿಸಿ ಅವನ ಹಿಂದೆಯೇ ಬ್ರಹ್ಮನ ಸಭೆಗೆ ಹೋದಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಪೃಥ್ವೀ ಶಕ್ರ ಲೋಕಗಮನವೆಂಬ ಹೆಸರಿನ ಇಪ್ಪತ್ತಾರನೇ ಅಧ್ಯಾಯವು ಮುಗಿದುದು.

—:—

॥ ಶ್ರೀಃ ॥

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಸಪ್ತವಿಂಶತಿತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ತೇ ಸಮೇತಾಸ್ಸಮಾಸಾದ್ಯ ಪಿತಾಮಹಸಭಾಂ ಶುಭಾಂ ।
ಪದ್ಮಾಸನಗತಂ ತತ್ರ ದದೃಶುಃ ಪದ್ಮಸಂಭವಂ ॥ ೧ ॥

ಪದ್ಮಪತ್ರಸವರ್ಣಾಂಗಂ ಪದ್ಮಬೋಧಸಮಪ್ರಭಂ ।
ಚತುರ್ವಕ್ತ್ರಂ ಚತುರ್ವೇದಂ ಚತುರಾಶ್ರಮಪೂಜಿತಂ ॥ ೨ ॥

ಚಾತುರ್ವರ್ಣ್ಯಧರಂ ದೇವಂ ಚಾತುರ್ಹೋತ್ರಪ್ರವರ್ತಕಂ ।
ಕೃಷ್ಣಾಜಿನಧರಂ ಶಾಂತಂ ಪ್ರಭುಂ ಪ್ರಭವತಾಮಪಿ ॥ ೩ ॥

---

### ಇಪ್ಪತ್ತೇಳನೆಯ ಅಧ್ಯಾಯ

೧. ಮಾರ್ಕಂಡೇಯನು ಹೇಳುತ್ತಾನೆ: ಈ ರೀತಿಯಾಗಿ ಅವರೆಲ್ಲರೂ ಕೂಡಿ ಹೊರಟು ಸತ್ಯಲೋಕಕ್ಕೆ ಬಂದರು. ಅಲ್ಲಿ ಪದ್ಮಾಸನದಲ್ಲಿ ಕುಳಿತಿದ್ದ ಪದ್ಮಸಂಭವನ ಸಭೆಗೆ ಪ್ರವೇಶಮಾಡಿದರು.

೨-೪. ಅಲ್ಲಿ ಪದ್ಮಪತ್ರಕ್ಕೆ ಸಮವಾದ ಬಣ್ಣದಿಂದಲೂ ಅರಳಿದ ತಾವರೇ ಕಮಲದಂತಹ ತೇಜಸ್ಸಿನಿಂದಲೂ ಕುಳಿತು ನಾಲ್ಕು ಮುಖಗಳಿಂದ ನಾಲ್ಕು ವೇದಗಳನ್ನು ಪಾರಾಯಣ ಮಾಡುತ್ತಾ ಬ್ರಹ್ಮಚಾರೀ, ಗೃಹೀ, ವಾನಪ್ರಸ್ಥ ಸನ್ಯಾಸಿಗಳೆಂಬ ನಾಲ್ಕು ಆಶ್ರಮವಂ ಧರಿಸಿದ ಬ್ರಾಹ್ಮಣರಿಂದ ಸೇವೆಗೊಳ್ಳುತ್ತಾ ಚತುರ್ವರ್ಣಗಳಂ

**ಸ್ವಯಂಭುವಮಚಿಂತ್ಯಂ ಚ ಸರ್ಗಸಂಹಾರಕಾರಕಂ ।**
**ತಂ ಸಮಾಸಾದ್ಯ ಜಗತೀ ಶಕ್ರಶ್ಚ ಗುರುಣಾ ಸಹ ॥ ೪ ॥**

**ವವಂದುಸ್ತೇ ಮಹಾಭಾಗಂ ತುಷ್ಟುವುಶ್ಚ ಜಗತ್ಪ್ರಭುಂ ।**

**॥ ಶಕ್ರಾದಯ ಊಚುಃ ॥**

**ನಮಸ್ತೇ ದೇವದೇವೇಶ ಸೃಷ್ಟಿಸಂಹಾರಕಾರಣ ।**
**ವೇದಮೂರ್ತೇ ತದಾಧಾರ ಯಜ್ಞ ಯಜ್ಞಾಂಗ ಯಜ್ಞಪ ॥ ೫ ॥**

**ಬ್ರಹ್ಮಯೋನೇ ಜಗದ್ಯೋನೇ ಸರ್ವಸತ್ವಾಭಯಪ್ರದ ।**
**ಪ್ರಜಾಪತಿಪತೇ ದೇವ ಜಗದ್ಬೀಜ ನಮೋಽಸ್ತು ತೇ ॥ ೬ ॥**

**ಸ್ವಯಂಭುವೇ ಸ್ವಯಂಕರ್ತ್ರೇ ಸರ್ವಭೂತಾಂತರಾತ್ಮನೇ ।**
**ಸರ್ವಭೂತವರೇಣ್ಯಾಯ ಸರ್ವಭೂತೇಶ್ವರಾಯ ಚ ॥ ೭ ॥**

---

ಧರಿಸಿ ನಾಲ್ಕು ವಿಧವಾದ ಅಗ್ನಿಹೋತ್ರಗಳಿಂದ ವಿರಾಜಿಸುತ್ತಾ ಕೃಷ್ಣಾಜಿನವನ್ನು ಧರಿಸಿ ಶಾಂತಾತ್ಮನಾಗಿ, ಹುಟ್ಟುತ್ತಿರುವ ಸಕಲಪ್ರಾಣಿಗಳಿಗೂ ಗುರುವಾದ, ಅಚಿಂತ್ಯ ಮಹಿಮನಾಗಿ ಉತ್ಪತ್ತಿಮಾಡುವವನೂ ಸೃಷ್ಟಿಸಂಹಾರಗಳನ್ನು ಮಾಡುವವನೂ ಆದ ಬ್ರಹ್ಮನ ಸಮೀಪವನ್ನು ಹೊಂದಿದವರಾಗಿ ಇಂದ್ರ, ಬೃಹಸ್ಪತಿ, ಭೂದೇವಿಯರು ಜಗನ್ನಾಯಕನಾದ ಆ ಬ್ರಹ್ಮನನ್ನು ಸ್ತೋತ್ರಮಾಡಿದರು.

೫-೮. ಇಂದ್ರಾದಿಗಳು ಹೀಗೆ ಸ್ತುತಿಸಿದರು— ದೇವದೇವೋತ್ತಮ : ನಿನಗೆ ನಮಸ್ಕಾರ. ಸೃಷ್ಟಿಸಂಹಾರಗಳಿಗೆ ಕಾರಣನಾದವನೇ ! ವೇದಸ್ವರೂಪನೇ ! ವೇದಾಧಾರನೇ ! ಯಜ್ಞರೂಪ! ಯಜ್ಞಾಂಗನೇ! ಯಜ್ಞಪತಿಯೇ ! ಬ್ರಹ್ಮನೇ ! ಜಗತ್ಪ್ರಸೂತಿಕಾರಣನೇ ! ಸಕಲ ಪ್ರಾಣಿಗಳಿಗೂ ಅಭಯಪ್ರದಾತನೇ ! ಸಕಲ ಪ್ರಜೆಗಳಿಗೊಡೆಯನೇ ! ಜಗತ್ತಿಗೆ ಬೀಜಸ್ವರೂಪನಾದವನೇ ! ನಿನಗೆ ನಮಸ್ಕಾರ, ತಾನಾಗಿ ಹುಟ್ಟಿದವನೇ ! ತಾನಾಗಿ ಸೃಷ್ಟಿಮಾಡುವವನೇ ! ಸಕಲ ಭೂತಗಳ ಹೃದಯಾಂತರಾಳದಲ್ಲಿ ವಿರಾಜಮಾನನಾದವನೇ ! ಸರ್ವ ಭೂತಗಳಲ್ಲಿ ಶ್ರೇಷ್ಠನಾದವನೇ, ಸಕಲ ಭೂತಗಳಿ

ಅಚಿಂತ್ಯಾಯಾಪ್ರಮೇಯಾಯ ಪ್ರಕಾಶಾಯ ಮಹಾತ್ಮನೇ ।
ತ್ವಮಸ್ಯ ಜಗತೋ ನಾಥಸ್ತ್ವಯಿ ಸರ್ವಂ ಪ್ರತಿಷ್ಠಿತಂ ॥ ೮ ॥

ತ್ವಯಾ ವಿನಾ ಜಗತ್ಯಸ್ಮಿನ್ ನಾನ್ಯತ್ಕಿಂಚನ ವಿದ್ಯತೇ ।
ಇಂದ್ರಿಯಾಣೀಂದ್ರಿಯಾರ್ಥಾಶ್ಚ ತೇಭ್ಯಃ ಪರತರಂ ಚ ಯತ್ ॥ ೯ ॥

ವ್ಯಕ್ತಾ ವ್ಯಕ್ತೋ ಜಗನ್ನಾಥ ತ್ವಮೇವೈಕಃ ಪ್ರಕೀರ್ತಿತಃ ।
ತ್ವಂ ತಪಾಂಸಿ ವರಿಷ್ಠಾನಿ ಕೃಚ್ಛ್ರಾಣಿ ನಿಯಮಾನಿ ಚ ॥ ೧೦ ॥

ಕಾಲಾಃ ಕಾಷ್ಠಾ ಮುಹೂರ್ತಾಶ್ಚ ಕಾಲಸ್ಯಾವಯವಾಶ್ಚ ಯೇ ।
ಕಾಲಚಕ್ರಂ ಜಗಚ್ಚಕ್ರಂ ತ್ವಮೇಕಃ ಪುರುಷೋತ್ತಮಃ ॥ ೧೧ ॥

ತ್ವಮೇವ ವರದೋ ದಾತಾ ದೇವಶ್ಚತುರ್ಮುಖಃ ।
ತ್ವತ್ತಃ ಪ್ರಸೂತೌ ಲೋಕೇಽಸ್ಮಿನ್ ಧರ್ಮರುದ್ರೌ ಜಗತ್ಪತೇ ॥ ೧೨ ॥

---

ಗೊಡೆಯನೇ, ನಮಸ್ಕಾರ ಊಹಿಸಲಶಕ್ಯನಾದ ಪ್ರಭುವೇ, ಅಳತೆಗೆ ಸಿಕ್ಕದ ದೇವರೆ, ತೇಜೋರೂಪಿಯಾದ ಮಹಾತ್ಮನೇ, ನೀನೇ ಜಗತ್ತಿಗೆಲ್ಲ ಯಜಮಾನ. ನಿನ್ನಲ್ಲಿಯೇ ಈ ಸಕಲ ಪ್ರಪಂಚವೂ ಅಡಗಿಕೊಂಡಿದೆಯಯ್ಯಾ, ಪ್ರಭು !

೯-೧೧ ಸ್ವಾಮಿ ! ಈ ಲೋಕದಲ್ಲಿ ನಿನಗಿಂತ ಬೇರೆ ಪದಾರ್ಥವಿಲ್ಲ. ಇಂದ್ರಿಯಗಳೂ ಅವುಗಳ ಪ್ರಯೋಜನಗಳೂ ಅದಕ್ಕಿಂತ ಶ್ರೇಷ್ಠವಾದ ಪ್ರಯೋಜನಗಳೂ, ವ್ಯಕ್ತ ಅವ್ಯಕ್ತ ಇವೆಲ್ಲವೂ ನೀನೊಬ್ಬನೇ ಕಣ್ಯೆ ಜಗನ್ನಾಥ, ನೀನೆ ಶ್ರೇಷ್ಠನಾದ ತಪಸ್ಸುಗಳಾಗಿರುತ್ತೀ ಕೃಚ್ಛ್ರ ಚಾಂದ್ರಾಯಣಗಳೂ ನಿಯಮಗಳೂ ಕಲೆ ಕಾಷ್ಠ ಮುಹೂರ್ತ ಮುಂತಾದ ಕಾಲದ ಅವಯವಗಳೂ ಕಾಲಚಕ್ರ; ಜಗಚ್ಚಕ್ರಗಳೂ ಸಹ ನೀನೊಬ್ಬನೇ ಅಲ್ಲದೇ ಬೇರೆ ಇಲ್ಲವೇ ಇಲ್ಲ.

೧೨.೧೪. ಭಗವನ್, ನೀನೇ ವರಗಳನ್ನು ಕೊಡಲು ಶಕ್ತನಾದ ಚತುರ್ಮುಖ ಬ್ರಹ್ಮನು. ನಿನ್ನಿಂದ ಈ ಲೋಕದಲ್ಲಿ ಧರ್ಮ, ರುದ್ರ ಎಂಬ ಎರಡಾಕೃತಿಗಳು ಹುಟ್ಟಿ

ಭೃಂಗ್ವಂಗಿರಾಮರೀಚಿಸ್ತು ಪುಲಸ್ತ್ಯಃ ಪುಲಹಃ ಕ್ರತುಃ ।
ಅತ್ರಿಶ್ಚೈವ ವಸಿಷ್ಠಶ್ಚ ತ್ವಯಾ ಸೃಷ್ಟಾ ಜಗತ್ಪತೇ ॥ ೧೩ ॥

ಸನತ್ಕುಮಾರೋ ಭಗವಾನ್ ಸನಕಶ್ಚ ಸನಂದನಃ ।
ಆಕೃತಿಶ್ಚ ರುಚಿಶ್ಚ್ರದ್ಧಾ ತ್ವಯಾ ದೇವ ವಿನಿರ್ಮಿತಾ ॥ ೧೪ ॥

ಪೂರ್ವಾತ್ತೇ ವದನಾಜ್ಜಾತಮೃಗ್ವೇದಮಮೃತಪ್ರಭಂ ।
ದಕ್ಷಿಣಾದ್ವದನಾಜ್ಜಾತಂ ಯಜುರ್ವೇದಂ ತಥೈವ ಚ ॥ ೧೫ ॥

ಪಶ್ಚಿಮಾದ್ವದನಾಜ್ಜಾತಂ ಸಾಮವೇದಂ ತಥಾ ತವ ।
ಉತ್ತರಾದ್ವದನಾಜ್ಜಾತಮಥರ್ವಾಂಗಿರಸಂ ಶುಭಂ ॥ ೧೬ ॥

ಬ್ರಾಹ್ಮಣಾಸ್ತೇ ಮುಖಾಜ್ಜಾತಾ ಬಾಹುಭ್ಯಾಂ ಕ್ಷತ್ರಿಯಾಸ್ತಥಾ ।
ಊರುದ್ವಯಾತ್ತಥಾ ವೈಶ್ಯಾಃ ಪದ್ಭ್ಯಾಂ ಶೂದ್ರಾಸ್ತಥೈವ ಚ ॥ ೧೭ ॥

---

ರುತ್ತನೆ. ಭೃಗು, ಆಂಗಿರ, ಮರೀಚಿ, ಪುಲಸ್ತ್ಯ ಪುಲಹ, ಕ್ರತು, ಅತ್ರಿ, ವಸಿಷ್ಠ ಮುಂತಾದವರೆಲ್ಲರೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟ ಮಹರ್ಷಿಗಳು. ಸನತ್ಕುಮಾರ, ಸನಕ, ಸನಂದನ, ಆಕೃತಿ ರುಚಿ ಶ್ರದ್ಧೆಯೇ ಮುಂತಾದುವುಗಳೆಲ್ಲವೂ ನಿನ್ನಿಂದಲೇ ನಿರ್ಮಿತ ವಾಗಿರುವುದೈ ಪರಬ್ರಹ್ಮಮೂರ್ತಿಯೇ !

೧೫-೧೬. ಸ್ವಾಮಿ, ನಿನ್ನ ಪೂರ್ವಮುಖದಿಂದ ಋಗ್ವೇದವೂ ದಕ್ಷಿಣಭಾಗದ ಮುಖದಿಂದ ಯಜುರ್ವೇದವೂ ಪಶ್ಚಿಮ ಮುಖದಿಂದ ಸಾಮವೇದವೂ ಉತ್ತರ ಮುಖ ದಿಂದ ಅಥರ್ವಣವೇದವೂ ಹುಟ್ಟಿದುವು.

೧೭ ಪುರುಷಸೂಕ್ತಮಂತ್ರವು „ ಬ್ರಾಹ್ಮಣೋಸ್ಯ ಮುಖ ಮಾಸೀದ್ಬಾಹೂ ರಾಜನ್ಯಃ ಕೃತಃ । ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ” ಎಂದು ನಿನ್ನನ್ನು ಹೊಗಳಿದೆ. ಅಂದರೆ ನಿನ್ನ ಮುಖದಿಂದ ಬ್ರಾಹ್ಮಣರೂ ತೋಳುಗ ಳಿಂದ ಕ್ಷತ್ರಿಯರೂ ತೊಡೆಗಳಿಂದ ವೈಶ್ಯರೂ ಕಾಲುಗಳಿಂದ ಶೂದ್ರರೂ ಉತ್ಪನ್ನರಾಗಿ ಇರುತ್ತಾರೆ.

**ವಿದ್ಯುತೋಽಶನಿಮೇಘಾಶ್ಚ ರೋಹಿತೇಂದ್ರಧನೂಂಷಿ ಚ ।**
**ತ್ವತ್ತಃ ಪ್ರಭೋ ಪ್ರಸೂತಾನಿ ಪ್ರವಿಶಂತಿ ತಥಾ ತ್ವಯಿ ॥ ೧೮ ॥**

**ಸ್ವಯಂಭೂರ್ಭಗವಾನ್ವಿಷ್ಣುರ್ದೇವದೇವಸ್ಸನಾತನಃ ।**
**ನಾಮಮಾತ್ರ ವಿಭೇದೇನ ಮೋಹಯಸ್ಯಖಿಲಂ ಜಗತ್ ॥ ೧೯ ॥**

**ತ್ವತ್ತೇಜಸಾ ಮಯಾ ದೈತ್ಯಾ ಯೇ ಯುದ್ಧೇ ವಿನಿಪಾತಿತಾಃ ।**
**ತೇ ಕ್ಷಿತೌ ಕ್ಷತ್ರಿಯಾ ಜಾತಾಃ ಪೀಡಯಂತಿ ತಥಾ ಕ್ಷಮಾಂ ॥ ೨೦ ॥**

**ತೇಷಾಂ ಭಾರೇಣ ಖಿನ್ನೇಯಂ ತ್ವತ್ಸಕಾಶಮುಪಾಗತಾ ।**
**ವಸುಧಾ ವಸುಧಾಪಾಲ ತಾಂ ತ್ರಾಯಸ್ವ ನಮೋಸ್ತು ತೇ ॥ ೨೧ ॥**

**॥ ಮಾರ್ಕಂಡೇಯ ಉವಾಚ ॥**

**ಏವಂ ಪಿತಾಮಹೋ ದೇವಃ ಸ್ತುತಶ್ಶಕ್ರೇಣ ಧೀಮತಾ ।**
**ಗುರುಣಾ ಚ ಸಮೇತೇನ ಪೂಜಯಾಮಾಸ ತಾವುಭೌ ॥ ೨೨ ॥**

---

೧೮. ಮಿಂಚು ಸಿಡಿಲು. ಮೋಡ, ಕಾಮನ ಬಿಲ್ಲುಗಳೇ ಮುಂತಾದುವುಗಳೆಲ್ಲ ನಿನ್ನಿಂದಲೇ ಹುಟ್ಟಿ ನಿನ್ನಲ್ಲಿಯೇ ಅಡಗಿಕೊಳ್ಳುವುವು.

೧೯. ಸ್ವಾಮಿ! ನೀನೇ ಸ್ವಯಂಭುವೂ ಭಗವಾನ್ ವಿಷ್ಣುವೂ ಆಗಿದೀ; ನೀನೇ ಸನಾತನನಾದ ದೇವದೇವನು. ನೀನೇ ಬೇರೆ ಬೇರೆ ಹೆಸರುಗಳಿಂದ ಸಕಲ ಜಗತ್ತನ್ನೂ ಮೋಹಪಡಿಸುತ್ತಿರುತ್ತೀಯೆ!

೨೦. ಸ್ವಾಮಿ ನಿನ್ನ ತೇಜಸ್ಸಿನಿಂದಲೇ ನಾನೂ ಯುದ್ಧದಲ್ಲಿ ರಾಕ್ಷಸರನ್ನು ಸಂಹರಿಸಿದೆನು. ಅದೇ ರಾಕ್ಷಸರೇ ಈಗ ಪುನಃ ಭೂಮಿಯಲ್ಲಿ ಹುಟ್ಟಿ ಭೂದೇವಿಯನ್ನು ಹಿಂಸಿಸುತಲಿದಾರೆ.

೨೧. ಅವರುಗಳ ಭಾರದಿಂದ ಬಳಲಿರುವ ಈಭೂದೇವಿಯು ಈಗ ತನ್ನ ಕಷ್ಟವನ್ನು ನಿನ್ನೊಡನೆ ವಿಜ್ಞಾಪಿಸಿಕೊಳ್ಳಲು ಬಂದಿರುತ್ತಾಳೆ. ಅವಳನ್ನು ಸಂರಕ್ಷಿಸುವ ಭಾರವು ನಿನ್ನದಾಗಿದೆ. ನಿನಗೆ ನಮಸ್ಕಾರ ಮಾಡುತ್ತೇನೆ.

೨೨. ಮಾರ್ಕಂಡೇಯನು ಹೇಳುತ್ತಾನೆ— ಈ ರೀತಿಯಾಗಿ ಬ್ರಹ್ಮನು ಇಂದ್ರನಿಂದ ಸ್ತುತಿಸಲ್ಪಟ್ಟವನಾಗಿ ತಾನೂ ಕೂಡ ಇಂದ್ರನನ್ನೂ ಗುರುವನ್ನೂ ಪೂಜೆಮಾಡಿದನು.

ಪೂಜಯಿತ್ವಾ ಚ ವಸುಧಾಂ ಶಕ್ರಂ ವಚನಮಬ್ರವೀತ್ ।
ವ್ರಜಧ್ವಂ ದೇವದೇವಸ್ಯ ಶಂಕರಸ್ಯ ಮಹಾತ್ಮನಃ　　॥ ೨೩ ॥

ಭುವಸ್ತ್ವಿಕೀರ್ತಿತಂ ಸರ್ವಂ ನಿವೇದಯತ ಮಾಚಿರಂ ।
ಉಪಾಯಂ ಕ್ಷತ್ರಿಯವಧೇ ಯುಷ್ಮಾಕಂ ಕಥಯಿಷ್ಯತಿ　　॥ ೨೪ ॥

ಇತ್ಯೇವ ಮುಕ್ತಾಸ್ತು ಪಿತಾಮಹೇನ
ಜಗ್ಮುಸ್ತದಾ ರುದ್ರಸದಃ ಪ್ರತೀತಾಃ ।
ಶಕ್ರೋಽಥ ದೇವೀ ಚ ವಸುಂಧರಾ ಚ ।
ಗುರುಸ್ಸುರಾಣಾಂ ಚ ಸ ಧರ್ಮಶೀಲಃ　　॥ ೨೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯವಜ್ರಸಂವಾದೇ ಇಂದ್ರಾದಿ ಬ್ರಹ್ಮಲೋಕ
ಗಮನಂ ನಾಮ ಸಪ್ತವಿಂಶತಿತಮೋಽಧ್ಯಾಯಃ



೨೩-೨೪. ಬ್ರಹ್ಮನು ಭೂದೇವಿಯನ್ನು ಪೂಜಿಸಿ ಇಂದ್ರನ ಕಡೆಗೆ ತಿರುಗಿಕೊಂಡು ಹೀಗೆ ಹೇಳಿದನು ನೀವಿಬ್ಬರೂ ದೇವದೇವೋತ್ತಮನಾದ ಮಹಾತ್ಮಾ ಶಂಕರನ ಬಳಿಗೆ ತೆರಳಿರಿ. ಭೂಮಿಗೆ ಬಂದಿರುವ ಕಷ್ಟವನ್ನು ಆ ಮಹಾತ್ಮನೊಡನೆ ಹೇಳಿರಿ. ಆಗ ಅವನು ಭೂಭಾರಪ್ರಾಯರಾದ ಕ್ಷತ್ರಿಯರ ವಧೆಯ ಉಪಾಯವನ್ನು ನಿಮಗೆ ತಿಳಿಸುವನು.

೨೫. ಈ ರೀತಿಯಾಗಿ ಬ್ರಹ್ಮನಿಂದ ಹೇಳಲ್ಪಟ್ಟವರಾಗಿ ಇಂದ್ರನೂ ಭೂದೇವಿಯೂ, ಗುರುವೂ ಸಹ ಈಶ್ವರನ ಸಭೆಯನ್ನು ಕುರಿತು ಪ್ರಯಾಣ ಮಾಡಿದರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಇಂದ್ರಾದಿಗಳ ಬ್ರಹ್ಮಲೋಕ ಗಮನವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಅಷ್ಟಾವಿಂಶತಿತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

**ರುದ್ರಲೋಕಮಥಾಸಾದ್ಯ ದದೃಶುಸ್ತ್ರ್ಯಂಬಕಂ ತದಾ ।**
**ವಹ್ನಿಪುಂಜಪ್ರಕಾಶೇನ ಜಟಾಭಾರೇಣ ರಾಜಿತಂ ॥ ೧ ॥**

**ಸೂರ್ಯಭಾಸಾ ತೃತೀಯೇನ ನಯನೇನ ಚ ಶೋಭಿತಂ ।**
**ಬಾಲಚಂದ್ರೇಣ ಶುಭ್ರೇಣ ಜಟಾಮಂಡಲಶೋಭಿನಾ ॥ ೨ ॥**

**ವ್ಯಾಳಯಜ್ಞೋಪವೀತಂ ಚ ನಾಗೇಶ್ವರಕೃತಾಂಶುಕಂ ।**
**ನೀಲಕಂಠಂ ವಿಶಾಲಾಕ್ಷಂ ದಂತಿಚರ್ಮೋತ್ತರಚ್ಛದಂ ॥ ೩ ॥**

---

## ಇಪ್ಪತ್ತೆಂಟನೆಯ ಅಧ್ಯಾಯವು

೧-೫. ಮಾರ್ಕಂಡೇಯನು ಹೇಳುತ್ತಾನೆ—ಈರೀತಿ ಈ ಮೂವರೂ ಕೂಡಿ ರುದ್ರಲೋಕಕ್ಕೆ ಪ್ರಯಾಣಮಾಡಿ ತ್ರ್ಯಂಬಕ (ಈಶ್ವರ)ನನ್ನು ದರ್ಶನಮಾಡಿದರು. ಆ ಪರಮೇಶ್ವರನು ಹೇಗಿದ್ದನೆಂದರೆ—ಅಗ್ನಿಜ್ವಾಲೆಯಂತೆ ಕೆದರಿಕೊಂಡಿರುವ ಜಡೆಗಳ ಗುಂಪಿನಿಂದಲೂ, ಸೂರ್ಯನಂತೆ ಮಹಾಪ್ರಕಾಶಮಾನವಾದ ಮೂರನೆಯ ಕಣ್ಣಿನಿಂದಲೂ, ಜಡೆಯ ಮೇಲಿರುವ ಚಂದ್ರನಿಂದಲೂ ಕೂಡಿದವನಾಗಿ ಹಾವುಗಳನ್ನೇ ಯಜ್ಞೋಪವೀತದಂತೆ ಧರಿಸಿ, ಕಪ್ಪಾದ ಕತ್ತುಳ್ಳವನಾಗಿ, ವಿಶಾಲವಾದ ನೇತ್ರಗಳುಳ್ಳವನಾಗಿ, ಆನೆಯ ಚರ್ಮವನ್ನು ಮೈಗೆಲ್ಲಾ ಹೊದ್ದುಕೊಂಡವನಾಗಿ, ಪಾರ್ವತಿಯೊಡನೆ

ಉಮಾಸಹಾಯಂ ವರದಂ ಸರ್ವಭೂತಭವೋದ್ಭವಂ ।
ನಂದಿನಾನುಗತಂ ವೀರಂ ಪ್ರಮಥೈಶ್ಚ ಸಹಸ್ರಶಃ ॥ ೪ ॥

ನಾನಾವಕ್ತ್ರಶಿರೋಗ್ರೀವೈರ್ನಾನಾವಿಧವಿಭೂಷಣೈಃ ।
ತಂ ದೃಷ್ಟ್ವಾ ಪ್ರಣತಃ ಪ್ರಾಹ ಶಕ್ರಸ್ತು ಗುರುಣಾ ಸಹ ॥ ೫ ॥

॥ ಶಕ್ರ ಉವಾಚ ॥

ನಮೋಽಸ್ತು ದೇವದೇವೇಶ ಪ್ರಣತಾರ್ತಿವಿನಾಶನ ।
ನೀಲಕಂಠ ಮಹಾಭಾಗ ಹ್ಯುಮಾಭೂಷಣತತ್ಪರ ॥ ೬ ॥

ಗಂಗಾತರಂಗನಿರ್ಧೌತಜಟಾಮಂಡಲಮಂಡಿತ ।
ಶಶಾಂಕಶತಸಂಕಾಶ ಸೂರ್ಯಕೋಟಿಸಮಪ್ರಭ ॥ ೭ ॥

ವಾಮನೈರ್ಜಟಿಲೈರ್ಮುಂಡೈಃ ಪ್ರಮಥೈರೀಡ್ಯಸೇ ಸದಾ ।
ತೈಶ್ಚ ಸಾರ್ಧಂ ಮಹಾದೇವ ರಮಸೇಽಮಿತವಿಕ್ರಮ ॥ ೭ ॥

---

ಕುಳಿತು ಭಕ್ತರಿಗೆ ವರವನ್ನು ಕೊಡುತ್ತಿದ್ದನು. ಸರ್ವಭೂತಗಳ ಉತ್ಪತ್ತಿಸ್ಥಿತಿಗಳಿಗೆ ಕಾರಣನಾದ ನಂದಿವಾಹನನಾದ ಆ ಶಂಕರನು ಸಹಸ್ರಾರು ಪ್ರಮಥಗಣಗಳಿಂದ ಪರಿವೃತನಾಗಿದ್ದನು ಆ ಪ್ರಮಥಗಣಗಳಾದರೋ ನಾನಾವಿಧವಾದ ಮುಖಗಳಿಂದಲೂ, ತಲೆ ಕತ್ತು ಮೊದಲಾದ ವಿಚಿತ್ರ ಅವಯವಗಳಿಂದಲೂ ಕೂಡಿ ನಾನಾವಿಧವಾದ ಆಯುಧಗಳಿಂದಲೂ ಭೂಷಣಗಳಿಂದಲೂ, ಕೂಡಿ ಪ್ರಕಾಶಿಸುತ್ತಲಿದ್ದರು. ಆರೀತಿ ವಿರಾಜಮಾನನಾಗಿದ್ದ ಪರಮೇಶ್ವರನನ್ನು ಕಂಡು ಗುರುವಿನೊಡನೆ ಜತೆಯಲ್ಲಿ ಹೋಗಿದ್ದ ಇಂದ್ರನು ನಮಸ್ಕಾರಮಾಡಿ ಹೇಳಿದುದೇನೆಂದರೆ—

೬-೭. ಇಂದ್ರನು ಹೇಳುತ್ತಾನೆ— ನಮಸ್ಕರಿಸಿದವರ ದುಃಖವನ್ನು ಹೋಗಲಾಡಿಸುವ ದೇವದೇವೋತ್ತಮನೇ, ನೀಲಕಂಠ! ಮಹಾಭಾಗ! ಪಾರ್ವತೀಪ್ರಿಯಕಾಂತ! ಗಂಗೆಯ ಅಲೆಗಳಿಂದ ಶುಭ್ರದೇಹಕಾಂತಿಯುಳ್ಳವನೇ! ನೂರಾರು ಚಂದ್ರರಂತೆಯೂ, ಕೋಟಿಸೂರ್ಯರಂತೆಯೂ, ಪ್ರಕಾಶಮಾನನಾದ ಪರಮೇಶ್ವರನೇ! ನಿನಗೆ ನಮಸ್ಕಾರ ಮಾಡುತ್ತೇವೆ.

**ಘೋರಂ ಹಿ ಬ್ರಹ್ಮಚರ್ಯಂ ತೇ ಯಥಾ ನಾನ್ಯಸ್ಯ ಕಸ್ಯಚಿತ್ ।**
**ತವ ಲಿಂಗಾರ್ಚನರತಾಃ ಪೂಯಂತೇ ಸರ್ವಕಿಲ್ಬಿಷೈಃ ॥ ೯ ॥**

**ಸ್ಮರಂತಿ ಯೇ ತ್ವಾಂ ಸತತಂ ತೇ ಹಿ ಯಾಂತಿ ಪರಾಂ ಗತಿಂ ।**
**ವಿಷ್ಣೋರಚಿಂತ್ಯಭಾಗೋಽಸಿ ಪ್ರಜಾಸಂಹರಣೇ ಕೃತೇ ॥ ೧೦ ॥**

**ಸರ್ವದೇವಮಯೋ ಧಾತಾ ಸರ್ವದೇವಮಯೋಽಪಿ ಚ ।**
**ಸರ್ವದೇವವರೇಣ್ಯಸ್ತ್ವಂ ಸರ್ವಭೂತವಿಭಾವನಃ ॥ ೧೧ ॥**

**ಸರ್ವಾಮರಗುರುರ್ದೇವಃ ಸರ್ವಭೂತೇಶ್ವರೇಶ್ವರಃ ।**
**ಸರ್ವದೇವೋ ಮಹಾಯೋಗೀ ಮಹಾಕೀರ್ತಿರ್ಮಹಾಬಲಃ ॥ ೧೨ ॥**

**ಮಹಾಬುದ್ಧಿರ್ಮಹಾವೀರ್ಯೋ ಮಹಾತೇಜಾ ಮಹಾಯಶಾಃ ।**
**ಚತುಷ್ಪಾತ್ಸಕಲೋ ಧರ್ಮೋ ವಾಹನಸ್ತೇ ಮಹಾವೃಷಃ ॥ ೧೩ ॥**

---

೮. ಸ್ವಾಮಿಾ, ನೀನು ಕುಕ್ಕರೂ, ಡೊಂಕರೂ ಮುಂತಾದ ವಿವಿಧಾಕಾರವುಳ್ಳ ಪ್ರಮಥಗಣಗಳಿಂದ ಸ್ತುತಿಸಲ್ಪಡುತ್ತಿರುತ್ತೀ. ಮತ್ತು ಅವರೊಡನೆ ಆಟವಾಡುತ್ತಿರುತ್ತೀಯೆ.

೯. ನಿನ್ನಂತೆ ಬ್ರಹ್ಮಚರ್ಯವನ್ನು ಪಾಲಿಸಬಲ್ಲ ಶಕ್ತಿ ಇನ್ನೊಬ್ಬನಿಗೂ ಇಲ್ಲ ನಿನ್ನ ಲಿಂಗಪೂಜೆಯಲ್ಲಾಸಕ್ತರಾದವರು ಸಕಲ ಪಾಪಗಳನ್ನೂ ಕಳೆದುಕೊಳ್ಳುತ್ತಾರೆ:

೧೦. ನಿನ್ನನ್ನು ಸರ್ವದಾ ಸ್ಮರಿಸುವವರು ಉತ್ತಮಲೋಕಗಳನ್ನು ಹೊಂದುವರು. ನೀನು ಪ್ರಜಾನಾಶಮಾಡುವ ಕಾರ್ಯದಲ್ಲಿ ವಿಷ್ಣುವಿಗೆ ಸಮನಾಗಿ ಅಚಿಂತ್ಯ ಭಾಗವನ್ನು ವಹಿಸುತ್ತೀಯೆ.

೧೧. ನೀನು ಸಕಲದೇವತಾಸ್ವರೂಪನಾದ ಸಂರಕ್ಷಕನು. ನೀನು ಸರ್ವದೇವಮಯನಾದಾಗ್ಯೂ ಸಕಲ ದೇವತೆಗಳಿಗಿಂತ ಶ್ರೇಷ್ಠನಾಗಿ ಸರ್ವಭೂತಗಳಿಂದಲೂ ಭಾವಿಸಲ್ಪಡುತ್ತಿರುತ್ತೀಯೆ.

೧೨-೧೩. ಸಕಲ ದೇವತೆಗಳಿಗೂ ನೀನೇ ಗುರು, ಸಕಲ ಭೂತಗಳಿಗೂ ನೀನೇ ಈಶ್ವರನು, ನೀನು ಮಹಾಯೋಗಿ, ಯಾರಿಂದಲೂ ಜಯಿಸಲಶಕ್ಯನು, ಮಹಾಕೀರ್ತಿಶಾಲಿಯು. ಮಹಾ ಬುದ್ಧಿಶಾಲಿಯು, ಮಹಾವೀರ್ಯವಂತನು. ಸಕಲ ಧರ್ಮಗಳೂ ನಾಲ್ಕು ಪಾದಗಳಿಂದ ಕೂಡಿದ ಮಹಾವೃಷಭರೂಪವನ್ನು ಧರಿಸಿ ಆ ವೃಷಭವು ನಿನ್ನ ವಾಹನವಾಗಿ ನಿನ್ನ ಬಳಿ ನಿಂತಿರುತ್ತೆ.

**ಶ್ಮಶಾನೇ ವಸತಿರ್ನಿತ್ಯಂ ಚಿತಾಧೂಮಸಮಾಕುಲೇ ।**
**ನೃತ್ಯದ್ಭೂತಾಕುಲೇ ಭೂಮೇರ್ಭೂತಿಶ್ವೇತಾನುಲೇಪನಃ ॥ ೧೪ ॥**

**ಭೂಖಾರ್ಕವರ್ಚಸಲಿಲಯಜಮಾನೇಂದುವಾಯವಃ**
**ಮೂರ್ತಯಸ್ತೇ ಸ್ಮೃತಾ ದೇವ ಯಾಭಿರ್ವ್ಯಾಪ್ತಮಿದಂ ಜಗತ್ ॥ ೧೫ ॥**

**ತ್ವಯಾ ವಿನಾ ಜಗತ್ಯಸ್ಮಿನ್ ನಾನ್ಯತ್ಕಿಂಚ ನ ವಿದ್ಯತೇ ।**
**ದೈತ್ಯಭಾರಾಭಿತಪ್ತಾಂಗಾಂ ಪಾಲಯಸ್ವ ನಮೋಽಸ್ತು ತೇ ॥ ೧೬ ॥**

**॥ ಮಾರ್ಕಂಡೇಯ ಉವಾಚ ॥**

**ಏವಮುಕ್ತಸ್ತು ಶಕ್ರೇಣ ದೇವಶ್ಚಕ್ರಮುಭಾಷತ ।**
**ಕಾರ್ತವೀರ್ಯಮಹಂ ಹತ್ವಾ ಕರ್ತಾ ನಿಃಕ್ಷತ್ರಿಯಾಂ ಮಹೀಂ ॥ ೧೭ ॥**

**ನ ಶಕ್ಯಸ್ತ್ರಿದಶಶ್ರೇಷ್ಠ ಯತಃ ಸ್ಮರ್ತಾಸಿ ತದ್ವಧಂ ।**
**ವಿಷ್ಣುದತ್ತವರೋ ರಾಜಾ ಸೋಽವಧ್ಯೋ ಮಮ ವಾಸವ ॥ ೧೮ ॥**

---

೧೪. ಹೆಣದ ಹೊಗೆಯಿಂದ ವ್ಯಾಪ್ತವಾದ ಸ್ಮಶಾಣದಲ್ಲಿ ನಿನಗೆ ನಿತ್ಯವೂ ವಾಸ. ಆ ಸ್ಮಶಾಣದಲ್ಲಿ ಭೂತಪ್ರೇತಪಿಶಾಚಾದಿಗಳು ಕುಣಿಯುತ್ತಿರುತ್ತವೆ. ಅಲ್ಲಿ ನೀನು ಭೂಲೋಕದ ಐಶ್ವರ್ಯರೂಪವಾದ ಬೂದಿಯನ್ನು ಬಳಿದುಕೊಂಡು ಇರುತ್ತೀಯೆ.

೧೫. ಅದಾವ ಪಂಚ-ಭೂತಗಳಿಂದ ಈ ಪ್ರಪಂಚವು ವ್ಯಾಪಿಸಲ್ಪಟ್ಟಿದೆಯೋ ಆ ಭೂಮಿ, ಆಕಾಶ, ಗಾಳಿ, ನೀರು, ಬೆಂಕಿಗಳೇ ನಿನ್ನ ಪಂಚ ಮುಖಗಳು.

೧೬. ಈ ಜಗತ್ತಿನಲ್ಲಿ ನಿನ್ನಿಂದ ಹೊರತಾಗಿ ಇನ್ನೊಂದು ಪದಾರ್ಥವೂ ಇಲ್ಲವೇ ಇಲ್ಲ. ಈಗ ನೀನು ದೈತ್ಯರ ಭಾರದಿಂದ ತಪ್ತಾಂಗಳಾದ ಭೂದೇವಿಯ ಭಾರವನ್ನು ತಗ್ಗಿಸಿ ಕಾಪಾಡಬೇಕು. ನಿನಗೆ ನಮಸ್ಕಾರ.

೧೭–೨೧. ಮಾರ್ಕಂಡೇಯನು ಹೇಳುತ್ತಾನೆ– ಈ ರೀತಿ ಹೇಳಿದ ಇಂದ್ರನ ಮಾತನ್ನು ಕೇಳಿ ಈಶ್ವರನು ಇಂದ್ರನನ್ನು ಕುರಿತು ಇಂತು ಹೇಳಿದನು:- ನಾನು ಕಾರ್ತವೀರ್ಯಾರ್ಜುನನನ್ನು ಯುದ್ಧದಲ್ಲಿ ಸಂಹರಿಸಿ ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡುತ್ತೇನೆ. ಎಲೈ! ಇಂದ್ರನೇ, ನೀನು ಮನಸ್ಸಿನಲ್ಲಿ ಯೋಚಿಸಿಕೊಂಡಿರುವ ರೀತಿಯಲ್ಲಿ ಅಷ್ಟು ಸುಲಭವಾಗಿ ಕಾರ್ತವೀರ್ಯಾರ್ಜುನನನ್ನು ಸಂಹರಿಸಲು ಸಾಧ್ಯ

ತಮೇವ ಪ್ರಾರ್ಥಯಿಷ್ಯಾಮಿ ವಧಂ ತಸ್ಯ ಮಹಾತ್ಮನಃ ।
ಸರ್ವೇ ಯಾತ ಸ್ವಕಂ ಸ್ಥಾನಂ ತ್ವಹಮಪ್ಯಮರೇಶ್ವರಂ ॥ ೧೯ ॥

ಚಂದ್ರಮಂಡಲ ಮಧ್ಯಸ್ಥಂ ಯಾಸ್ಯೇ ವರದಮೀಶ್ವರಂ ।
ವಿಷ್ಣೋಶ್ಚಾರ್ಧೇನ ಭಾಗೇನ ದತ್ತಾತ್ರೇಯೋಽಭವತ್ಕ್ಷಿತೌ ॥ ೨೦ ॥

ತೇನ ದತ್ತವರೋ ರಾಜಾ ಪಾಲಯತ್ಯಖಿಲಾಂ ಮಹೀಂ ॥ ೨೧ ॥

ಇತ್ಯೇವ ಮುಕ್ತಸ್ತ್ರಿದಶೇಶ್ವರಸ್ತು
ದೇವೇನ ಸಾಕ್ಷಾತ್ತ್ರಿಪುರಾಂತಕೇನ ।
ಜಗಾಮ ಶೀಘ್ರಂ ಸ್ವಪುರಂ ಪ್ರವಿಷ್ಟೋ
ಮಹೀಂ ಸಮಾದಾಯ ಗುರುಂ ಚ ರಾಜನ್ ॥ ೨೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಹರದರ್ಶನಂ ನಾಮ
ಅಷ್ಟಾವಿಂಶತಿತಮೋಽಧ್ಯಾಯಃ

---

ವಿಲ್ಲ. ಅವನು ವಿಷ್ಣುವಿನಿಂದ ವರವನ್ನು ಪಡೆದು ನನ್ನಿಂದ ಜಯಿಸಲ್ಪಡಲು ಸಾಧ್ಯವಿಲ್ಲದವನಾಗಿದ್ದಾನೆ. ಈಗ ಆ ಮಹಾತ್ಮನಾದ ಸಹಸ್ರಬಾಹುವನ್ನು ನಾನೇ ಪ್ರಾರ್ಥಿಸಿ ಅವನನ್ನು ಸಂಹರಿಸುವ ಬಗೆಯನ್ನು ಅವನಿಂದಲೇ ತಿಳಿದುಕೊಳ್ಳುತ್ತೇನೆ. ಮತ್ತು ಚಂದ್ರಮಂಡಲದ ಮಧ್ಯದಲ್ಲಿರುವ ಮಹಾವಿಷ್ಣುವನ್ನು ಕೂಡಲೇ ಹೋಗಿ ನೋಡುತ್ತೇನೆ. ನೀವೆಲ್ಲರೂ ಸ್ವಸ್ಥವಾಗಿ ನಿಮ್ಮ ನಿಮ್ಮ ಸ್ಥಳಗಳಿಗೆ ಹೋಗಿ ಸೇರಿಕೊಳ್ಳಿರಿ. ಆ ಕಾರ್ತವೀರ್ಯನು, ವಿಷ್ಣುವಿನ ಅರ್ಧಾಂಶದಿಂದ ಭೂಮಿಯಲ್ಲವತರಿಸಿ ಇರುವ ದತ್ತಾತ್ರೇಯನಿಂದ ವರವನ್ನು ಪಡೆದು ಸಕಲ ಪ್ರಪಂಚವನ್ನೂ ಆಳುತಲಿದಾನೆ.

೨೨. ಈ ರೀತಿ ಈಶ್ವರನಿಂದ ಹೇಳಲ್ಪಟ್ಟ ಇಂದ್ರನು ತನ್ನ ಜತೆಯಲ್ಲಿ ಬಂದಿದ್ದ ಭೂದೇವಿಯನ್ನು ದೇವಗುರುವನ್ನೂ ಕರೆದುಕೊಂಡು ಊರಿಗೆ ಪ್ರಯಾಣಮಾಡಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಹರದರ್ಶನವೆಂಬ ಹೆಸರಿನ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಏಕೋನ ತ್ರಿಂಶತ್ತಮೋಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ಗತೇ ಸುರೇಶ್ವರೇ ದೇವೇ ಶಕ್ರೇ ಚ ಸಪುರೋಹಿತೇ ।
ಜಗತ್ಯಾಂ ಚ ಪ್ರಯಾತಾಯಾಂ ದೇವದೇವೋ ಮಹೇಶ್ವರಃ ॥ ೧ ॥

ಅಂಗುಷ್ಠಮಾತ್ರಕೋ ಭೂತ್ವಾ ಗಂಗಾತೋಯೇ ನ್ಯಮಜ್ಜತ ।
ಸೋವಗಾಹ್ಯ ಸ್ವಲೋಕಸ್ಥಾಂ ಗಂಗಾಂ ಸರ್ವಗತಾಂ ನದೀಂ ॥ ೨ ॥

ತಯೋಹ್ಯಮಾನಃ ಪ್ರಯಯೌ ವಿಸ್ತೀರ್ಣಂ ಚಂದ್ರಮಂಡಲಂ ।
ನವಯೋಜನಸಾಹಸ್ರೋ ವಿಷ್ಕಂಭೋ ಯಸ್ಯ ಕೀರ್ತಿತಃ ॥ ೩ ॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯವು

೧-೭. ಮಾರ್ಕಂಡೇಯನು ಹೇಳಿದನು:- ಇಂದ್ರನು ಭೂದೇವಿ ಮತ್ತು ಸುರಗುರುವಾದ ಬೃಹಸ್ಪತ್ಯಾಚಾರ್ಯರನ್ನು ಕರೆದುಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದ ಬಳಿಕ, ಪರಮೇಶ್ವರನು ಒಂದಂಗುಲದ ಪ್ರಮಾಣವುಳ್ಳ ಶರೀರವನ್ನು ಧರಿಸಿ, ಗಂಗಾನದಿಯಲ್ಲಿ ಮುಳುಗಿಬಿಟ್ಟನು. ಆ ರೀತಿ ಪರಮೇಶ್ವರನು ಸರ್ವತ್ರ ವ್ಯಾಪ್ತಳಾದ ದೇವಗಂಗೆಯಲ್ಲಿ ಮುಳುಗಿ ಅಲ್ಲಿಂದ ಹೊರಟು ಚಂದ್ರಮಂಡಲವನ್ನು ತಲಪಿದನು ಆ ಚಂದ್ರಮಂಡಲವು ಒಂಭತ್ತುಸಾವಿರಯೋಜನಪ್ರಮಾಣವುಳ್ಳದಾಗಿ ವಿಷ್ಕಂಭವೆನಿಸಿ

ವಿಸ್ತರಾದ್ದ್ವಿಗುಣಶ್ಚೈವ ಪರಿಣಾಹಸ್ಸಮಂತತಃ ।
ತೋಯಸಾರಮಯಂ ಪಿಂಡಂ ಪಿತೄಣಾಂ ಧಾಮ ಮಧ್ಯಗಂ ॥ ೪ ॥

ಪ್ರಜಾನಾಂ ಭಾವನಂ ಸರ್ವಂ ಚಾಧಾರಂ ಜಗತಾಮಪಿ ।
ಶರೀರಿಣಾಂ ಶರೀರೇಷು ರಸಂ ಪಂಚಾತ್ಮಕಂ ಸ್ಮೃತಂ ॥ ೫ ॥

ಆಲಂಬಕಂ ಕ್ಲೇದಕಂ ಚ ತಥಾ ಚೈವಾವಬೋಧಕಂ ।
ಸಂಘಾತಕಂ ಕರ್ಷಕಂ ಚ ದೇಹಿನಾಂ ದೇಹಗೋಚರಂ ॥ ೬ ॥

ಮನಸ್ಸರ್ವೇಂದ್ರಿಯಾಣಾಂ ಚ ಸರ್ವೇಷಾಂ ನಾಥಕಂ ತಥಾ ।
ಓಷಧೀಶಂ ಜಗದ್ಯೋನಿಮಮೃತಾಧಾರ ಮವ್ಯಯಂ ॥ ೭ ॥

ಯಂ ಪಿಬಂತಿ ಸದಾ ದೇವಾಃ ಪಿತರಶ್ಚಾಮೃತಾರ್ಥಿನಃ ।
ಯಶ್ಚಕ್ಷುರ್ದೇವದೇವಸ್ಯ ವಿಷ್ಣೋರ್ವಾ ಸ ಪ್ರಕೀರ್ತಿತಃ ॥ ೮ ॥

---

ಕೊಂಡಿತ್ತು. ಅದರ ಎರಡರಷ್ಟು ವಿಸ್ತಾರವುಳ್ಳದಾಗಿ ಅದರ ಕಾಂತಿಯು ಹರಡಿತ್ತು. ಅಲ್ಲಿ ಪಿತೃಲೋಕಮಧ್ಯದಲ್ಲಿ ಜಲಸಾರಮಯವಾದ ಒಂದು ಉಂಡೆ (ಮಂಡಲ) ಕಾಣಿಸುತ್ತಿತ್ತು. ಅದು ಜಗತ್ತಿಗೆಲ್ಲಾ ಆಧಾರಭೂತವಾಗಿ ಪ್ರಜೆಗಳ ಭಾವನೆಗೆ ಗುರಿಯಾಗಿತ್ತು. ಆ ತೇಜೋಮಂಡಲವು ಶರೀರವನ್ನು ಧರಿಸಿದ ಪ್ರಾಣಿಗಳ ಶರೀರದಲ್ಲಿ ಪಂಚಾತ್ಮಕ (ಐದುವಿಧ) ರಸವೆನಿಸಿಕೊಂಡಿತ್ತು. ಆ ರಸವು ದೇಹಿಗಳ ದೇಹದೊಳಗೆ ಗೋಚರವಾಗುವುದಾಗಿ ಐದು ಹೆಸರುಗಳನ್ನು ಪಡೆದಿತ್ತು. ಅವುಗಳ ಹೆಸರುಗಳು ಕ್ರಮವಾಗಿ ಆಲಂಬಕ, ಕ್ಲೇದಕ, ಅವಬೋಧಕ, ಸಂಘಾತಕ, ಕರ್ಷಕಳೆಂದು ಪ್ರಸಿದ್ಧವಾಗಿತ್ತು. ಮನಸ್ಸೇ ಮುಂತಾದ ಸಕಲೇಂದ್ರಿಯಗಳಿಗೂ ಅದು ಒಡೆಯನೆನಿಸಿಕೊಂಡಿತ್ತು. ಇದನ್ನೇ ಓಷಧಿಗಳಿಗೂ ಒಡೆಯನೆಂದೂ ಜಗದ್ಯೋನಿಯೆಂದೂ ಅಮೃತಾಧಾರನೆಂದೂ ಅವ್ಯಯನೆಂದೂ ಹೇಳುವರು. ಇದನ್ನು ಅಮೃತದುಂಡೆಯೆಂದೂ ಹೇಳುವರು.

೮-೧೦. ಅಮೃತವನ್ನು ಪಾನಮಾಡಲಪೇಕ್ಷಿಸುತ್ತಿರುವ ದೇವತೆಗಳೂ, ಪಿತೃಗಳೂ ಯಾವ ಈ ಉಂಡೆಯಿಂದ ಸ್ರವಿಸುವ ಅಮೃತವನ್ನು ಪಾನಮಾಡುವರೋ

ಹವ್ಯಕವ್ಯಾದಯೋ ದೇವೋ ಭೂತಾತ್ಮಾ ಭೂತಭಾವನಃ ।
ಪ್ರವಿಶ್ಯ ಮಂಡಲಂ ತಸ್ಯ ದೇವದೇವೋ ಮಹೇಶ್ವರಃ ॥ ೯ ॥

ತಸ್ಯ ಯದ್ವ್ಯಾಪಕಂ ತೇಜಃ ಸೂಕ್ಷ್ಮಮನ್ನರಸಂ ಹಿತಂ ।
ಅಂಗುಷ್ಠಮಾತ್ರಂ ಪುರುಷಂ ಯಂ ಬುಧಾಃ ಕೇಶವಂ ವಿದುಃ ॥ ೧೦ ॥

ಚಕ್ಷುರ್ಗೋಳಕಮಧ್ಯಸ್ಥ ಪುರುಷಸ್ಸ ಪರಃ ಸ್ಮೃತಃ ।
ಚಂದ್ರಗೋಳಕಮಧ್ಯಸ್ಥಃ ದೃಕ್ಛಕ್ತಿರಿವ ಯಃ ಸ್ಥಿತಃ ॥ ೧೧ ॥

ಕರ್ಮಸಾಕ್ಷೀ ಸ ಲೋಕಾನಾಂ ಸ ಚಾಧಾರಃ ಪರಃಸ್ಮೃತಃ ।
ಆದಿತ್ಯರಶ್ಮಯಶ್ಚಂದ್ರೇ ತಮಸ್ಸಂಮೂರ್ಛಿತಂ ಕ್ಷಿತೌ ॥ ೧೨ ॥

ಕ್ಷಪಯಿಷ್ಯಂತಿ ಯನ್ನೈಶಂ ಶೀತಾಂಶುಸ್ತಸ್ಯ ತೇಜಸಾ ।
ಯಸ್ಯ ರೂಪಮನಿರ್ದೇಶ್ಯಂ ಯಸ್ಯ ತೇಜಸ್ಸು ದುಸ್ಸಹಂ ॥ ೧೩ ॥

---

ಯಾವುದನ್ನು ವಿಷ್ಣುವಿನ ತೇಜೋನೇತ್ರವೆಂದೆನ್ನುವರೋ ಅದೇ ಆ ಈ ಉಂಡೆಯು ಹವ್ಯಕವ್ಯಾದಿಗಳನ್ನು ಅಪೇಕ್ಷಿಸುವ ದೇವಪಿತೃಗಳೂ, ಭೂತಾತ್ಮನೂ, ಭೂತಭಾವನನೂ ಆದ ಪರಮೇಶ್ವರನೂ ಈ ಮಂಡಲವನ್ನು ಪ್ರವೇಶಮಾಡಿರುತ್ತಾರೆ. ಆ ಪರಮಾತ್ಮನ ಜಗದ್ವ್ಯಾಪಕವಾದ ತೇಜವಾವುದುಂಟೋ, ಸೂಕ್ಷ್ಮವಾಗಿ ಅನ್ನರಸವೆನ್ನುವುದಾವುದೋ ಅದೇ ಈ ತೇಜಸ್ಸು ಪರಮಾತ್ಮನನ್ನು " ಅಂಗುಷ್ಠಮಾತ್ರಃ ಪುರುಷೋಂಗುಷ್ಠಂ ಚ ಸಮಾಶ್ರಿತಃ । ಈಶಸ್ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ " ಎಂದು ವೇದಗಳು ಹೊಗಳುತ್ತಿವೆಯಷ್ಟೆ? ಈ ಅಮೃತದುಂಡೆಯೇ ಈ ಅಂಗುಷ್ಠಮಾತ್ರಪುರುಷನೆಂದು ಹೇಳಿಸಿಕೊಳ್ಳುವುದು.

೧೧-೧೩. ಕಣ್ಣು, ನಾಲಿಗೆಗಳ ಮಧ್ಯೆ ಇರುವ ನೇತ್ರಶಕ್ತಿಯಂತಿರುವ ಚಂದ್ರಗೋಳದ ಮಧ್ಯದಲ್ಲಿರುವ ಪುರುಷನೇ ಪರಮಾತ್ಮನೆಂದು ತಿಳಿಯಬೇಕು. ಅವನೇ ಸಕಲಲೋಕದ ಕರ್ಮಗಳಿಗೂ ಸಾಕ್ಷಿಭೂತನಾದವನು. ಅವನೇ ಲೋಕಾಧಾರಭೂತನು. ಆದಿತ್ಯನ ಕಿರಣಗಳು ಚಂದ್ರನಲ್ಲಿ ಸೇರಿಕೊಂಡು ಭೂಮಿಯು ಕಗ್ಗತ್ತಲೆಯಿಂದ ಆವೃತವಾಗಿದ್ದಾಗ ಆ ಕತ್ತಲೆಯನ್ನು ಭೇದಿಸಿಕೊಂಡು ಬೆಳದಿಂಗಳಾಗಿ ಲೋಕಕ್ಕೆ ಬೆಳಕನ್ನುಂಟುಮಾಡುವುದು. ಯಾವನ ರೂಪವನ್ನು ನಿರ್ದೇಶಿಸಲಿಕ್ಕೆ ಅಸಾಧ್ಯವೋ ಯಾವನ ರೂಪವನ್ನು ನೋಡಲು ದುಸ್ಸಹವಾಗಿದೆಯೋ, ಅಂತಹ ಪರಮಾತ್ಮನನ್ನು ಆ ಮಂಡಲದಲ್ಲಿ ಕಂಡು ಈಶ್ವರನು ಸ್ತೋತ್ರಮಾಡಿದನು.

ತಂ ತು ದೇವವರಂ ದೃಷ್ಟ್ವಾ ತುಷ್ಟಾವ ತ್ರಿಪುರಾಂತಕಃ ।

॥ ಈಶ್ವರ ಉವಾಚ ॥

ಅಗ್ನೀಷೋಮಮಯಂ ಚೈತಜ್ಜಗದೇತತ್ಪ್ರಕೀರ್ತಿತಂ ।
ಅಗ್ನೀಷೋಮೌ ಜಗನ್ನಾಥೌ ದೇವದೇವೋ ಜನಾರ್ದನಃ ॥ ೧೪ ॥

ತಸ್ಯಾಗ್ನೇಯೀ ತನುರ್ಯಾ ಚ ಸೋಽಹಂ ಸ ಚ ದಿವಾಕರಃ ।
ಸೌಮ್ಯಾ ತು ಯಾ ತನುಸ್ತಸ್ಯ ಸ ಭವಾನ್ ಸ ಪಿತಾಮಹಃ ॥ ೧೫ ॥

ತ್ವಯೀಯಂ ಧಾರ್ಯತೇ ಸರ್ವಂ ನಾನ್ಯತ್ಪಶ್ಯಾಮಿ ಕಾರಣಂ ।
ತ್ವದ್ಬಿಂಬೇ ನಿರ್ಮಲೇ ಪೃಥ್ವೀ ಸ ಶೈಲವನಕಾನನಾ ॥ ೧೬ ॥

ಶಶಾಕೃತಿಸ್ಸದಾ ದೃಶ್ಯಾ ಶಶಲಕ್ಷ್ಮಾಽಪಿ ಚಾನಘ ।
ತೇನೈವ ಕಾರಣೇನ ತ್ವಮುಚ್ಯಸೇ ಮೃಗಲಾಂಛನಃ ॥ ೧೭ ॥

---

೧೪. ಈಶ್ವರನು ಹೇಳುತ್ತಾನೆ– ಈ ಪ್ರಪಂಚವೆಲ್ಲಾ ಅಗ್ನಿ ಮತ್ತು ಸೋಮನೆಂಬಿಬ್ಬರು ದೇವತೆಗಳಿಂದ ಕೂಡಿದೆಯೆಂದು ಹೇಳಲ್ಪಟ್ಟಿದೆ. ಈ ಜಗನ್ನಾಥರುಗಳಿಂದ ಅಗ್ನೀಷೋಮರೀರ್ವರನ್ನೂ ಜನಾರ್ದನನೆಂದೇ ತಿಳಿಯಬೇಕು. ಆ ಜನಾರ್ದನನ ಅಗ್ನಿಸಂಬಂಧವಾದ ತೇಜಸ್ಸಾವುದುಂಟೋ ಆ ತೇಜಸ್ಸೇ ದಿವಾಕರನೆಂದೂ ಆ ದಿವಾಕರನೇ ನಾವೆಂದೂ ತಿಳಿದುಕೋ.

೧೫-೧೭. ಅವನ ಸೌಮ್ಯವಾದ ಯಾವ ದೇಹವುಂಟೋ ಅವನೇ ನೀನು ಅವನೇ ಬ್ರಹ್ಮನೂ ಸಹ ಆಗಿದ್ದಾನೆ. ನಿನ್ನಿಂದಲೇ ಈ ಜಗತ್ತು ನಿಂತಿದೆಯೋ ಹೊರ್ತು ಇದಕ್ಕೆ ಬೇರೆ ಕಾರಣವೇ ಇಲ್ಲ. ನಿನ್ನ ನಿರ್ಮಲವಾದ ಬಿಂಬಮಧ್ಯದಲ್ಲಿ ಬೆಟ್ಟಗುಡ್ಡ ಕಾಡುಗಳಿಂದೊಡಗೂಡಿದ ಭೂಲೋಕವು ಅಡಗಿರುವುದರಿಂದ ಚಂದ್ರಮಂಡಲದ ಮಧ್ಯದಲ್ಲಿ ಕಾಣುವ ಮೊಲದ ಆಕಾರವು ಅದೇ ಎಂದು ತಿಳಿಯಬೇಕು. ಈ ಗುರುತಿರುವುದರಿಂದ ನಿನಗೆ ಮೃಗಲಾಂಛನನೆಂದು ಹೆಸರಾಗಿದೆ. ಮೊಲದ ಗುರುತಿನ ಸಂಬಂ

ಶಶೀ ಶಶತ್ವಸಂಬಂಧಾತ್ಸೌಮ್ಯತ್ವಾತ್ಸೋಮ ಉಚ್ಯತೇ ।
ಶೀತಾಂಶುತ್ವಾಚ್ಚ ಶೀತಾಂಶುಃ ನಿಶೇಶತ್ವಾದ್ವಿರಾಜನಾತ್ ॥ ೧೮ ॥

ನಕ್ಷತ್ರನಾಥಸ್ತತ್ಸ್ವಾಮ್ಯಾದ್ರಾಜತ್ವಾತ್ತ್ವಂ ದ್ವಿಜೇಶ್ವರಃ ।
ವಸಂತಿ ತೇ ಪಿತೃಗಣಾಃ ಪಿತೃನಾಥಸ್ತತೋ ಭವಾನ್ ॥ ೧೯ ॥

ಬಹ್ವರ್ಥಶ್ಚಂದ್ರ ಇತ್ಯೇಷ ಧಾತುರುಕ್ತೋ ಮುನೀಷಿಭಿಃ ।
ಶುಕ್ಲತ್ವೇ ಹ್ಯಮೃತತ್ವೇ ಚ ಶೀತತ್ವೇ ಹ್ಲಾದನೇಽಪಿ ಚ ॥ ೨೦ ॥

ತೇನ ತೇ ಚಂದ್ರತಾ ಖ್ಯಾತಾ ಸತತಂ ಧರ್ಮವತ್ಸಲ ।
ಸರ್ವೇ ಚಾಹ್ಲಾದ ಮಾಯಾಂತಿ ದೃಷ್ಟೇ ತ್ವಯಿ ಮಹಾದ್ಯುತೇ ॥ ೨೧ ॥

ಪ್ರಜಾಕಾರ್ಯಂ ತ್ವದಾಯತ್ತಂ ತತ್ಕುರುಷ್ವ ಜಗತ್ಪ್ರಭೋ ।
ದತ್ತಾತ್ರೇಯತ್ವಮಾಸಾದ್ಯ ತ್ವಯಾ ದತ್ತವರೋ ನೃಪಃ ॥ ೨೨ ॥

---

ಧದಿಂದ ನಿನಗೆ ಶಶೀ ಎಂಬುದಾಗಿಯೂ, ಸೌಮ್ಯನಾದ್ದರಿಂದ ಸೋಮನೆಂದೂ, ತಂಪಾದ ಕಿರಣಗಳಿಂದೊಡಗೂಡಿದವನಾದ್ದರಿಂದ ಶೀತಾಂಶುವೆಂದೂ ನಿನಗೆ ನಿಶಾನಾಥನೆಂದೂ ಸಹ ನಾನಾ ನಾಮಗಳಿವೆ.

೧೯-೨೧. ನೀನು ನಕ್ಷತ್ರಗಳೊಡೆಯನಾದ್ದರಿಂದಲೂ ರಾಜತ್ವದಿಂದಲೂ ದ್ವಿಜೇಶ್ವರನೆನಿಸಿಕೊಂಡಿದ್ದೀಯೆ. ಪಿತೃಗಣಗಳು ನಿನ್ನಲ್ಲಿ ವಾಸಮಾಡುತ್ತಿರುವುದರಿಂದ ನೀನು ಪಿತೃನಾಥನೆಂದು ಹೆಸರನ್ನು ಧರಿಸಿರುವಿ. ವಿದ್ವಾಂಸರು ಬಹುತ್ವಾರ್ಥದಿಂದ ಚಂದ್ರನೆಂಬ ಧಾತು ನಿಷ್ಪತ್ತಿಯಾಗಿದೆಯೆಂದು ಹೇಳುವರು. ಶುಭ್ರತ್ವ, ಅಮೃತತ್ವ, ಶೀತತ್ವ, ಆಹ್ಲಾದತ್ವಗಳಿಂದಲೂ ಚಂದ್ರನೆಂಬ ಹೆಸರಾಗಿದೆ. ಸ್ವಾಮಿಾ! ಧರ್ಮವತ್ಸಲ, ನಿನ್ನನ್ನು ನೋಡಿದ ಮಾತ್ರದಿಂದಲೇ ಸಮಸ್ತರೂ ಸಂತೋಷವನ್ನು ಹೊಂದುತ್ತಾರೆ.

೨೨-೨೪. ಪ್ರಜೆಗಳ ಸೌಖ್ಯವು ನಿನ್ನ ಆಧೀನದಲ್ಲಿದೆ. ಅದನ್ನು ಈಗ ನೀನು ಮಾಡಬೇಕಾಗಿದೆ. ದತ್ತಾತ್ರೇಯನಾಗಿ ನೀನು ಅವತರಿಸಿರುವುದನ್ನು ತಿಳಿದು ನಿನ್ನಿಂ

**ಕಾರ್ತವೀರ್ಯಾರ್ಜುನೋ ನಾಮ ದಾನವಾಸ್ತಮುಪಾಶ್ರಿತಾಃ ।**
**ಸರ್ವೇ ಕ್ಷತ್ರಿಯತಾಂ ಪ್ರಾಪ್ಯ ತದ್ವಧೇ ಯತ್ನವಾನ್ ಭವ ॥ ೨೩ ॥**

**ತ್ವಯಾ ದತ್ತವರಂ ಹಂತುಂ ನಾನ್ಯಶ್ಶಕ್ನೋತಿ ಕಶ್ಚನ ।**
**ಅವಶ್ಯಂ ಚ ತ್ವಯಾ ಕಾರ್ಯಂ ದೇವಕಾರ್ಯಂ ಸದಾ ವಿಭೋ ॥ ೨೪ ॥**

**॥ ಮಾರ್ಕಂಡೇಯ ಉವಾಚ ॥**

**ಶಂಕರೇಣೈವ ಮುಕ್ತಸ್ತು ಪ್ರತಿಪೂಜ್ಯ ಚ ಶಂಕರಂ ।**
**ಉವಾಚ ದೇವದೇವೇಶಂ ಪ್ರಣತಾರ್ತಿಹರಂ ಹರಂ ॥ ೨೫ ॥**

**॥ ಚಂದ್ರ ಉವಾಚ ॥**

**ಇಯಂ ಶಂಕರ ಸೌಮ್ಯಾ ಮೇ ತನುಸ್ಸುವಿಹಿತಾ ತವ ।**
**ತಸ್ಮಾದರ್ಕಸ್ಥಿತಾಂ ಗಚ್ಛ ಸಾ ತೇ ಕಾಮಂ ಕರಿಷ್ಯತಿ ॥ ೨೬ ॥**

---

ದಲೇ ವರವನ್ನು ಪಡೆದು ಕಾರ್ತವೀರ್ಯಾರ್ಜುನನೆಂಬ ರಾಜನು ರಾಜ್ಯಭಾರಮಾಡು ತ್ತಿದಾನೆ: ರಾಕ್ಷಸರೆಲ್ಲರೂ ರಾಜರಾಗಿ ಅವತರಿಸಿ ಅವನನ್ನಾಶ್ರಯಿಸಿಕೊಂಡಿದಾರೆ. ಅವನನ್ನು ಈಗ ನೀನು ಸಂಹರಿಸುವ ಪ್ರಯತ್ನಮಾಡದೇ ಹೋದರೆ, ನಿನ್ನಿಂದ ವರ ವನ್ನು ಪಡೆದಿರುವ ಅವನನ್ನಿನ್ನಾರೂ ಕೊಲ್ಲಲು ಶಕ್ತರಲ್ಲ. ಸರ್ವದಾ ದೇವತೆಗಳ ಕಾರ್ಯವು ನಿನ್ನಿಂದಲೇ ಮಾಡಲ್ಪಡಬೇಕಾಗಿದೆ.

೨೫. ಮಾರ್ಕಂಡೇಯನು ಹೇಳುತ್ತಾನೆ- ಈ ರೀತಿ ಈಶ್ವರನಿಂದ ಹೇಳಲ್ಪಟ್ಟ ಚಂದ್ರನು ಶಂಕರನನ್ನು ತಾನೂ ಪ್ರತಿಯಾಗಿ ಪೂಜೆಮಾಡಿ, ಪ್ರಣತಾರ್ತಿನಾಶಕನಾದ ಈಶ್ವರನನ್ನು ಕುರಿತು ಈ ಮಾತನ್ನು ಹೇಳಿದನು.

೨೬. ಚಂದ್ರನು ಹೇಳುತ್ತಾನೆ- ಎಲೈ ! ಈಶ್ವರನೇ, ಈ ನನ್ನ ತಂಪಾದ ದೇಹವಾವುದುಂಟೋ ಅದು ನಿನ್ನಿಂದಲೇ ಆದುದರಿಂದ ನಾನೇ ನೀನೆಂದು ತಿಳಿ ದುಕೋ. ಆದ್ದರಿಂದ ನಾವಿಬ್ಬರೂ ಒಂದೇ ಆಗಿರುವುದರಿಂದ ಸೂರ್ಯಮಂಡಲಮ ಧ್ಯದಲ್ಲಿರುವ ತೇಜಸ್ಸನ್ನು ಹೋಗಿ ಕಾಣು. ಅದು ನಿನ್ನ ಇಷ್ಟಾರ್ಥವನ್ನು ನಡೆಸಿಕೊ ಡುವುದು.

॥ ಮಾರ್ಕಂಡೇಯ ಉವಾಚ ॥

ಇತ್ಯೇವಮುಕ್ತಸ್ತ್ರಿಪುರಾಂತಕಾರೀ
ಸೋಮೇನ ರಾಜ್ಞಾ ಪರಮೇಶ್ವರೇಣ ।
ಸಂಪೂಜ್ಯ ದೇವಂ ಪ್ರಯಯೌ ಸ ಶೀಘ್ರಂ
ತೇಜೋಮಯಂ ಮಂಡಲಮಾಶು ರಾಜನ್ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯವಜ್ರಸಂವಾದೇ ಚಂದ್ರಮಂಡಲದರ್ಶನಂ ನಾಮ
ಏಕೋನತ್ರಿಂಶತ್ತಮೋಧ್ಯಾಯಃ



---

೨೭. ಮಾರ್ಕಂಡೇಯನು ಹೇಳುತ್ತಾನೆ- ಎಲೈ ! ವಜ್ರನರಪತಿಯೇ, ಕೇಳು, ಈ ರೀತಿ ಚಂದ್ರನಿಂದ ಹೇಳಲ್ಪಟ್ಟವನಾಗಿ ಆ ತ್ರಿಪುರಹರನಾದ ಮಹಾದೇವನು ಚಂದ್ರನನ್ನು ಪೂಜೆಮಾಡಿ ಬಹು ಜಾಗ್ರತೆಯಿಂದ ತೇಜೋಮಂಡಲವೆಂದು ಪ್ರಸಿದ್ಧಿ ಹೊಂದಿರುವ ಸೂರ್ಯಮಂಡಲವನ್ನು ಕುರಿತು ಪ್ರಯಾಣಬೆಳಸಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚಂದ್ರಮಂಡಲದರ್ಶನವೆಂಬ ಹೆಸರಿನ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ತ್ರಿಂಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಸ ದದರ್ಶ ತತೋ ಗತ್ವಾ ವಿಪುಲಂ ಸೂರ್ಯಮಂಡಲಂ ।
ಚಂದ್ರಮಂಡಲಮಾನೇನ ಮಾನಂ ಯಸ್ಯ ಚ ಸಂಸ್ಕೃತಂ ॥ ೧ ॥

ಯತ್ತತ್ಪ್ರಜ್ವಲಿತಂ ಪಿಂಡಂ ಪಿಂಡಿತಸ್ಯ ವಿಭಾವಸೋಃ ।
ದೇವದೇವಸ್ಯ ಯದ್ಧಾಮ ವಾಸುದೇವಸ್ಯ ಧೀಮತಃ ॥ ೨ ॥

ತಸ್ಯ ಧರ್ಮಃ ಪರಂ ಪಿಂಡಂ ಬ್ರಹ್ಮಾಂಡಾಂತರದೀಪನಂ ।
ಆಧಾರಂ ಸರ್ವಭೂತಾನಾಂ ಜಠರಸ್ಥಂ ಹುತಾಶನಂ ॥ ೩ ॥

---

## ಮೂವತ್ತನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳುತ್ತಾನೆ ಅನಂತರ ಶಂಕರನು ಚಂದ್ರಮಂಡಲದ ಅಳತೆಯಿಂದಯಾವುದರ ಅಳತೆಯು ಸಂಸ್ಕರಿಸಲ್ಪಟ್ಟಿರುವುದೋ ಅಂತಹ ವಿಸ್ತಾರವಾದ ಸೂರ್ಯಮಂಡಲಕ್ಕೆ ತಲುಪಿ ಅಲ್ಲಿ ಸ್ವಾಮಿಯನ್ನು ಸಂದರ್ಶಿಸಿದನು.

### ಸೂರ್ಯಮಂಡಲದ ವರ್ಣನೆ

೨-೩. ಯಾವುದು ನಮ್ಮೆಲ್ಲರ ಕಣ್ಣಿಗೆ ಜ್ವಲಿಸುತ್ತಿರುವ ಬೆಂಕಿಯ ಉಂಡೆಯಂತೆ ಪ್ರತಿದಿನವೂ ಕಾಣಬರುತ್ತಿರುವುದೋ, ಅದು ಸೂರ್ಯಮಂಡಲವೆನಿಸಿಕೊಳ್ಳುವುದು. ಇದು ಬೇರೆ ಬೇರೆ ಬ್ರಹ್ಮಾಂಡಗಳಲ್ಲೂ ಬೆಳಕನ್ನುಂಟುಮಾಡತಕ್ಕ ಶಕ್ತಿಯುಳ್ಳ ಮಹಾಮಂಡಲವಾಗಿದೆ. ಬೆಳಕನ್ನು ಕೊಡುವುದೇ ಇದರ ಮುಖ್ಯ ಧರ್ಮವಾಗಿದೆ. ಇದು ಸಕಲ ಪ್ರಾಣಿಗಳಿಗೂ ಆಧಾರಭೂತವಾದ ತೇಜೋವಿಶೇಷವಾಗಿದೆ. ನಮ್ಮೆಲ್ಲರ ಜಠರ (ಹೊಟ್ಟೆ) ದಲ್ಲಿ ಬೆಂಕಿಯಿದೆಯೆಂದು ಎಲ್ಲರಿಗೂ ಗೊತ್ತೇ ಇದೆ.

ಪಂಚಧಾವಸ್ಥಿತಂ ದೇಹೇ ಸರ್ವೇಷಾಂ ಪ್ರಾಣಿನಾಂ ಸ್ಮೃತಃ ।
ಆಲೋಚಕಃ ಪಾಚಕಶ್ಚ ರೋಚಕೋ ರಂಜಕಸ್ತಥಾ ॥ ೪ ॥

ಭ್ರಾಜಕಶ್ಚ ತಥಾ ದೇವಃ ಸರ್ವೇಷಾಂ ಪ್ರಾಣಿನಾಂ ತಥಾ ।
ಯನ್ಮಯಂ ದೇಹಿನಾಂ ಚಕ್ಷುಃ ಯಶ್ಚಕ್ಷುರ್ದಕ್ಷಿಣಸ್ತಥಾ ॥ ೫ ॥

ಸ ವೈ ದೇವಾದಿದೇವಸ್ಯ ವಾಸುದೇವಸ್ಯ ಕೀರ್ತಿತಃ ।
ಅಗ್ನೌ ಪ್ರಾಸ್ತಾಹುತಿಸ್ಸಮ್ಯಙ್ನಿತ್ಯಂ ಯತ್ರೋಪತಿಷ್ಠತೇ ॥ ೬ ॥

---

ಆಬೆಂಕಿ ಐದುವಿಧವಾಗ ಹೆಸರಿನಿಂದ ನಾವು ತಿಂದ ಆಹಾರವನ್ನು ಜೀರ್ಣಮಾಡುವುದರಲ್ಲಿ ಮುಖ್ಯ ಸಹಾಯಕವೆಂಬ ಧರ್ಮದಿಂದ ಪ್ರಾಣಿಗಳಿಗೆ ಉಪಕಾರಮಾಡುತಲಿದೆ. (ಇದನ್ನು ಅಂದರೆ, ಆಹಾರಜೀರ್ಣಕ್ರಮವನ್ನು ಐಯಾಸ್ಕೋಪಿನಲ್ಲಿ ತೋರಿಸುತ್ತಲಿದ್ದಾರೆ) ಟಿಪ್ಪಣಿ:- ಈ ಐದುವಿಧವಾದ ಪಚನಕ್ರಿಯೆಗಳನ್ನು ಆಲೋಚಕ, ಪಾಚಕ, ರೋಚಕ, ರಂಜಕ, ಭ್ರಾಜಕಗಳೆಂದು ಶಾಸ್ತ್ರಜ್ಞರೂ ಶೋಧಕರೂ ಹೇಳುತ್ತಾರೆ. (ಇದಕ್ಕಾಗಿ ಬೇರೆಯೊಂದು ಶಾಸ್ತ್ರವೇ ಉತ್ಪತ್ತಿಯಾಗಿದೆ) ಇದನ್ನೇ ಗೀತೆಯಲ್ಲಿ ಅರ್ಜುನನನಿಗೆ ಕೃಷ್ಣನು ಇಂತು " ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹ ಮಾಶ್ರಿತಃ ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥ " ಅರ್ಥ:- ನಾನು ವೈಶ್ವಾನರನೆಂಬ ಹೆಸರಿನಿಂದ ಪ್ರಾಣಿಗಳ ದೇಹದೊಳಗಿನ ಜಠರಾಗ್ನಿಯೆನಿಸಿದೇನೆ. ಪ್ರತಿಪ್ರಾಣಿಗಳ ದೇಹದಲ್ಲಿಯೂ ಸರ್ವದಾ ಇದ್ದುಕೊಂಡು ಪ್ರಾಣಾಪಾನವಾಯುಗಳಿಂದ ಕೂಡಿದವನಾಗಿ ಪ್ರಾಣಿಗಳು ತಿಂದ ಆಹಾರವನ್ನು ನಾಲ್ಕು ವಿಧವಾಗಿ ಪಚನಮಾಡಿ ದೇಹಾರೋಗ್ಯವನ್ನು ಕೊಟ್ಟು ಕಾಪಾಡುತ್ತೇನೆ. ಹೀಗೇ ಈ ಮಹಾಪುರಾಣದಲ್ಲಿ ಗೀತಾ, ಉಪನಿಷತ್, ವೇದಗಳೇ ಮುಂತಾದುವುಗಳ ಮಹಾರಹಸ್ಯಗಳೂ ತುಂಬಿ ತುಳುಕಾಡುತ್ತಿವೆ. ಗ್ರಂಥವು ಅತ್ಯಂತ ವಿಸ್ತಾರವಾಗಿ ಬೆಳೆದುಕೊಂಡು ಹೋಗುವುದೆಂಬ ಭೀತಿಯಿಂದ ಸಾರಾಂಶಗಳನ್ನು ಮಾತ್ರವೇ ಇಲ್ಲಿ ಕೊಡುತ್ತೇವೆ. ಈ ಸಕಲ ಶಾಸ್ತ್ರಸಾರಭೂತವಾದ ಈ ಮಹಾಪುರಾಣದ ಮುಖ್ಯಾಂಶಗಳನ್ನು ಮಾತ್ರ ವಾಚಕರು ಗ್ರಹಿಸಿ ನೀರಕ್ಷೀರನ್ಯಾಯದಂತೆ ನಡೆದುಕೊಳ್ಳಬೇಕೆಂದು ಪ್ರಾರ್ಥಿಸುವೆವು.

ಈ ರೀತಿ ಪ್ರಾಣಿಗಳ ದೇಹದಲ್ಲೇ ನಾನು ವಾಸವಾಗಿರುವೆನಷ್ಟೆ? ಈ ದೇಹಗಳಿಗೆಲ್ಲಾ ಪ್ರಧಾನವಾದುವು ಎರಡು ಕಣ್ಣುಗಳು. ಇದರಲ್ಲಿ ಬಲಗಣ್ಣು ಬಲುಶ್ರೇಷ್ಠವು. ಏಕೆಂದರೆ ದೇವದೇವೋತ್ತಮನಾದ ವಾಸುದೇವನು ಅಲ್ಲಿ ವಾಸವಾಗಿರುವನು.

**ಯಸ್ಯ ದತ್ತಂ ತದಾ ತೇಜಃ ಸರ್ವೇಷಾಮೇವ ತೇಜಸಾಂ ।**
**ಯಸ್ಮಾದಂಬುಧರೋತ್ಪತ್ತಿರ್ಯಸ್ಮಾದ್ವರ್ಷಣಸಂಭವಃ ॥ ೭ ॥**

**ಯಸ್ಮಾತ್ಪ್ರವರ್ತತೇ ಸರ್ವಂ ಕಾಲಚಕ್ರಂ ತಥೈವ ಚ ।**
**ಓಷಧೀನಾಂ ಪರಃ ಪಾಕಃ ಪರಂ ಯಸ್ಮಾನ್ನ ವಿದ್ಯತೇ ॥ ೮ ॥**

**ತನ್ಮಂಡಲಮಥಾಸಾದ್ಯ ಕೃತ್ವಾ ರೂಪಂ ತು ತೈಜಸಂ ।**
**ವಿವೇಶ ಮಂಡಲಂ ಭಿತ್ವಾ ತನ್ಮಧ್ಯಂ ಶಂಕರಸ್ತದಾ ॥ ೯ ॥**

---

ಟಿಪ್ಪಣಿ:– ಪ್ರತಿದಿನವೂ ಬ್ರಾಹ್ಮಣರು ಅಗ್ನಿಯಲ್ಲಿ ಹೋಮಮಾಡುವರಷ್ಟೆ? ಮಾಡಲೇ ಬೇಕೆಂದು ವಿಧಿಯಿದೆ. ಪಂಚಮಹಾಯಜ್ಞಗಳೂ, ಔಪಾಸನ, ದರ್ಶಪೌರ್ಣಮಾಸ್ಯೇಷ್ಟಿಗಳನ್ನು ಸಾಮಾನ್ಯವಾಗಿ ಬ್ರಾಹ್ಮಣಗೃಹಸ್ಥರೆಲ್ಲರೂ ಮಾಡಲೇಬೇಕೆಂದು ವೇದದಲ್ಲಿ ಹೇಳಿದೆ. ಇದನ್ನು ಉಲ್ಲಂಘಿಸಿದರೆ ದೇವರ ಮಾತನ್ನು ಉಲ್ಲಂಘಿಸಿದಂತೆ ಆಗುತ್ತದೆ. ರಾಜನ ಅಪ್ಪಣೆಯನ್ನು ಮೀರಿ ನಡೆದವನು ಅದೆಂತು ದಂಡ್ಯನೋ ಅಂತೆಯೇ ವೇದವಿಹಿತ ಧರ್ಮಗಳನ್ನು ತ್ಯಜಿಸಿದವನೂ ದಂಡಾರ್ಹನೇ ಸರಿ. ಆದುದರಿಂದಲೇ ಸರ್ವಾಂತರ್ಯಾಮಿಯಾದ ಭಗವಂತನು ವರ್ಣಾಶ್ರಮಧರ್ಮಲೋಪಮಾಡಿಕೊಂಡು ನನ್ನ ಆಜ್ಞೆಯನ್ನು ಮೀರುತ್ತಿರುವ ಪ್ರಜೆಗಳೆಲ್ಲರಿಗೂ ಅಂತಸ್ಸಾಕ್ಷಿಯಾಗಿ ಮನಸ್ಸಾಕ್ಷಿಯಾಗಿದ್ದುಕೊಂಡು ಅವರವರ ಕರ್ಮಾನುರೂಪವಾದ ಫಲವನ್ನು ಕೊಡುತ್ತಲೇ ಇರುವನು. ಈ ಸಂಗತಿಯನ್ನು ಪ್ರತಿಯೊಬ್ಬರೂ ತಮ್ಮ ತಮ್ಮ ಮನಸ್ಥಿತಿಯನ್ನು ಅರಿತು, ಈಗ ಇದು ನಿಜವಾಗಿ ನಡೆಯುತ್ತಿರುವುದೋ ಇಲ್ಲವೋ ತಾವೇ ಅರಿತುಕೊಳ್ಳಲಿ. ಇದರ ವಿಸ್ತಾರವು ಇಷ್ಟಕ್ಕೆ ಸಾಕು.

ಈ ರೀತಿ ಅಗ್ನಿಯಲ್ಲಿ ಸಮರ್ಪಿಸಿದ ಆಹುತಿಯು ಆ ಕೂಡಲೆ ಸೂರ್ಯನಲ್ಲಿ ಹೋಗಿ ಸೇರುತ್ತದೆ. ಈ ಆಹುತಿಯನ್ನು ಸ್ವೀಕರಿಸಿ ಅದಕ್ಕೆ ಪ್ರತಿಯಾಗಿ ಸೂರ್ಯನು ಸಕಲರಿಗೂ ದಿವ್ಯ ತೇಜಸ್ಸನ್ನನುಗ್ರಹಿಸುತ್ತಾನೆ.

ಇಷ್ಟೇ ಅಲ್ಲದೆ ಭೂಮಿಯ ಸಕಲ (ಜಲ) ಸಾರವನ್ನೂ ಗ್ರಹಿಸಿ (ಆಕರ್ಷಿಸಿ) ಸೂರ್ಯನು ಅದನ್ನೆಲ್ಲಾ ಮೇಘರೂಪದಿಂದ ಪುನಃ ಉತ್ಪತ್ತಿಮಾಡುತ್ತಾನೆ. ಆ ಮೋಡದಿಂದ ಮಳೆಯನ್ನು ಸುರಿಸುತ್ತಾನೆ. ಅದರಿಂದಲೇ ಜನರಿಗೆ ಅನ್ನಸಿಕ್ಕಲು ಮೂಲಕಾರಣವಾಗಿದೆ. ಸೂರ್ಯನಿಂದಲೇ ಜಗತ್ತು ನಿಂತಿದೆಯಾದುದರಿಂದ ಅವನನ್ನು ಕಾಲಚಕ್ರವೆಂದು ಕರೆಯಬಹುದು. ಔಷಧಿವನಸ್ಪತಿಗಳು ಪರಿಪಾಕವಾಗಿ ಲೋಕದ

**ಸೋಂಗುಷ್ಠಮಾತ್ರಂ ಪುರುಷಂ ದೃಕ್ಶಕ್ತಿಮಿವ ವೇಷ್ಟಿತಂ ।**
**ತೈಜಸಂ ದೃಷ್ಟವಾನ್ ರುದ್ರಃ ತುಷ್ಟಾವ ಚ ಮಹಾದ್ಯುತಿಃ ॥ ೧೦ ॥**

**॥ ರುದ್ರ ಉವಾಚ ॥**

**ತ್ವಾಂ ನಮಸ್ಯಾಮಿ ದೇವೇಶ ತೇಜಸಾಂ ತು ಪರಂ ನಿಧಿಂ ।**
**ಆರಾಧ್ಯಸ್ತ್ವಂ ವರೇಣ್ಯಸ್ತ್ವಂ ಸರ್ವಭೂತಭವೋದ್ಭವಃ ॥ ೧೧ ॥**

**ಸ್ವರ್ಗದ್ವಾರಂ ಪ್ರಜಾದ್ವಾರಂ ಮೋಕ್ಷದ್ವಾರಂ ತಥಾ ಭವಾನ್ ।**
**ಅನಂತಶ್ಚಾಪ್ರಮೇಯಸ್ತ್ವಂ ಸೂಕ್ಷ್ಮಾತ್ಸೂಕ್ಷ್ಮತರಸ್ತಥಾ ॥ ೧೨ ॥**

**ಮಯಾ ಸಮರ್ಪಿತಂ ತೇಜಃ ಸಕಲಂ ತ್ವಯಿ ಭಾಸ್ಕರ ।**
**ಮತ್ತಸ್ತ್ವಂ ನ ಹಿ ಭಿನ್ನೋಽಸಿ ನ ಚ ದೇವಾಜ್ಜನಾರ್ದನಾತ್ ॥ ೧೩ ॥**

---

ಜನರು ಆಹಾರವನ್ನು ಪಡೆಯಲು ಸೂರ್ಯನೇ ಮುಖ್ಯಕಾರಣನಾದ ದೇವರೆಂದು ಸರ್ವರೂ ಖಂಡಿತವಾಗಿ ತಿಳಿದುಕೊಳ್ಳಲೇ ಬೇಕು.

ಇಂಥಾ ಮಹಿಮೆಗಳಿಂದೊಡಗೂಡಿದ ತೇಜೋರೂಪವಾದ ಸೂರ್ಯಮಂಡಲದೊಳಹೊಕ್ಕು ಶಂಕರನು ಸೂರ್ಯನನ್ನು ಸ್ತೋತ್ರ ಮಾಡಿದನು.

೧೦. ಈಶ್ವರನು ತನ್ನ ತ್ರಿನೇತ್ರಗಳ ಶಕ್ತಿಯೋ ಎಂಬಂತೆ ಅಲ್ಲಿ ಸುತ್ತುವರಿಯಲ್ಪಟ್ಟಿರುವ ಮಹಾ ತೇಜೋಮಯವಾದ ಅಂಗುಷ್ಠ ಮಾತ್ರ ಅಳತೆಯುಳ್ಳ ಸೂರ್ಯನನ್ನು ಸಂದರ್ಶಿಸಿ ಈ ರೀತಿ ಸ್ತೋತ್ರಮಾಡಿದನು.

೧೧-೧೩. ಈಶ್ವರನು ಹೇಳುತ್ತಾನೆ- ಎಲೈ ! ದೇವಶ್ರೇಷ್ಠನೇ, ತೇಜಸ್ಸುಗಳಿಗೆ ನಿಧಿಯಂತಿರುವ ನಿನ್ನನ್ನು ನಮಸ್ಕರಿಸುತ್ತೇನೆ. ನೀನೇ ಸಕಲಕ್ಕೂ ನಿಧಾನನು. ಎಲ್ಲಕ್ಕಿಂತ ನೀನೇ ಶ್ರೇಷ್ಠನು. ಸಕಲ ಭೂತಗಳ ಉತ್ಪತ್ತಿಗೂ ನೀನೇ ಕಾರಣನು. ಸ್ವರ್ಗದ್ವಾರವೂ, ಪ್ರಜಾದ್ವಾರವೂ, ಮೋಕ್ಷದ್ವಾರವೂ, ನೀನೇ ಸರಿ. ಅನಂತನೂ ಅಪ್ರಮೇಯನೂ, ಸೂಕ್ಷ್ಮಕ್ಕಿಂತ ಸೂಕ್ಷ್ಮತರನೂ ಸಹ ನೀನೇ ಆಗಿರುತ್ತೀ. ನನ್ನಿಂದ ಸಕಲ ತೇಜಸ್ಸೂ ಸಹ ನಿನ್ನಲ್ಲಿಯೇ ಸಮರ್ಪಿಸಲ್ಪಟ್ಟಿದೆ. ಯಾವ ನಿನ್ನ ಈ ಬೆಳಕಿನಿಂದಲೇ ಸಕಲರೂ ತಮ್ಮ ತಮ್ಮ ಮನೆಗೆಲಸಗಳನ್ನು ಮಾಡಿಕೊಳ್ಳುತ್ತಾರೆಯೋ

ಅಹಂ ವಿಷ್ಣುರ್ಭವಾನ್ ವಿಷ್ಣುರ್ಬ್ರಹ್ಮಾ ವಿಷ್ಣುಃ ಪ್ರಭಾಕರ ।
ಅಸ್ಮಾಕಂ ಸಕಲಂ ಧಾಮ ತ್ವಯಿ ತಿಷ್ಠತಿ ಭಾಸ್ಕರ ॥ ೧೪ ॥

ಧಾಮಕಾರ್ಯಂ ಹಿ ಕ್ರಿಯತೇ ಯೇನಾಸ್ಯ ಜಗತಸ್ಸದಾ ।
ಪ್ರಜಾನಾಂ ತು ಪ್ರಸವನಾತ್ಸವಿತೇತಿ ನಿಗದ್ಯಸೇ ॥ ೧೫ ॥

ರಸಾನಾಂ ಚ ತಥಾ ದಾನಾದ್ರವಿರಿತ್ಯಭಿಧೀಯಸೇ ।
ಆದಿತ್ಯಸ್ತ್ವಂ ತಥಾ ದಾನಾನ್ಮಿತ್ರಸ್ತ್ವಂ ಮಿತ್ರಭಾವನಃ ॥ ೧೬ ॥

ಪುಷ್ಣಾಸಿ ಸಕಲಾನ್ಲೋಕಾಂಸ್ತೇನ ಪೂಷಾ ನಿಗದ್ಯಸೇ ।
ಧಾರಣಾಚ್ಚ ತಥಾ ಧಾತಾ ಯಮನಾದರ್ಯಮಾ ತಥಾ ॥ ೧೭ ॥

ಅಂಶುಸ್ತ್ವಮಂಶುಧಾರಿತ್ವಾದ್ವಿಸರ್ಗಾದರುಣಸ್ತಥಾ ।
ಭವಾನ್ಸೌಭಾಗ್ಯನಾಚಿತ್ವಾ ತ್ತ್ವಷ್ಟಾ ಸರ್ವಕ್ರಿಯಾಕೃತೇಃ ॥ ೧೮ ॥

---

ಪ್ರಜೆಗಳು ಸವನ (ಯಜ್ಞ)ವನ್ನು ಯಾರಿಗೋಸ್ಕರ ಮಾಡುತ್ತಾರೋ ಅದರಿಂದ ಆ ನಿನಗೆ ಸವಿತೃವೆಂದು ಹೆಸರಾಗಿದೆ ರಸಗಳನ್ನು ದಾನವಾಗಿ ಭೂಮಿಗೆ ಕೊಡೋಣ ದರಿಂದ ರವಿಯೆನಿಸಿಕೊಂಡಿದೀಯೆ. ನೀನೇ ಆದಿತ್ಯನೂ ಆಗಿರುವಿ.

ಎಲೈ ಭಾಸ್ಕರನೇ, ನಾನು ವಿಷ್ಣುವಾಗಿದೇನೆ. ನೀನೂ ವಿಷ್ಣುವಾಗಿದ್ದೀ ಬ್ರಹ್ಮನೂ ವಿಷ್ಣುವಾಗಿದಾನೆ. "ಸರ್ವಂ ವಿಷ್ಣುಮಯಂ ಜಗತ್" ಎಂಬುದು ಇದ ರಿಂದ ಸ್ಪಷ್ಟವಾಗಿ ಹೊರಪಟ್ಟಿದೆ.

೧೬-೨೧. ನೀನು ದಾನಮಾಡುವುದರಿಂದ ಆದಿತ್ಯನೆಂದೂ, ಸಕಲರಲ್ಲಿ ಮೈತ್ರೀ ಭಾವದಿಂದಿರುವುದರಿಂದ ಮಿತ್ರನೆಂದೂ, ಸಕಲ ಲೋಕವನ್ನ ಪೋಷಿಸುವುದರಿಂದ ಪೂಷನೆಂದೂ, ಲೋಕವನ್ನು ಧರಿಸಿರುವುದರಿಂದ ಧಾತೃವೆಂದೂ, ನಿಯಮನ (ಆಜ್ಞಾ) ಶಕ್ತಿಯಿರುವುದರಿಂದ ಅರ್ಯಮನೆಂದೂ, ಬ್ರಹ್ಮಾಂಶಧಾರಿತ್ವದಿಂದ ಅಂಶುಮಂತ ನೆಂದೂ, ಸೌಭಾಗ್ಯಶಾಲಿಯಾದುದರಿಂದ ಭವನೆಂದೂ, ಸಕಲ ಕರ್ಮಸಾಕ್ಷಿಯಾಗಿರು

ಸರ್ವಜಂತುಸಮತ್ವಾಚ್ಚ ವಿವಸ್ವಾನಭಿಧೀಯತೇ ।
ಕ್ರಮಣಾಚ್ಚ ತಥಾ ವಿಷ್ಣುರೀಶತ್ವಾದಿಂದ್ರ ಉಚ್ಯತೇ ॥ ೧೯ ॥
ತಸ್ಮಾತ್ತ್ವಯಾ ಪ್ರಜಾಕಾರ್ಯಂ ಕರ್ತವ್ಯಮಭಿಚಾರಿತಂ ।
ಸ್ಥಾವರೈರ್ಜಂಗಮೈಶ್ಚೈವ ಭೂಮಿರ್ಭಾರಾಭಿಪೀಡಿತಾ ॥ ೨೦ ॥
ಕದಾಚಿಜ್ಜಂಗಮೈರ್ಭೂಮಿಃ ಭೂರಿಭಾರೇಣ ಪೀಡಿತಾ ।
ಕದಾಚಿತ್ಸ್ಥಾವರೈರದ್ಯ ಭಾರದ್ವಿತಯಪೀಡಿತಾ ॥ ೨೧ ॥
ಅರ್ಜುನೇ ನೃಪತೌ ವೃದ್ಧಿಃ ಪರಾ ಭಾಸ್ಕರ ಶಾಖಿನಾಂ ।
ದೈತ್ಯಾಃ ಕ್ಷತ್ರಿಯತಾಂ ಪ್ರಾಪ್ಯ ಪೀಡಯಂತಿ ಚ ಮೇದಿನೀಂ ॥ ೨೨ ॥

॥ ಸೂರ್ಯ ಉವಾಚ ॥

ತವ ದರ್ಶನಕಾಮೇನ ಪ್ರಾಗೇವ ನ ಕೃತಾ ಮಯಾ ।
ಸ್ಥಾವರೈರ್ಜಂಗಮೈಸ್ಸಾರ್ಧಂ ಪ್ರಕೃತಿಸ್ಥಾಂ ವಸುಂಧರಾಂ ॥ ೨೩ ॥

ವುದರಿಂದ ತ್ವಷ್ಟ್ರುದೇವತೆಯೆಂದೂ, ಸಕಲ ಜಂತುಗಳಲ್ಲೂ ಸಮಾನಬುದ್ಧಿಭಾವವಿರುವುದರಿಂದ ವಿವಸ್ವಂತನೆಂದೂ, ಸಕಲ ಲೋಕಾಕ್ರಮಣಭಾವದಿಂದ ವಿಷ್ಣುವೆಂದೂ, ಈಶತ್ವ (ಪ್ರಭುತ್ವ)ದಿಂದ ಇಂದ್ರನೆಂದೂ ಪ್ರಸಿದ್ಧನಾಗಿರುವೆ. ಆದುದರಿಂದ ಈಗ ಪ್ರಜಾಕ್ಷೇಮಕರವಾದ ಕಾರ್ಯವನ್ನು ನೀನು ಯಾವ ವಿಚಾರವೂ ಮಾಡದೆ ಮಾಡಬೇಕಾಗಿರುವುದು. ಈ ಭೂಲೋಕವು ಒಮ್ಮೆ ಸ್ಥಾವರಪ್ರಾಣಿಗಳಿಂದಲೂ ಮತ್ತೊಮ್ಮೆ ಜಂಗಮ (ಜೀವಿ) ಪ್ರಾಣಿಗಳಿಂದಲೂ ಕೆಲವುಸಲ ಸ್ಥಾವರ ಜಂಗಮ ಪ್ರಾಣಿಗಳೆರಡರಿಂದಲೂ ಪೀಡಿಸಲ್ಪಡುವುದುಂಟು. ಈಗಲಾದರೋ ಸ್ಥಿರವಾದ ಪ್ರಾಣಿಜಾತ್ಯದಿಂದ ಎರಡರಷ್ಟು ಭಾರವನ್ನು ಹೊತ್ತು ಈ ಭಾರವನ್ನು ಹೊರಲಾರದೆ ಸಂಕಟವಡುತ್ತಿದ್ದಾಳೆ. ಶಾಖೋಪಶಾಖೆಗಳಾಗಿ ಬೆಳೆದಿರುವ ಕಾರ್ತವೀರ್ಯಾರ್ಜುನನ ಸಂತತಿರೂಪವಾದ ಕ್ಷತ್ರಿಯನೆಂಬ ವೃಕ್ಷರೂಪಪ್ರಾಬಲ್ಯದಿಂದ ಭೂಭಾರವು ಹೆಚ್ಚಿ ಭೂಮಿಯು ಜಗ್ಗುತ್ತ ಬಂದಿದೆ.

೨೨. ರಾಕ್ಷಸರೆಲ್ಲರೂ ಮೇಲ್ಕಂಡಂತೆ ಕ್ಷತ್ರಿಯರಾಗಿ ಹುಟ್ಟಿ ಭೂಮಿಯನ್ನು ಹಿಂಸಿಸುತ್ತಿದ್ದಾರೆ.

೨೩-೨೪. ಸೂರ್ಯನು ಹೇಳುತ್ತಾನೆ- ಎಲೈ! ಪರಮೇಶ್ವರನೇ, ಈ ಭಾರವನ್ನು ನಾನೇ ಕಡಮೆಮಾಡಬೇಕೆಂದಿದ್ದೆ. ಆದರೆ ನಿನ್ನನ್ನು ನನ್ನ ಊರಿಗೆ ಬರಮಾ

**ಯಥಾಪೂರ್ವಂ ಕಥಾವ್ಯಾಹಂ ಕರಿಷ್ಯಾಮಿ ಮಹೇಶ್ವರ ।**
**ಸಾಂಪ್ರತಂ ಬ್ರಾಹ್ಮಣೋ ಭೂತ್ವಾ ಚಾರ್ಜುನೇ ನ್ಯೈವ ಪಾದಪಾನ್ ॥ ೨೪ ॥**

**॥ ಮಾರ್ಕಂಡೇಯ ಉವಾಚ ॥**

**ಇತ್ಯೇವ ಮುಕ್ತಸ್ತ್ರಿಪುರಾಂತಕಾರೀ**
**ಸೂರ್ಯೇಣ ಸದ್ರಶ್ಮಿ ವಿರಾಜಿತೇನ ।**
**ಜಗಾಮ ಧಾಮ ಸ್ವಮಸೌ ಬಿಭೇತಿ**
**ಯತ್ಸರ್ವಲೋಕಾಂ ಜಗತಾಂ ಪ್ರಧಾನಃ ॥ ೨೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ**
**ಆದಿತ್ಯದರ್ಶನಂನಾಮ ತ್ರಿಂಶತ್ತಮೋಧ್ಯಾಯಃ**



---

ಡಿಕೊಳ್ಳಬೇಕೆಂಬ ಆಶೆಯಿಂದ ಈ ಕೆಲಸಮಾಡದೆ ಸುಮ್ಮನೆ ಇದ್ದೆನು. ಈಗ ನಿನ್ನ ಮಾತಿನಂತೆ ಪೂರ್ವದಲ್ಲಿದ್ದಂತೆ ಭೂಮಿಯನ್ನು ಸರಿಪಡಿಸಿ ಭಾರವನ್ನಿಳುಹುತ್ತೇನೆ. ಎಲೈ ! ಪರಮೇಶ್ವರನೇ, ಇದಕ್ಕಾಗಿ ನಾನೀಗ ಒಂದು ಕೆಲಸವನ್ನು ಮಾಡುತ್ತೇನೆ ಈಗ ಬ್ರಾಹ್ಮಣ ವೇಷದಿಂದ ಕಾರ್ತವೀರ್ಯನ ಬಳಿಗೆ ಹೋಗಿ ಆ ಅರ್ಜುನನಿಂದಲೇ ಲೋಕದಲ್ಲಿರುವ ಮರಗಳನ್ನೆಲ್ಲಾ ನನ್ನ ಮೂಲಕ ಸುಡಿಸಿ ಬಿಡುತ್ತೇನೆ. ಇದಕ್ಕಾಗಿ ವಸಿಷ್ಠರನ್ನು ನನ್ನ ಈ ಕೆಲಸಕ್ಕೆ ಸಹಾಯಕರನ್ನಾಗಿ ನೇಮಿಸಿಕೊಳ್ಳುತ್ತೇನೆ. ಭೃಗುವಂಶದಲ್ಲಿ ಒಂದು ಅಂಶದಿಂದ ಪರಶುರಾಮನಾಗಿ ಜನಿಸಿ ಭೂಮಿಯನ್ನು ಕ್ಷತ್ರಿಯವಿರಹಿತವನ್ನಾಗಿ ಮಾಡಿ ಬಿಡುತ್ತೇನೆ,

೨೬. ಮಾರ್ಕಂಡೇಯನು ಹೇಳಿದನು — ಈ ರೀತಿ ಶಂಕರನು ಸಹಸ್ರಕಿರಣನಾದ ಭಗವಾನ್ ಸೂರ್ಯ ದೇವನಿಂದ ಹೇಳಲ್ಪಟ್ಟವನಾಗಿ ತನ್ನ ಲೋಕಕ್ಕೆ ಪ್ರಯಾಣ ಬೆಳಸಿದನು. ಜಗತ್ಪ್ರಧಾನನಾದ ವಿಭಾಕರನು ತನ್ನ ಸ್ವಂತ ಸ್ಥಳಕ್ಕೆ ಹೊರಟನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡನಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಆದಿತ್ಯ ದರ್ಶನವೆಂಬ ಹೆಸರಿನ
ಮೂವತ್ತನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಏಕತ್ರಿಂಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ದ್ವಿಜ ರೂಪ ಮಥಾಸ್ಥಾಯ ದೇವದೇವೋಽಪಿ ಭಾಸ್ಕರಃ ।
ಮಾಹಿಷ್ಮತೀಂ ಯಯೌ ಶೀಘ್ರಂ ನಗರೀಂ ರತ್ನಮಾಲಿನೀಂ ॥ ೧ ॥

ಸ ತತ್ರ ದದೃಶೇ ವೀರಂ ಕಾರ್ತವೀರ್ಯಾರ್ಜುನಂ ನೃಪಂ ।
ಯಜಮಾನಂ ಸುದೋರ್ದಂಡಂ ಕಲ್ಪವೃಕ್ಷಮಿವಾಪರಂ ॥ ೨ ॥

॥ ಬ್ರಾಹ್ಮಣ ಉವಾಚ ॥

ಪೂಜಿತಃ ಕಾರ್ತವೀರ್ಯೇಣ ಬ್ರಾಹ್ಮಣೋ ನೃಪಮಬ್ರವೀತ್ ॥ ॥ ೩ ॥

---

## ಮೂವತ್ತೊಂದನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳಿದನು:— ಅನಂತರದಲ್ಲಿ ಸೂರ್ಯನು ಬ್ರಾಹ್ಮಣರೂಪವನ್ನು ಧರಿಸಿದಂಥಾವನಾಗಿ ರತ್ನಮಾಲೆಗಳಿಂದ ರಂಜಿತವಾದ ತೋರಣಗಳುಳ್ಳ ಮಾಹಿಷ್ಮತೀ ನಗರವನ್ನು ಪ್ರವೇಶಿಸಿದನು.

೨-೩. ಅಲ್ಲಿಯ ದೊರೆಯಾದ ಕಾರ್ತವೀರ್ಯಾರ್ಜುನನನ್ನು ಆ ಬ್ರಾಹ್ಮಣನು ನೋಡಿದನು. ಕವಲೊಡೆದು ಶಾಖೋಪಶಾಖೆಗಳಿಂದ ವ್ಯಾಪ್ತವಾದ ಕಲ್ಪವೃಕ್ಷವೋ ಎಂಬಂತೆ ಸಹಸ್ರಬಾಹುದಂಡಗಳಿಂದ ಆ ರಾಜನು ಪ್ರಕಾಶಿಸುತ್ತಿದ್ದನು. ಈ ಬ್ರಾಹ್ಮಣನು ಬಂದುದನ್ನು ನೋಡಿ ಕಾರ್ತವೀರ್ಯನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದ ಬಳಿಕ ಆ ಬ್ರಾಹ್ಮಣನು ರಾಜನನ್ನು ಕುರಿತು ಹೇಳಿದನು.

ಮಹಾಶನಂ ಮಾಂ ಜಾನೀಹಿ ಬ್ರಾಹ್ಮಣಂ ಕ್ಷುಧಯಾರ್ದಿತಂ ।
ಪ್ರಯಚ್ಛ ತಸ್ಯ ಮೇ ತೃಪ್ತಿಂ ತ್ವಮೇಕೋ ಹೈಹಯೋತ್ತಮ ॥ ॥ ೪ ॥

॥ ಅರ್ಜುನ ಉವಾಚ ॥

ಕೇನಾನ್ನೇನ ಭವೇತ್ತೃಪ್ತಿಃ ಕಿಮನ್ನಂ ವಿದಧಾಮಿ ತೇ ।
ತನ್ಮಮಾಚಕ್ಷ್ವ ಭಗವನ್ ಸ್ವಚ್ಛಂದೇನೈವ ಮಾಚಿರಂ ॥ ೫ ॥

॥ ಬ್ರಾಹ್ಮಣ ಉವಾಚ ॥

ಆದಿತ್ಯಂ ಮಾಂ ವಿಜಾನೀಹಿ ಸ್ಥಾವರಾನ್ ಭೋಕ್ತುಮುದ್ಯತಂ ।
ಪ್ರಯಚ್ಛ ತಾನಿ ಸರ್ವಾಣಿ ಮಮ ಪಾರ್ಥಿವ ಪುಂಗವ ॥ ೬ ॥

॥ ಅರ್ಜುನ ಉವಾಚ ॥

ಸ್ಥಾವರಂ ಭೂಗತಂ ದಾತುಂ ಶಕ್ತಿರ್ನಾಸ್ತಿ ಮಮಾನಘ ।
ಕಥಂ ಹಿ ಸ್ಥಾವರಾ ದಗ್ಧುಂ ಶಕ್ಯಾ ಮಾನುಷ್ಯತೇಜಸಾ ॥ ೭ ॥

---

೪. ಬ್ರಾಹ್ಮಣನು ಹೇಳಿದನು– ಅಯ್ಯಾ ! ಹೈಹಯರಾಜನೇ, ನಾನು ಬಹಳ ಹಸಿವಿನಿಂದ ಕೂಡಿದೇನೆ. ವಿಪರೀತವಾಗಿ ಊಟಮಾಡುವ ನನಗೆ ನೀನು ತೃಪ್ತಿಯಾಗುವಂತೆ ಭೋಜನಮಾಡಿಸಬೇಕು. ನನ್ನ ಹಸಿವನ್ನು ನೀನಲ್ಲದೆ ಮತ್ತೊಬ್ಬರು ಶಮನಮಾಡಲಾರರು.

೫. ಅರ್ಜುನನು ಹೇಳಿದನು– ಎಲೈ ! ಬ್ರಾಹ್ಮಣನೇ, ನಿನಗೆ ಎಂತಹ ಅನ್ನದಿಂದ ತೃಪ್ತಿಯಾಗುತ್ತದೆ. ಎಂತಹ ಅನ್ನವನ್ನು ನೀನು ಅಪೇಕ್ಷಿಸುವೆಯೋ ಆ ವಿಚಾರವನ್ನು ಸಂಕೋಚವಿಲ್ಲದೆ ಹೇಳು.

೬. ಬ್ರಾಹ್ಮಣನು ಹೇಳುತ್ತಾನೆ– ಅಯ್ಯಾ ! ನಾನು ಸೂರ್ಯನು. ನನಗೆ ಸ್ಥಾವಿರ (ಮರಗಿಡ) ಗಳನ್ನು ಆಹಾರವಾಗಿ ಕೊಡು. ನಾನು ಮರಗಳನ್ನು ಯಥೇಚ್ಛವಾಗಿ ತಿಂದು ತೃಪ್ತನಾಗುತ್ತೇನೆ.

೭. ಅರ್ಜುನನು (ಕಾರ್ತವೀರ್ಯಾರ್ಜುನ) ಹೇಳಿದನು– ಭೂಮಿಯೊಳಗೆ ಬೇರುಬಿಟ್ಟುಕೊಂಡಿರುವ ಮರಗಳನ್ನು ಕೊಡಲು ನನಗೆ ಶಕ್ತಿಯಿಲ್ಲ. ಒಂದುವೇಳೆ ನಾನು ಕೊಟ್ಟಾಗ್ಯೂ ಸ್ಥಾವರ ವೃಕ್ಷಗಳನ್ನು ಮಾನುಷ್ಯತೇಜಸ್ಸಿನಿಂದ ದಹನಮಾಡಿ ತಿನ್ನಲು ನಿನಗೆ ಶಕ್ತಿ ಹೇಗೆ ಬಂದೀತು ?

॥ ಆದಿತ್ಯ ಉವಾಚ ॥

ರಥಸ್ಥಃ ಪಾರ್ಥಿವಶ್ರೇಷ್ಠ ಶರಾನ್ಮುಂಚ ಯದೃಚ್ಛಯಾ ।
ತೇಷ್ವಹಂ ಪ್ರಜ್ವಲನ್ ರಾಜನ್ ಭಕ್ಷಯಿಷ್ಯಾಮಿ ಪಾದಪಾನ್ ॥ ೮ ॥

ತಾವದೇವ ತ್ವಯಾ ಕಾರ್ಯಂ ನೃಪತೇ ಶರಮೋಕ್ಷಣಂ ।
ಯಾವನ್ನ ಪ್ರಜ್ವಲಿಷ್ಯಾಮಿ ಮುಕ್ತೇಷ್ವಪಿ ಶರೇಷ್ವಹಂ ॥ ೯ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ಗತೇ ಸೂರ್ಯೇ ಕಲ್ಪಯಿತ್ವಾ ರಥೋತ್ತಮಂ ।
ಚಿಕ್ಷೇಪ ಸ ಶರಾನ್ ರಾಜಾ ಯತ್ರ ಯತ್ರ ದ್ರುಮೋತ್ಕರಂ ॥ ೧೦ ॥

ತೇ ಕ್ಷಿಪ್ತಾ ಹೈಹಯೇಶೇನ ಶಾತಕೌಂಭೋಜ್ಜ್ವಲಾಶ್ಶರಾಃ ।
ಜಜ್ವಲ ನ್ನೃಪಶಾರ್ದೂಲ ಜ್ವಲಯಂತೋ ವನೇ ದ್ರುಮಾನ್ ॥ ೧೧ ॥

---

೮ ಸೂರ್ಯನು ಹೇಳಿದನು- ಎಲೈ ! ರಾಜಶ್ರೇಷ್ಠನೇ, ನೀನು ರಥದ ಮೇಲೆ ಕುಳಿತು ಬಾಣಗಳನ್ನು ಪ್ರಯೋಗಮಾಡು. ನಾನು ಆ ಬಾಣಗಳಲ್ಲಿ ಅಡಗಿಕೊಂಡು ಜ್ವಲಿಸುತ್ತಾ ಮರಗಳನ್ನು ಭಕ್ಷಿಸುತ್ತೇನೆ:

೯. ಎಲೈ ! ಹೈಹಯ ನೃಪಾಲನೇ, ನಿನಗೆ ಬಾಣಬಿಡುವುದೆಷ್ಟೋ ಅಷ್ಟೇ ಕೆಲಸ. ನೀನು ಬಿಟ್ಟ ಬಾಣಗಳಲ್ಲೆಲ್ಲಾ ನಾನು ಪ್ರವೇಶಿಸಿ ಮರಗಳನ್ನು ಸುಡುತ್ತ ಬರುತ್ತೇನೆ. ಯಾವಾಗ ಬಾಣವು ಪ್ರಜ್ವಲಿಸುವುದಿಲ್ಲವೋ ಆಗ್ಯೆ ಬಾಣಗಳನ್ನು ಬಿಡು ವುದನ್ನು ನಿಲ್ಲಿಸು.

೧೦. ಮಾರ್ಕಂಡೇಯನು ಹೇಳಿವನು– ಈ ರೀತಿ ಹೇಳಿ ಸೂರ್ಯನು ಹೊರಟು ಹೋಗಲು ಹೈಹಯರಾಜನು ಶ್ರೇಷ್ಠವಾದೊಂದು ರಥವನ್ನು ನಿರ್ಮಾಣಮಾಡಿಸಿ ಅದರೊಳಗೆ ಕುಳಿತು ಮರಗಳು ಎಲ್ಲೆಲ್ಲಿ ಗುಂಪುಗುಂಪಾಗಿ ಬೆಳೆದಿದೆಯೋ ಅಲ್ಲೆಲ್ಲಾ ಬಾಣಗಳನ್ನು ಪ್ರಯೋಗಿಸುತ್ತಾ ಬಂದನು.

೧೧-೧೩. ಕಾರ್ತವೀರ್ಯಾರ್ಜುನನು ಚಿನ್ನದ ಬಾಣಗಳನ್ನೇ ಪ್ರಯೋಗಿ ಸುತ್ತ ಬಂದಂತೆ ಅದರೊಳಗಡಗಿದ ಸೂರ್ಯನ ಕಾಂತಿಯು ಭಯಂಕರವಾಗಿ ಉರಿ

**ದುಂದುಭಿಸ್ವನನಿರ್ಘೋಷೋ ವಿಸ್ಫುಲಿಂಗಗಣಾಕುಲಃ ।**
**ಆಲೋಲಾರ್ಚಿರ್ಮಹಾವೇಗಃ ಸರ್ವಸತ್ತ್ವಭಯಂಕರಃ** ॥ ೧೨ ॥

**ನಿರ್ದಹನ್ ವೃಕ್ಷಪುಂಜಾನಿ ತಪ್ತಕಾಂಚನಸುಪ್ರಭಃ ।**
**ಜ್ವಾಲಾಮಾಲೀ ತದಾ ಭಾತಿ ಸರ್ವತಃ ಪಾವಕಃ ಕ್ಷಿತೌ** ॥ ೧೩ ॥

**ವನೇಷು ದಹ್ಯಮಾನೇಷು ತಾಪತೃಷ್ಣಾರ್ದಿತಾ ಮೃಗಾಃ ।**
**ಜಲಾಶಯೇಷು ಚಿತ್ರೇಷು ಗತಚ್ಛಾಯಾಗ್ನಿಕೇಷು ಚ** ॥ ೧೪ ॥

**ದದಾಹಾಗ್ನಿಸ್ತದಾ ವೃಕ್ಷಾನ್ ಯಾವದಿಚ್ಛಾ ಜಗತ್ಪತೇಃ ।**
**ಬಭೂವಾಥ ಪ್ರಶಾಂತಾರ್ಚಿಃ ಕೃತ್ವಾ ಲಘ್ವೀಂ ವಸುಂಧರಾಂ** ॥ ೧೫ ॥

**ನ ಜಜ್ವಾಲ ತಥಾ ವಹ್ನಿಃ ಕಾರ್ತವೀರ್ಯಶರೇಷ್ವಪಿ ।**
**ಕೃತಕಾರ್ಯಂ ತದಾ ಜ್ಞಾತ್ವಾ ಕಾರ್ತವೀರ್ಯೋ ದಿವಾಕರಃ** ॥ ೧೬ ॥

---

ಯುತ್ತಾ ವನದಲ್ಲಿರುವ ಮರಗಳನ್ನೆಲ್ಲಾ ಸುಟ್ಟು ತಿನ್ನುತ್ತಾ ಬಂತು. ಜ್ವಾಲೆಯು ಹೊರಡುವ ಶಬ್ದವು ನಗಾರಿ ಬಡಿದಂತೆ ಧ್ವನಿಯಾಗುತ್ತಿತ್ತು. ಕಿಡಿಯು ಯಥೇಚ್ಛವಾಗಿ ಹೊರಡುತ್ತಿತ್ತು ಉರಿಯು ಮರದಿಂದ ಮರಕ್ಕೆ ಗಿಡದಿಂದ ಗಿಡಕ್ಕೆ ವ್ಯಾಪಿಸುತ್ತಾ ಬಂತು. ಕಾಸಿದ ಅಪರಂಜಿ ಚಿನ್ನದ ಬಣ್ಣದಂತೆ ಉರಿಯು ಹರಡುತ್ತಾ ಮರದ ಗುಂಪುಗುಂಪನ್ನೇ ಸುಡುತ್ತಾ ಭೂಮಿಯ ಮೇಲೆಲ್ಲಾ ವ್ಯಾಪಿಸಿಕೊಂಡಿತು.

೧೪-೧೫. ವನಕ್ಕೆ ವನವೇ ಸುಡುತ್ತ ಬರಲು, ತಾಪದಿಂದಲೂ, ಬಾಯಾರಿಕೆಯಿಂದಲೂ, ಮೃಗಗಳು ಸಂಕಟಪಡುತ್ತಿದ್ದುವು. ಸರೋವರಗಳು ಬತ್ತಿಹೋದವು. ಭಗವಂತನಿಗೆ ಯಾವರೀತಿ ಸಂಕಲ್ಪವಿತ್ತೋ ಆ ಸಂಕಲ್ಪವು ಪೂರ್ತಿಯಾಗುವ ತನಕ ವೃಕ್ಷದಾಹ ನಡೆದುಹೋಯಿತು. ಬಳಿಕ ಉರಿಯು ಶಾಂತವಾಯಿತು. ಭೂಭಾರವು ಕಮ್ಮಿಯಾಗಿ ಹಗುರವಾಯಿತು.

೧೬–೨೦. ಈಶ್ವರ ಸಂಕಲ್ಪವು ಪೂರ್ತಿಯಾದೊಡನೆಯೇ ಬಾಣದಿಂದ ಉರಿಯು ಹೊರಡುವುದು ನಿಂತುಹೋಯಿತು. ಯಾವಾಗ ಬಾಣವು ತಣ್ಣಗಾಯಿತೋ ಆಗ ಕಾರ್ತವೀರ್ಯಾರ್ಜುನನು ಸೂರ್ಯನ ಕಾರ್ಯವು ನೆರವೇರಿತೆಂದು ತಿಳಿದುಕೊಂಡು

ವಿನಿವೃತ್ಯ ರಥಂ ಪಶ್ಚಾದ್ಯಾವನ್ಮಾಹಿಷ್ಮತೀಂ ಪುರೀಂ ।
ಸ ಗಚ್ಛನ್ನೇವ ದದೃಶೇ ವಸಿಷ್ಠಂ ಸರ್ವತೇಜಸಂ ॥ ೧೭ ॥

ತೇನ ಶಪ್ತೋ ವನೇ ದಗ್ಧೇ ಸ್ವಕೀಯೇ ನೃಪಪುಂಗವ ।
ಯಸ್ಮಾತ್ತ್ವಯಾ ವನಂ ದಗ್ಧಂ ಮಮ ಪಾರ್ಥಿವಶಾಸನ ॥ ೧೮ ॥

ತಸ್ಮಾಚ್ಛೇತ್ಸ್ಯತೇ ಬಾಹೂನ್ ಬ್ರಾಹ್ಮಣಶ್ಶಂಸಿತವ್ರತಃ ।
ತೇನ ಶಾಪೇನ ವಿಪ್ರಸ್ಯ ರಾಮಃ ಕ್ಷತ್ರಿಯನಂದನ ॥ ೧೯ ॥

ತಸ್ಯ ಬಾಹುವನಂ ಸರ್ವಂ ಚಿಚ್ಛೇದ ಭೃಗುನಂದನಃ ॥ ೨೦ ॥

॥ ವಜ್ರ ಉವಾಚ ॥

ರಾಮಸ್ತು ಕಸ್ಮಿನ್ ಸ ಬಭೂವ ವಂಶೇ
ಕಥಂ ಚ ರಾಜ್ಞಸ್ತು ಮಹಾಬಲಸ್ಯ ॥

---

ರಥವನ್ನು ಹಿಂತಿರುಗಿಸಿ ವನಾಂತರದಿಂದ ಹೊರಟು ಮಾಹಿಷ್ಮತೀನಗರಕ್ಕೆ ತಲಪಿದನು. ಬರುವಾಗ ದಾರಿಯಲ್ಲಿ ವಸಿಷ್ಠಮಹರ್ಷಿಗಳ ಆಶ್ರಮವು ಸಿಕ್ಕಿತು ತನ್ನ ಆಶ್ರಮದಲ್ಲಿದ್ದ ಎಲ್ಲಾ ವೃಕ್ಷಗಳೂ ಕಾರ್ತವೀರ್ಯನ ಬಾಣದಿಂದ ಬೆಂದು ಹೋದದ್ದನ್ನು ನೋಡಿ ವಸಿಷ್ಠರು ಕುಪಿತರಾಗಿ ಯಾವ ನಿನ್ನ ತೋಳುಗಳಿಂದ ಹೊರಟ ಬಾಣವು ನನ್ನ ಆಶ್ರಮವೃಕ್ಷಗಳನ್ನು ಛೇದಿಸಿತೋ, ಆ ನಿನ್ನ ಸಹಸ್ರಾವಧಿ ತೋಳುಗಳನ್ನು ಒಬ್ಬ ನನ್ನಂತಹ ನಿಯಮವ್ರತನಾದ ಬ್ರಾಹ್ಮಣನು ಕತ್ತರಿಸಿ ಬಿಡುತ್ತಾನೆಂದು ಶಪಿಸಿದರು. ಈ ರೀತಿ ವಸಿಷ್ಠರ ಶಾಪದಿಂದ, ಭೃಗುನಂದನನಾದ ಪರಶುರಾಮನು ಅವತರಿಸಿ ಕಾರ್ತವೀರ್ಯಾರ್ಜುನನ ಬಾಹುಗಳೆಂಬ ವನವನ್ನು ಕತ್ತರಿಸಿದನು.

೨೧. ವಜ್ರಮಹಾರಾಜನು ಹೇಳುತ್ತಾನೆ– ಎಲೈ ! ಮಾರ್ಕಂಡೇಯನೇ, ಆ ಪರಶುರಾಮನು ಯಾವ ವಂಶದಲ್ಲಿ ಯಾವಾಗ ಹುಟ್ಟಿದನು ? ಆ ಮಹಾ ಪರಾಕ್ರಮ

**ಚಿಚ್ಛೇದ ದೋರ್ದಂಡವನಂ ನೃವೀರಃ**
**ಸರ್ವಂ ಮಮಾಚಕ್ಷ್ವ ಭೃಗುಪ್ರಧಾನ** ॥ ೨೧ ॥

**ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ**
**ಮಾರ್ಕಂಡೇಯ ವಜ್ರಸಂವಾದೇ ವನದಾಹೋನಾಮ**
**ಏಕತ್ರಿಂಶತ್ತಮೋಽಧ್ಯಾಯಃ**



ಶಾಲಿಯಾದ ಅರ್ಜುನನ ದೋರ್ದಂಡವೆಂಬ ಕಾಡನ್ನು ಅದೆಂತು ಆ ರಾಮನು ಕತ್ತರಿಸಿದನು. ಈ ಸಂಗತಿಗಳೆಲ್ಲವನ್ನೂ ನನ್ನೊಡನೆ ವಿಸ್ತಾರವಾಗಿ ಹೇಳೆಂದು ಕೇಳಿದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ವನದಾಹವೆಂಬ ಹೆಸರಿನ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ದ್ವಾತ್ರಿಂಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಸರ್ವದೇವಾತಿದೇವಸ್ಯ ಬ್ರಹ್ಮಣಸ್ತನಯೋ ಭೃಗುಃ ।
ಪೌಲೋಮ್ಯಾಂ ಜನಯಾಮಾಸ ಚ್ಯವನಂ ಭಗವಾನ್ಭೃಗುಃ ॥ ೧ ॥
ಯಯಾತಿಜಾ ಸುಕನ್ಯಾಪಿ ಚ್ಯವನಾದ್ಭೃಗುನಂದನಾತ್ ।
ಆತ್ಮವಾನಂ ದಧೀಚಂ ಚ ಜನಯಾಮಾಸ ಧಾರ್ಮಿಕೌ ॥ ೨ ॥
ಋಷಿಪತ್ನೀ ಮಹಾಭಾಗ ಚಾತ್ಮವಾನಸ್ಯ ನಾಹುಷೀ ।
ಔರ್ವಂ ಸಂಜನಯಾಮಾಸ ಋಚೀಕಾಪರಸಂಜ್ಞಿತಂ ॥ ೩ ॥

---

## ಮೂವತ್ತೆರಡನೆಯ ಅಧ್ಯಾಯವು

೧-೨. ಮಾರ್ಕಂಡೇಯನು ಹೇಳುತ್ತಾನೆ- ಸಕಲ ದೇವತೆಗಳಿಗೂ ಶ್ರೇಷ್ಠನಾದ ಬ್ರಹ್ಮನಿಗೆ ಭೃಗುವು ಮಗನಾಗಿ ಜನಿಸಿದನು. ಆ ಭೃಗುವು ಪೌಲೋಮಿಯೆಂಬ ಪತ್ನಿಯಲ್ಲಿ ಚ್ಯವನ ಮಹರ್ಷಿಯನ್ನು ಪುತ್ರನನ್ನಾಗಿ ಪಡೆದನು. ಈ ಚರಿತ್ರೆಯನ್ನು ಇದೇ ಪ್ರಥಮಖಂಡದ ೧೫ ನೇ ಅಧ್ಯಾಯದಲ್ಲಿ ನೋಡಿರಿ. ಆ ಚ್ಯವನಋಷಿಯು ಯಯಾತಿಮಹಾರಾಜನ ಮಗಳಾದ ಸುಕನ್ಯೆಯನ್ನು ವಿವಾಹವಾಗಿ ಆಕೆಯಲ್ಲಿ ಆತ್ಮವಂತ, ದಧೀಚಿಗಳೆಂಬೀರ್ವರು ಧರ್ಮಾತ್ಮರುಗಳನ್ನು ಮಕ್ಕಳನ್ನಾಗಿ ಪಡೆದನು.

೩. ಎಲೈ ! ವಜ್ರರಾಜನೇ, ಕೇಳು. ಆತ್ಮವಾನನ ಹೆಂಡತಿಯಾದ ನಾಹುಷಿಯೆಂಬ ಋಷಿಪತ್ನಿಯು ಋಚೀಕನೆಂಬ ಮತ್ತೊಂದು ಹೆಸರುಳ್ಳ ಔರ್ವನೆಂಬ ಮಗನನ್ನು ಪಡೆದಳು.

ಯೇನ ಕ್ರೋಧಾಭಿಭೂತೇನ ದೃಷ್ಟೋಗ್ನಿರ್ವಡವಾಮುಖಃ ।
ತಸ್ಯ ಸತ್ಯವತೀ ಭಾರ್ಯಾ ಕೌಶಿಕೀ ಗಾಧಿಜಾ ಶುಭಾ ॥ ೪ ॥

ತಸ್ಯಾಂ ಸಂಜನಯಾಮಾಸ ಪುತ್ರಾಣಾಂ ಶತಮೂರ್ಜಿತಂ ।
ಜಮದಗ್ನಿಶ್ಚ ವತ್ಸಶ್ಚ ತೇಷಾಂ ಶ್ರೇಷ್ಠತಮಾವುಭೌ ॥ ೫ ॥

ಸ್ತ್ರೀಣಾಂ ಚರುವಿಪರ್ಯಾಸಾಜ್ಜಮದಗ್ನಿರಜಾಯತ ॥ ೬ ॥

॥ ವಜ್ರ ಉವಾಚ ॥

ಕಥ್ಯತಾಂ ಮೇ ಯತೋ ಬ್ರಹ್ಮನ್ ವಾಡವಸ್ಯ ಚ ಸಂಭವಃ ।
ಸಂಭವಂ ಜಮದಗ್ನೇಶ್ಚ ಶ್ರೋತುಮಿಚ್ಛಾಮಿ ತತ್ವತಃ ॥ ೭ ॥

---

೪. ಮಹಾ ಕೋಪಿಷ್ಠನಾದ ಈ ಔರ್ವನು ಕೋಪಿಸಿಕೊಳ್ಳಲಾಗಿ ಬಡಬಾಗ್ನಿ ಮುಖವು (ಕಾಡುಗಿಚ್ಚು) ಉತ್ಪತ್ತಿಯಾಯಿತು. ಅಂದರೆ ಬಡಬಾಮುಖನೆಂಬ ಮಗನು ಹುಟ್ಟಿದನು. ಅವನಿಗೆ ಸತ್ಯವತಿಯೆಂಬ ಹೆಂಡತಿಯಿದ್ದಳು. ಇವಳು ಗಾಧಿ ರಾಜನ ಮಗಳು.

೫. ಬಡಬಾಮುಖನು ಸತ್ಯವತಿಯಲ್ಲಿ ನೂರುಜನ ಮಕ್ಕಳನ್ನು ಪಡೆದನು. ಅವರಲ್ಲಿ ಜಮದಗ್ನಿಯೂ ವತ್ಸನೂ ಶ್ರೇಷ್ಠಪುತ್ರರೆನಿಸಿಕೊಂಡರು.

೬. ಹೆಂಗಸರು ಅನ್ನದಭಾಗವನ್ನು ಬದಲಾಯಿಸಿಕೊಂಡುದರಿಂದ ಜಮದ ಗ್ನಿಯು ಉತ್ಪನ್ನನಾದನು

೭. ವಜ್ರಮಹಾರಾಜನು ಹೇಳುತ್ತಾನೆ:— ಸ್ವಾಮಿಾ! ಮಾರ್ಕಂಡೇಯರೇ, ಬಡಬಾಮುಖನೂ ಜಮದಗ್ನಿಯೂ ಸಹ ಉತ್ಪನ್ನರಾದ ಸಂಗತಿಯನ್ನು ಸ್ವಲ್ಪ ಚೆನ್ನಾಗಿ ಬಿಡಿಸಿ ಹೇಳಿ

|| ಮಾರ್ಕಂಡೇಯ ಉವಾಚ ||

ಭೃಗೂಣಾಂ ಹೈಹಯಾನಾಂ ಚ ವೈರಮಾಸೀತ್ಸುದಾರುಣಂ ।
ಧನಹೇತೋಸ್ತದಾ ಪಾಪೈರ್ಹೈಹಯೈರ್ಭೃಗವೋ ಹತಾಃ || ೮ ||

ಯೇಽಪಿ ಗರ್ಭಗತಾ ಬಾಲಾಸ್ತೇಽಪಿ ತೈರ್ವಿನಿಷೂದಿತಾಃ ।
ಗರ್ಭೇಷು ಹನ್ಯಮಾನೇಷು ಋಷಿಃ ಪರಮದುಃಖಿತಃ || ೯ ||

ಅರುಣಂ ಧಾರಯಾಮಾಸ ಗರ್ಭೇಷ್ಟಂ ದೀಪ್ತತೇಜಸಂ ।
ಪೂರ್ಣಕಾಲೇ ತದಾ ಬಾಲಃ ಊರುಂ ಭಿತ್ವಾ ವ್ಯಜಾಯತ || ೧೦ ||

ಜಾತಮಾತ್ರಸ್ತು ಚುಕ್ರೋಧ ದೇವತಾನಾಂ ಮಹಾತಪಾಃ ।
ಹೈಹಯೈರ್ಹನ್ಯಮಾನಾನಾಂ ಬಂಧೂನಾಂ ಸುಮಹಾತ್ಮನಾಂ || ೧೧ ||

ಭವದ್ಭಿರ್ನ ಕೃತಂ ತ್ರಾಣಂ ತಸ್ಮಾತ್ಸರ್ವಾನ್ ಶಪಾಮ್ಯಹಂ ।
ತಂ ಕ್ರುದ್ಧಂ ಪಿತರೋ ಹಂತುಂ ವಾರಯಾಮಾಸುರೋಜಸಾ || ೧೨ ||

---

೮. ಮಾರ್ಕಂಡೇಯನು ಹೇಳುತ್ತಾನೆ:— ಭೃಗುವಂಶಸ್ಥರಿಗೂ ಹೈಹಯ ರಾಜರಿಗೂ ಹಣಕ್ಕಾಗಿ ಭಯಂಕರವಾದ ಶತ್ರುತ್ವವುಂಟಾಗಿ ಪಾಪಾತ್ಮರಾದ ಹೈಹಯ ರಾಜರುಗಳಿಂದ ಭೃಗುಗಳು ಸಂಹೃತರಾದರು.

೯-೧೦. ಹೈಹಯ ರಾಜರುಗಳು ಭೃಗುಋಷಿಯ ವಂಶದಲ್ಲಿ ಗರ್ಭದಲ್ಲಿದ್ದ ಮಕ್ಕಳನ್ನು ಸಹ ಸಂಹರಿಸಿಬಿಟ್ಟರು. ಹೀಗೆ ಗರ್ಭಗತ ಶಿಶುಗಳೂ ಮೃತವಾದುದನ್ನು ಕಂಡು ಭೃಗುವು ಬಹಳ ದುಃಖಪಟ್ಟು, ಮಹಾ ತೇಜಸ್ವಿಯಾದ ಅರುಣನನ್ನು ಗರ್ಭದಲ್ಲಿ ಧರಿಸಿದನು ಆ ಅರುಣನು ದಿನ ತುಂಬಿದ ಮೇಲೆ ತೊಡೆಯನ್ನು ಸೀಳಿಕೊಂಡು ಹುಟ್ಟಿದನು.

೧೧-೧೨. ಔರ್ವನು (ತೊಡೆಯಲ್ಲಿ ಹುಟ್ಟಿದನು) ಹುಟ್ಟಿದೊಡನೆಯೇ, ಹೈಹಯರಾಜರಿಂದ ತನ್ನ ಪಿತೃಗಳೆಲ್ಲರೂ ಸಂಹೃತರಾದುದನ್ನು ಕೇಳಿ ಆ ರಾಜರಿಗೆ ಶಾಪ ಕೊಡುತ್ತೇನೆಂದು ಕ್ರೋಧದಿಂದ ಹೇಳಲು, ಪಿತೃಗಳು ಸಮಾಧಾನಪಡಿಸಿ ಇಂತು ಹೇಳಿದರು:— ಎಲೈ ವತ್ಸನೇ, ಕೋಪಿಸಬೇಡ. ತಡಿ. ನಾವೆಲ್ಲರೂ ಕ್ರೋಧ

ಕ್ರೋಧಃ ಪುತ್ರ ನ ಕರ್ತವ್ಯಃ ಸ ಹಿ ಶತ್ರುರ್ನೃಣಾಂ ಸದಾ ।
ವಯಂ ಸರ್ವೇ ಜಿತಕ್ರೋಧಾಃ ಕ್ಷತ್ರಿಯೈರ್ವಿನಿಪಾತಿತಾಃ ॥ ೧೩ ॥

ಅಸ್ಮಾಕಂ ನ ವಧೇ ಶಕ್ತಾಃ ಕ್ಷತ್ರಿಯಾ ಹೈಹಯಾಧಿಪಾಃ ।
ಏವಮುಕ್ತಃ ಪಿತೃಗಣೈಃ ಋಚೀಕಸ್ತಾನಥಾ ಬ್ರವೀತ್ ॥ ೧೪ ॥

ನ ಹಿ ಮೇ ಶಾಮ್ಯತಿ ಕ್ರೋಧೋ ಯುಷ್ಮನ್ನಿಧನಕಾರಿತಃ ।
ತಸ್ಮಾದ್ದೇವಗಣಾನ್ಸರ್ವಾನ್ ನಿಹನಿಷ್ಯಾಮಿ ತೇಜಸಾ ॥ ೧೫ ॥

ಏತಸ್ಮಿನ್ನೇವ ಕಾಲೇ ತು ಮಹೀ ತೋಯಸಮಾಕುಲಾ ।
ಜಗಾಮ ಶರಣಂ ವಿಷ್ಣುಂ ಸರ್ವಭೂತಭವೋದ್ಭವಂ ॥ ೧೬ ॥

॥ ಶ್ರೀ ಭಗವಾನುವಾಚ ॥

ದೇವಾನ್ ಪ್ರತಿ ಸಮುತ್ಪನ್ನಂ ಕ್ರೋಧಮೌರ್ವಸ್ಯ ಯಚ್ಛುಭಂ ।
ತಂ ಪ್ರವಿಶ್ಯ ಗ್ರಸಿಷ್ಯಾಮಿ ತೋಯಂ ಸರ್ವಂ ವಸುಂಧರೇ ॥ ೧೭ ॥

---

ವನ್ನು ಬಿಟ್ಟು ತಾಳ್ಮೆಯಿಂದಲೇ ಇದ್ದೆವು ಆದಾಗ್ಯೂ ಹೈಹಯರಾಜರಿಂದ ಸಂಹೃತ ರಾದೆವು. ನಾವು ಕೋಪದಿಂದ ಎದುರು ಬಿದ್ದಿದ್ದರೆ ನಮ್ಮನ್ನು ಹೈಹಯರು ಸಂಹರಿಸು ವುದಕ್ಕಾಗುತ್ತಿರಲಿಲ್ಲ.

೧೪–೧೫. ಈ ರೀತಿ ಪಿತೃಗಳಿಂದ ಹೇಳಲ್ಪಟ್ಟವನಾಗಿ ಋಚೀಕ (ಔರ್ವ)ನು ಇಂತು ಪೇಳಿದನು :— ಎಲೈ ! ಪಿತೃಗಳಿರಾ, ನನ್ನ ಕೋಪವು ಶಾಂತವಾಗಲಾರದು ನಿಮ್ಮನ್ನು ಸಂಹರಿಸಿದ ಸಕಲ ದೇವಗಣಗಳನ್ನೂ ನನ್ನ ತೇಜಸ್ಸಿನಿಂದಲೇ ಸುಟ್ಟು ಬಿಡುತ್ತೇನೆ.

೧೬. ಇದೇ ಕಾಲದಲ್ಲಿಯೇ ಭೂಮಿಯೆಲ್ಲವೂ ನೀರಿನಿಂದ ತುಂಬಿಹೋಗಿ ಜಲಮಯವಾಯಿತು. ಆಗ ಭೂದೇವಿಯು ಸರ್ವ ಭೂತಗಳ ಪತಿಯಾದ ಮಹಾ ವಿಷ್ಣುವನ್ನು ಶರಣು ಹೊಂದಿದಳು,

೧೭. ಭಗವಂತನಾದ ಮಹಾವಿಷ್ಣುವು ಹೇಳುತ್ತಾನೆ:—ಎಲೈ ಭೂದೇವಿಯೇ ಇದೇ ಸಮಯದಲ್ಲಿಯೇ ಔರ್ವನು ದೇವತೆಗಳ ಮೇಲೆ ಕೋಪಿಸಿಕೊಂಡು ಶಾಪ ಕೊಡುವಂತೆ ಹೇಳಿದಾನೆ. ನಾನು ಔರ್ವನಲ್ಲಿ ಪ್ರವೇಶಿಸಿ ನಿನ್ನಲ್ಲಿ (ಭೂಮಿಯಲ್ಲಿ) ತುಂಬಿರುವ ನೀರನ್ನೆಲ್ಲಾ ಹೀರಿ ನಿನ್ನನ್ನು ಹಗುರಳನ್ನಾಗಿ ಮಾಡುತ್ತೇನೆ.

॥ ಮಾರ್ಕಂಡೇಯ ಉವಾಚ ॥

ಇತ್ಯೇವಮುಕ್ತ್ವಾ ವಸುಧಾ ಮೌರ್ವಂ ಕ್ರೋಧಂ ಸಮಾವಿಶತ್ ।
ಭೂತ್ವಾ ಚ ಬಡಬಾವಕ್ತ್ರಸ್ತಚ್ಛರೀರಾದ್ವಿನಿಸ್ಸೃತಃ ॥ ೧೮ ॥

ನ ತ್ವಾಂ ತಾರೋ ಭವಿಷ್ಯಂತಿ ಪುತ್ರ ಸರ್ವೇ ದಿವೌಕಸಃ ।
ಕ್ರೋಧಶ್ಚಾಯಂ ತವ ವೃಥಾ ನ ಭವಿಷ್ಯತಿ ಪುತ್ರಕ ॥ ೧೯ ॥

ಏವ ಮುಕ್ತಸ್ತು ಭೃಗುಣಾ ಋಚೀಕೋಽಗ್ನಿಮಭಾಷತ ।
ಪೂರ್ವೋತ್ತರೇ ಸಮಾಸಾದ್ಯ ಸಮುದ್ರೇ ವಸಪುತ್ರಕ ॥ ೨೦ ॥

ಪಿಬಂಸ್ತತ್ರ ಸದಾ ವೇಗಮಂಭಸಾಂ ಸುಮಹಾದ್ಯುತೇ ।
ಅಸ್ಮಾಕಂ ತು ಕುಲೇ ಭಾವೀ ಕ್ಷತ್ರಧರ್ಮಾ ದ್ವಿಜೋತ್ತಮಃ ॥ ೨೧ ॥

ಕ್ಷತ್ರಿಯಾಣಾಂ ಸಮುಚ್ಛೇದಂ ಯಃ ಕರಿಷ್ಯತ್ಯನೇಕಶಃ ।
ಏವಮುಕ್ತಸ್ತು ಪಿತ್ರಾ ವೈ ಪಿಬರ್ ಮಾಸಾಷ್ಟಕಂ ಜಲಂ ॥ ೨೨ ॥

---

೧೮–೨೨. ಮಾರ್ಕಂಡೇಯನು ಹೇಳುತ್ತಾನೆ:— ಈ ರೀತಿ ಮಹಾವಿಷ್ಣುವು ಭೂದೇವಿಯೊಡನೆ ಹೇಳಿ ಔರ್ವನ ಕೋಪದ ಒಳಗೆ ಪ್ರವೇಶಮಾಡಿದನು. ಆ ಕೂಡಲೆ ಆ ಶರೀರದಿಂದ ಬಡವಾಮುಖ (ಕಾಡುಗಿಚ್ಚು) ಉತ್ಪತ್ತಿಯಾದುದು. ಆಗ ಭೃಗುವು ಋಚೀಕ (ಔರ್ವ) ನನ್ನು ಕುರಿತು ಹೀಗೆ ಹೇಳಿದನು. ಎಲೈ! ಮಗನೇ, ನಿನ್ನ ಕೋಪಕ್ಕೆ ಪಕ್ಕಾದವರನ್ನು ಯಾರೂ ಉಳಿಸಿಕೊಳ್ಳಲಾರರು. ನೀನು ಈ ಅಗ್ನಿಯಲ್ಲಿ ಪ್ರವೇಶಿಸಿ ಬಡಬಾಗ್ನಿಯೆಂದು ಪ್ರಸಿದ್ಧನಾಗು. ಪೂರ್ವೋತ್ತರ ಸಮುದ್ರಗಳಲ್ಲಿ ನೀನು ವಾಸವಾಗಿದ್ದುಕೊಂಡು ಸಮುದ್ರವೇಗವು ಹೆಚ್ಚಿದಾಗ ಬರುವ ಜಲಗಳನ್ನೆಲ್ಲಾ ಹೀರಿ ಸಮುದ್ರದ ನೀರಿನ ವೇಗವನ್ನು ಕಡಿಮೆಮಾಡು ನಮ್ಮ ಕುಲದಲ್ಲಿ ಮುಂದೆ ಹುಟ್ಟುವ ಒಬ್ಬ ವೀರನು, ಬ್ರಾಹ್ಮಣನಾದಾಗ್ಯೂ ಕ್ಷತ್ರಿಯ ಧರ್ಮವನ್ನು ಧರಿಸಿ ಸಂಚರಿಸುತ್ತಾ, ಕ್ಷತ್ರಿಯರ (ಹೈಹಯರ) ಕುಲವನ್ನೇ ನಿರ್ಮೂಲ ಮಾಡುತ್ತಾನೆ. ಈ ರೀತಿ ಇಪ್ಪತ್ತೊಂದುಬಾರಿ ಭೂಮಿಯಲ್ಲಿ ಕ್ಷತ್ರಿಯರನ್ನು ಸದೆ ಬಡಿಯುತ್ತಾನೆ.

ಈ ರೀತಿ ಹೇಳಲ್ಪಟ್ಟ ಋಚೀಕನು ತಂದೆಯ ಮಾತಿನಂತೆ ಪೂರ್ವೋತ್ತರ ಸಮುದ್ರಗಳಲ್ಲಿ ಈಗಲೂ ವಾಸವಾಗಿದ್ದುಕೊಂಡು ಚೈತ್ರಮಾಸದಿಂದ ಹಿಡಿದು ಎಂಟು

ಚೈತ್ರಮಾಸಂ ಸಮಾರಭ್ಯ ನಿತ್ಯಮಾಸ್ತೇ ಸುಖೀ ಜಲೇ ।
ಪೀತಂ ಮಾಸಾಷ್ಟಕಂ ತೋಯಂ ಜಠರೇ ಭಸ್ಮಸಾದ್ಗತಂ ॥ ೨೩ ॥

ಫೂತ್ಕೃತ್ಯ ಮಾಸಾಂಶ್ಚತುರಃ ಶಿಶಿರಾಖ್ಯೇ ಮಹೀತಲೇ ।
ನಿತ್ಯಂ ಹಿಮೌಘಂ ಸೃಜತಿ ತಸ್ಮಾದಪಿ ಸಮೀರಣಃ ॥ ೨೪ ॥

ಹಿಮಾಚಲೇ ಪಾತಯತಿ ಪ್ರವಾಹೋ ನಾಮ ಪಾರ್ಥಿವ ।
ಏಷಾ ತೋಯಾದ್ಧಿನೋತ್ಪತ್ತಿರ್ಹಿಮರ್ತೌ ಯಸ್ಯ ಸಂಭವಃ ॥ ೨೫ ॥

ವೃದ್ಧಿಕ್ಷಯವಿಹೀನಸ್ಯ ಕಥಿತಂ ತವ ಧಾರ್ಮಿಕ ॥ ೨೬ ॥

ಉತ್ಪತ್ತಿರೇಷಾ ತವ ವಾಡವಾಗ್ನೇಃ
ಪ್ರೋಕ್ತಾ ಮಯಾ ಭೂಮಿಪತಿ ಪ್ರಧಾನ ।

---

ತಿಂಗಳು ಪೂರ್ತಿಯಾಗಿ (ಕಾರ್ತಿಕ) ನೀರಿನಲ್ಲಿ ಸುಖವಾಗಿ ವಾಸಮಾಡಿಕೊಂಡು ಈ ಎಂಟು ತಿಂಗಳೂ ನೀರು ಕುಡಿದುಕೊಂಡು ಸುಖವಾಗಿರುತ್ತಾನೆ. ಈ ರೀತಿ ಎಂಟು ತಿಂಗಳು ಕುಡಿದ ನೀರೂ ಸಹ ಅವನ ಹೊಟ್ಟೆಯಲ್ಲಿ ಅರಗಿ ಜೀರ್ಣವಾಗಿ ಬೂದಿಯಾಗಿ ಹೋಗುತ್ತದೆ.

೨೪-೨೬. ಬಡಬಾಗ್ನಿಯು ಎಂಟು ತಿಂಗಳು ಕಳೆದಮೇಲೆ ಕಡಿಮೆ ನಾಲ್ಕು ತಿಂಗಳಕಾಲ ತಂಪಾಗಿರುವ ಭೂಭಾಗದಲ್ಲಿ ಫೂತ್ಕಾರ ಮಾಡುವುದರಿಂದ ಆಗ ಹಿಮವು ಉತ್ಪತ್ತಿಯಾಗುತ್ತದೆ. ಆ ಹಿಮದಿಂದ ಹೊರಟ ಗಾಳಿಯು ಹಿಮಾಲಯ ಪರ್ವತದಲ್ಲಿ ಬೀಸಿ ಅಲ್ಲಿಂದ ಹಿಮವು ಪ್ರವಾಹರೂಪವಾಗಿ ಹೊರಡುತ್ತದೆ. ಹೇಮಂತಋತುವಿನಲ್ಲಿ ಹೆಚ್ಚಾಗಿ ಹಿಮ ಬರುವುದಕ್ಕೆ ಇದೇ ಮುಖ್ಯ ಕಾರಣ. ವೃದ್ಧಿಕ್ಷಯಗಳಿಲ್ಲದ ಎಲೈ! ದೊರೆಯೇ, ಧಾರ್ಮಿಕನಾದ ನಿನಗೆ ಈ ವಡವೋತ್ಪತ್ತಿಯ ಕಥೆಯನ್ನು ಹೇಳಿರುತ್ತೇನೆ.

೨೭. ಎಲೈ! ವಜ್ರ ಭೂಪತಿಯೇ, ಈ ರೀತಿ ಬಡಬಾಗ್ನಿಯ ಉತ್ಪತ್ತಿಯ ಚರಿತ್ರೆಯನ್ನು ಕೇಳಿದೆಯಷ್ಟೆ? ಯಾರು ಈ ಪ್ರಿಯವಾದ ಆಖ್ಯಾನವನ್ನು ಕೇಳು

ಶ್ರುತ್ವಾಪಿ ಯಾಂ ಮುಂಚತಿ ಮೋಹಜಾಲಂ
ಸಂಸಾರ ಜಾತೇಶ್ಚ ಯಥಾ ಪ್ರಬುದ್ಧಃ　　　॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಬಡಬಾಗ್ನ್ಯುತ್ಪತ್ತಿರ್ನಾಮ
ದ್ವಾತ್ರಿಂಶತ್ತಮೋಽಧ್ಯಾಯಃ



---

ತ್ತಾರೋ ಅಂಥವರು ಸಂಸಾರ ತಾಪತ್ರಯದಿಂದುತ್ಪನ್ನವಾದ ಅಜ್ಞಾನಪರಂಪರೆಯನ್ನು ಹೋಗಲಾಡಿಸಿಕೊಂಡು ಪರಮಪದವನ್ನಡರುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಬಡಬಾಗ್ನ್ಯುತ್ಪತ್ತಿಯೆಂಬ ಹೆಸರಿನ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ತ್ರಯಸ್ತ್ರಿಂಶತ್ತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

**ಔರ್ವಸ್ಯ ಭಾರ್ಯಾ ಧರ್ಮಜ್ಞಾ ನಾಮ್ನಾ ಸತ್ಯವತೀ ಶುಭಾ ।**
**ವನೇ ಪರ್ಯಚರದ್ಭಕ್ತ್ಯಾ ಗಾಧಿಜಾ ಭೃಗುನಂದನಂ ॥ ೧ ॥**
**ತಸ್ಯಾಃ ಪರಮಯಾ ಭಕ್ತ್ಯಾ ಭರ್ತಾ ತೋಷಮುಪಾಗತಃ ।**
**ಉವಾಚ ತಾಂ ವರಾರೋಹಾಂ ಋಚೀಕೋ ಭೃಗುನಂದನಃ ॥ ೨ ॥**

॥ ಋಚೀಕ ಉವಾಚ ॥

**ವರಂ ವರಯ ಸುಶ್ರೋಣಿ ಯತ್ತೇ ಮನಸಿ ವರ್ತತೇ ।**
**ತೋಷಿತೋಽಹಂ ತ್ವಯಾ ಭದ್ರೇ ವನೇ ಶುಶ್ರೂಷಯಾ ದದೇ ॥ ೩ ॥**

---

### ಮೂವತ್ತಮೂರನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳುತ್ತಾನೆ ;— ಸತ್ಯವತಿಯೆಂಬ ಹೆಸರಿನ ಗಾಧಿ ಮಹಾರಾಜನ ಮಗಳು, ಮಹಾ ಧರ್ಮಾತ್ಮಳೂ ಪತಿವ್ರತೆಯೂ ಆಗಿದ್ದಳು. ಆಕೆಯು ಭೃಗುಪುತ್ರನಾದ ಔರ್ವನಿಗೆ ಧರ್ಮಪತ್ನಿಯಾಗಿದ್ದುಕೊಂಡು ಕಾಡಿನಲ್ಲಿ ತಪಸ್ಸು ಮಾಡುತ್ತಿದ್ದ ಗಂಡನ ಸೇವೆಯನ್ನು ಮಾಡುತ್ತಿದ್ದಳು.

೨. ಆಕೆಯ ಸೇವೆಗೆ ಮೆಚ್ಚಿ ಗಂಡನಾದ ಋಚೀಕನು ಆ ಮಹಾಪತಿವ್ರತೆ ಯನ್ನು ಕುರಿತು ಇಂತೆಂದನು.

೩. ಋಚೀಕಋಷಿಯು ಹೇಳಿದನು—ಕಾಡಿನಲ್ಲಿ ನೀನು ಬೇಸರವಿಲ್ಲದೆ ನನ್ನ ಸೇವೆಯನ್ನು ಮಾಡಿ ಇರುತ್ತೀಯೆ. ನನಗೆ ಇದರಿಂದ ಪರಮ ಸಂತೋಷವಾಗಿದೆ. ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳಿಕೋ ; ಕೊಡುತ್ತೇನೆಂದು ಹೇಳಿದನು.

॥ ಸತ್ಯವತ್ಯುವಾಚ ॥

ಮಾತುಃ ಪ್ರಯಚ್ಛ ಮೇ ಪುತ್ರಂ ಭಗವನ್ ವೀರ್ಯವತ್ತರಂ ।
ಪುತ್ರಂ ಮಮ ಚ ಧರ್ಮಜ್ಞಂ ಯುತಂ ಬ್ರಾಹ್ಮಣ ತೇಜಸಾ ॥ ೪ ॥

॥ ಋಚೀಕ ಉವಾಚ ॥

ಚರುದ್ವಯಂ ಕರಿಷ್ಯಾಮಿ ಮಾತುರರ್ಥೇ ತಥಾ ತವ ।
ಯಸ್ಯ ಸಂಪ್ರಾಶಸಾತ್ಪುತ್ರಂ ತ್ವಂ ಚೈವ ಜನಯಿಷ್ಯಸಿ ॥ ೫ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ತದಾ ಚಕ್ರೇ ಋಚೀಕಸ್ತು ಚರುದ್ವಯಂ ।
ಏಕಸ್ಮಿನ್ಸಕಲಂ ಕ್ಷಾತ್ರಂ ತೇಜಶ್ಚಕ್ರೇ ಸ ವೈಷ್ಣವಂ ॥ ೬ ॥

ಶ್ವಶ್ರ್ವರ್ಥೇ ತಂ ಚರುಂ ಕೃತ್ವಾ ದ್ವಿತೀಯೇ ಸ ನ್ಯವೇಶಯತ್ ।
ಬ್ರಾಹ್ಮಂ ರೌದ್ರಂ ಚ ಯತ್ತೇಜಃ ಪತ್ನ್ಯರ್ಥೇ ಕೃತವಾನ್ಚರುಂ ॥ ೭ ॥

---

೪. ಸತ್ಯವತಿಯು ಹೇಳುತ್ತಾಳೆ—ಎಲೈ ಭಗವಂತನೇ, ನನ್ನ ತಾಯಿಗೆ ಮಹಾಪರಾಕ್ರಮಶಾಲಿಯಾದ ಒಬ್ಬ ಮಗನು ಹುಟ್ಟುವಂತೆಯೂ ನನಗೆ ಧರ್ಮಜ್ಞನೂ ಬ್ರಹ್ಮತೇಜೋವಿಶಿಷ್ಟನೂ ಆದ ಮಗನಾಗುವಂತೆಯೂ ಅನುಗ್ರಹಿಸು.

೫. ಋಚೀಕಋಷಿಯು ಹೇಳುತ್ತಾನೆ—ನಾನು ನಿನಗೂ ನಿನ್ನ ತಾಯಿಗೂ ಎರಡು ಚರು (ಅನ್ನ)ವನ್ನು ಕೊಡುತ್ತೇನೆ. ಆ ಅನ್ನವನ್ನು ನಿನ್ನ ತಾಯಿಗೆ ಒಂದು ಭಾಗವನ್ನು ಕೊಡು. ನೀನೊಂದನ್ನು ತಿನ್ನು. ಇಬ್ಬರಿಗೂ ಗಂಡುಮಕ್ಕಳಾಗುತ್ತಾರೆ.

೬. ಮಾರ್ಕಂಡೇಯನು ಹೇಳಿದನು—ಹೀಗೆ ಹೇಳಿ ಆ ಋಚೀಕಮಹರ್ಷಿಯು ಎರಡು ಅನ್ನವನ್ನು ಮಾಡಿದನು. ಒಂದು ಅನ್ನದಲ್ಲಿ ವೈಷ್ಣವತೇಜಸ್ಸಿನಿಂದೊಡಗೂಡಿದ ಕ್ಷಾತ್ರಜೀವವನ್ನು ಆವಾಹನೆಮಾಡಿದನು.

೭. ಅಂತಹ ಕ್ಷಾತ್ರತೇಜೋವಿಶಿಷ್ಟ ಚರುವನ್ನು ತನ್ನ ಅತ್ತೆಗೋಸ್ಕರ ಸಿದ್ಧಪಡಿಸಿದ ಬಳಿಕ ಋಚೀಕನು ತನ್ನ ಹೆಂಡತಿಗಾಗಿ ಮತ್ತೊಂದು ಚರುವನ್ನು ಸಿದ್ಧಮಾಡಿದನು. ಆ ಚರುವಿನಲ್ಲಿ ರೌದ್ರವಾದ ಬ್ರಾಹ್ಮಣ ತೇಜಸ್ಸನ್ನು ಆವಾಹಿಸಿದನು.

॥ ಋಚೀಕ ಉವಾಚ ॥

ಅಯಂ ಪ್ರಾಶ್ಯಸ್ತ್ವಯಾ ಭದ್ರೇ ತ್ವಯಂ ಮಾತ್ರಾ ಚರುಸ್ತವ ।
ಅಶ್ವತ್ಥಾಲಿಂಗನಂ ಕಾರ್ಯಂ ಮಾತ್ರಾ ತತ್ರ ತದಾ ಶುಭೇ ॥ ೮ ॥

ತಥೈವೋದುಂಬರಸ್ಯಾಪಿ ತ್ವಯಾ ರಾಜೀವಲೋಚನೆ ॥ ೯ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ತತೋ ಗತ್ವಾ ಮಾತ್ರೇ ಸರ್ವಂ ನ್ಯವೇದಯತ್ ॥ ೧೦ ॥

ತತಸ್ತಾಮಬ್ರವೀನ್ಮಾತಾ ಗಾಧೇಃ ಪತ್ನೀ ಯಶಸ್ವಿನೀ ।
ಧ್ರುವಂ ಭಗವತಾ ಪುತ್ರಸ್ತವ ಪುತ್ರಚಿಕೀರ್ಷಯಾ ॥ ೧೧ ॥

ಶ್ರೇಷ್ಠೇನ ತೇಜಸಾ ಯುಕ್ತಶ್ಚರುರೇಷ ಕೃತಶ್ಶುಭೇ ।
ತಸ್ಮಾಚ್ಚರುವಿಪರ್ಯಾಸಂ ಮದರ್ಥೇ ಕುರು ಮಾಚಿರಂ ॥ ೧೨ ॥

---

೮. ಋಚೀಕನು ಹೆಂಡತಿಯೊಡನೆ ಹೇಳಿದನು—ಎಲೌ ಮಂಗಳಾಂಗಿಯೇ, ತೆಗೆದುಕೋ. ಈ ಅನ್ನವನ್ನು, ಇದನ್ನು ನಿನ್ನ ತಾಯಿಗೆ ಕೊಡು. ಆಮೇಲೆ ಇನ್ನೊಂದು ಬೇರೆ ಅನ್ನವನ್ನು ನೀನು ತಿನ್ನು. ನಿನ್ನ ತಾಯಿಯು ತನ್ನ ಪಾಲಿನ ಅನ್ನವನ್ನು ತಿಂದಮೇಲೆ ಅರಳೀಮರವನ್ನು ಆಲಿಂಗನೆಮಾಡಿಕೊಳ್ಳಲಿ.

೯. ಅದರಂತೆ ನಿನಗೆ ಬೇರೆಯಾಗಿ ಕೊಟ್ಟಿರುವ ಅನ್ನವನ್ನು ನೀನು ತಿಂದು ಅತ್ತೀಮರವನ್ನು ಆಲಂಗಿಸಿಕೋ (ತಬ್ಬಿಕೋ).

೧೦. ಮಾರ್ಕಂಡೇಯನು ಹೇಳಿದನು—ಈ ರೀತಿ ಗಂಡನು ಹೇಳಿದ ಮಾತನ್ನು ಕೇಳಿ ಸತ್ಯವತಿಯು ತನ್ನ ತಾಯಿಯ ಸಮೀಪಕ್ಕೆ ಹೋಗಿ ನಡೆದ ವೃತ್ತಾಂತವನ್ನೆಲ್ಲಾ ತಿಳಿಸಿದಳು.

೧೧-೧೨. ಗಾಧಿಪತ್ನಿಯು ಆ ವಿಚಾರವನ್ನು ಕೇಳಿದೊಡನೆ ಮಗಳಿಗೆ ಹೇಳಿದುದೇನೆಂದರೆ:—ನಿನ್ನ ಹೊಟ್ಟೆಯಲ್ಲಿ ಒಳ್ಳೇ ಮಗನು ಮಹಾ ತೇಜಸ್ವಿಯಾಗಿ ಹುಟ್ಟಲೆಂಬ ಅಭಿಪ್ರಾಯದಿಂದ ನಿನಗೆ ಈ ಅನ್ನವನ್ನು ಕೊಟ್ಟಿರುತ್ತಾನೆ. ಆದ್ದರಿಂದ ಈಗ ನೀನು ನಿನ್ನ ಪಾಲನ್ನು ನನಗೆ ಕೊಟ್ಟುಬಿಡು. ನಾವಿಬ್ಬರೂ ಇದನ್ನು ಬದಲಾಯಿಸಿಬಿಡೋಣ.

**ಆಲಿಂಗನೇ ವಿಪರ್ಯಾಸಂ ದ್ರುಮಯೋಃ ಕ್ರಿಯತಾಂ ತಥಾ ।**
**ಸಾ ಮಾತುರ್ವಚನಂ ಸರ್ವಂ ಚಕ್ರೇ ಗೌರವಯಂತ್ರಿತಾ ॥ ೧೩ ॥**

**ಸಗರ್ಭಾ ಸ ಗತೇ ಕಾಲೇ ಭರ್ತಾ ವಚನಮಬ್ರವೀತ್ ॥ ೧೪ ॥**

|| ಋಚೀಕ ಉವಾಚ ||

**ಧ್ರುವಂ ಚರುವಿಪರ್ಯಾಸೋ ದ್ರುಮಯೋಶ್ಚ ತ್ವಯಾ ಕೃತಃ ।**
**ಯೇನ ತ್ವಮುಸಿತಾಪಾಂಗಿ ಯುಕ್ತಾ ಕ್ಷತ್ರಿಯತೇಜಸಾ ॥ ೧೫ ॥**

**ಬ್ರಾಹ್ಮೇಣ ತೇಜಸಾ ಯುಕ್ತಂ ಕೃತವಾನಸ್ಮಿ ತೇ ಚರುಂ ।**
**ಮಾತುಸ್ತೇ ಚಾರು ಸರ್ವಾಂಗಿ ತ್ವಂಯಾ ಕ್ಷತ್ರಿಯತೇಜಸಾ ॥ ೧೬ ॥**

**ಕೃತಂ ಚರುವಿಪರ್ಯಾಸಂ ಸಾ ವಿಪ್ರಂ ಜನಯಿಷ್ಯತಿ ।**
**ಕ್ಷತ್ರಧರ್ಮರತಂ ಪುತ್ರಂ ವಿಪ್ರಂ ತ್ವಂ ಜನಯಿಷ್ಯಸಿ ॥ ೧೭ ॥**

---

೧೩. ಅದೇ ರೀತಿ ಆಲಿಂಗನ ಮಾಡಿಕೊಳ್ಳುವುದರಲ್ಲಿಯೂ ವೃಕ್ಷವ್ಯತ್ಯಾಸವನ್ನು ಮಾಡೋಣ ಹೀಗೆಂದು ಹೇಳಿದ ತಾಯಿಯ ಮಾತಿಗೆ ಒಪ್ಪಿಕೊಂಡು ಮಾತೃಗೌರವದಿಂದ ಆ ಸತ್ಯವತಿಯು ಹಾಗೆಯೇ ಮಾಡಿಬಿಟ್ಟಳು.

೧೪. ಈ ರೀತಿ ಕೆಲವು ದಿವಸಗಳು ಕಳೆದ ಬಳಿಕ ಆ ತಾಯಿಮಕ್ಕಳೀರ್ವರೂ ಗರ್ಭಿಣಿಯರಾದರು. ಆಗ ಅವರನ್ನು ಕುರಿತು ಋಚೀಕನು ಹೇಳಿದನು.

೧೫-೧೭. ಋಚೀಕನು ಹೆಂಡತಿಯನ್ನು ಕುರಿತು ಹೇಳಿದನು— ಜ್ಞಾನದೃಷ್ಟಿಯಿಂದ ನೋಡಿದ ಆ ಮಹರ್ಷಿಯು ಹೆಂಡತಿಯನ್ನು ಕುರಿತು, ನೀನು ನಾನು ಹೇಳಿದಂತೆ ಚರುವನ್ನು ತಿಂದಂತೆ ತೋರುವುದಿಲ್ಲ. ನಿಜವಾಗಿ ನೀನು ಚರುವನ್ನು ಬದಲಾಯಿಸಿಬಿಟ್ಟಿದ್ದೀಯೆ. ಅದರಂತೆ ವೃಕ್ಷಾಲಿಂಗನವನ್ನೂ ಹೆಚ್ಚುಕಡಿಮೆಮಾಡಿಕೊಂಡು ಇರುತ್ತೀಯೆ. ಈ ವಿಪರ್ಯಾಸದಿಂದ, ನೀನು ಬ್ರಾಹ್ಮಣಧರ್ಮವನ್ನು ಬಿಟ್ಟು ಕ್ಷತ್ರಿಯಧರ್ಮದಿಂದ ಕೂಡಿದ ಮಗನನ್ನು ಪ್ರಸವಿಸುತ್ತೀ. ನಿನ್ನ ಲಕ್ಷಣವನ್ನು ನೋಡಿದರೆ ಕ್ಷತ್ರಿಯತೇಜಸ್ಸಿನಿಂದಿರುವಂತೆ ತೋರಿಬರುತ್ತಲಿದೆ. ಈ ವಿಪರ್ಯಾಸದಿಂದಲೇ ನಿನ್ನ ತಾಯಿಯೂ ಸಹ ಬ್ರಾಹ್ಮಣಧರ್ಮವನ್ನನುಸರಿಸುವ ಮಗನನ್ನು ಪ್ರಸವಿಸುತ್ತಾಳೆ.

॥ ಸತ್ಯವತ್ಯುವಾಚ ॥

ಮಾತುರ್ವಂಶಾತ್ಕೃತಮಿದಂ ಭಗವಾನ್ ಕ್ಷಂತುಮರ್ಹಸಿ ।
ಕ್ಷತ್ರಧರ್ಮರತಃ ಪುತ್ರೋ ನ ಮೇ ಭವಿತು ಮರ್ಹಸಿ ॥ ೧೮ ॥

॥ ಋಚೀಕ ಉವಾಚ ॥

ಏವಮಸ್ತು ನ ತೇ ಪುತ್ರಃ ಕ್ಷತ್ರಧರ್ಮಾ ಭವಿಷ್ಯತಿ ।
ಪೌತ್ರಸ್ತ್ವವಶ್ಯಂ ಭವಿತಾ ಭಾವ್ಯರ್ಥವಿಧಿಚೋದಿತಃ ॥ ೧೯ ॥

॥ ಸತ್ಯವತ್ಯುವಾಚ ॥

ಸರ್ವೇಶ್ವರ ತ್ವಂ ಭಗವಾನ್ ಕಿಮರ್ಥಂ
ಪೌತ್ರಶ್ಚ ಮೇ ಕ್ಷತ್ರಿಯಭಾವಮುಗ್ರಂ ।

---

೧೮. ಸತ್ಯವತಿಯು ಹೇಳುತ್ತಾಳೆ—ಸ್ವಾಮಿ, ನನ್ನನ್ನು ಕ್ಷಮಿಸಬೇಕು. ನೀವು ಹೇಳಿದುದು ನಿಜ. ನನ್ನ ತಾಯಿಯು ಈ ಅಭಿಪ್ರಾಯಪಟ್ಟೇ ನನಗೆ ತನ್ನ ಪಾಲಿನ ಚರುವನ್ನು ಕೊಟ್ಟು ನನ್ನಲ್ಲಿದ್ದುದನ್ನು ತಾನು ತೆಗೆದುಕೊಂಡಳು. ನನಗೆ ಕ್ಷತ್ರಿಯಧರ್ಮದಲ್ಲಿ ಆಸಕ್ತನಾದ ಮಗನು ಹುಟ್ಟದಿರುವಂತೆ ಅನುಗ್ರಹಿಸಿರಿ.

೧೯. ಋಚೀಕನು ಹೇಳಿದನು—ಹಾಗೇ ಆಗಲಿ. ನಿನಗೆ ಕ್ಷತ್ರಿಯಧರ್ಮಾನುಸಾರಿಯಾದ ಮಗನು ಈಗ ಆಗದೇ ಹೋದರೂ ಮುಂದಿನ ವಿಧಿಯನ್ನನುಸರಿಸಿ ನಿನಗೆ ಕ್ಷತ್ರಿಯಧರ್ಮದಿಂದೊಡಗೂಡಿದ ಮೊಮ್ಮಗನು ಹುಟ್ಟಿಯೇ ಹುಟ್ಟುವನು.

೨೦. ಸತ್ಯವತಿಯು ಹೇಳಿದಳು—ಸ್ವಾಮಿ ನೀವು ನನ್ನ ಮೊಮ್ಮಗನಿಗೆ ಉಗ್ರವಾದ ಕ್ಷಾತ್ರಿಯಭಾವವನ್ನು ಏಕೆ ಕೊಡುತ್ತಿ! ಸೋದರಮಾವನೊಡನೆ ಅವ

ನಿವರ್ತಿತುಂ ನೇಚ್ಛಸಿ ಮಾತುಲೇನ
ವದಸ್ವ ತನ್ಮೇ ಯದಿ ತೇ ನ ಗುಹ್ಯಂ || ೨೦ ||

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಚರುವಿಪರ್ಯಾಸೋ ನಾಮ ತ್ರಯಸ್ತ್ರಿಂಶತ್ತಮೋಧ್ಯಾಯಃ



ನಿರಲು ನೀವು ಇಚ್ಛಿಸುವುದಿಲ್ಲವೆ? ಧರ್ಮವನ್ನು ಹಿಂತಿರುಗಿಸತಕ್ಕ ಈ ವಿಷಯವನ್ನು ನೀವು ರಹಸ್ಯವಾದುದಾದರೂ ನನಗೆ ತಿಳಿಸಬೇಕು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಚರುವಿಪರ್ಯಾಸವೆಂಬ ಹೆಸರಿನ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
## ಚತುಸ್ತ್ರಿಂಶತ್ತಮೋಽಧ್ಯಾಯಃ

---

॥ ಋಚೀಕ ಉವಾಚ ॥

**ಬ್ರಹ್ಮಣೋಽತ್ರಿಸ್ಸುತಸ್ಸೌಮ್ಯಃ ಸುತಸ್ತಸ್ಯಾಪಿ ಚಂದ್ರಮಾಃ ।**
**ಸೋಮಸ್ಯ ತು ಬುಧಃ ಪುತ್ರೋ ಬುಧಪುತ್ರಃ ಪುರೂರವಾಃ ॥ ೧ ॥**

**ಶ್ರುತಾಯುಸ್ತನಯಸ್ತಸ್ಯ ಪುತ್ರಸ್ತಸ್ಯಾಪಿ ನಗ್ನಜಿತ್ ।**
**ತಸ್ಯಾಪಿ ಕಾಂಚನಃ ಪುತ್ರಃ ಸುಹೋತ್ರಸ್ತಸ್ಯ ಚಾತ್ಮಜಃ ॥ ೨ ॥**

**ತಸ್ಯ ಜಹ್ನುಃ ಸ್ಮೃತಶ್ಶ್ರೀಮಾನ್ ಯೇನ ಗಂಗಾ ತು ಜಾಹ್ನವೀ ।**
**ಸುವ್ರತಸ್ತನಯಸ್ತಸ್ಯ ಚಾಲರ್ಕಸ್ತಸ್ಯ ಚಾತ್ಮಜಃ ॥ ೩ ॥**

**ತಸ್ಯ ಪುತ್ರೋ ಬಲಾಕಶ್ಚ ಕುಶಿಕಸ್ತಸ್ಯ ಚಾತ್ಮಜಃ ।**
**ಮಹೋದಯೇ ಪುರವರೇ ಸ ತು ನಿತ್ಯಂ ಕೃತಾಲಯಃ ॥ ೪ ॥**

---

## ಮೂವತ್ತನಾಲ್ಕನೆಯ ಅಧ್ಯಾಯವು

೧-೪. ಋಚೀಕನು ಹೇಳುತ್ತಾನೆ– ಬ್ರಹ್ಮನ ಮಗ ಸೌಮ್ಯನಾದ ಅತ್ರಿಋಷಿ, ಅತ್ರಿಯ ಮಗ ಚಂದ್ರ, ಚಂದ್ರನ ಮಗ ಬುಧ, ಬುಧನ ಮಗ ಪುರೂರವಸ್ಸು, ಅವನ ಮಗ ಶ್ರುತಾಯು, ಅವನ ಮಗ ನಗ್ನಜಿತ್, ಅವನ ಮಗ ಕಾಂಚನ, ಕಾಂಚನನ ಮಗ ಸುಹೋತ್ರ, ಅವನ ಮಗ ಜಹ್ನು. ಈತನೇ ಗಂಗೆಯನ್ನು ಆಪೋಶನವಾಗಿ ಕುಡಿದು ಕಿವಿಯಲ್ಲಿ ಬಿಟ್ಟ ಪುಣ್ಯಾತ್ಮ. ಜಹ್ನುಋಷಿಯ ಮಗ ಸುವ್ರತ, ಅವನ ಮಗ ಅಳರ್ಕ, ಅಳರ್ಕನ ಮಗ ಬಲಾಕ, ಅವನ ಮಗನೇ ಕುಶಿಕ. ಈ ಕುಶಿಕನು ಮಹೋದಯ ಪುರದಲ್ಲಿ ವಾಸವಾಗಿದ್ದನು. ಈ ಕುಶಿಕನಿಂದಾಚೆಗೆ ವರ್ಣಸಂಕರವಾಯಿತು.

ಏತಸ್ಮಿನ್ನೇವ ಕಾಲೇ ತು ಶ್ವಶುರಶ್ಚ್ಯವನಸ್ತಥಾ ।
ಸ್ವವಂಶಸಂಕರಂ ಬುಧ್ವಾ ಕುಶಿಕೇಭ್ಯೋ ಮಹಾಯಶಾಃ ॥ ೫ ॥

ಕೌಶಿಕಾನಾಂ ಸಮುಚ್ಛಿತ್ತ್ಯೈ ಕುಶಿಕಂ ನೃಪತಿಂ ಯಯೌ ।
ಪೂಜಿತಃ ಕುಶಿಕೇನಾಪಿ ಕುಶಿಕಂ ವಾಕ್ಯಮಬ್ರವೀತ್ ॥ ೬ ॥

ರಾಜನ್ ವಕ್ಷ್ಯಾಮಿ ಕಾರ್ಯಂ ತೇ ಯದಿ ಶುಶ್ರೂಷಸೇಽನಘ ।
ಸ ಭಾರ್ಯೇಣ ಚ ಕರ್ತವ್ಯಂ ರಾಜನ್ ಶುಶ್ರೂಷಣಂ ತ್ವಯಾ ॥ ೭ ॥

॥ ಕುಶಿಕ ಉವಾಚ ॥

ಸ್ವಾಮೇ ವೇದಂ ತವ ಗೃಹಂ ಯಥೇಷ್ಟಂ ವಸ ಭಾರ್ಗವ ।
ಶಕ್ತಿತಸ್ತವ ಶುಶ್ರೂಷಾಂ ಕರಿಷ್ಯೇ ಭಾರ್ಯಯಾ ಸಹ ॥ ೮ ॥

॥ ಋಚೀಕ ಉವಾಚ ॥

ಗೃಹೋಷಿತಂ ತಂ ಚ್ಯವನಂ ಶುಶ್ರೂಷುರನಹಂಕೃತಃ ।
ಪೂಜಯಾಮಾಸ ಸತತಂ ಸರ್ವಕಾಮಸಮೃದ್ಧಿಭಿಃ ॥ ೯ ॥

---

ಈ ಕುಶಿಕರಾಜರ ವಿಚ್ಛಿತ್ತಿಯ ಜತೆಯಲ್ಲಿ ನಿನ್ನ ಮಾವನಾದ ಚ್ಯವನನು ತನ್ನ ವಂಶವೂ ಸಂಕರವಾಗುವುದನ್ನು ತಿಳಿದು, ಕುಶಿಕರಾಜನ ಬಳಿಗೆ ಪ್ರಯಾಣಮಾಡಿದನು. ಅಲ್ಲಿ ಕುಶಿಕನಿಂದ ಯಥಾವಿಧಿಯಾಗಿ ಪೂಜೆಯನ್ನು ಕೈಗೊಂಡು ಅವನೊಡನೆ ಈ ಮಾತನ್ನು ಹೇಳಿದನು.

೭. ಎಲೈ ! ರಾಜನೇ, ನಿನಗೊಂದು ಕೆಲಸವನ್ನು ಹೇಳುತ್ತೇನೆ. ನೀನು ನನ್ನನ್ನು ಶುಶ್ರೂಷೆಮಾಡುವೆಯಾದರೆ, ನಿನ್ನ ಹೆಂಡತಿಯೊಡನೆ ಜತೆಯಾಗಿ ಮಾಡು.

೮. ಸ್ವಾಮಿ ! ಇದು ತಮ್ಮ ಮನೆಯಾಗಿದೆ. ನಿಮ್ಮ ಇಚ್ಛೆಬಂದಂತೆ ಇಲ್ಲಿ ವಾಸವಾಗಿರಬಹುದು. ನಾನು ನನ್ನ ಶಕ್ತಿಮೀರಿ ನನ್ನ ಹೆಂಡತಿಯೊಡನೆ ನಿಮ್ಮ ಸೇವೆ ಮಾಡಲು ಸಿದ್ಧನಾಗಿದೇನೆ,

೯. ಈ ರೀತಿ ತನ್ನ ಮನೆಯಲ್ಲಿ ವಾಸಮಾಡುತ್ತಿದ್ದ ಆ ಚ್ಯವನಋಷಿಯನ್ನು ಕುಶಿಕನು ಸ್ವಲ್ಪವೂ ಅಹಂಕಾರಪಡದೆ ಅವನ ಇಷ್ಟಾನುಸಾರ ಅವನು ಕೇಳಿದುದನ್ನು ನಡೆಯಿಸಿಕೊಡುತ್ತ ಸೇವೆಮಾಡುತ್ತಿದ್ದನು.

ಬಹುಸಂಖ್ಯಾನ್ ದಿನಗಣಾನ್ ಚ್ಯವನೋ ನಾವಬುಧ್ಯತಿ ।
ನಿರಾಹಾರಸ್ಸಭಾರ್ಯಸ್ತಂ ಪರ್ಯುಪಾಸ್ತೇ ಮಹೀಪತಿಃ ॥ ೧೦ ॥

ಅಕಾಲೇ ಪ್ರಾಶಯತ್ಯನ್ನಂ ಕದಾಚಿದಪಿ ದುರ್ಲಭಂ ।
ಕೃತಮಿತ್ಯೇವ ತತ್ಪ್ರಾಜಾ ನಿವೇದಯತಿ ಸತ್ವರಂ ॥ ೧೧ ॥

ಕದಾಚಿದ್ಬಹು ಭುಂಕ್ತೇಽನ್ನಂ ನ ಭುಂಕ್ತೇ ದಿವಸಾನ್ ಬಹೂನ್ ।
ಧನೇನ ಚ ತದೀಯೇನ ತರ್ಪಯಾಮಾಸ ವೈ ದ್ವಿಜಾನ್ ॥ ೧೨ ॥

ಕದಾಚಿದ್ದೀಪಯತ್ಯೇವ ವಹ್ನಿಂ ತಾತ ಗೃಹೋದ್ಭವಂ ।
ಕದಾಚಿಚ್ಚ ರಥೇ ಯುಕ್ತಂ ಸಭಾರ್ಯೋ ರಾಜಪುಂಗವಂ ॥ ೧೩ ॥

ರಾಜಮಾರ್ಗೇ ಪ್ರತೋದೇನ ತುದನ್ಯತಿ ಯಥೇಚ್ಛಯಾ ।
ತಸ್ಯಾಸೌ ಹಿತಮೇವೇದಂ ಕುರ್ವಾಣಾ ಮನಸಾ ಗಿರಾ ॥ ೧೪ ॥

---

೧೦. ಹೀಗೆ ಎಷ್ಟೋ ದಿನಗಳು ಕಳೆದುಹೋದಾಗ್ಯೂ ಸುಖಸಮೃದ್ಧಿಯಿಂದಿದ್ದ ಆ ಚ್ಯವನನು ಇದೊಂದನ್ನೂ ತಿಳಿಯಲೇ ಇಲ್ಲ. ಧೊರೆಯಾದರೋ ಆಹಾರವನ್ನು ಸಹ ತ್ಯಾಗಮಾಡಿ ಚ್ಯವನನ ಸೇವೆಯನ್ನು ಮಾಡುತ್ತಿದ್ದನು.

೧೧. ಬಹು ದುರ್ಲಭವಾದ ಮೃಷ್ಟಾನ್ನವನ್ನು ಚ್ಯವನನು ಅಪೇಕ್ಷಿಸುತ್ತಿದ್ದನು. ಅವನು ಕೇಳಿದಂತೆ ರಾಜನೂ ಮಾಡುತ್ತಿದ್ದನು. ಅದನ್ನು ಆ ಕಾಲದಲ್ಲಿ ಚ್ಯವನನು ತಿನ್ನುತ್ತಿದ್ದನು.

೧೨. ಒಂದೊಂದು ಕಾಲದಲ್ಲಿ ವಿಶೇಷವಾಗಿ ಊಟಮಾಡುವನು. ಬಳಿಕ ಬಹಳ ದಿವಸಗಳ ತನಕ ಊಟಮಾಡುತಲಿರಲಿಲ್ಲ. ಆ ರಾಜನ ಹಣವನ್ನು ವಿಶೇಷವಾಗಿ ವೆಚ್ಚಮಾಡಿಸಿ ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಿದ್ದನು.

೧೩-೧೬. ಒಂದೊಂದು ಬಾರಿ ರಾತ್ರಿಬೆಳಗೂ ದೀಪವನ್ನು ಉರಿಸುತ್ತಿದ್ದನು. ರಥದಮೇಲೆ ಕುಳಿತು ಭಾರ್ಯಾಸಮೇತನಾಗಿ ರಾಜನು ಬೀದಿಯಲ್ಲಿ ಹೊರಟರೆ ಅವನನ್ನು ಸುಮ್ಮಸುಮ್ಮನೆ ಹಿಂಸಿಸುತ್ತಿದ್ದನು. ಕಾಯೇನ ಮನಸಾ ವಾಚಾ ರಾಜನು

**ಸಮಾಚಶತಿ ಯತ್ನೇನ ಭಾರ್ಗವಪ್ರಿಯಕಾಮ್ಯಯಾ ।**
**ಯದಾ ನ ವೃಜಿನಂ ಕಿಂಚಿದ್ದೃಷ್ಟವಾಂಸ್ತಸ್ಯ ಭಾರ್ಗವ ॥ ೧೫ ॥**
**ತದಾ ತಸ್ಯ ವರಂ ಪ್ರಾದಾದ್ವರಂ ಯನ್ಮನಸೇಽಪ್ಸಿತಂ ॥ ೧೬ ॥**

**॥ ಚ್ಯವನ ಉವಾಚ ॥**

**ವರಂ ವರಯ ಭದ್ರಂ ತೇ ಪ್ರಸನ್ನೋಽಹಂ ತವಾನಘ ।**
**ನಿರ್ವ್ಯಾಜಂ ತೇಽನಯಾ ರಾಜರ್ಷೆ ಸೇವಯಾಽನಘಯಾ ಸದಾ ॥ ೧೭ ॥**

**॥ ಕುಶಿಕ ಉವಾಚ ॥**

**ಯದಿ ಮೇ ತ್ವಂ ಪ್ರಸನ್ನೋಽಸಿ ಭೃಗೂಣಾಂ ವಂಶವರ್ಧನ ।**
**ವಂಶೋ ಬ್ರಾಹ್ಮಣತಾಂ ಯಾತು ವರಮೇತದ್ವೃಣೋಮ್ಯಹಂ ॥ ೧೮ ॥**

**॥ ಚ್ಯವನ ಉವಾಚ ॥**

**ಏತದೇವ ಧ್ರುವಂ ಭಾವೀ ಯನ್ಮಾಂ ವರಯಸೇ ನೃಪ ।**
**ಅಸ್ಮದ್ವಂಶಾನುವಂಶಸ್ಯ ಬ್ರಾಹ್ಮಣ್ಯಂ ತೇ ಭವಿಷ್ಯತಿ ॥ ೧೯ ॥**

---

ಚ್ಯವನನಿಗೆ ಹಿತವನ್ನೇ ಮಾಡುತ್ತಿದ್ದನೇ ಹೊರ್ತು ಸ್ವಲ್ಪವೂ ತಪ್ಪು ಮಾಡುತ್ತಿರಲಿಲ್ಲ ಈ ರೀತಿ ಬಹುದಿವಸಗಳ ತನಕ ಪರೀಕ್ಷಿಸಿ ಕುಶಿಕನಲ್ಲಿ ಯಾವ ತಪ್ಪನ್ನೂ ಕಾಣದೆ ಚ್ಯವನನು ಅವನ ಸೇವೆಗೆ ತೃಪ್ತನಾಗಿ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೋ, ಕೊಡುವೆನೆಂದು ಹೇಳಿದನು.

೧೭. ಎಲೈ ! ಕುಶಿಕನೇ, ವರವನ್ನು ಕೇಳಿಕೋ, ನಿನ್ನ ಸೇವೆಗೆ ತೃಪ್ತನಾಗಿದ್ದೇನೆ.

೧೮. ಸ್ವಾಮಿ ! ನೀವು ನಿಜವಾಗಿಯೂ ನನ್ನ ಸೇವೆಗೆ ಮೆಚ್ಚಿದ್ದರೆ ಮುಂದೆ ನಮ್ಮ ವಂಶವು ಬ್ರಾಹ್ಮಣತ್ವವನ್ನು ಹೊಂದುವಂತೆ (ಕ್ಷತ್ರಿಯ ಜಾತಿಯು ಬ್ರಾಹ್ಮಣ ಜಾತಿಯಾಗುವಂತೆ) ವರವನ್ನು ಕೊಡಿ.

೧೯. ಚ್ಯವನ ಋಷಿಯು ಹೇಳಿದನು – ನಿನ್ನ ಮಾತಿನಂತೆಯೇ ಆಗಲಿ. ಮುಂದೆ ನೀನು ವರ ಕೇಳಿದಂತೆ ಆಗಿಯೇ ಆಗುವುದು. ನಮ್ಮ ವಂಶದೊಡನೆ ಸಂಬಂಧ ಬೆಳೆದು ನಿಮ್ಮ ವಂಶಕ್ಕೆ ಬ್ರಾಹ್ಮಣ್ಯವುಂಟಾಗುತ್ತದೆ.

ತವ ವಂಶಕೃತೋಽಸ್ಮಾಕಂ ಕ್ಷತ್ರಧರ್ಮೋ ದ್ವಿಜೋತ್ತಮಃ ।
ಭವಿಷ್ಯತಿ ನರೇಂದ್ರೇಂದ್ರ ಚೈತತ್ಸುವಿದಿತಂ ಮಮ ॥ ೨೦ ॥

ಏತತ್ ಜ್ಞಾತ್ವಾ ಸಮುತ್ಸೇಧಂ ಚಿಕೀರ್ಷುಃ ಸ್ವಕುಲಸ್ಯ ತೇ ।
ವಿಕಾರೈಃ ಕ್ರೋಧನಾರ್ಥಂ ತೇ ಗೃಹೇಽಹಮುವಸಂ ಚಿರಂ ॥ ೨೧ ॥

ವಿಕಾರಂ ನ ತತೋ ದೃಷ್ಟಂ ಮಯಾ ಭಾವ್ಯರ್ಥಚೋದಿತಂ ।
ತಸ್ಮಾನ್ಮಾತುಸ್ತ್ವಯಾ ಪ್ರಾಪ್ತಂ ವರಮೇತತ್ಸುದುರ್ಲಭಂ ॥ ೨೨ ॥

ಕುಶಾಸ್ಯನಾಮಾ ಪುತ್ರಸ್ತೇ ಭವಿತಾಽತಿಸ್ವಧಾರ್ಮಿಕಃ ।
ತಸ್ಯಾಪಿ ಭವಿತಾ ಪುತ್ರೋ ಗಾಧಿರಿತ್ಯೇವ ವಿಶ್ರುತಃ ॥ ೨೩ ॥

ವಿಶ್ವಾಮಿತ್ರಸ್ಸುತಸ್ತಸ್ಯ ಬ್ರಾಹ್ಮಣ್ಯಮುಪಲಪ್ಸ್ಯತಿ ।
ಕೃತ್ವಾ ವೈರಂ ವಸಿಷ್ಠೇನ ತಪಸಾ ಮಹತಾ ನೃಪ ॥ ೨೪ ॥

---

೨೦. ನಮಗೆ ನಿಮಗೆ ಸಂಬಂಧಬೆಳೆದು ನಿನ್ನ ವಂಶದಲ್ಲಿ ಕ್ಷಾತ್ರಧರ್ಮದೊಡನೆ ಕೂಡಿದ ಬ್ರಾಹ್ಮಣೋತ್ತಮನೊಬ್ಬನು ಹುಟ್ಟುವನು. ಇದು ನಿಶ್ಚಯವೆಂದು ನಂಬಯ್ಯಾ ! ಕುಶಿಕರಾಜಭೂಪಾಲ !

೨೧. ಎಲೈ ! ಕುಶಿಕನೇ, ಈ ವೃತ್ತಾಂತವನ್ನು ನಾನು ಜ್ಞಾನದೃಷ್ಟಿಯಿಂದ ತಿಳಿದು ನಮ್ಮ ನಿಮ್ಮ ಕುಲದ ಉಚ್ಛೇದಕ್ಕಾಗಿ ನಿನಗೆ ಹೇಗಾದರೂ ಶಾಪಕೊಟ್ಟು ಈ ಕೆಲಸ ಮಾಡಬೇಕೆಂದಿದ್ದೆ. ಆದಕ್ಕಾಗಿಯೇ ನಿನ್ನ ಮನೆಯಲ್ಲಿ ಬಹಳಕಾಲ ವಾಸ ಮಾಡಿದೆನು.

೨೨. ಆದರೆ ನಿನ್ನಲ್ಲಿ ಯಾವ ತಪ್ಪನ್ನೂ ನಾನು ಕಾಣಲಿಲ್ಲ. ನನ್ನಿಂದ ಮುಂದಿನ ಕಾರ್ಯಸಾಧನೆಗೋಸ್ಕರ ಈ ದುರ್ಲಭವಾದ ವರವು ನಿನಗೆ ಕೊಡಲ್ಪಟ್ಟಿದೆ. ಇದು ನಿನ್ನ ತಾಯಿಯಿಂದ ಲಭ್ಯವಾದುದು.

೨೩–೨೪. ನಿನಗೆ ಮುಂದೆ ಕುಶಾಸ್ಯನೆಂಬ ಮಗನು ಹುಟ್ಟುವನು. ಅವನಿಗೆ ಗಾಧಿಯೆಂಬ ಮಗನಾಗುವನು. ಅವನ ಮಗ ವಿಶ್ವಾಮಿತ್ರನೆಂಬುವನು ಬ್ರಾಹ್ಮಣ್ಯ

ಸ್ತ್ರೀಣಾಂ ಚರುವಿಪರ್ಯಾಸಾದ್ವಿಶ್ವಾಮಿತ್ರಸ್ಯ ಸಂಭವಃ ।
ಅಸ್ಮದ್ವಂಶಾನುಭವಿತಾ ನಿರ್ವ್ಯಕ್ತೋ ಭವ ಪಾರ್ಥಿವ ॥ ೨೫ ॥

ಯತ್ತೇ ವಿನಾಶಿತಂ ದಗ್ಧಂ ಭವಿತಾ ತದ್ವಿಶೇಷವತ್ ।
ಭಾರ್ಯಯಾ ಸಹಿತಶ್ಚೈವ ಜರಾಹೀನೋ ಭವಿಷ್ಯಸಿ ॥ ೨೬ ॥

ಏವಮುಕ್ತ್ವಾ ಗತೇ ವಿಪ್ರೇ ರಾಜಾ ಪೂರ್ಣಮನೋರಥಃ ।
ಉವಾಚ ಸುಮುಖೀಂ ಭದ್ರೇ ಜರಾಶೋಕವಿವರ್ಜಿತಾಂ ॥ ೨೭ ॥

ಏತತ್ಸುನೇತ್ರೇ ಚ್ಯವನಸ್ಯ ವಾಕ್ಯಂ
ಕಸ್ಯಾಸ್ತಿ ಶಕ್ತಿರ್ಭುವಿ ಮಾಸವಸ್ಯ ।

---

ವನ್ನು ಸಂಪಾದಿಸುತ್ತಾನೆ. ಅವನು ವಸಿಷ್ಠರೊಡನೆ ವೈರವನ್ನು ಬೆಳೆಯಿಸಿ ಮಹತ್ತರವಾದ ತಪಸ್ಸನ್ನು ಮಾಡಿ ಬ್ರಾಹ್ಮಣನಾಗುತ್ತಾನೆ ಹೆಂಗಸರು (ಸತ್ಯವತಿ ಮತ್ತು ತಾಯಿಯು) ಚರುವನ್ನು ವ್ಯತ್ಯಾಸಮಾಡಿಕೊಂಡದ್ದರಿಂದ ವಿಶ್ವಾಮಿತ್ರನ ಜನನವಾಗುವುದು. ಹಾಗೂ ನಮ್ಮ ವಂಶಾನುವಂಶವೂ ಸಹ ಕ್ಷಾತ್ರಧರ್ಮದಿಂದ ಸೇರಿ ಹೋಗುವುದು. ಎಲೈ ! ಕುಶಿಕನೇ, ನೀನಿನ್ನು ಹೊರಡು.

೨೬–೨೭. ಕುಶಿಕನೇ ! ನಿನ್ನಿಂದ ಭವಿಷ್ಯತ್ಕರ್ಮವು ನಾಶಗೊಳಿಸಲ್ಪಟ್ಟು ದಗ್ಧವಾಯಿತು. ನೀನೂ ನಿನ್ನ ಹೆಂಡತಿಯೂ ಮುಪ್ಪಿಲ್ಲದೆ ಯಾವಾಗಲೂ ಯೌವನಾವಸ್ಥೆಯಲ್ಲಿಯೇ ಇರುವಂತೆ ವರವನ್ನು ಕೊಡುತ್ತೇನೆ. ಹೀಗೆಂದು ಹೇಳಿ ಚ್ಯವನನು ತನ್ನ ಸ್ಥಳಕ್ಕೆ ಪ್ರಯಾಣಮಾಡಿದನು. ರಾಜನೂ ಸಹ ಇಷ್ಟಾರ್ಥವನ್ನೂ ಪಡೆದು ತನಗೂ ತನ್ನ ಹೆಂಡತಿಗೂ ಮುಪ್ಪಿಲ್ಲದೆ ಇದ್ದ ವೃತ್ತಾಂತವನ್ನು ಆಕೆಗೆ ತಿಳಿಸಿದನು.

೨೮. ಎಲೈ ! ಸತ್ಯವತಿಯೇ! ಚ್ಯವನಋಷಿಯ ವಾಕ್ಯವನ್ನು ಸುಳ್ಳು ಮಾಡುವುದಕ್ಕೆ ಭೂಲೋಕದಲ್ಲಿ ಅದಾವನಿಗೆ ಸಾಮರ್ಥ್ಯವಿದ್ದೀತು? ಈ ಕಾರಣದಿಂದಲೇ

ಕರ್ತುಂ ಮೃಷಾ ತೇನ ವರೋರುಮಧ್ಯೇ
ಪೌತ್ರಸ್ತವೋಗ್ರೋ ಭವಿತಾ ನೃಲೋಕೇ ॥ ೨೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಕುಶಿಕವರಪ್ರದಾನಂ ನಾಮ
ಚತುಸ್ತ್ರಿಂಶತ್ತಮೋಧ್ಯಾಯಃ



---

ನಿನಗೆ ಈ ಮನುಷ್ಯಲೋಕದಲ್ಲಿ ಮಹಾ ಪರಾಕ್ರಮಶಾಲಿಯಾದ ಮೊಮ್ಮಗನಾಗುತ್ತಾ ನೆಂದು ತಿಳಿದುಕೋ. ಎಂದು ಋಚೀಕನು ಹೆಂಡತಿಯೊಡನೆ ಹೇಳಿದನು.

ಇಲ್ಲಿಗೆ ಶ್ರೀ ವಿಷ್ಣು ಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಕುಶಿಕವರಪ್ರದಾನವೆಂಬ ಹೆಸರಿನ
ಮೂವತ್ತನಾಲ್ಕನೇ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಪಂಚತ್ರಿಂಶತ್ತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ಸತ್ಯವತೀ ಕಾಲೇ ಪೂರ್ಣೇ ದ್ವಿಜೋತ್ತಮಂ ।
ಜನಯಾಮಾಸ ಧರ್ಮಜ್ಞಂ ಜಮದಗ್ನಿಂ ತಪೋಧನಂ ॥ ೧ ॥

ತತಶ್ಚ ಜನಯಾಮಾಸ ವಾತ್ಸ್ಯಂ ಭೃಗುಕುಲೋದ್ವಹಂ ।
ತತೋಽಷ್ಟನವತಿಂ ಪುತ್ರಾನ್ಗೋತ್ರಕಾರಾನ್ಪೃಥಕ್ ಪೃಥಕ್ ॥ ೨ ॥

ಗಾಧೇರಪಿ ತದಾ ಭಾರ್ಯಾ ಜನಯಾಮಾಸ ಪುತ್ರಕಂ ।
ವಿಶ್ವಾಮಿತ್ರಮಿತಿ ಖ್ಯಾತಂ ಯುತಂ ಬ್ರಾಹ್ಮಣತೇಜಸಾ ॥ ೩ ॥

---

## ಮೂವತ್ತೈದನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳಿದನು– ಈರೀತಿ ಗಂಡನಿಂದ ಹೇಳಲ್ಪಟ್ಟವಳಾಗಿ ಸತ್ಯವತಿಯು ನವಮಾಸಗಳು ಸಂಪೂರ್ಣವಾದೊಡನೆಯೇ ಧರ್ಮಜ್ಞನೂ ತಪೋಧನನೂ ಆದ ಜಮದಗ್ನಿಯೆಂಬ ಬ್ರಾಹ್ಮಣಶ್ರೇಷ್ಠನನ್ನು ಪ್ರಸವಿಸಿದಳು.

೨. ಜಮದಗ್ನಿಯು ಹುಟ್ಟಿದ ಮೇಲೆ ಭೃಗುವಂಶೋತ್ತಮನಾದ ವಾತ್ಸ್ಯನನ್ನೂ ಅವನ ಹಿಂದೆ ತೊಂಭತ್ತೆಂಟು ಮಂದಿ ಗೋತ್ರಕಾರರಾದ ಋಷಿಗಳನ್ನೂ ಬೇರೆ ಬೇರೆಯಾಗಿ ಸತ್ಯವತಿಯು ಹೆತ್ತಳು.

೩. ಗಾಧಿರಾಜನ ಹೆಂಡತಿಯೂ ಸಹ ಅದೇ ಕಾಲದಲ್ಲಿ ಬ್ರಾಹ್ಮಣ ತೇಜೋವಿಶಿಷ್ಟನಾದ ಪ್ರಖ್ಯಾತ ಯಶಸ್ಕನಾದ ವಿಶ್ವಾಮಿತ್ರನನ್ನು ಪಡೆದಳು.

ಜಿತೋ ಯುದ್ಧೇ ವಸಿಷ್ಠೇನ ಮನ್ಯುನಾ ಯಸ್ಸ ಪಾರ್ಥಿವಃ ।
ಬ್ರಾಹ್ಮಣ್ಯಂ ತಪಸಾ ಲೇಭೇ ಧರ್ಮಾತ್ಮಾ ಸಂಶಿತವ್ರತಃ ॥ ೪ ॥

ರಾಜಾ ಪ್ರಸೇನಜಿನ್ನಾಮ ಸುತಾಂ ತಸ್ಯಾಥ ರೇಣುಕಾಂ ।
ಪತ್ನ್ಯರ್ಥೇ ಪ್ರತಿಜಗ್ರಾಹ ಜಮದಗ್ನಿರ್ಮಹಾತಪಾಃ ॥ ೫ ॥

ಸಾ ತಂ ವನಗತಂ ಭಕ್ತ್ಯಾ ನಿತ್ಯಂ ಪರ್ಯಚರದ್ವನೇ ।
ಕದಾಚಿದಥ ಘರ್ಮರ್ತೌ ಮಧ್ಯಂ ಪ್ರಾಪ್ತೇ ದಿವಾಕರೇ ॥ ೬ ॥

ಕ್ರೀಡಾರ್ಥಂ ಪ್ರಾಸ್ಯತಿ ಚಿರಂ ಜಮದಗ್ನಿರ್ಮಹಾತಪಾಃ ।
ಕ್ಷಿಪ್ತಾಃ ಕ್ಷಿಪ್ತಾಃ ಶರಾಸ್ತೇನ ರೇಣುಕಾ ಚಾರುಲೋಚನಾ ॥ ೭ ॥

ಆನಯಾಮಾಸ ಧರ್ಮಜ್ಞಾ ಭರ್ತುರ್ವಚನಕಾರಿಣೀ ।
ಅಥಾರ್ಕತಾಪಸಂತಪ್ತಾ ದಹ್ಯಮಾನಾಂಘ್ರಿಪಂಕಜಾ ॥ ೮ ॥

ಪುಷ್ಪಿತಸ್ಯ ಚ ವೃಕ್ಷಸ್ಯ ಛಾಯಾಮಾಸಾದ್ಯ ವಿಷ್ಠಿತಾ ।
ವಿಶ್ರಮ್ಯ ತು ಮುಹೂರ್ತಂ ಸಾ ಭರ್ತುರ್ನಿನ್ಯೇ ಶರೋತ್ತಮಂ ॥ ೯ ॥

---

೪. ಆ ವಿಶ್ವಾಮಿತ್ರನು ಮಹಾ ಕೋಪಿಷ್ಠನಾದ ವಸಿಷ್ಠನಿಂದ ಯುದ್ಧದಲ್ಲಿ ಸೋತು, ನಿಯಮದಿಂದ ತಪಸ್ಸುಮಾಡಿ ಬ್ರಾಹ್ಮಣ್ಯವನ್ನು ಸಂಪಾದಿಸಿದನು.

೫. ಮಹಾತಪಸ್ವಿಯಾದ ಜಮದಗ್ನಿಯು ಪ್ರಸೇನಜಿದ್ರಾಜನ ಮಗಳಾದ ರೇಣುಕಾದೇವಿಯನ್ನು ಪಾಣಿಗ್ರಹಣಮಾಡಿಕೊಂಡನು.

೬. ಗ್ರೀಷ್ಮರ್ತುವಿನಲ್ಲಿ ಕಾಡಿನಲ್ಲಿ ಬಿಸಿಲು ಬೇಯುತ್ತಿದ್ದಾಗ ಮಟಮಟ ಮಧ್ಯಾಹ್ನಕಾಲದಲ್ಲಿ ಆ ಮಹಾ ಪತಿವ್ರತೆಯಾದ ರೇಣುಕೆಯು ತಪೋನಿರತನಾಗಿದ್ದ ಗಂಡನ ಶುಶ್ರೂಷೆಯನ್ನು ಮಾಡುತ್ತಿದ್ದಳು.

೭–೯ ತಪಸ್ಸು ಮುಗಿದ ಬಳಿಕ ಜಮದಗ್ನಿಯು ಬಾಣಗಳಿಂದ ಆಟವಾಡ ತೊಡಗಿದನು. ಒಳ್ಳೇ ಬಿಸಿಲಿನಲ್ಲಿ ಬಾಣವನ್ನೆಸೆಯುತ್ತಾ ಅದು ದೂರಕ್ಕೆ ಹೋದ ಮೇಲೆ ಅದನ್ನು ತಂದು ಕೊಡುವಂತೆ ಹೆಂಡತಿಗೆ ಹೇಳುವನು. ಅವಳು ಅದನ್ನು

**ತಾಂ ಪ್ರಾಪ್ತಾಂ ಕುಪಿತೋ ಭರ್ತಾ ಜಮದಗ್ನಿರಭಾಷತ ।**
**ಕ್ರೀಡತೋ ಮೇ ಶರೈರ್ಭದ್ರೇ ವಿಘ್ನಂ ಕಿಂ ಕೃತವತ್ಯಸಿ ॥ ೧೦ ॥**

**ನ ಬಿಭೇಷಿ ಚ ಮಾಂ ಭದ್ರೇ ತ್ವಥವಾಪ್ಯವಮನ್ಯಸೇ । ॥ ೧೧ ॥**

**॥ ರೇಣುಕೋವಾಚ ॥**

**ಅರ್ಕಾಗ್ನಿತಾಪಸಂತಪ್ತಾ ಕ್ಷಣಮಾತ್ರಂ ಮಹಾವ್ರತ ।**
**ಅಪಾರಯಂತೀ ವಿಶ್ರಾಂತಾ ತಸ್ಮಾತ್ತ್ವಂ ಕ್ಷಂತುಮರ್ಹಸಿ ॥ ೧೨ ॥**

---

ತಂದು ಕೊಡುವಳು. ಹೀಗೆ ಬಹಳ ಹೊತ್ತು ಕಳೆಯುತ್ತಿರಲು, ಬಿಸಿಲು ಬಹಳವಾಗಿ ಏರಿತ್ತು. ಕಾಲು ಸುಡುತ್ತಿತ್ತು. ಬಾಣವನ್ನು ತರುವಾಗ ರೇಣುಕೆಯ ಕಾಲು ಹೊಪ್ಪಳೆ ಬಂದಿತು. ಆಗ ಅವಳು ನಡೆಯಲಾರದೆ ಹೂ ಬಿಟ್ಟಿದ್ದ ದೊಡ್ಡದೊಂದು ಮರದ ನೆರಳಿನಲ್ಲಿ ಕುಳಿತು ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಆ ಬಳಿಕ ಬಾಣವನ್ನು ತಂದು ಗಂಡನ ಕೈಯಲ್ಲಿ ಕೊಟ್ಟಳು.

೧೦. ಬಾಣವನ್ನು ತರುವುದು ಹೊತ್ತಾದ್ದರಿಂದ ಜಮದಗ್ನಿಯು ಹೆಂಡತಿಯ ಮೇಲೆ ಬಹಳವಾಗಿ ಕೋಪಿಸಿಕೊಂಡು ಬಾಣದಿಂದ ಆಟವಾಡುತ್ತಿದ್ದ ನನ್ನ ಆಟಕ್ಕೆ ನೀನು ವಿಘ್ನವನ್ನೇಕೆ ಮಾಡಿದೆ? ನೀನು ಬರುವುದಕ್ಕೆ ಏಕೆ ಸಾವಕಾಶವೆಂದು ಕೇಳಿ,

೧೧. ಎಲೌ! ಮಂಗಳಾಂಗಿಯೇ, ನನಗೆ ಹೆದರಿದೆಯಾ? ಅಥವಾ ನನಗೆ ಅವಮಾನ ಮಾಡುವುದಕ್ಕಾಗಿ ಈ ಕೆಲಸ ಮಾಡಿದೆಯಾ? ಹೆದರದೆ ಹೇಳೆನ್ನಲು,

೧೨. ರೇಣುಕಾದೇವಿಯು ಹೇಳುತ್ತಾಳೆ:— ಸೂರ್ಯನು ಬೆಂಕಿಯಂತೆ ಸುಡುತ್ತಿರುವುದರಿಂದ ಆ ಬಿಸಿಲಿನ ತಾಪವನ್ನು ಸಹಿಸಲಾರದೆ ಒಂದು ಮರದ ಕೆಳಗೆ ಸ್ವಲ್ಪಹೊತ್ತು ಕುಳಿತು ವಿಶ್ರಮಿಸಿಕೊಂಡು ಬಂದೆನು. ಈ ನನ್ನ ತಪ್ಪನ್ನು ದಯವಿಟ್ಟು ಕ್ಷಮಿಸಬೇಕು.

॥ ಮಾರ್ಕಂಡೇಯ ಉವಾಚ ॥

ರೇಣುಕಾಯಾ ವಚಶ್ಶ್ರುತ್ವಾ ಜಮದಗ್ನಿರ್ಮಹಾತಪಾಃ ।
ಜಾತರೋಷಸ್ತದಾ ಸೂರ್ಯೇ ಸಾಯಕಾನ್ಸ್ವೇಪು ಮುದ್ಯತಃ ॥ ೧೩ ॥

ಏತಸ್ಮಿನ್ನೇವ ಕಾಲೇ ತು ವಿಪ್ರರೂಪೋ ದಿವಾಕರಃ ।
ಶೀಘ್ರಮಾಗಮ್ಯ ತೇಜಸ್ವೀ ಜಮದಗ್ನಿಮಭಾಷತ ॥ ೧೪ ॥

॥ ಸೂರ್ಯ ಉವಾಚ ॥

ಸ್ವಭಾವ ಏಷ ಮೇ ಬ್ರಹ್ಮನ್ ಯದಹಂ ದಹನಾತ್ಮಕಃ ।
ವರ್ತತಶ್ಚ ಸ್ವಭಾವೇನ ನ ಮೇ ತ್ವಂ ಕ್ರೋದ್ಧುಮರ್ಹಸಿ ॥ ೧೫ ॥

ಪುತ್ರಸ್ತೇಹಂ ಭವಿಷ್ಯಾಮಿ ತ್ವಸ್ಯಾಮೇವ ದ್ವಿಜೋತ್ತಮ
ಸುರಕಾರ್ಯಂ ಕರಿಷ್ಯಾಮಿ ಲೋಕಾನಾಂ ಚ ಹಿತಂ ಮಹತ್ ॥ ೧೬ ॥

---

೧೩. ಆ ಜಮದಗ್ನಿ ಮಹರ್ಷಿಯು ರೇಣುಕೆಯು ಹೇಳಿದ ಮಾತನ್ನು ಕೇಳಿ ಸೂರ್ಯನ ಮೇಲೆ ಕೋಪಿಸಿಕೊಂಡು ಅವನ ಮೇಲೆ ಬಾಣವನ್ನು ಬಿಟ್ಟನು.

೧೪. ಈ ಸಮಯದಲ್ಲಿ ಸೂರ್ಯನು ಬ್ರಾಹ್ಮಣನ ರೂಪವನ್ನು ಧರಿಸಿ ಜಮದಗ್ನಿ ಋಷಿಯ ಬಳಿಗೆ ಬಂದು ಆತನನ್ನು ಕುರಿತು ಇಂತೆಂದನು.

೧೫. ಸೂರ್ಯನು ಹೇಳಿದನು:— ಸ್ವಾಮಿ! ಜಮದಗ್ನಿ ಋಷಿಗಳೇ, ನನ್ನ ಸ್ವಭಾವವೇ ಸುಡುವ ಗುಣವುಳ್ಳದು. ಸ್ವಭಾವವಾಗಿ ನನ್ನ ಕೆಲಸವನ್ನು ನಾನು ಮಾಡಿಕೊಂಡಿರುವಾಗ ನನ್ನ ಮೇಲೆ ತಾವು ಕೋಪಿಸಿಕೊಳ್ಳುವುದು ಸರಿಯಲ್ಲ.

೧೬. ನಾನು ನಿಮ್ಮ ಹೆಂಡತಿಯ ಹೊಟ್ಟೆಲ್ಲಿ ನಿನ್ನ ಮಗನಾಗಿ ಹುಟ್ಟಿ ಲೋಕ ಹಿತಕ್ಕೋಸ್ಕರ ದೇವತೆಗಳ ಕಾರ್ಯವನ್ನು ಮಾಡುತ್ತೇನೆ.

ಇಯಂ ಚ ಪತ್ನೀ ಧರ್ಮಜ್ಞಾ ರೇಣುಕಾ ತವ ಸಾಂಪ್ರತಂ ।
ಛತ್ರೋಪಾಹನಮೇತನ್ಮೇ ಗೃಹ್ಣಾತು ವರವರ್ಣಿನೀ ॥ ೧೭ ॥
ತಸ್ಯಾಽನುಕಂಪಯಾ ಛತ್ರಂ ತಥಾ ಬ್ರಹ್ಮನ್ನುಪಾನಹೌ ।
ಮಯಾ ಸೃಷ್ಟೌ ಜಗತ್ಯಸ್ಮಿನ್ನಿತ್ಯಮೇವ ಭವಿಷ್ಯತಃ ॥ ೧೮ ॥
ಛತ್ರೋಪಾನಹಯೋರ್ದಾನಂ ಲೋಕೇ ಶ್ರೇಷ್ಠಂ ಭವಿಷ್ಯತಿ ।
ಛತ್ರೋಪಾನಹದಾನೇನ ನರಃ ಸ್ವರ್ಗಂ ಗಮಿಷ್ಯತಿ ॥ ೧೯ ॥
ಏವಮುಕ್ತಸ್ತು ಸೂರ್ಯೇಣ ಜಮದಗ್ನಿರ್ಮಹಾತಪಾಃ ।
ಸಂಪೂಜ್ಯ ಸೂರ್ಯಂ ಜಗ್ರಾಹ ಸವಿತುಸ್ಸಕಲಂ ವಚಃ ॥ ೨೦ ॥
ತತಸ್ಸೂರ್ಯೇ ಗತೇ ದೇವೀ ಸೂರ್ಯಪುತ್ರಾ ಪುರಾ ಸತೀ ।
ಪುತ್ರಂ ಕನೀಯಸಂ ರಾಮಂ ಜನಯಾಮಾಸ ರೇಣುಕಾ ॥ ೨೧ ॥

೧೭. ಈ ನಿನ್ನ ಧರ್ಮಪತ್ನಿಯು ಮಹಾ ಧರ್ಮಸೂಕ್ಷ್ಮವನ್ನು ತಿಳಿದವಳು. ಈಕೆಯು ಈಗ ನನ್ನಿಂದ ಕೊಡಲ್ಪಡುವ ಛತ್ರಿಯನ್ನೂ ಜೋಡುಗಳನ್ನು (ಪಾದರಕ್ಷೆ) ಸ್ವೀಕರಿಸಲಿ

೧೮. ಆಕೆಯ ಮೇಲಿನ ದಯೆಯಿಂದ ನನ್ನಿಂದ ಈ ಛತ್ರಿಯೂ ಪಾದರಕ್ಷೆಗಳೂ ಸೃಷ್ಟಿಮಾಡಲ್ಪಟ್ಟಿವೆ. ಜಗತ್ತಿನ ಜನರಿಗೆ ಇವು ನಿತ್ಯವೂ ಉಪಯೋಗಕ್ಕೆ ಬರುವುವು.

೧೯. ಇನ್ನು ಮುಂದೆ ಛತ್ರಿಜೋಡುಗಳನ್ನು ದಾನಮಾಡೋಣವು ಲೋಕದಲ್ಲಿ ಉತ್ತಮವೆನಿಸುವವು ಇವುಗಳನ್ನು ದಾನಮಾಡುವ ಮನುಷ್ಯನು ಸ್ವರ್ಗಲೋಕಕ್ಕೆ ಹೋಗುತ್ತಾನೆ.

೨೦. ಈ ರೀತಿ ಸೂರ್ಯನಿಂದ ಹೇಳಲ್ಪಟ್ಟವನಾಗಿ ಜಮದಗ್ನಿ ಮಹರ್ಷಿಯು ಸೂರ್ಯನನ್ನು ಯಥಾವಿಧಿಯಾಗಿ ಪೂಜಿಸಿ ಆತನ ಸಕಲ ಮಾತುಗಳಗೂ ಒಪ್ಪಿಕೊಂಡನು.

೨೧. ಈ ರೀತಿ ಸೂರ್ಯನು ದೇಳಿ ಹೊರಟುಹೋಗಲಾಗಿ ರೇಣುಕಾದೇವಿಯು ಸೂರ್ಯನನ್ನು ಮಗನನ್ನಾಗಿ ಪಡೆದಳು. ಬಳಿಕ ಪರಶುರಾಮನನ್ನು ಕಿರೀಮಗನನ್ನಾಗಿ ಪ್ರಸುವಿಸಿದಳು.

ತಮನ್ವಾವ ಸುಷೇಣಶ್ಚ ವಸುರ್ವಿಶ್ವಾವಸುಸ್ತಥಾ ।
ತೇಷಾಂ ಜಘನ್ಯಜೋ ರಾಮೋ ವಿಷ್ಣುರ್ವಾನುಷರೂಪಧೃತ್ ॥ ೨೨ ॥

ಅಂಶೇನ ಜಾತೇ ಭುವಿ ದೇವದೇವೇ
ಸುನಿರ್ವೃತಾ ಭೂಮಿರಥೋ ಬಭೂವ ।
ಹತಾಂ ಚ ಮೇನೇ ದಿತಿಜಪ್ರಜಾತಾಂ
ಪೀಡಾಂ ನೃಣಾಂ ಸ್ವಸ್ಯ ಚ ಸಾ ಧರಿತ್ರೀ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂ
ಡೇಯ ವಜ್ರಸಂವಾದೇ ರಾಮೋತ್ಪತ್ತಿರ್ನಾಮ
ಪಂಚತ್ರಿಂಶತ್ತಮೋಽಧ್ಯಾಯಃ



---

೨೨. ಜ್ಯೇಷ್ಠಪುತ್ರಸೂರ್ಯನಿಗೂ ವಿಷ್ಣುರೂಪದಿಂದ ಅವತರಿಸಿದ ಕಿರೀಮಗ ಪರಶುರಾಮನಿಗೂ ಮಧ್ಯದಲ್ಲಿ ಸುಷೇಣ, ವಸನ, ಹಾಗೂ ವಿಶ್ವಾವಸುಗಳೆಂಬ ಮೂರು ನಡುಕಲು ಮಕ್ಕಳೂ ಹುಟ್ಟಿದರು.

೨೩. ಪರಮಾತ್ಮನು ತನ್ನ ಅಂಶದಿಂದ ಪರಶುರಾಮಾವತಾರ ಮಾಡಿದೊಡನೆಯೇ ಭೂಮಿದೇವಿಗೆ ಬಹು ಸೌಖ್ಯವಾಯಿತು. ಆಕೆಯು ಇನ್ನು ಮುಂದೆ ದೈತ್ಯರು ನಾಶವಾದಂತೆಯೂ, ತನಗೂ ಸಜ್ಜನರಿಗೂ ಉಂಟಾಗಿದ್ದ ಪೀಡೆಯು ಪರಿಹಾರವಾಯಿತೆಂದೂ ತಿಳಿದುಕೊಂಡಳು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪರಶುರಾಮೋತ್ಪತ್ತಿಯೆಂಬ ಹೆಸರಿನ
ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಷಟ್ತ್ರಿಂಶತ್ತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

**ಅಥ ಬಾಲ್ಯಂ ಸಮುತ್ತೀರ್ಣೋ ರಾಮೋ ಭೃಗುಕುಲೋದ್ವಹಃ ।**
**ಶುಶ್ರೂಷಮಾಣಃ ಪಿತರಂ ನಿತ್ಯಮಾಸ್ತೇ ಮಹಾಯಶಾಃ ॥ ೧ ॥**

**ಏತಸ್ಮಿನ್ನೇವ ಕಾಲೇ ತು ರಾಮೇ ವನಗತೇ ತದಾ ।**
**ಆಜಗಾಮ ಮಹಾತೇಜಾ ರಾಜಾ ಚಿತ್ರಾಂಗದೋ ವನಂ ॥ ೨ ॥**

**ವಿಹರ್ತುಂ ಸಹ ರಾಮಾಭಿರ್ದೇವರಾಜಸಮದ್ಯುತಿಃ ।**
**ತಂ ದೃಷ್ಟ್ವಾ ರೇಣುಕಾ ಚಕ್ರೇ ಸ್ಪೃಹಾಂ ಭೋಗೇಷು ಭಾಮಿನೀ ॥ ೩ ॥**

---

### ಮೂವತ್ತಾರನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳಿದನು- ಪರಶುರಾಮನು ಬಾಲ್ಯವನ್ನು ಕಳೆದು ಯೌವನಾವಸ್ಥೆಗೆ ಬಂದನು. ಅವನು ನಿತ್ಯವೂ ತಂದೆಯ ಸೇವೆಯನ್ನು ಎಡೆಬಿಡದೆ ಮಾಡುತ್ತಿದ್ದನು.

೨. ಇದೇ ಕಾಲದಲ್ಲಿ ಒಂದು ದಿನ ಪರಶುರಾಮನು ಕಟ್ಟಿಗೆ ತರಲು ವನಕ್ಕೆ ಹೋಗಿದ್ದ ಕಾಲದಲ್ಲಿ ಮಹಾಕಾಂತಿಯಿಂದ ಕೂಡಿದ ಚಿತ್ರಾಂಗದ ರಾಜನು ಆ ವನಕ್ಕೆ ಬಂದನು.

೩. ದೇವೇಂದ್ರನಂತೆ ಕಾಂತಿಯುಳ್ಳ ಆ ಚಿತ್ರಾಂಗದನು ಆ ಅರಣ್ಯದಲ್ಲಿ ಸುಂದರಿಯರೊಡನೆ ವಿಹರಿಸುವುದಕ್ಕೋಸ್ಕರ ಬಂದಿದ್ದನು. ಆ ಸುಂದರನನ್ನು ನೋಡಿ ರೇಣುಕೆಯು ಭೋಗಮಾಡಬೇಕೆಂದು ಆಸೆಪಟ್ಟಳು.

ಜಗಾಮ ಮನಸಾ ತಂ ಸಾ ರಾಜಾನಂ ಕಾಮಸನ್ನಿಭಂ ।
ತಸ್ಮಿನ್ನೇವ ಕ್ಷಣೇ ಸಾ ತು ಭ್ರಷ್ಟಾ ಬ್ರಾಹ್ಮಣತೇಜಸಾ ॥ ೪ ॥

ಗತಶ್ರಿಯಂ ತು ತಾಂ ದೃಷ್ಟ್ವಾ ಜಮದಗ್ನಿರ್ಮಹಾತಪಾಃ ।
ಪುತ್ರಾನುವಾಚ ತಾನ್ಕ್ರೋಧಾದ್ಧನ್ಯತಾಂ ಜನನೀ ಸ್ವಕಾ ॥ ೫ ॥

ತೇ ವಿಚಾರ್ಯ ತತಸ್ಸರ್ವೇ ಮಾತುರ್ಗೌರವಮುತ್ತಮಂ ।
ನೈವ ಚಕ್ರುಃ ಪಿತುರ್ವಾಕ್ಯಂ ತಾನ್ಶಶಾಪ ಸ ಭಾರ್ಗವಃ ॥ ೬ ॥

ಯೂಯಂ ತಿರ್ಯಕ್ಸಧರ್ಮಾಣೋ ನಷ್ಟಸಂಜ್ಞಾ ಭವಿಷ್ಯಥ ।
ಇಧ್ಮಭಾರಮುಪಾದಾಯ ರಾಮೋ ರತಿಕರಃ ಪಿತುಃ ॥ ೭ ॥

ಅಥಾಶ್ರಮ ಮನುಪ್ರಾಪ್ತಃ ಪಿತಾ ತಂ ಸಮಚೋದಯತ್ ।
ಜಹೀಮಾಂ ಮಾತರಂ ಕ್ಷುದ್ರಾಂ ರಾಮ ಮಾ ತ್ವಂ ಚಿರಂ ಕೃಥಾಃ ॥ ೮ ॥

---

೪. ಯಾವಾಗ ಆ ರಾಜನ ಮೇಲೆ ವಿಷಯಾಭಿಲಾಷೆಯು ಮನಸ್ಸಿನಲ್ಲಿ ಮೂಡಿತೋ ಆ ಕೂಡಲೆ ಆಕೆಯ ಮುಖದಲ್ಲಿದ್ದ ಬ್ರಾಹ್ಮಣ ತೇಜಸ್ಸು ಅಳಿಸಿ ಹೋಯಿತು.

೫. ಮಹಾತಪಸ್ವಿಯಾದ ಜಮದಗ್ನಿಗೆ ಹೆಂಡತಿಯ ಮನೋಭಿಪ್ರಾಯವು ಆಕೆಯ ಮುಖವರ್ಚಸ್ಸಿನಿಂದಲೇ ತಿಳಿದುಹೋಯಿತು. ಆ ಕೂಡಲೇ ಆ ಮುನಿಯು ಮುನಿದು ಮಕ್ಕಳನ್ನು ಕುರಿತು ನಿಮ್ಮ ತಾಯಿಯನ್ನು ಕೊಂದುಬಿಡಿರಿ; ಎಂದು ಆಜ್ಞೆ ಮಾಡಿದನು.

೬. ಆ ಸಹೋದರರು ತಾಯಿಯ ಮೇಲಿನ ಗೌರವದಿಂದ ತಂದೆಯ ಮಾತಿನಂತೆ ತಾಯಿಯನ್ನು ಕೊಲ್ಲಲಿಲ್ಲವಾಗಿ ಜಮದಗ್ನಿಯು ಆ ಮಕ್ಕಳಿಗೆ ಶಾಪಕೊಟ್ಟನು.

೭-೮. ನೀವು ಪಿತ್ರಾಜ್ಞೋಲ್ಲಂಘನೆಮಾಡಿ ಧರ್ಮವನ್ನು ಮೀರಿದುದರಿಂದ ನಿಮಗೆ ಜ್ಞಾಪಕಶಕ್ತಿಯು ಮರೆತುಹೋಗಲೆಂದು ಆ ಮಕ್ಕಳಿಗೆಲ್ಲರಿಗೂ ಶಾಪವನ್ನು ಕೊಟ್ಟನು. ಇಷ್ಟರಲ್ಲಿ ಸೌದೆಯ ಹೊರೆಯನ್ನು ಹೊತ್ತುಕೊಂಡು ಪರಶುರಾಮನು ಕಾಡಿನಿಂದ ಆಶ್ರಮಕ್ಕೆ ಬಂದನು. ತನ್ನ ಪ್ರೀತಿಪಾತ್ರನಾದ ಆ ಮಗನನ್ನು ಕುರಿತು,

**ಏವಮುಕ್ತಸ್ಸ ಪಿತ್ರಾ ತು ತದ್ವಾಕ್ಯಸಮನಂತರಂ ।**
**ಶಿರಶ್ಚಿಚ್ಛೇದ ತೀಕ್ಷ್ಣೇನ ರಾಮಃ ಪರಶುನಾ ತದಾ ॥ ೯ ॥**

**ತುತೋಷಾಥ ಪಿತಾ ತಸ್ಯ ತತೋ ಧರ್ಮಭೃತಾಂ ವರಃ ॥ ೧೦ ॥**

**॥ ಜಮದಗ್ನಿರುವಾಚ ॥**

**ಸ್ವಚ್ಛಂದ ಮರಣಂ ಪುತ್ರ ತುಷ್ಟೇ ತ್ವಂ ಮಯಿ ಲಪ್ಸ್ಯಸೇ ।**
**ಯಾವಚ್ಚ ವೈಷ್ಣವಂ ತೇಜಸ್ತ್ವಯಿ ತಿಷ್ಠತಿ ಪುತ್ರಕ ॥ ೧೧ ॥**

**ತಾವದೇವ ನ ತೇ ಯುದ್ಧೇ ಕಶ್ಚಿಜ್ಜೇತಾ ಭವಿಷ್ಯತಿ ।**
**ಭವಿಷ್ಯತಿ ಚ ಧರ್ಮಾತ್ಮಾ ರಾಮೋ ದಶರಥಾತ್ಮಜಃ ॥**
**ರಘುವಂಶೇ ಸಮುತ್ಪನ್ನೋ ವಿಷ್ಣುರ್ಮಾನುಷರೂಪಧೃತ್ ॥ ೧೨ ॥**

---

ತಂದೆಯು ನಿನ್ನ ಈ ಹೀನಸ್ವಭಾವದ ತಾಯಿಯನ್ನು ಕೂಡಲೇ ಕೊಂದು ಹಾಕೆಂದು ಹೇಳಲು, ತಂದೆಯ ಬಾಯಿಯಿಂದ ಈ ಮಾತು ಹೊರಟ ಕೂಡಲೆ ಪರಶುರಾಮನು ತನ್ನ ಹರಿತವಾದ ಕೊಡಲಿಯಿಂದ ಆಕೆಯ ಕತ್ತನ್ನು ಕತ್ತರಿಸಿಯೇ ಬಿಟ್ಟನು.

೧೦. ತನ್ನ ಮಾತನ್ನು ನಡೆಸಿದ್ದನ್ನು ನೋಡಿ ಜಮದಗ್ನಿಯು ಮಗನ ವಿಷಯದಲ್ಲಿ ತುಂಬಾ ಸಂತೋಷಪಟ್ಟನು.

೧೧ ಜಮದಗ್ನಿಋಷಿಯು ಹೇಳುತ್ತಾನೆ- ಎಲೈ ! ಮುದ್ದುಗುವರನೇ, ಎಲ್ಲಿಯವರೆಗೆ ನಿನಗೆ ವೈಷ್ಣವ ತೇಜಸ್ಸು ಇರುವುದೋ ಅಲ್ಲಿಯವರೆಗೆ ನಿನಗೆ ಯಾರೂ ಎದುರಾಗಿರುವುದಿಲ್ಲ. ಆ ತೇಜಸ್ಸು ಹೋದಮೇಲೆ ನಿನಗೆ ಇಚ್ಛಾಮರಣವುಂಟಾಗಲಿ. ನಿನ್ನ ಮೇಲಿನ ಪ್ರೀತಿಯಿಂದಲೂ, ನನ್ನಲ್ಲಿ ನೀನಿಟ್ಟಿರುವ ಭಕ್ತಿಯಿಂದಲೂ ಅನಾಯಾಸಮೃತಿರೂಪಮರಣವನ್ನು ನಿನಗೆ ವರರೂಪವಾಗಿ ಅನುಗ್ರಹಿಸಿದೇನೆ.

೧೨-೧೩. ನೀನು ವೈಷ್ಣವತೇಜದಿಂದಿರುವ ತನಕ ನಿನ್ನನ್ನು ಜಯಿಸುವವರೇ ಇಲ್ಲ. ಮಹಾವಿಷ್ಣುವು ರಾಮಾವತಾರಮಾಡಿ ರಘುವಂಶದಲ್ಲಿ ದಶರಥಮಹಾರಾಜನ ಮಗನಾಗಿ ಹುಟ್ಟುವನು. ಯಾವಾಗ ನಿನ್ನೆದುರಿಗೆ ಆತನು ಬರುವನೋ ಆಗ್ಯೆ ನಿನ್ನ

**ಯದಾ ಸಮೇಷ್ಯತೇ ತೇನ ತದಾ ವೈಷ್ಣವ ತೇಜಸಾ ।**
**ಕೃತಕರ್ಮಾ ವಿಮುಕ್ತಸ್ತ್ವಂ ಸ ಚ ಯುಕ್ತೋ ಭವಿಷ್ಯತಿ ॥ ೧೩ ॥**

**ತತಃ ಪರಂ ತ್ವಯಾ ಪುತ್ರ ನ ಕಾರ್ಯಂ ಶಸ್ತ್ರಧಾರಣಂ ।**
**ಆರ್ತತ್ರಾಣಮೃತೇ ವೀರ ಸ್ತ್ರೀಬ್ರಾಹ್ಮಣಕೃತೇಽಥವಾ ॥**
**ಯಥೇಪ್ಸಿತಂ ಚಾಪ್ಯಪರಂ ವರಂ ವರಯ ಪುತ್ರಕ ॥ ೧೪ ॥**

**॥ ರಾಮ ಉವಾಚ ॥**

**ಗುರುಶ್ರೇಷ್ಠ ಸಮುತ್ಥಾನಂ ಜನನ್ಯಾಃ ಕಥಯಾಮ್ಯಹಂ ।**
**ಅಸ್ಮೃತಿಂ ಚ ತಥಾ ತಸ್ಯಾಂ ಭ್ರಾತೄಣಾಂಚ ತಥಾಽಸ್ಮೃತಿಂ ॥ ೧೫ ॥**

**॥ ಜಮದಗ್ನಿರುವಾಚ ॥**

**ಏವಮಸ್ತು ಮಹಾಭಾಗ ತಪಸಾ ಮಹತಾ ತಥಾ ।**
**ಸಮಾರಾಧಯ ದೇವೇಶಂ ಶಂಕರಂ ನೀಲಲೋಹಿತಂ ॥ ೧೬ ॥**

---

ವೈಷ್ಣವತೇಜಸ್ಸು, ಆ ರಾಮನಲ್ಲಿ ಸೇರಿ ಹೋಗುತ್ತದೆ. ಅಲ್ಲಿಯವರೆಗೆ ನೀನು ಅವತರಿಸಿದ ಕೆಲಸವು ಮುಗಿಯುವುದರಿಂದ ಅಲ್ಲಿಂದ ಮುಂದೆ ನೀದು ಶಸ್ತ್ರವನ್ನು ಹಿಡಿಯಬೇಡ. ಆ ಬಳಿಕ ನಿನ್ನ ಜನ್ಮವು ಆರ್ತರನ್ನೂ, ಅನಾಥರನ್ನೂ, ಸ್ತ್ರೀಬ್ರಾಹ್ಮಣ ಗೋವೃಂದವನ್ನೂ ಪಾಲಿಸುವುದರಲ್ಲಿ ವಿನಿಯೋಗವಾಗಲಿ. ಎಲೈ! ಮಗನೇ, ನಿನ್ನ ಮನಸ್ಸಿನಲ್ಲಿ ಏನಾದರೂ ಇನ್ನೂ ಕೋರಿಕೆಯಿದ್ದರೆ ಕೇಳಿಕೋ! ಅದನ್ನೂ ಕೊಡುವೆನೆಂದು ತಂದೆಯು ಹೇಳಿದನು.

೧೫. ಪರಶುರಾಮನು ಹೇಳಿದನು- ಗುರುವೇ! ನನ್ನ ತಾಯಿಯನ್ನು ಬದುಕಿಸಿಕೊಡು. ಆದರೆ ಅವಳಿಗೆ ತಾನು ಸತ್ತಿದ್ದೆನೆಂಬ ಸ್ಮೃತಿ ಬರದೇ ಇರಲಿ. ಹಾಗೆಯೇ ನನ್ನ ಅಣ್ಣಂದಿರಿಗೆ ಪ್ರಾಪ್ತವಾಗಿರುವ ಅಸ್ಮೃತಿ (ಮರವೆ) ಯನ್ನು ಹೋಗಲಾಡಿಸಿಕೊಡು.

೧೬. ಜಮದಗ್ನಿಯು ಹೇಳಿದನು- ಎಲೈ! ಪುಣ್ಯಶಾಲಿಯೇ, ನಿನ್ನ ಇಷ್ಟದಂತೆಯೇ ಆಗಲಿ. ನೀನು ಮುಂದೆ ಮಹತ್ತರವಾದ ತಪಸ್ಸಿನಿಂದ ನೀಲಲೋಹಿತನೆನಿಸಿದ ಈಶ್ವರನನ್ನು ಮೆಚ್ಚಿಸು.

॥ ಮಾರ್ಕಂಡೇಯ ಉವಾಚ ॥

ಏವಮುಕ್ತೇ ಸಮುತ್ತಸ್ಥೌ ರೇಣುಕಾ ಚಾರುಹಾಸಿನೀ ।
ರಾಮಸ್ಯ ಭ್ರಾತರಸ್ಸರ್ವೇ ಮುಕ್ತಶಾಪಾಸ್ತಥೈವ ತೇ ॥ ೧೭ ॥

ಪಿತ್ರಾ ರಾಮಸ್ತಥೋಕ್ತಸ್ತು ಹಿಮವತ್ಯಚಲೋತ್ತಮೇ
ತಪಸ್ತೇಪೇ ಮಹಾತೇಜಾ ರುದ್ರಾರಾಧನಕಾಮ್ಯಯಾ ॥ ೧೮ ॥

ಏತಸ್ಮಿನ್ನೇವ ಕಾಲೇ ತು ದೇವಾಸ್ಸೇಂದ್ರ ಪುರೋಗಮಾಃ ।
ಸೈಂಹಿಕೇಯೈಶ್ಚ ಸಂತ್ರಸ್ತಾಃ ಶಂಕರಂ ಶರಣಂ ಗತಾಃ ॥ ೧೯ ॥

॥ ದೇವಾ ಊಚುಃ ॥

ಭಗವನ್ ದೇವದೇವೇಶ ಪ್ರಣತಾರ್ತಿವಿನಾಶನ ।
ಸೈಂಹಿಕೇಯೈರ್ವಯಂ ಸರ್ವೈಃ ಸ್ಥಾನೇಭ್ಯಸ್ತ್ವವರೋಪಿತಾಃ ॥ ೨೦ ॥

ಸರ್ವೇ ವಸಂತಿ ಸತತಂ ತೇಷಾಂ ಯತ್ನಂ ವಧೇ ಕುರು ॥ ೨೧ ॥

---

೧೭. ಮಾರ್ಕಂಡೇಯನು ಹೇಳಿದನು- ಈ ರೀತಿ ಜಮದಗ್ನಿಯಿಂದ ಹೇಳಲ್ಪಟ್ಟೊಡನೆಯೇ ರೇಣುಕೆಯು ನಗುನಗುತ್ತಾ ಎದ್ದು ಕುಳಿತಳು. ಪರಶುರಾಮನ ಅಣ್ಣಂದಿರೂ ಸಹ ಶಾಪಮುಕ್ತರಾದರು.

೧೮. ತಂದೆಯ ಮಾತನ್ನು ಮೀರದೆ ಆ ಪರಶುರಾಮನು ತಾಯಿಯನ್ನು ಬದುಕಿಸಿಕೊಂಡ ಬಳಿಕ ಈಶ್ವರನನ್ನು ಕುರಿತು ತಪಸ್ಸುಮಾಡುವುದಕ್ಕೋಸ್ಕರ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ತಪಸ್ಸನ್ನು ಮಾಡಿದನು.

೧೯. ಇದೇ ಸಮಯದಲ್ಲಿ ಇಂದ್ರನೇ ಮುಂತಾದ ದೇವತೆಗಳು ಸೈಂಹಿಕೇಯರ ಭಯದಿಂದ ಕೂಡಿದವರಾಗಿ, ಈಶ್ವರನನ್ನು ಮರೆಹೊಕ್ಕರು.

೨೦. ದೇವತೆಗಳು ಹೇಳಿದರು:- ದೇವದೇವೋತ್ತಮನಾದ, ನಮಸ್ಕರಿಸಿದವರ ದುಃಖವನ್ನು ಹೋಗಲಾಡಿಸುವ, ಈಶ್ವರನೇ ! ಸೈಂಹಿಕೇಯರಿಂದ ನಾವು ಹೆದರಿ ನಮ್ಮ ಸ್ಥಳಗಳನ್ನು ಬಿಟ್ಟು ಓಡಿಹೋಗುತ್ತಿದೇವೆ.

೨೧. ಸೈಂಹಿಕೆಯ ಮಕ್ಕಳಾದ ರಾಕ್ಷಸರನ್ನನುಸರಿಸಿ ನೂರಾರು ಸಾವಿರಾರು ಮಂದಿ ದೈತ್ಯರು ವಾಸಮಾಡುತ್ತಿದಾರೆ ಅವರ ಸಂಹಾರದಲ್ಲಿ ಪ್ರಯತ್ನಮಾಡು.

॥ ಮಹಾದೇವ ಉವಾಚ ॥

ಶೃಣ್ವಂತು ದೇವತಾಸ್ಸರ್ವಾ ದಾನವಾ ದೇವಕಂಟಕಾಃ ।
ರಾಮೇಣಾಹಂ ವಧಿಷ್ಯಾಮಿ ನರಬುಧ್ಯಾ ಯುತಸ್ತು ತಾನ್ ॥ ೨೨ ॥

॥ ಮಾರ್ಕಂಡೇಯ ಉವಾಚ ॥

ಗತೇಷು ದೇವಸಂಘೇಷು ದೇವದೇವಃ ಪಿನಾಕಧೃತ್ ।
ಆಹೂಯ ಭಾರ್ಗವಂ ರಾಮಮಿದಂ ವಚನಮಬ್ರವೀತ್ ॥ ೨೩ ॥

॥ ಮಹಾದೇವ ಉವಾಚ ॥

ಸೈಂಹಿಕೇಯಾನ್ ದುರಾಚಾರಾನ್ ಅಸುರಾನ್ ಜಹಿ ಪುತ್ರಕ ।
ಸಮರ್ಥಸ್ತ್ವಾನ್ ಭವಾನ್ ಹಂತುಂ ನಾನ್ಯಃ ಕಶ್ಚನ ವಿದ್ಯತೇ ॥ ೨೪ ॥

॥ ರಾಮ ಉವಾಚ ॥

ಅಸ್ತ್ರಗ್ರಾಮಂ ಸಮಗ್ರಂ ಮೇ ಪ್ರಯಚ್ಛ ಭಗಸೂದನ ।
ಯೇನ ತಾನ್ ಸುದುರಾಚಾರಾನ್ ಘಾತಯಿಷ್ಯಾಮಿ ದಾನವಾನ್ ॥ ೨೫ ॥

---

೨೨. ಮಹಾದೇವನು ಹೇಳಿದನು—ಎಲ್ಲ ದೇವತೆಗಳಿರಾ, ಕೇಳಿರಿ. ದೇವತೆಗಳಿಗೆ ಕಂಟಕರಾಗಿರುವ ಅಸುರರು ಮನುಷ್ಯರನ್ನು ಕಸಕ್ಕಿಂತ ಕಡೆಯಾಗಿ ಕಾಣುತ್ತಾರೆ. ಅಂತಹ ಮನುಷ್ಯಮಾತ್ರನಾದ ಪರಶುರಾಮನಿಂದ ಅವರೆಲ್ಲರನ್ನೂ ಕೊಲ್ಲಿಸುತ್ತೇನೆ.

೨೩. ಮಾರ್ಕಂಡೇಯನು ಹೇಳಿದನು—ಈ ರೀತಿ ಹೇಳಿದ ಬಳಿಕ ದೇವತೆಗಳು ಹೊರಟುಹೋದರು. ಆ ಬಳಿಕ ಈಶ್ವರನು ಭಾರ್ಗವರಾಮನನ್ನು ಕರೆಸಿ ಈ ಮಾತನ್ನು ಹೇಳಿದನು.

೨೪. ಈಶ್ವರನು ಹೇಳುತ್ತಾನೆ—ಎಲೆ ಮಗುವೆ, ದುರಾಚಾರರತರಾದ ಸೈಂಹಿಕೇಯರಾಕ್ಷಸರನ್ನು ಕೊಲ್ಲು. ಅವರನ್ನು ಸಂಹರಿಸಲು ನಿನ್ನನ್ನು ಬಿಟ್ಟರೆ ಇನ್ನಾರಿಗೂ ಶಕ್ತಿಯಿಲ್ಲ.

೨೫. ಭಾರ್ಗವರಾಮನು ಹೇಳಿದನು—ಸ್ವಾಮಿ ! ಯಾವ ಶಸ್ತ್ರಾಸ್ತ್ರಗಳಿಂದ ಸುರವೈರಿಗಳನ್ನು ಗೆಲ್ಲಬೇಕೋ, ಆ ಶಸ್ತ್ರಾಸ್ತ್ರಗಳನ್ನು ನನಗೆ ಸಮಗ್ರವಾಗಿ ಉಪದೇಶಿಸಬೇಕು.

॥ ಮಹಾದೇವ ಉವಾಚ ॥

ಕಿಂ ತವಾಸ್ತ್ರೈರ್ಭೃಗುಶ್ರೇಷ್ಠ ವಿಷ್ಣುಸ್ತ್ವಂ ನಾಪಿ ಮಾನುಷಃ ।
ವ್ಯಸ್ತ್ರಸ್ಯಾಪಿ ನ ತೇ ಶಕ್ತಾ ಯೋದ್ಧುಂ ಪ್ರಮುಖತಸ್ತವ ॥ ೨೬ ॥

॥ ರಾಮ ಉವಾಚ ॥

ಘಾತಯಿಷ್ಯಾಮ್ಯಹಂ ಸರ್ವಾನ್ ಸೈಂಹಿಕೇಯಾನ್ ದುರಾಸದಾನ್ ।
ತ್ರಿಪುರಾರೇ ಮಹಾಭಾಗ ತ್ವದಾಜ್ಞಾಪರಿಬೃಂಹಿತಃ ॥ ೨೭ ॥

॥ ಮಾರ್ಕಂಡೇಯ ಉವಾಚ ॥

ಇತ್ಯೇವಮುಕ್ತ ಸ್ತ್ರಿಪುರಾಂತಕೇನ
ರಾಮಸ್ತ್ರಿನೇತ್ರ ಪ್ರತಿಮಪ್ರಭಾವಃ ।

---

೨೬. ಈಶ್ವರನು ಹೇಳಿದನು— ಎಲೈ ಭೃಗುಶ್ರೇಷ್ಠನೇ, ಅಸ್ತ್ರಗಳಿಂದ ನಿನಗೇನಾಗಬೇಕಾಗಿದೆಯಯ್ಯ! ನೀನು ಮನುಷ್ಯನಲ್ಲ ಮಹಾವಿಷ್ಣುವಿನ ಅವತಾರವೇ ನೀನಾಗಿರುತ್ತೀ! ನೀನು ಯುದ್ಧರಂಗದಲ್ಲಿ ನಿಂತರೆ ಯಾವ ಶಸ್ತ್ರಾಸ್ತ್ರಗಳಿಂದಲೂ ಸಹ ಯಾರೂ ಜಯಿಸಲಾರರು.

೨೭. ಪರಶುರಾಮನು ಹೇಳಿದನು—ಮಹಾತ್ಮನಾದ ಎಲೈ ತ್ರಿಪುರಸಂಹಾರಿಯೇ! ನಿನ್ನ ಆಜ್ಞೆಯಿಂದ ಪ್ರೇರಿತನಾಗಿ ನಾನು ನಿನ್ನ ಮೇಲೆ ಭಾರಹಾಕಿ ಜಯಿಸಲಶಕ್ಯರಾದ ಸೈಂಹಿಕೇಯ ದಾನವರನ್ನೆಲ್ಲಾ ಸಂಹರಿಸುತ್ತೇನೆ.

೨೮. ಮಾರ್ಕಂಡೇಯನು ಹೇಳಿದನು—ಮಹಾದೇವನು ಅಪ್ಪಣೆಕೊಡಿಸಿದ ಮಾತನ್ನು ಕೇಳಿ ಮಹಾದೇವನಿಗೆ ಸರಿಸಮನಾದ ಪರಾಕ್ರಮವನ್ನುಳ್ಳ ಪರಶುರಾಮನು

ಆದಾಯ ತೀಕ್ಷ್ಣಂ ಪರಶುಂ ಜಗಾಮ
ಯತ್ರ ಸ್ಥಿತಾಸ್ತೇ ಚ ರಿಪುಪ್ರಧಾನಾಃ ॥ ೨೮ ॥

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಸ್ಯ ಮಹೇಶ್ವರಾದೇಶೋನಾಮ ಷಟ್ತ್ರಿಂಶತ್ತಮೋಽಧ್ಯಾಯಃ**



---

ಕೂಡಲೆ ತನ್ನ ಕೊಡಲಿಯನ್ನು ಧರಿಸಿ, ಶತ್ರುರಾಕ್ಷಸರು ಎಲ್ಲಿದ್ದರೋ ಅಲ್ಲಿಗೆ ಹೊರಟನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ರಾಮನಿಗೆ ಮಹೇಶ್ವರನ ಅಪ್ಪಣೆ ಎಂಬ ಹೆಸರಿನ ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
## ಸಪ್ತತ್ರಿಂಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಏತಸ್ಮಿನ್ನೇವ ಕಾಲೇ ತು ಕಾಷ್ಠೋದರ್ಕಾಸ್ಸುದಾರುಣಾಃ ।
ಬಭೂವುಸ್ಸುಮಹೋತ್ಪಾತಾಃ ಸೈಂಹಿಕೇಯನಿವೇಶನೇ ॥ ೧ ॥

ಚಚಾಲ ಶಬ್ದಂ ಕುರ್ವಾಣಾ ಮಹೀ ಸವನಕಾನನಾ ।
ಪಪಾತ ಮಹತೀ ಚೋಲ್ಕಾ ಮಧ್ಯೇನಾದಿತ್ಯಮಂಡಲಾತ್ ॥ ೨ ॥

ಅಪರ್ವಣಿ ಶಶಾಂಕಾರ್ಕೌ ಸಂಛನ್ನೌ ತಮಸಾ ತಥಾ ।
ಪ್ರವೃಷ್ಟಾಶ್ಚ ತಥಾ ರಕ್ತಂ ಭೂರಿ ಮೇಘಾ ಭಯಾವಹಂ ॥ ೩ ॥

---

### ಮೂವತ್ತೇಳನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳಿದನು—ಇದೇ ಸಮಯದಲ್ಲಿ ಸೈಂಹಿಕೇಯರ ಮನೆಯಲ್ಲಿ ಕಾಷ್ಠೋದರ್ಕವೆಂಬ ಹೆಸರಿನ ಭಯಂಕರವಾದ-ಉತ್ಪಾತ (ಅನಿಷ್ಟ) ಗಳಿಗೆ ಆರಂಭವಾಯಿತು.

೨. ಭೂಮಿಯು ಸದ್ದುಮಾಡುತ್ತಾ ಬೆಟ್ಟ ಕಾಡುಗಳಿಂದ ಸಹಿತವಾಗಿ ಅಲ್ಲಾಡ ತೊಡಗಿತು. ಸೂರ್ಯಮಂಡಲದ ಮಧ್ಯಭಾಗದಿಂದ ದೊಡ್ಡ ದೊಡ್ಡ ಬೆಂಕಿಯಕೊಳ್ಳಿ ಗಳು ಉದುರಿದವು.

೩. ಪರ್ವಕಾಲವಲ್ಲದೆ ಇದ್ದರೂ ಸೂರ್ಯಚಂದ್ರರು ಸೈಂಹಿಕೇಯರಿಂದ ಗ್ರಸ್ತ ರಾಗಿ ಕತ್ತಲೆಯಿಂದ ಮುಚ್ಚಿಹೋದರು. ಮೇಘಗಳು ಭಯಂಕರವಾದ ರಕ್ತದ ಮಳೆಯನ್ನು ಸುರಿಸುತ್ತಿದ್ದವು.

ಶಸ್ತ್ರಾಣಿ ಮುಮುಚುರ್ಧೂಮಂ ಸಕೃದಶ್ರು ಚ ವಾಹನಾಃ ।
ಇಂದ್ರಚಾಪಸವರ್ಣೇನ ಪರಿವೇಷೇಣ ಭಾಸ್ಕರಃ ॥ ೪ ॥

ಪರಿವಿಷ್ಟ ಉಭೇ ಸಂಧ್ಯೇ ಚಂದ್ರಶ್ಚ ಸಕಲಾಂ ದಿಶಂ ।
ಸೈಂಹಿಕೇಯೋ ವಿಪತ್ಕ್ಯೋಽಪಿ ಸಾಲ್ವಸ್ಯ ಸುಮಹಾತ್ಮನಃ ॥ ೫ ॥

ಆಕ್ರಮ್ಯ ಜನ್ಮನಕ್ಷತ್ರಂ ಕೇತುಸ್ತಸ್ಥೌ ಮಹಾಗ್ರಹಃ ।
ವವುಸ್ತೀಕ್ಷ್ಣಾ ಮಹಾವಾತಾಃ ಕ್ಷೋಭಯಂತೋ ದಿಶೋ ದಶ ॥ ೬ ॥

ಭಾನುಶ್ಚಾಸೀತ್ಕಬಂಧಾಂಕೋ ಮೃಗಾಶ್ಚಾಸನ್ನಸಸ್ವನಾಃ ।
ನ್ಯಲೀಯಂತ ಧ್ವಜಾಗ್ರೇಷು ದಾನವಾನಾಂ ದುರಾತ್ಮನಾಂ ॥ ೭ ॥

ಕ್ರವ್ಯಾದಪಕ್ಷಿಸಂಘಾತಾ ಹ್ಯಪಸವ್ಯಂ ಭಯಾನಕಾಃ ।
ಶುಷ್ಕೇಂಧನಸಮೃದ್ಧೋಽಪಿ ನ ಜಜ್ವಾಲ ಹುತಾಶನಃ ॥ ೮ ॥

---

೪. ಶಸ್ತ್ರಗಳು ಧೂಮ (ಹೊಗೆ) ದಿಂದ ಕೂಡಿದ್ದುವು. ಆನೆ ಕುದುರೆಗಳೇ ಮುಂತಾದ ವಾಹನಗಳು ಕಣ್ಣೀರು ಸುರಿಸಿದವು. ಕಾಮನ ಬಿಲ್ಲಿಗೆ ಸಮನಾದ ಪರಿವೇಷದಿಂದ ಸೂರ್ಯನು ಸುತ್ತುವರೆದನು.

೫-೭. ಎರಡು ಸಂಧ್ಯೆಯ ಸಮಯಗಳಲ್ಲಿಯೂ ಸೂರ್ಯಚಂದ್ರರಿಗೆ ಈ ರೀತಿ ಪರಿವೇಷ ಕಟ್ಟುತ್ತಿರಲು ಶುಕ್ಲಪಕ್ಷದಲ್ಲಿಯೂ ಕತ್ತಲೆ ಮುಸುಕಿಕೊಂಡೇ ಇತ್ತು. ಸೈಂಹಿಕೇಯನು (ರಾಹುವು) ಮಹಾತ್ಮನಾದ ಸಾಲ್ವನ ಜನ್ಮನಕ್ಷತ್ರವನ್ನಾಕ್ರಮಿಸಿ ಪೀಡಿಸತೊಡಗಿದನು. ಕೇತುವೂ ಇದೇ ರೀತಿಯಾಗಿದ್ದನು. ಹತ್ತು ದಿಕ್ಕುಗಳನ್ನೂ ವ್ಯಾಪಿಸಿ ಸುಂಟರಗಾಳಿಯು ಬೀಸುತ್ತಿತ್ತು. ಸೂರ್ಯನ ಮಧ್ಯದಲ್ಲಿ ಮುಂಡದ ಗುರ್ತು ಕಾಣಿಸಿತು. ಮೃಗಗಳು ವಿಕಾರವಾಗಿ ಕೂಗುತ್ತಾ ದುರಾತ್ಮರಾದ ರಕ್ಕಸರ ಧ್ವಜಾಗ್ರಗಳಲ್ಲಿ ಅಡಗುತ್ತಿದ್ದವು.

೮-೧೧. ಮಾಂಸಗಳನ್ನು ತಿನ್ನುವ ಪಕ್ಷಿಗಳ ಗುಂಪುಗಳು ಎಡಕ್ಕೆ ಹಾರಿಬರುತ್ತಿದ್ದವು. ಎಷ್ಟೇ ಒಣಗಿದ ಸೌದೆಯನ್ನು ಚಾಚಿದರೂ ಬೆಂಕಿ ಉರಿಯುತ್ತಲೇ ಇರಲಿಲ್ಲ. ರಾಕ್ಷಸರ ಮುಖದಲ್ಲಿ ಅಪಸ್ಮಾರ ತೋರುತ್ತಿತ್ತು. ಋತುಧರ್ಮಗಳೇ ವ್ಯತ್ಯಾಸವಾದವು. ಛಳಿ, ಮಳೆ, ಗಾಳಿಗಳೇ ಬದಲಾಯಿಸಿಹೋದವು. ಮರಗಳಿಂದ ರಕ್ತವು ಸುರಿಯು

ವಪೂಂಷಿ ದಾನವೇಂದ್ರಾಣಾಂ ನ ಪ್ರಕಾಶಂತ ಯಾದವ ।
ಉಷ್ಣಶೀತವಿಪರ್ಯಾಸ ಋತೂನಾಮುಪ್ಯದೃಶ್ಯತ ॥ ೯ ॥

ಪ್ರಸುಸ್ರುವುರ್ದ್ರುಮಾ ರಕ್ತಂ ವ್ಯಶೀರ್ಯಂತಶ್ಚ ಭೂಷಣಾಃ ।
ಖರಾ ಗೋಷು ವ್ಯಜಾಯಂತ ಮಾರ್ಜಾರಾ ಮೂಷಿಕಾಸು ಚ ॥ ೧೦ ॥

ಅಕಾಲೇ ಪುಷ್ಪಿತಾ ವೃಕ್ಷಾ ಅಕಾಲೇ ಫಲಿತಾ ದ್ರುಮಾಃ ।
ವಿನಾ-ವರ್ಷಂ ಮಹಾನದ್ಯಃ ಪ್ರತೀಪಂ ಜಗ್ಮುರೋಜಸಾ ॥ ೧೧ ॥

ಭಯಾನಕಾ ಜ್ಞಾತಭಯಸ್ಸುಘೋರಾ
ನುತ್ಪಾತಸಂಘಾನ್ಪ್ರಸಮೀಕ್ಷ್ಯ ರಾಜಾ ।

---

ತ್ತಿತ್ತು. ಹಸುವಿನ ಹೊಟ್ಟೆಯಲ್ಲಿ ಕತ್ತೆಯೂ, ಇಲಿಗಳ ಹೊಟ್ಟೆಯಲ್ಲಿ ಬೆಕ್ಕುಗಳೂ ಹುಟ್ಟುತ್ತಿದ್ದುವು. ಅಕಾಲದಲ್ಲಿ ಮರಗಳು ಹೂವನ್ನೂ, ಹಣ್ಣನ್ನೂ ಬಿಡುತ್ತಿದ್ದುವು. ಮಳೆ ಬಾರದೆ ಇದ್ದರೂ ಮಹಾನದಿಗಳು ಪೂರ್ಣಪ್ರವಾಹರೂಪವಾಗಿ ಹರಿಯುತ್ತಿದ್ದುವು. ಈ ರೀತಿಯಾಗಿ ಎಲ್ಲ ವಿಚಾರಗಳೂ ವಿರೋಧವಾಗಿ ನಡೆಯುತ್ತಿತ್ತು.

೧೨. ಈ ರೀತಿಯಾಗಿ ಭಯಂಕರವಾದ ದುಶ್ಶಕುನಗಳು ಪ್ರಾಪ್ತವಾದುದನ್ನು ನೋಡಿ ರಾಕ್ಷಸನಾದ ಸಾಲ್ವ (ಸೈಂಹಿಕೆಯ) ನು ಶುಕ್ರಾಚಾರ್ಯರನ್ನೂ ಉಳಿದ

ಸಾಲ್ವಸ್ಸಮಾಹೂಯ ಭೃಗೋಸ್ತನೂಜಂ
ದೈತ್ಯೈಸ್ಸಮೇತೋಥ ಚಕಾರ ಮಂತ್ರಂ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯವಜ್ರಸಂವಾದೇ ಔತ್ಪಾತಿಕಂ ನಾಮ
ಸಪ್ತತ್ರಿಂಶತ್ತಮೋಧ್ಯಾಯಃ



---

ರಾಕ್ಷಸಮುಖ್ಯರನ್ನೂ ಕರೆಯಿಸಿಕೊಂಡು ಮಂತ್ರಾಲೋಚನೆಯನ್ನು ಮಾಡಿದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಔತ್ಪಾತಿಕವೆಂಬ ಹೆಸರಿನ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಅಷ್ಟತ್ರಿಂಶತ್ತಮೋಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ರತ್ನಚಿತ್ರಾಂ ಸುವಿಪುಲಾಂ ಸಮಾಸಾದ್ಯ ಸಭಾಂ ತದಾ ।
ಸಿಂಹಿಕಾತನಯಸ್ಸಾಲ್ವಃ ಶುಕ್ರಂ ವಚನಮಬ್ರವೀತ್ ॥ ೧ ॥

॥ ಸಾಲ್ವ ಉವಾಚ ॥

ದೃಶ್ಯನ್ತ ಏತೇ ಭಗವನ್ ಉತ್ಪಾತಾ ಘೋರದರ್ಶನಾಃ ।
ಆಚಕ್ಷಾಣಾ ಮಹಾಯುದ್ಧಂ ವಿನಾಶಮಪಿ ದಾರುಣಂ ॥ ೨ ॥

---

## ಮೂವತ್ತೆಂಟನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳಿದನು—ವಿವಿಧ ರತ್ನಗಳಿಂದ ಚಿತ್ರವಿಚಿತ್ರವಾಗಿ ಕಂಗೊಳಿಸುತ್ತಿದ್ದ ಅತ್ಯಂತ ವಿಸ್ತಾರವಾದ ರಾಜಸಭೆಯನ್ನು ಪ್ರವೇಶಿಸಿ ಸಿಂಹಿಕಾ ಕುಮಾರನಾದ ಸಾಲ್ವನು ಶುಕ್ರಾಚಾರ್ಯರನ್ನು ಕುರಿತು ಈ ಮಾತನ್ನು ಹೇಳಿದನು.

೨. ಸಾಲ್ವನು ಹೇಳಿದನು— ಭಗವನ್ ! ಶುಕ್ರಾಚಾರ್ಯ ! ನಮಗೆಲ್ಲರಿಗೂ ಯುದ್ಧವನ್ನೂ ವಿನಾಶವನ್ನೂ ಸೂಚಿಸುವ, ಈಗಿನ ಭಯಂಕರವಾದ ಉತ್ಪಾತಗಳನ್ನು ನೋಡಿದರೆ ಬಹಳ ಭಯವುಂಟಾಗುತಲಿದೆ.

ರಿಪುಂ ನ ಚೈವ ಪಶ್ಯಾಮೋ ಯೇನ ಯುದ್ಧಂ ಭವಿಷ್ಯತಿ ।
ಸರ್ವಜ್ಞತ್ವಾದ್ಭವಾನ್ವೇತ್ಸಿ ತನ್ನಃ ಪ್ರಬ್ರೂಹಿ ಪೃಚ್ಛತಾಂ ॥ ೩ ॥

॥ ಶುಕ್ರ ಉವಾಚ ॥

ಆರಾಧ್ಯ ದೇವಂ ಬ್ರಹ್ಮಾಣಂ ತಪಸಾ ಸಿಂಹಿಕಾ ಪುರಾ ।
ತ್ರಿದಶೇಭ್ಯೋ ಹ್ಯವಧ್ಯತ್ವಂ ಸ್ವಸುತಾನಾಮುಲಬ್ಧ ಸಾ ॥ ೪ ॥

ವರದಾನಕೃತೋತ್ಸಾಹೈರ್ಭವದ್ಭಿರ್ವಿದ್ಯಯಾ ಮಮ ।
ನಿರ್ಜಿತಾಸ್ತ್ರಿದಶಾಸ್ಸರ್ವೇ ಶಂಕರಂ ಶರಣಂ ಗತಾಃ ॥ ೫ ॥

ತೇನ ಯುಷ್ಮದ್ವಧಾರ್ಥಾಯ ವಿಷ್ಣುರ್ಮಾನುಷರೂಪಧೃಕ್ ।
ಜಮದಗ್ನಿಸುತೋ ರಾಮಃ ಪ್ರೇಷಿತೋ ರಣಕರ್ಕಶಃ ॥ ೬ ॥

---

೩. ಯಾರೊಡನೆ ನಮಗೆ ಯುದ್ಧವು ಸಂಭವಿಸುವುದೋ ಅಂತಹ ಶತ್ರುವನ್ನಾರನ್ನೂ ಕಾಣಲಿಲ್ಲ. ನೀನು ಸರ್ವಜ್ಞನಾದುದರಿಂದ ಈ ಸಂಗತಿ ನಿನಗೆ ಗೊತ್ತಿದೆ. ಆ ವೃತ್ತಾಂತವನ್ನು ನಮ್ಮೊಡನೆ ದಯಮಾಡಿ ತಿಳಿಸು.

೪. ಶುಕ್ರಾಚಾರ್ಯನು ಹೇಳಿದನು—ಕೇಳಿರೈ! ರಾಕ್ಷಸರಿರಾ, ಪೂರ್ವದಲ್ಲಿ ಸಿಂಹಿಕಾನಾಮಕ ರಾಕ್ಷಸಿಯು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, ತನ್ನ ಮಕ್ಕಳಿಗೆ ದೇವತೆಗಳಿಂದ ಮರಣವುಂಟಾಗದಂತೆ ವರವನ್ನು ಪಡೆದುಕೊಂಡಳು.

೫. ನನ್ನಿಂದ ವಿದ್ಯೆಯನ್ನು ಕಲಿತ ನೀವು ನಿಮ್ಮ ತಾಯಿಯು ಪಡೆದ ವರದಾನದಿಂದ ಉತ್ಸಾಹವುಳ್ಳವರಾಗಿ, ದೇವತೆಗಳನ್ನು ಗೆದ್ದುಬಿಟ್ಟು ಅವರನ್ನು ಓಡಿಸಿಬಿಟ್ಟಿರಿ. ದಿಕ್ಕು ತಪ್ಪಿದ ಆ ದೇವತೆಗಳು ತಮ್ಮ ಕಷ್ಟವನ್ನು ಈಶ್ವರನಲ್ಲಿ ಹೋಗಿ ಹೇಳಿಕೊಂಡರು.

೬. ಆ ಪರಮೇಶ್ವರನಿಂದ ಮಹಾವಿಷ್ಣುವು ಆಜ್ಞಪ್ತನಾಗಿ ನಿಮ್ಮನ್ನು ಸಂಹಾರಮಾಡುವುದಕ್ಕೋಸ್ಕರವಾಗಿಯೇ, ರಣಭಯಂಕರನಾದ ಪರಶುರಾಮರೂಪದಿಂದ ಜಮದಗ್ನಿಪುತ್ರನಾಗಿ ಅವತಾರ ಮಾಡಿ ನಿಮ್ಮ ಬಳಿಗೆ ಕಳುಹಲ್ಪಟ್ಟಿರುವನು.

**ಸದಾ ದೇವೋ ಮಹಾತೇಜಾ ಮಾನುಷಂ ಸ ತು ಸಾಂಪ್ರತಂ ।**
**ಮನುಷ್ಯಾಚ್ಚ ಭಯಂ ಘೋರಂ ಬುಧ್ಯಸ್ವಾಸುರಸತ್ತಮ　　॥ ೭ ॥**

**॥ ಸಾಲ್ವ ಉವಾಚ ॥**

**ಭಗವಾನ್ ಸರ್ವದೇವಾನಾಮೀಶ್ವರೋ ಮಧುಸೂದನಃ ।**
**ತಸ್ಮಾತ್ಪರತರಂ ದೇವಂ ನಾನ್ಯಂ ಕಂಚನ ಶುಶ್ರುಮ　　॥ ೮ ॥**

**ಕಿಮರ್ಥಂ ಸ ಮಹಾತೇಜಾಃ ಶಂಕರಸ್ಯ ಮಹಾತ್ಮನಃ ।**
**ಆಜ್ಞಾಕಾರೀ ಭೃಗುಶ್ರೇಷ್ಠ ಸೈಂಹಿಕೇಯಂ ಜಿಘಾಂಸತಿ　　॥ ೯ ॥**

**॥ ಶುಕ್ರ ಉವಾಚ ॥**

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾऽऽತ್ಮಾನಂ ಸೃಜತ್ಯಸೌ　　॥ ೧೦ ॥**

---

೭. ಎಲೈ ! ಸಾಲ್ವನೆ, ಕೇಳು. ಪರಮಾತ್ಮನು ಮಹಾತೇಜಸ್ಸಿನಿಂದ ಈಗ ಮನುಷ್ಯನಾಗಿ ಜನಿಸಿರುವನಾದ್ದರಿಂದ, ನೀವು ಹುಲ್ಲಿಗಿಂತ ಕಡೆಯಾಗೆಣಿಸಿದ್ದ ಮನುಷ್ಯನಿಂದಲೇ ನಿಮಗೆ ಭಯಂಕರವಾದ ವಿಪತ್ತು ಕಾದಿರುವುದು.

೮. ಸಾಲ್ವರಾಜನು ಹೇಳಿದನು—ಸ್ವಾಮಿಾ! ಶುಕ್ರಾಚಾರ್ಯರೇ, ಸಕಲ ದೇವತೆಗಳಿಗೂ ಮಹಾವಿಷ್ಣುವೇ ಪ್ರಭುವು. ಅವನಿಗಿಂತ ದೊಡ್ಡವನಾದ ದೇವರು ಬೇರೆ ಯಾರೂ ಇಲ್ಲವೆಂದು ನಾವೂ ಕೇಳಿ ತಿಳಿದಿರುತ್ತೇವೆ.

೯. ಆಗಲಿ ! ವಿಷ್ಣುವು ಮನುಷ್ಯಾವತಾರವನ್ನೇ ಮಾಡಲಿ. ಅಡ್ಡಿಯಿಲ್ಲ. ಆದರೆ ಶಂಕರನ ಮಾತಿನಂತೆ ಸಾಲ್ವನನ್ನು ಸಂಹರಿಸುವುದಕ್ಕೆ ಕಾರಣವೇನು ? ತಿಳಿಸಬೇಕು; ಗುರೋ:

೧೦. ಶುಕ್ರಾಚಾರ್ಯರು ಹೇಳಿದರು—ಯಾವ ಯಾವ ಕಾಲದಲ್ಲಿ ಧರ್ಮವು ನಾಶವನ್ನೈದುವುದೋ, ಅಧರ್ಮವು ತಲೆದೋರುವುದೋ, ಆಯಾಯ ಕಾಲದಲ್ಲೆಲ್ಲಾ ಈ ಮಹಾವಿಷ್ಣುವು ತನ್ನನ್ನು ತಾನೇ ಅವತಾರಮಾಡಿಕೊಂಡು, ಸಗುಣ ರೂಪದಿಂದ ಉದಯಿಸುವನು.

**ಕದಾಚಿದ್ದೈತ್ಯದೇವೇಷು ಕದಾಚಿನ್ಮನುಜೇಷು ಚ ।**
**ಕದಾಚಿದಥ ತಿರ್ಯಕ್ಷು ಜ್ಞಾತ್ವಾ ಕಾರ್ಯಬಲಾಬಲಂ ॥ ೧೧ ॥**

**ಯದಾ ಭವತಿ ದೇವೇಷು ದೇವವಚ್ಚೇಷ್ಟತೇ ತದಾ ।**
**ತಿರ್ಯಕ್ಷು ಚ ಯದಾ ದೇವಸ್ತಿರ್ಯಗ್ವಚ್ಚೇಷ್ಟತೇ ತದಾ ॥ ೧೨ ॥**

**ಯದಾ ಭವತಿ ಮಾನುಷ್ಯೇ ತದಾ ಭವತಿ ಮರ್ತ್ಯವತ್ ।**
**ಮಾನುಷ್ಯಂ ರೂಪಮಾಸಾದ್ಯ ತಪಸಾ ತ್ರಿಪುರಾಂತಕಂ ॥ ೧೩ ॥**

**ಆರಾಧಯಾಮಾಸ ಹರಂ ಸ್ವದೇಹೇ ಪರಮಂ ನೃಪ ।**
**ಸ ತು ದೇವವರಸ್ಯಾಜ್ಞಾಂ ಪುರಸ್ಕೃತ್ಯ ಮಹಾತಪಾಃ ॥ ೧೪ ॥**

**ಯುಷ್ಮದ್ವಧಾರ್ಥಮಾಯಾತಿ ರಾಮೇಣ ಕೃತಲಕ್ಷಣಃ ।**
**ತಸ್ಮಾಚ್ಛಕ್ರೇಣ ಸಂಧಾನಂ ಭವತೋ ಮಮ ರೋಚತೇ ॥ ೧೫ ॥**

---

೧೧. ಒಂದಾವರ್ತಿ ರಾಕ್ಷಸನಾಗಿ ಒಮ್ಮೆ ದೇವತೆಯಾಗಿ ಮತ್ತೊಮ್ಮೆ ಮನುಷ್ಯನಾಗಿ ಮಗದೊಮ್ಮೆ ತಿರ್ಯಕ್ಪ್ರಾಣಿಯಾಗಿ, ಆಯಾ ಕಾರ್ಯಗಳ ಬಲಾಬಲಗಳನ್ನು ತಿಳಿದು ಭಗವಂತನು ಹುಟ್ಟುವನು.

೧೨. ದೇವತೆಗಳಲ್ಲಿ ಹುಟ್ಟಿದಾಗ ದೇವತೆಯಂತೆ ನಟಿಸುವನು ಪಶುಪ್ರಾಣಿಗಳಲ್ಲಿ ಜನಿಸಿದಾಗ ತಿರ್ಯಕ್ಪ್ರಾಣಿಗಳಂತೆಯೇ ನಟಿಸುತ್ತಾನೆ.

೧೩-೧೫. ಯಾವಾಗ ಮನುಷ್ಯನಾಗಿ ಜನಿಸುವನೋ ಆಗ ಮನುಷ್ಯನಂತೆಯೇ ಇರುತ್ತಾನೆ. ಈಗ ಭಗವಂತನು ಮನುಷ್ಯರೂಪವನ್ನು ಹೊಂದಿ ತಪಸ್ಸಿನಿಂದ ಈಶ್ವರನನ್ನು ಆರಾಧಿಸಿ ತನ್ನ ದೇಹದಲ್ಲಿ ಪರಮೇಶ್ವರನನ್ನೇ ಆವಾಹಿಸಿಕೊಂಡಿರುವನು. ಮತ್ತು ಪರಮೇಶ್ವರನ ಅಪ್ಪಣೆಯಂತೆ ಪರಶುರಾಮನಾಗಿ ಅವತರಿಸಿ ನಿಮ್ಮ ಸಂಹಾರಕ್ಕೋಸ್ಕರ ಸಿದ್ಧನಾಗಿದಾನೆ. ಆದ್ದರಿಂದ ನೀವೆಲ್ಲರೂ ಸೇರಿ ಇಂದ್ರನೊಡನೆ ಸಂಧಿಮಾಡಿಕೊಳ್ಳುವುದು ಯೋಗ್ಯವೆಂದು ನನಗೆ ತೋರುತ್ತದೆ.

ತ್ರಿವಿಷ್ಟಪಂ ಚ ದೇವಾನಾಂ ಭವತ್ವಸುರಸತ್ತಮ ।
ಪಾತಾಳನಿಲಯಾ ಯೂಯಂ ನಿವಸಧ್ವಂ ಗತಜ್ವರಾಃ ॥ ೧೬ ॥

ಅಹಂ ನಿವಾರಯಿಷ್ಯಾಮಿ ಶಂಕರೇಣ ಚ ಭಾರ್ಗವಂ ।
ಅನ್ಯಥಾ ನಿವಿಶಧ್ವಂ ಚ ಮನುಷ್ಯೇಣ ನಿರಾಕೃತಾಃ ॥ ೧೭ ॥

॥ ಮಾರ್ಕಂಡೇಯ ಉವಾಚ ॥

ಏವ ಮುಕ್ತಾಸ್ತು ಶುಕ್ರೇಣ ಬುಧ್ವಾ ದೈತೇಯದಾನವಾಃ ।
ಊಚುರ್ವಾಕ್ಯಂ ಸುಸಂರಬ್ಧಾಃ ಶುಕ್ರಂ ಭೃಗುಕುಲೋದ್ಭವಂ ॥ ೧೮ ॥

॥ ದೈತ್ಯಾ ಊಚುಃ ॥

ಏಕತ್ರಾಧಿಷ್ಠಿತಂ ಸರ್ವಂ ಜಗತ್ಸ್ಥಾವರಜಂಗಮಂ ।
ಯದ್ಯಸ್ಮಾತ್ಪ್ರತಿಯುಧ್ಯೇತ ನ ಭೀಸ್ತತ್ರಾಽಪಿ ವಿದ್ಯತೇ ॥ ೧೯ ॥

---

೧೬. ದೇವತೆಗಳಿಗೆ ಸ್ವರ್ಗಲೋಕವನ್ನು ಬಿಟ್ಟುಕೊಟ್ಟು ನೀವೆಲ್ಲರೂ ಸ್ವಸ್ಥವಾಗಿ ಪಾತಾಳಲೋಕಕ್ಕೆ ಹೋಗಿ ವಾಸಮಾಡುವುದೊಳ್ಳೆಯದೆಂದು ನನಗೆ ತೋರುತ್ತದೆ.

೧೭. ನಾನು ಶಂಕರನಿಂದ ಪರಶುರಾಮನನ್ನು ನಿಗ್ರಹಮಾಡಿಸುತ್ತೇನೆ. ಆ ರೀತಿ ನೀವು ಮಾಡದೆ ಹೋದರೆ ಮನುಷ್ಯರಿಂದ ನಿರಾಕೃತರಾಗಿ ವ್ಯರ್ಥವಾಗಿ ಸತ್ತು ಹೋಗುತ್ತೀರಿ.

೧೮. ಮಾರ್ಕಂಡೇಯನು ಹೇಳಿದನು — ಈ ರೀತಿ ಶುಕ್ರಾಚಾರ್ಯರು ಹೇಳಿದೊಡನೆಯೇ ಆ ದಿತಿಯಪುತ್ರರಾದ ರಾಕ್ಷಸರು ಶುಕ್ರನನ್ನು ಕುರಿತು ಸಡಗರದಿಂದ ಈ ಮಾತನ್ನು ಹೇಳಿದರು.

೧೯–೨೦. ದೈತ್ಯರು ಹೇಳಿದರು — ಸ್ಥಾವರಜಂಗಮಾತ್ಮಕವಾದೀ ಜಗತ್ತು ಒಂದೇ ಕಡೆಯಲ್ಲಿ ನಿಂತಿದೆ. ಈ ಭೂಮಿಯಲ್ಲಿ ಯುದ್ಧಮಾಡಲು ನಮಗೆ ಹೆದರಿಕೆ

ತೇ ಕಥಂ ಮಾನುಷಾದ್ಭೀತಾ ನಾಕಂ ತ್ಯಕ್ಷ್ಯಾಮ ಶತ್ರವೇ ।
ಶಂಕರಂ ತಂ ವಿಜೇಷ್ಯಾಮೋ ಯೇನಾಸೌ ಪ್ರೇಷಿತೋ ದ್ವಿಜಃ ॥ ೨೦ ॥

॥ ಶುಕ್ರ ಉವಾಚ ॥

ಏಕತ್ರ ಪಿಂಡಿತಂ ಸರ್ವಂ ಜಗತ್ಸ್ಥಾವರ ಜಂಗಮಂ ।
ಏಕತ್ರ ಭಗವಾನ್ ವಿಷ್ಣುರ್ಜಗತಸ್ಸೋತಿರಿಚ್ಯತೇ ॥ ೨೧ ॥

ಸ ನ ಶಕ್ಯೋ ಯುಧಾ ಜೇತುಂ ನೈವ ದೇವೋ ಮಹೇಶ್ವರಃ ।
ತೇ ಯೂಯಂ ಪ್ರಾಕೃತಿಂ ಬುದ್ಧಿಂ ತ್ಯಕ್ತ್ವಾ ಸರ್ವೇ ಮಹಾಸುರಾಃ ॥ ೨೨ ॥

ಸಂಧಿಂ ಕುರುತ ದೇವೇನ ಶಕ್ರೇಣಾ ಮಿತ್ರಘಾತಿನಾ ॥
ಶಕ್ರಕಾರ್ಯೇ ಸದೋದ್ಯುಕ್ತೋ ದೇವದೇವೋ ಜನಾರ್ದನಃ ।
ಯೇನ ದೈತ್ಯಾ ವಿನಿಹತಾಃ ಪೂರ್ವೇ ಪೂರ್ವತರಾಶ್ಚ ಯೇ ॥ ೨೩ ॥

---

ಯಿಲ್ಲ. ಇಂಥಾ ನಾವು ಮನುಷ್ಯರಿಗೆ ಹೆದರಿ ಸ್ವರ್ಗವನ್ನು ಶತ್ರುಗಳಿಗೆ ಖಂಡಿತವಾಗಿ ಬಿಟ್ಟುಕೊಡಲಾರೆವು. ಯಾವ ಶಂಕರನಿಂದ ಈ ಬ್ರಾಹ್ಮಣನು ಕಳುಹಲ್ಪಟ್ಟಿರುವನೋ ಆ ಶಂಕರನನ್ನೇ ನಾವು ಗೆಲ್ಲುತ್ತೇವೆ.

೨೧–೨೨. ಶುಕ್ರನು ಹೇಳಿದನು—ಸ್ಥಾವರಜಂಗಮಾತ್ಮಕವಾದೀ ಜಗತ್ತು ಒಂದೇ ಕಡೆಯಲ್ಲಿ ಗೊಳ (ಉಂಡೆ) ವಾಗಿದೆ. ಭಗವಂತನಾದ ಮಹಾವಿಷ್ಣುವು ಜಗತ್ತಿಗಿಂತ ದೊಡ್ಡವನಾಗಿದಾನೆ. ಮಹೇಶ್ವರನಾದರೋ ಯುದ್ಧದಲ್ಲಿ ಗೆಲ್ಲಲಶಕ್ಯನಾದವನು. ಆದ್ದರಿಂದ ನೀವು ನಿಮ್ಮ ಈ ಸಣ್ಣ ಬುದ್ಧಿಯನ್ನು ದೂರಮಾಡಿ, ಶತ್ರುಸಂಹಾರಕನಾದ ಇಂದ್ರನೊಡನೆ ಸಂಧಿಮಾಡಿಕೊಳ್ಳೋಣವು ಯುಕ್ತವೆಂದು ಮತ್ತೊಮ್ಮೆ ಹೇಳುತ್ತೇನೆ.

೨೩–೩೬. ಎಲೈ ರಾಕ್ಷಸರೇ, ಕೇಳಿರಿ. ಸರ್ವದಾ ಮಹಾವಿಷ್ಣುವು ಇಂದ್ರನ ಕೆಲಸಕ್ಕೋಸ್ಕರವಾಗಿ ಅನೇಕಾವರ್ತಿ ಅವತರಿಸಿ ನಿಮ್ಮ ಉತ್ಪತ್ತಿಗೆ ಪೂರ್ವದಲ್ಲಿ ಇದ್ದ ಮಹಾವೀರರನ್ನೆಲ್ಲಾ ಸಂಹರಿಸಿರುತ್ತಾನೆ. ಅವರ ಹೆಸರನ್ನು ಕೇಳಿರಿ.

ಶಂಬರೋ ನಮುಚಿ ಶ್ಶಂಬುಃ ಕಾರ್ತವೀರ್ಯಃ ಕೃತಾಗಮಃ ।
ಹಿರಣ್ಯಕಶಿಪುಃ ಕೇಶೀ ಹಿರಣ್ಯಾಕ್ಷೋ ಮದೋತ್ಕಟಃ ॥ ೨೪ ॥

ಮಧುಶ್ಚ ಕೈಟಭಶ್ಚೈವ ವಿಟೋ ಧೂಮೋತಿಕೋಪನಃ ।
ಹಯಗ್ರೀವೋ ನಿಸುಂದಶ್ಚ ಸುಂದಶ್ಚಂದ್ರಾರ್ಕಲೋಚನಃ ॥ ೨೫ ॥

ಚಂದ್ರಾರ್ಕಮರ್ದನಶ್ಚೈವ ಚಂದ್ರಹರ್ತಾ ರಣಪ್ರಿಯಃ ।
ಸೂರ್ಯಶತ್ರುರ್ಜಿತಾಮಿತ್ರೋ ಯಜ್ಞಹಾ ಯಜ್ಞತಾಪನಃ ॥ ೨೬ ॥

ಮೇಘನಾದೋ ಮಹಾರೋಮಾ ಮೇಘನಾದೋ ಭಯಾನಕಃ ।
ದಶಗ್ರೀವಶ್ಶತಗ್ರೀವೋ ಮಹಾಗ್ರೀವಶ್ಚ ದಾನವಃ ॥ ೨೭ ॥

ಕಾಲಕಃ ಕಾಲಕೇಯಶ್ಚ ಕಾಲನೇಮಿಃ ಸುಲೋಚನಃ ।
ಕಾಲಶ್ಚ ಕಾಲಕಲ್ಪಶ್ಚ ಮಕರಾಕ್ಷೋ ಜನಾಂತಕಃ ॥ ೨೮ ॥

ಅಂತಃ ಕೇಶಮನೋ ಭೀಮೋ ದೇವಾಂತಕ ನರಾಂತಕೌ ।
ಕ್ರೋಧಹಾ ಬಹುನೇತ್ರಶ್ಚ ಮಹಾಕಾಲೋ ಜಲಾಂತಕಃ ॥ ೨೯ ॥

ಏಕಲವ್ಯಸ್ಸ ಚಾಧಾರೋ ದುರ್ಮುಖೋ ದುರ್ಧರೋ ವಡಿಃ ।
ಇಂದುತಾಪನ ರಂಭೌ ಚ ರಣಚಂಡಹರಪ್ರಿಯೌ ॥ ೩೦ ॥

---

ಶಂಬರ, ನಮುಚಿ, ಶಂಬು, ಕಾರ್ತವೀರ್ಯ, ಕೃತಾಗಮ, ಹಿರಣ್ಯಕಶಿಪು, ಕೇಶಿ, ಹಿರಣ್ಯಾಕ್ಷ, ಮದೋತ್ಕಟ, ಮಧು, ಕೈಟಭ, ವಿಟ, ಧೂಮ, ಅತಿಕೋಪನ, ಹಯಗ್ರೀವ, ಸುಂದ, ಚಂದ್ರಾರ್ಕಲೋಚನ, ಚಂದ್ರಹರ್ತಾ, ರಣಪ್ರಿಯ, ಸೂರ್ಯಶತ್ರು, ಜಿತಾಮಿತ್ರ, ಯಜ್ಞಹಾ, ಯಜ್ಞತಾಪನ, ಮೇಘನಾದ, ಮಹಾರೋಮ, ಮೇಘವಾದ, ಭಯಾನಕ, ದಶಗ್ರೀವ, ಶತಗ್ರೀವ, ಮಹಾಗ್ರೀವ, ಕಾಲಕ, ಕಾಲಕೇಯ, ಕಾಲನೇಮಿ, ಸುಲೋಚನ, ಕಾಲ, ಕಾಲಕಲ್ಪ, ಮಕರಾಕ್ಷ, ಜನಾಂತಕ, ಅಂತ, ಕೇಶಮನ, ಭೀಮ, ದೇವಾಂತಕ, ನರಾಂತಕ, ಕ್ರೋಧಹಾ, ಬಹುನೇತ್ರ, ಮಹಾಕಾಲ, ಜಲಾತಂಕ, ಏಕಲವ್ಯ, ದುರ್ಮುಖ, ದುರ್ಧರ, ಬಡಿ, ಇಂದುತಾಪನ, ರಂಭ, ರಣಚಂಡ, ಹರಪ್ರಿಯ, ಕಿರೀಟೀ, ಗಜವಕ್ತ್ರ, ಮಹಾಸಾಲ, ಎಲೋಹಿತ,

ಕಿರೀಟೀ ಗಜವಕ್ತ್ರಶ್ಚ ಮಹಾಸಾಲೋ ವಿಲೋಹಿತಃ ।
ಹ್ರಾದಾನುಹ್ರಾದಪ್ರಹ್ರಾದ ವೃಕ್ಷರಕ್ಷರದಾರುಣಾಃ ॥ ೩೧ ॥

ಶತಭಶ್ಶಲಭಶ್ಚೈವ ಕೂಪನಶ್ಚ ಮಹಾಸುರಃ ।
ವಿಪ್ರಚಿತ್ತಿಃಶಿವಃಶಂಕುರಯುಶಂಕು ಸ್ತಥೈವ ಚ ॥ ೩೨ ॥

ಅಯಶ್ಶಿರಾ ಅಶ್ವಶಿರಾ ಭೀಮುದಕ್ಷೋ ಗುಹಾಶಯಃ ।
ವೇಗವಾನ್ಕೇತುಮಾನುಗ್ರಃ ಸೋಗ್ರವಿಗ್ರೋ ಮಹಾಸುರಃ ॥ ೩೩ ॥

ಪುಷ್ಕರಃ ಪುಷ್ಕಳಶ್ಚೈವ ಸಾಲ್ವೋಶ್ವಪತಿರೇವ ಚ ।
ಕುಂಭೋ ನಿಕುಂಭಶ್ಶತದಾ ಸಂಗ್ರಹೋ ಗಗನಪ್ರಿಯಃ ॥ ೩೪ ॥

ಏತೇ ಚಾನ್ಯೇಚ ವಿಖ್ಯಾತಾ ದೈತೇಯಾಸ್ಸಮರೋದ್ಧತಾಃ ।
ಸರ್ವೇ ಲಬ್ಧವರಾಃಶೂರಾಃ ಸರ್ವೇ ಚ ಗತಮನ್ಯವಃ ॥ ೩೫ ॥

ಸರ್ವೈಸ್ತ್ರಿದಶರಾಜ್ಯಾನಿ ಕಾರಿತಾನಿ ಬಲೋದ್ಧತೈಃ ।
ತೇ ಹತಾಸ್ತೇನ ದೇವೇನ ವಾಸವಪ್ರಿಯಕಾಮ್ಯಯಾ ॥ ೩೬ ॥

ಕೇಚಿನ್ಮನುಷ್ಯರೂಪೇಣ ತಿರ್ಯಗ್ರೂಪೇಣ ಚಾಪರೇ ।
ಕೇಚಿಚ್ಚ ದೇವರೂಪೇಣ ನಿಹತಾ ಭೂರಿತೇಜಸಾ ॥ ೩೭ ॥

---

ಹ್ರಾದ, ಅನುಹ್ರಾದ, ಪ್ರಹ್ರಾದ, ವೃಕ್ಷ, ರಕ್ಷರ, ದಾರುಣ, ಶತಭ, ಶಲಭ, ಕೂಪನ, ಮಹಾಸುರ, ಪುಷ್ಕರ, ಪುಷ್ಕಲ, ಸಾಲ್ವ, ಅಶ್ವಪತಿ, ಕುಂಭ, ನಿಕುಂಭ, ಶತದಾ, ಸಂಗ್ರಹ, ಗಗನಪ್ರಿಯ, ಹೀಗೆಯೇ ಇನ್ನೂ ಎಷ್ಟೆಷ್ಟೋ ಮಂದಿ ಶೂರರಾದ, ವೀರರಾದ, ಸಮರೋದ್ಧತರಾದ ಪ್ರಖ್ಯಾತರಾದ, ಲಬ್ಧವರರಾದ ಮಹಾಮಹಾ ರಾಕ್ಷಸರೆಲ್ಲಾ ಸ್ವರ್ಗವನ್ನು ಜಯಿಸಿ, ಇಂದ್ರನನ್ನು ಗೆದ್ದು, ಕೊನೆಗೆ ಮಹಾ ವಿಷ್ಣುವಿನಿಂದ ಬೇರೆ ಬೇರೆ ಅವತಾರಗಳಲ್ಲಿ ಹತರಾಗಿ ಹೋದರು.

೩೭. ಕೆಲವರು ಮನುಷ್ಯರೂಪದಿಂದ, ಕೆಲವರು ಮೃಗರೂಪದಿಂದ, ಕೆಲವರು ದೇವತಾ ರೂಪದಿಂದ ಸಂಹೃತರಾಗಿ ಹೋದರು.

॥ ಸಾಲ್ವ ಉವಾಚ ॥

ಜಾನಾಮಿ ತಸ್ಯ ಮಾಹಾತ್ಮ್ಯಂ ದೇವದೇವಸ್ಯ ಶಾರ್ಙ್ಗಿಣಃ ।
ಅಹಂ ಸ್ವಮರಣಂ ಮತ್ವಾ ತೇನ ಯೋತ್ಸ್ಯಾಮಿ ಭಾರ್ಗವ ॥ ೩೮ ॥

ವಿಶಿಷ್ಟಾನ್ಮರಣಂ ಶ್ರೇಷ್ಠಂ ನ ಹೀನಾದ್ವಿಜಯೋ ರಣೇ ।
ವಿಷ್ಣೋಃ ಕರವಿನಷ್ಟಾನಾಂ ಭೂಯೋ ರಾಜ್ಯಂ ಭವಿಷ್ಯತಿ ॥ ೩೯ ॥

॥ ಮಾರ್ಕಂಡೇಯ ಉವಾಚ ॥

ಇತ್ಯೇವಮುಕ್ತಸ್ತ್ವಸುರಾಧಿಪೇನ
ಭೃಗುಪ್ರಧಾನೋ ಭಗವಾನ್ ಸ ಶುಕ್ರಃ ।
ಜ್ಞಾತ್ವಾ ಸದೈತ್ಯಾನ್ ಸಕಲಾನ್ ವಿನಿಷ್ಟಾನ್
ಜಗಾಮ ಕಾಷ್ಠಾಮಪರಾಮಭೀಷ್ಟಾಂ ॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶುಕ್ರಸಾಲ್ವಸಂವಾದೋ ನಾಮ ಅಷ್ಟತ್ರಿಂಶತ್ತಮೋಽಧ್ಯಾಯಃ

---

೩೮–೩೯. ಸಾಲ್ವನು ಹೇಳಿದನು—ಸ್ವಾಮಿ ! ಗುರುಗಳೇ, ಆ ಮಹಾವಿಷ್ಣುವಿನ ಮಹಿಮೆಯನ್ನು ನಾನು ಬಲ್ಲೆನು. ನಾನು ನನ್ನ ಮರಣವನ್ನು ತಿಳಿದೇ ಆತನೊಡನೆ ಯುದ್ಧ ಮಾಡುತ್ತೇನೆ. ಹೀನರಿಗೆ ಮರೆಹೊಗುವುದಕ್ಕಿಂತ ಯುದ್ಧದಲ್ಲಿ ಮರಣ ಹೊಂದುವುದೇ ಮೇಲು. ವಿಷ್ಣುವಿನ ಕಯ್ಯಿಂದ ಮರಣಹೊಂದಿದವರು ವೀರಸ್ವರ್ಗವನ್ನೇ ಹೊಂದುತ್ತಾರೆ.

೪೦. ಮಾರ್ಕಂಡೇಯನು ಹೇಳಿದನು—ಈ ರೀತಿ ಸಾಲ್ವನು ಉತ್ತರಹೇಳಿದ್ದನ್ನು ನೋಡಿ ಶುಕ್ರಾಚಾರ್ಯನು ಆ ಸಮಸ್ತರಾಕ್ಷಸರೂ ಸತ್ತರೆಂದೇ ಭಾವಿಸಿ ಬೇರೆ ಕೆಲಸಕ್ಕಾಗಿ ಹೊರಟುಹೋದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಶುಕ್ರಸಾಲ್ವಸಂವಾದವೆಂಬ ಹೆಸರಿನ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಏಕೋನ ಚತ್ವಾರಿಂಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ಗತೇ ಶುಕ್ರೇ ಗವಿಷ್ಠೋ ವಾಕ್ಯಮಬ್ರವೀತ್ ।
ರಾಜನ್ ಶುಕ್ರಸ್ಯ ವಚನಂ ಕ್ರಿಯತಾಮವಿಚಾರಯನ್ ॥ ೧ ॥

ಸ್ವಪ್ನಾ ಹಿ ಸುಮಹಾಘೋರಾ ದೃಶ್ಯಂತೇ ಭಯವರ್ಧನಾಃ ।
ಭವತಾಂ ಹಿ ವಿನಾಶಾಯ ರಾತ್ರ್ಯಂತೇ ಸತತಂ ವಿಭೋ ॥ ೨ ॥

ಭವಾನ್ ಸ್ವಪ್ನೇ ಮಯಾ ದೃಷ್ಟೋ ರಕ್ತಸ್ರಗನುಲೇಪನಃ ।
ಉಷ್ಟ್ರೇಣ ಶಿಶುಮಾರೇಣ ವರಾಹೇಣ ತಥಾ ವ್ರಜನ್ ॥ ೩ ॥

---

## ಮೂವತ್ತೊಂಭತ್ತನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳಿದನು — ಈ ರೀತಿ ಹೇಳಿ ಶುಕ್ರನು ಹೊರಟು ಹೋದಮೇಲೆ ಸಾಲ್ವನನ್ನು ಕುರಿತು ಆ ವಂಶದ ಹಿರಿಯನಾದ ಗವಿಷ್ಠನು ಎಲೈ ! ರಾಜನೇ, ಶುಕ್ರನ ಮಾತಿನಂತೆ ನೀನು ಖಂಡಿತವಾಗಿ ನಡೆದುಕೋ ! ಎಂದನು.

೨. ರಾತ್ರಿಯ ಕೊನೆಯ ಜಾವದಲ್ಲಿ ಮಹಾ ಕೆಟ್ಟಕೆಟ್ಟ ಕನಸುಗಳಾಗುತಲಿವೆ. ಇದನ್ನು ಸ್ಮರಿಸಿದರೇ ಭಯವು ಹೆಚ್ಚಾಗುತ್ತದೆ. ಇದೆಲ್ಲವೂ ನಿಮ್ಮ ವಿನಾಶಕ್ಕೋಸ ರವೇ ಆಗುತಲಿದೆಯೆಂದು ಕಾಣಿಸುತಲಿದೆ.

೩–೪. ಎಲೈ ! ರಾಜನೇ, ನೀನು ನನ್ನ ಸ್ವಪ್ನದಲ್ಲಿ ಕೆಂಪುಹೂವಿನ ಹಾರ ವನ್ನು ಧರಿಸಿ, ಒಂದು ಮಗುವನ್ನು ಕೊಂದು ತಿನ್ನುತ್ತಿದ್ದ ಕಾಡುಹಂದಿಯ ಜೊತೆ

ತೈಲಾಕ್ತಾಶ್ಚಾಪರೇ ದೈತ್ಯಾಃ ಖರಯಾನಮುಪಾಶ್ರಿತಾಃ ।
ಪತಂತಃ ಪರ್ವತಾ ದೃಷ್ಟ್ವಾ ರಾಜಂಸ್ತೇ ಭಯಕಾರಣಂ ॥ ೪ ॥

ಕೇಚಿತ್ಕೃಷ್ಣಾಂಬರಧರಾಃ ಕೇಚಿತ್ಕೃಸರಭೋಜಿನಃ ।
ಕೇಚಿತ್ಪಂಕಗತಾ ದೃಷ್ಟಾಃ ಕೇಚಿದ್ಭಸ್ಮಶಯಾಗತಾಃ ॥ ೫ ॥

ಕೇಚಿದ್ವಿವಸ್ತ್ರಯಾ ನಾರ್ಯಾ ಕೃಷ್ಯಂತೇ ದಕ್ಷಿಣಾಂ ದಿಶಂ ।
ಕಾಚಿದ್ರಕ್ತಾಂಬರಾ ನಾರೀ ನೀಯತೇ ದಕ್ಷಿಣಾಂ ದಿಶಂ ॥ ೬ ॥

ಕೇಚಿನ್ನೃತ್ಯಂತಿ ಭೂಪಾಲಾ ಹಸಂತಿ ಚ ತಥಾಪರೇ ।
ಕೇಚಿನ್ಮುಂಡಾ ಮಯಾ ದೃಷ್ಟಾಃ ಕೇಚಿತ್ಕಾಷಾಯವಾಸಸಃ ॥ ೭ ॥

ಚಂಡಾಲಸ್ಕಂಧಗಾಃ ಕೇಚಿತ್ ಕೇಚಿತ್ಕಿಂಶುಕ ಸಂಸ್ಥಿತಾಃ ।
ಗಜಾಶ್ವಪತ್ತಿಸೈನ್ಯೇನ ಸರ್ವೇಣ ಚ ಭವಾನ್ಯುತಃ ॥ ೮ ॥

---

ಯಲ್ಲಿ ಹೋದುದನ್ನು ಕಂಡೆನು. ಬಾಕಿ ರಾಕ್ಷಸರು ಮೈಗೆಲ್ಲಾ ಎಣ್ಣೆಯನ್ನು ಬಳಿದುಕೊಂಡು, ಕತ್ತೆಕಟ್ಟಿದ ಬಂಡಿಯ ಮೇಲೆ ಹೋಗುತ್ತಿದ್ದರು, ಬೆಟ್ಟಗಳು ಉರುಳಿ ಉರುಳಿ ಬೀಳುತ್ತಿದ್ದವು. ಇದೆಲ್ಲಾ ನಿನ್ನ ನಾಶಕ್ಕೆ ಕಾರಣಗಳು.

೫. ಕೆಲವು ಜನರು ಕರೀಬಟ್ಟೆಯನ್ನು ಉಟ್ಟಿದ್ದರು. ಮತ್ತೆ ಕೆಲವರು ಎಳ್ಳು ಹಾಕಿದ ಅನ್ನವನ್ನು ತಿನ್ನುತ್ತಿದ್ದರು. ಕೆಲವರು ಕೆಸರಿನಲ್ಲಿ ಹೊರಳಾಡುತ್ತಿದ್ದರು. ಮತ್ತನಿಬರು ಬೂದಿಯ ರಾಶಿಯಲ್ಲಿ ಬಿದ್ದುಕೊಂಡಿದ್ದರು.

೬. ಕೆಲವು ಜನರು ಬರೀಬತ್ತಲೆಯಿದ್ದ ಹೆಂಗಸೋರ್ವಳಿಂದ ದಕ್ಷಿಣ ದಿಕ್ಕಿನ ಕಡೆಗೆ ಎಳೆಯಲ್ಪಡುತ್ತಿದ್ದರು. ಮತ್ತೋರ್ವ ಕೆಂಪಿನಸೀರೆಯನ್ನುಟ್ಟಿದ್ದ ನಾರಿಯು ಕೆಲವರನ್ನು ದಕ್ಷಿಣದಿಕ್ಕಿನ ಕಡೆಗೆ ಎಳೆದೊಯ್ಯುತ್ತಿದ್ದಳು.

೭-೧೦. ಕೆಲವುರಾಜರು ಕುಣಿಯುತ್ತಿದ್ದರು ಕೆಲವರು ನಗುತ್ತಿದ್ದರು. ಕೆಲವು ತಲೆಯಿಲ್ಲದ ಮುಂಡಗಳನ್ನು ನಾನು ನೋಡಿದೆನು. ಕೆಲವುಮಂದಿ ಕಾವಿಯ ಬಟ್ಟೆಯನ್ನುಟ್ಟವರನ್ನು ನಾನು ಕಂಡೆನು. ಹೊಲೆಯರ ಹೆಗಲಮೇಲೆ ಕೆಲವರು ಹೋಗುತ್ತಿದ್ದರು. ಕೆಲವರು ಮುತ್ತುಗದ ಮರದಬಳಿ ಕುಳಿತಿದ್ದರು. ಅವರೆಲ್ಲರೊಡನೆ ನೀನು ಆನೆ, ಕುದುರೆ, ಕಾಲಾಳು, ರಥಗಳಿಂದೊಡಗೂಡಿದ ಸೈನ್ಯದೊಡನೆ ಹೊರಟು

**ವಾಪೀಂ ಸಕಲುಷಾಂ ಪ್ರಾಪ್ಯ ನಿಮಗ್ನೋ ಗೋಮಯೇ ಹ್ರದೇ ।**
**ರಾಜಶ್ರೀಶ್ಚ ಮಯಾ ದೃಷ್ಟಾ ಶಕ್ರಾಲಿಂಗನತತ್ಪರಾ ॥ ೯ ॥**

**ತಸ್ಮಾನ್ಮೇ ರೋಚತೇ ಸಂಧಿಃ ತವ ಶಕ್ರೇಣ ಪಾರ್ಥಿವ ।**
**ಪ್ರಾಣಾನ್ ರಕ್ಷಸ್ವ ಭೋ ರಾಜನ್ ಜೀವನ್ ಭದ್ರಾಣ್ಯವಾಪ್ಸ್ಯತೇ ॥ ೧೦ ॥**

**॥ ಸಾಲ್ವ ಉವಾಚ ॥**

**ಯದೈವ ಭಗವಾನ್ ವಿಷ್ಣುಃ ಶ್ರುತಶ್ಶತ್ರುರ್ಮಯಾನಘ ।**
**ತತ್ರೈವ ದೇವ ತಚ್ಛ್ರುತ್ವಾ ರಾಜ್ಯಂ ತ್ಯಕ್ತಂ ಮಯಾ ತಥಾ ॥ ೧೧ ॥**

**ಇಷ್ಟಂ ಯಜ್ಞೈಸ್ತಪಸ್ತಪ್ತಂ ರಾಜ್ಯಂ ಕೃತಮಕಂಟಕಂ ।**
**ಮೂರ್ಧ್ನಿ ಸ್ಥಿತಮಮಿತ್ರಾಣಾಂ ಸುಹೃದಃ ಪರಿಪಾಲಿತಾಃ ॥ ೧೨ ॥**

---

ಕಸಕಡ್ಡಿಗಳಿಂದ ತುಂಬಿದ್ದ ಒಂದು ಪಾಳು ಭಾವಿಯಬಳಿ ತಿಪ್ಪೆಗುಂಡಿಯೊಳಕ್ಕೆ ಬಿದ್ದುಬಿಟ್ಟೆ. ಆಗ ನಿನ್ನ ರಾಜ್ಯಲಕ್ಷ್ಮಿಯು ನಿನ್ನನ್ನು ತ್ಯಾಗಮಾಡಿ ಇಂದ್ರನನ್ನು ಆಲಿಂಗಿಸಲು ಆಸಕ್ತಳಾಗಿದ್ದಳು. ಆದ್ದರಿಂದ ಎಲೈ! ರಾಜನೇ, ನೀನು ಈಗಲೇ ಹೋಗಿ ಇಂದ್ರನೊಡನೆ ಸಂಧಿಮಾಡಿಕೊಂಡು ಪ್ರಾಣಗಳನ್ನುಳಿಸಿಕೊಳ್ಳಯ್ಯ! ಆಯುಸ್ಸೊಂದಿದ್ದರೆ ಎಷ್ಟೋ ಭೋಗಗಳನ್ನೂ ಮಂಗಳಗಳನ್ನೂ ಅನುಭವಿಸಬಹುದು.

೧೧. ಸಾಲ್ವರಾಜನು ಹೇಳಿದನು—ನನಗೆ ಶತ್ರುವಾಗಿ ವಿಷ್ಣುವೇ ಹುಟ್ಟಿರುವನೆಂದು ನನಗೆ ಯಾವಾಗ ಕಿವಿಗೆ ಬಿದ್ದಿತೋ ಆ ಕೂಡಲೇ ನಾನು ರಾಜ್ಯವನ್ನು ಬಿಟ್ಟು ಹೊರಟೆನು.

೧೨. ಬೇಕಾದ ಯಜ್ಞಯಾಗಗಳಿಂದ ಯಜ್ಞಮಯನಾದ ವಿಷ್ಣುವನ್ನು ತೃಪ್ತಿಪಡಿಸಿದೆನು. ಶತ್ರುಗಳ ತಲೆಯಮೇಲಿದ್ದ ರಾಜ್ಯವನ್ನು ನಿಷ್ಕಂಟಕವಾಗಿ ಮಾಡಿದೆನು. ಸ್ನೇಹಿತರನ್ನು ಕಾಪಾಡಿದೆನು.

ಭೃತೋ ಭೃತ್ಯಜನಸ್ಸರ್ವಃ ಕೃತಕೃತ್ಯಾಸ್ತತೋ ವಯಂ ।
ಗೋವಿಂದಾನ್ಮರಣಂ ಪ್ರಾಪ್ಯ ಭೂಯೋ ರಾಜ್ಯಂ ಭವಿಷ್ಯತಿ　　॥ ೧೩ ॥

॥ ಮಾರ್ಕಂಡೇಯ ಉವಾಚ ॥

ಇತ್ಯೇವ ವಾಕ್ಯಂ ತು ನಿಶಮ್ಯ ರಾಜ್ಞೋ
ಮೇನೇ ತದಾ ಯುಕ್ತತಮಂ ಗವಿಷ್ಠಃ ॥
ತೂಷ್ಣೀಂ ಬಭೂವಾಥ ಸುನಿಶ್ಚಿತಾತ್ಮಾ
ಮೇನೇ ಚ ದೈತ್ಯಾನ್ ಸಮರೇ ವಿನಷ್ಟಾನ್　　॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಸ್ವಪ್ನಾಧ್ಯಾಯೋ ನಾಮ
ಏಕೋನಚತ್ವಾರಿಂಶೋಽಧ್ಯಾಯಃ



---

೧೩. ಭೃತ್ಯಜನರು ಸಂರಕ್ಷಿತರಾದರು. ನಾವು ಕೃತಕೃತ್ಯರಾಗಿದೇವೆ. ಗೋವಿಂದನಿಂದ ಮರಣ ಸಂಭವಿಸಿದರೆ ಉತ್ತಮವೇ ಆಯಿತು. ದೇವರಿಂದ ಮರಣವನ್ನು ಹೊಂದಿದರೆ ಪುನಃ ರಾಜ್ಯಸುಖವು ಸಿಕ್ಕೇ ಸಿಗುತ್ತದೆ.

೧೪. ಮಾರ್ಕಂಡೇಯನು ಹೇಳಿದನು-- ಯುಕ್ತಿಯುಕ್ತವಾಗಿ ಹೇಳಿದ ರಾಜನ ಮಾತನ್ನು ಕೇಳಿ ಗವಿಷ್ಠನಾಮಕ ಮಂತ್ರಿಮಹಾಶಯನು ಯಾವ ಮಾತನ್ನೂ ಆಡಲಾರದೆ ಸುಮ್ಮನಾದನಲ್ಲದೆ, ಯುದ್ಧದಲ್ಲಿ ಸಕಲ ರಾಕ್ಷಸರೂ ಸತ್ತರೆಂದೇ ನಿಶ್ಚಯ ಮಾಡಿಕೊಂಡನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಸ್ವಪ್ನಾಧ್ಯಾಯವೆಂಬ ಹೆಸರಿನ
ಮೂವತ್ತೊಂಭತ್ತನೇ ಅಧ್ಯಾಯವು ಮುಗಿದುದು



॥ ಶ್ರೀಃ ॥

ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

ಚತ್ವಾರಿಂಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಏತಸ್ಮಿನ್ನೇವ ಕಾಲೇ ತು ಸಾಲ್ವಸ್ಯ ಚ ಮಹಾತ್ಮನಃ ।
ಶೀರ್ಷಮಾತ್ರಾವಶಿಷ್ಟಸ್ತು ದದೃಶೇ ಚಾಗ್ರಜಸ್ಯ ಚ ॥ ೧ ॥

ರಾಹುರಿತ್ಯೇವ ವಿಖ್ಯಾತಃ ಪೂಜಯಾಮಾಸ ತಂ ನೃಪಃ ।
ಯಥಾರ್ಹಂ ಪೂಜಿತೋ ರಾಜ್ಞಾ ನಿಷಣ್ಣೋ ವಾಕ್ಯಮಬ್ರವೀತ್ ॥ ೨ ॥

॥ ರಾಹುರುವಾಚ ॥

ನ ಹಿ ಮೇ ರೋಚತೇ ವೈರಂ ವಿಷ್ಣುನಾ ಪ್ರಭವಿಷ್ಣುನಾ ।
ಯಸ್ಯ ಕ್ರೋಧಾದನಂಗೋಽಹಂ ಜಾತಃ ಪರಬಲಾರ್ದನಃ ॥ ೩ ॥

---

## ನಲವತ್ತನೆಯ ಅಧ್ಯಾಯವು

೧-೨. ಮಾರ್ಕಂಡೇಯನು ಹೇಳಿದನು—ಇದೇ ಸಮಯದಲ್ಲಿ ನಡೆದ ಇನ್ನೊಂದು ಸಮಾಚಾರವನ್ನು ಕೇಳಿರಿ. ಸಾಲ್ವನ ಅಣ್ಣ ಪ್ರಸಿದ್ಧ ನವಗ್ರಹಗಳಲ್ಲೊಬ್ಬನಾದ ರಾಹುವು. ಇವನಿಗೆ ಮುಂಡವಿಲ್ಲ. ರುಂಡ (ಕತ್ತು) ಮಾತ್ರವೇ. ಈ ರಾಹುವನ್ನು ಕಂಡು ಸಾಲ್ವನು ವಿಧಿವತ್ತಾಗಿ ಪೂಜೆಮಾಡಿ ಕುಳಿತುಕೊಂಡ ಬಳಿಕ, ರಾಹುವು ತಮ್ಮನನ್ನು ಕುರಿತು ಒಂದು ಮಾತನ್ನು ಹೇಳಿದನು.

೩. ರಾಹುವು ಹೇಳಿದನು—ತಮ್ಮನೇ! ಕೇಳು. ಪ್ರಭುವಾದ ಮಹಾವಿಷ್ಣುವಿನೊಡನೆ ವೈರಮಾಡುವುದು ಯುಕ್ತವಲ್ಲ. ಆ ಮಹಾತ್ಮನ ಕ್ರೋಧದಿಂದ ನಾನು ಪರಬಲದಿಂದ ಪರಾಜಿತನಾಗಿ ಅಂಗ (ಮುಂಡ) ವನ್ನು ನೀಗಲಾಡಿಕೊಂಡೆನು.

ಪ್ರಸಾದಾಚ್ಚ ತಥಾ ಯಸ್ಯ ಗ್ರಹತ್ವಮುಪಲಬ್ಧವಾನ್ ।
ಕಿಮನ್ಯೈಃ ಕೀರ್ತಿತೈಸ್ತಸ್ಯ ಕರ್ಮಭಿಸ್ತೇಽಸುರಾತ್ಮಜ ॥ ೪ ॥

॥ ಸಾಲ್ವ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ಕಥಂ ತೇನ ಮಹಾತ್ಮನಾ ।
ಅನಂಗಸ್ತ್ವಂ ಕೃತೋ ವೀರ ಗ್ರಹೇಶಶ್ಚ ಕಥಂ ಕೃತಃ ॥ ೫ ॥

॥ ರಾಹುರುವಾಚ ॥

ಅಮರತ್ವಮಭೀಪ್ಸಂತಃ ಪುರಾ ದೇವಾ ಸವಾಸವಾಃ ।
ಕ್ಷೀರಸಾಗರಮಧ್ಯಸ್ಥಂ ಕೇಶವಂ ಶರಣಂ ಗತಾಃ ॥ ೬ ॥

॥ ದೇವಾ ಊಚುಃ ॥

ಭಗವನ್ ದೇವದೇವೇಶ ಜಗತಾಮಾರ್ತಿನಾಶನ ।
ನಿರ್ವಿಶೇಷಾ ವಯಂ ಮರ್ತ್ಯೈಸ್ತ್ರಾತಾ ತತ್ರಾಸ್ತು ನೋ ಭವಾನ್ ॥ ೭ ॥

---

೪. ಆದಾವ ಮಹಾತ್ಮನ ಮಹಾಪ್ರಸಾದದಿಂದ ಕಡೆಗೆ ನಾನು ನವಗ್ರಹಗಳಲ್ಲಿ ಒಂದು ಸ್ಥಾನವನ್ನು ಗಳಿಸಿಕೊಂಡೆನೋ, ಅಂತಹ ಆ ಮಹಾತ್ಮನ ಯಶಸ್ಸನ್ನು ಎಷ್ಟೆಂದು ಕೊಂಡಾಡಲಿ ?

೫. ಸಾಲ್ವನು ಹೇಳಿದನು—ಅಣ್ಣಾ, ನೀನು ಅನಂಗನಾದೆಯೆಂದೂ, ಗ್ರಹೇಶ್ವರನಾದೆಯೆಂದೂ ಈ ಸಕಲವೂ ಮಹಾವಿಷ್ಣುವಿನಿಂದಲೇ ಆಯಿತೆಂದೂ ಈಗ ಹೇಳಿದೆಯಷ್ಟೆ! ಈ ವೃತ್ತಾಂತವನ್ನು ಕೇಳಬೇಕೆಂದು ಆಶೆಪಡುತ್ತೇನೆ ಹೇಳು.

೬. ರಾಹುವು ಹೇಳಿದನು—ಪೂರ್ವದಲ್ಲಿ ದೇವತೆಗಳೆಲ್ಲರೂ ತಮಗೆ ಮರಣವಿಲ್ಲದೆ ಅಮರತ್ವವಿರಬೇಕೆಂದು ಆಶಿಸಿದವರಾಗಿ ಇಂದ್ರನ ಸಹಿತರಾಗಿ ಹೊರಟು ಕ್ಷೀರಸಾಗರಮಧ್ಯದಲ್ಲಿ ವಾಸವಾಗಿದ್ದ ಮಹಾವಿಷ್ಣುವನ್ನು ಶರಣುಹೊಂದಿದರು.

೭. ದೇವತೆಗಳು ಹೇಳಿದರು— ಸ್ವಾಮಿ ! ನೀನು ಸಕಲ ಜಗತ್ತುಗಳ ದುಃಖವನ್ನೂ ನಾಶಮಾಡತಕ್ಕವನಾಗಿದ್ದೀಯೆ. ನಮಗೂ ಮನುಷ್ಯರಿಗೂ ಯಾವ ವಿಧವಾದ ಭೇದವೂ ಇಲ್ಲದೆ ಇದೇವೆ. ಈಗ ನೀನು ಈ ವಿಚಾರದಲ್ಲಿ ನಮಗೂ ಅವರಿಗೂ ವ್ಯತ್ಯಾಸವನ್ನುಂಟುಮಾಡಿ ಕಾಪಾಡಬೇಕು.

॥ ಶ್ರೀ ಭಗವಾನುವಾಚ ॥

ಕ್ಷೀರೋದಮಥನೇ ಯತ್ನಂ ತ್ರಿದಶಾಃ ಕರ್ತುಮರ್ಹಥ ।
ದಾನವೈಸ್ಸಹಿತಾ ಭೂತ್ವಾ ತತಃಶ್ರೇಯೋಽಪ್ಯವಾಪ್ಸ್ಯಥ ॥ ೮ ॥

॥ ರಾಹುರುವಾಚ ॥

ಏವಮುಕ್ತಾಸ್ಸುರಾಸ್ಸರ್ವೇ ದೇವದೇವೇನ ಶಾರ್ಙ್ಗಿಣಾ ।
ದಾನವೈಸ್ಸಹಿತಾ ಭೂತ್ವಾ ಮಮಂಥುರ್ವರುಣಾಲಯಂ ॥ ೯ ॥

ಸಾಹಾಯ್ಯಮಕರೋತ್ತೇಷಾಂ ತತ್ರ ಕರ್ಮಣಿ ಪಾರ್ಥಿವ ।
ವಿನಾ ವಿಷ್ಣುಸಹಾಯೇನ ನ ಶಕ್ತಾಸ್ಸಸುರಾಸುರಾಃ ॥ ೧೦ ॥

ಅನಂತಸ್ಯ ತತೋ ಭೂತ್ವಾ ಚಾಂಶಸ್ಸಂಕರ್ಷಣಸ್ಯ ಚ ।
ಉತ್ಪಾಟ್ಯ ಮಂದರಂ ದೋರ್ಭ್ಯಾಂ ಚಿಕ್ಷೇಪ ಪಯಸಾಂ ನಿಧೌ ॥ ೧೧ ॥

ಅಕೂಪಾರೇ ತತೋ ಭೂತ್ವಾ ಕೂರ್ಮರೂಪೀ ಜನಾರ್ದನಃ ।
ಮಂದರಂ ಧಾರಯಾಮಾಸ ಕ್ಷೀರಾಬ್ಧಿಗತಮಂಜಸಾ ॥ ೧೨ ॥

---

೮ ಭಗವಂತನು ಹೇಳಿದನು – ಎಲೈ ದೇವತೆಗಳಿರಾ, ಕ್ಷೀರಸಮುದ್ರವನ್ನು ಕಡೆಯುವ ಪ್ರಯತ್ನಮಾಡಿರಿ. ನೀವೂ ರಾಕ್ಷಸರೂ ಒಟ್ಟಾಗಿ ಸೇರಿ ಈ ಕೆಲಸ ಮಾಡಿರಿ. ನಿಮಗೆ ಶ್ರೇಯಸ್ಸುಂಟಾಗುತ್ತದೆ.

೯. ರಾಹುವು ಹೇಳಿದನು—ಈ ರೀತಿ ಮಹಾವಿಷ್ಣುವಿನಿಂದ ಹೇಳಲ್ಪಟ್ಟವರಾಗಿ ದೇವತೆಗಳೂ ರಾಕ್ಷಸರೂ ಸಹ ಸೇರಿ ಸಮುದ್ರವನ್ನು ಕಡೆದರು.

೧೦. ಆ ಕೆಲಸದಲ್ಲಿ ಮಹಾವಿಷ್ಣುವು ಸಹಾಯವನ್ನು ಮಾಡಿದನು ವಿಷ್ಣು ಸಹಾಯವಿಲ್ಲದೇ ಹೋದರೆ ಸುರಾಸುರರಲ್ಲಿ ಯಾರೂ ಸಮರ್ಥರಾಗಲಾರರು.

೧೧. ಅನಂತನು ಸಂಕರ್ಷಣ (ಆಕರ್ಷಿಸತಕ್ಕವ) ನ ಅಂಶವಾಗಿ ಹುಟ್ಟಿ ಮಂದರಪರ್ವತವನ್ನು ಎರಡು ತೋಳುಗಳಿಂದಲೂ ಕಿತ್ತು ಸಮುದ್ರದಲ್ಲಿ ಹಾಕಿದನು.

೧೨ ಈ ರೀತಿ ಸಮುದ್ರದಲ್ಲಿ ಬಿದ್ದ ಮಂದರಪರ್ವತವನ್ನು ಪರಮಾತ್ಮನು ಕೂರ್ಮ (ಆಮೆ)ಯ ರೂಪದಿಂದ ಬೆನ್ನಲ್ಲಿ ಹೊತ್ತನು.

ಸ್ವೇನೈವ ತೇಜಸಾ ನಾಗಂ ತಥಾ ಸಂಯೋಜ್ಯ ವಾಸುಕಿಂ ।
ಚಕ್ರೇ ಸನೇತ್ರತಾಂ ತತ್ರ ತತ್ರ ಕರ್ಮಣಿ ದಾನವ ॥ ೧೩ ॥

ತತೋ ಮಮಂಥುಸ್ಸಹಸಾ ಸಮುದ್ರಂ ದೇವದಾನವಾಃ ।
ಯತೋ ಮುಖಂ ತತೋ ದೈತ್ಯಾಃ ಯತಃ ಪುಚ್ಛಂ ತತಸ್ಸುರಾಃ ॥ ೧೪ ॥

ವಾಸುಕೇರಭವದ್ದೈತ್ಯಾ ಮಥ್ಯಮಾನೇ ಮಹೋದಧೌ ।
ಮುಖಂ ಚ ನಾಗರಾಜಸ್ಯ ಕರೇಣ ಧೃತವಾನ್ಸ್ವಯಂ ॥ ೧೫ ॥

ಆಕಾಶಾಭಿಮುಖಂ ಕೃತ್ವಾ ದೇವದೇವೋ ಜನಾರ್ದನಃ ।
ಮುಖೇ ನಿಃಶ್ವಾಸವಾತೇನ ಸವಿಷೇಣ ಹಿ ಭೂಪತೇ ॥ ೧೬ ॥

ಅನ್ಯಥಾ ದೈತ್ಯಸಂಘಾನಾಂ ವಿನಾಶಮಭವಿಷ್ಯತ ।
ಹಿಮಾಚಲಾಭಾಃ ಕಲ್ಲೋಲಾಃ ಕ್ಷೀರಾಬ್ಧೇರ್ಗಗನಸ್ಪೃಶಃ ॥ ೧೭ ॥

---

೧೩. ತನ್ನ ತೇಜಸ್ಸಿನಿಂದ ವಾಸುಕಿಯನ್ನೇ ಹಗ್ಗವನ್ನಾಗಿ ಮಾಡಿ, ಆ ಕೆಲಸದಲ್ಲಿ ತಾನೇ ಸೂತ್ರಧಾರಿಯಾಗಿ (ನೇತೃವಾಗಿ) ನಿಂತನು.

೧೪. ಅನಂತರದಲ್ಲಿ ದೇವತೆಗಳೂ ರಾಕ್ಷಸರೂ ಸೇರಿ ಮಂದರಪರ್ವತವನ್ನು ಮಂತ (ಕಡೆಗೋಲು)ನ್ನಾಗಿ ಮಾಡಿ ವಾಸುಕಿಯನ್ನೇ ಹಗ್ಗವನ್ನಾಗಿ ಮಾಡಿಕೊಂಡು ಸಮುದ್ರವನ್ನು ಕಡೆಯತೊಡಗಿದರು. ಮುಖದ ಕಡೆ ರಾಕ್ಷಸರು ಹಿಡಿದುಕೊಂಡರು. ಬಾಲದ ಕಡೆ ದೇವತೆಗಳು ಹಿಡಿದುಕೊಂಡರು.

೧೫. ದೈತ್ಯರು ವಾಸುಕಿಯಿಂದ ಮಹೋದಧಿಯನ್ನು ಕಡೆಯಲಾರಂಭಿಸಿದೊಡನೆಯೇ ಪರಮಾತ್ಮನು ಆ ನಾಗರಾಜನ ಮುಖ (ಹೆಡೆ)ವನ್ನು ತಾನೇ ಹಿಡಿದುಕೊಂಡನು.

೧೬-೧೯. ಪರಮಾತ್ಮನಾದ ಜನಾರ್ದನನು ವಾಸುಕಿಯ ಮುಖಭಾಗವನ್ನು ಆಕಾಶಾಭಿಮುಖವಾಗಿ ಎತ್ತಿ ಹಿಡಿದುಕೊಂಡನು. ಹೀಗೆ ಹಿಡಿದುಕೊಳ್ಳದೆ ಬಿಟ್ಟುಬಿಟ್ಟರೆ ಮುಖದಿಂದ ಹೊರಡುವ ವಿಷಸಹಿತವಾದ ನಿಶ್ವಾಸವಾಯುವಿನಿಂದ ರಾಕ್ಷಸರೆಲ್ಲರೂ ನಾಶವಾಗಿ ಹೋಗುತ್ತಾರಾದ್ದರಿಂದ ಮುಂದೆ ಮಥನಕಾರ್ಯಕ್ಕೆ ವಿಘ್ನವಾದೀ

**ಉತ್ಕ್ಷಿಪ್ತೇತುರ್ಮಥ್ಯಮಾನಸ್ಯ ಬಲಿಭಿರ್ದೇವದಾನವೈಃ ॥ ೧೮ ॥**
**ಶೃಂಗಾಗ್ರಾಣಿನ ಪತಂತಿಸ್ಮ ಮಂದರಸ್ಯ ಮಹೋದಧೌ ।**
**ರತ್ನಚಿತ್ರಾಣಿ ರಮ್ಯಾಣಿ ಶತಶೋಥ ಸಹಸ್ರಶಃ ॥ ೧೯ ॥**
**ದ್ರುಮಾಶ್ಚ ಶತಶಃ ಪೇತುಃ ಮೃಗಾಃ ಪೇತುಸ್ಸಹಸ್ರಶಃ ।**
**ತ್ರೈಲೋಕ್ಯಂ ಪೂರಯರ್ನಾದೈ ರರಾಸ ಪಯಸಾಂ ನಿಧಿಃ ॥ ೨೦ ॥**
**ಕ್ಷೀರಕಲ್ಲೋಲವಸನಃ ಶ್ವೇತಮೇಘಕೃತಾಂಶುಕಃ ।**
**ರಾಜತೇ ಮಂದರಾದ್ರಿಸ್ಸಃ ನಾನಾಧಾತುವಿಭೂಷಿತಃ ॥ ೨೧ ॥**
**ಚಲನ್ಮೇಘಾಂಶುಕೋಘೂರ್ಣನ್ನತ್ಯರ್ಥಂ ವಾಯುಪೂರಿತೈಃ ।**
**ಗುಹಾಮುಖೈಸ್ಸಪ್ರಣತಂ ಗಿರಿರ್ಮತ್ತೈರಿವಾರ್ಣವಃ ॥ ೨೨ ॥**

---

ತೆಂದು ಭಾವಿಸಿಯೇ ಸ್ವಾಮಿಯು ಈ ಕೆಲಸವನ್ನು ಮಾಡಿದನು. ಪರಾಕ್ರಮಶಾಲಿಗಳಾದ ಈ ದೇವದಾನವರು ಸೇರಿ ಕಡೆಯಲಿಕ್ಕೆ ಆರಂಭಿಸಿದೊಡನೆಯೇ ಹಿಮತ್ಪರ್ವತದಷ್ಟು ಎತ್ತರವಾದ ಅಲೆಗಳು ಸಮುದ್ರದಲ್ಲಿ ಉತ್ಪತ್ತಿಯಾಗಿ ಸಮುದ್ರದಿಂದ ಆಕಾಶವನ್ನು ಮುಟ್ಟುವಂತೆ ಮೇಲಿನಿಂದ ಕೆಳಕ್ಕೆ ಬೀಳತೊಡಗಿದವು. ಆಗ ಮಂದರಪರ್ವತದ ತುದಿಯ (ಶೃಂಗದ) ಭಾಗಗಳು ಕಳಚಿಕೊಂಡು ಮಹೋದಧಿಯಲ್ಲಿ ಬೀಳತೊಡಗಿದವು. ಆ ತುದಿಯ ಚೂರುಗಳು ರತ್ನಗಳಂತೆ ಚಿತ್ರವಿಚಿತ್ರವಾಗಿ ತೋರುತ್ತಿದ್ದುವು.

೨೦. ನೂರಾರು ವಿಧವಾದ ವೃಕ್ಷಗಳು ಆ ಅಲೆಗಳ ಜೊತೆಯಲ್ಲಿ ಮೇಲಿನಿಂದ ಕೆಳಕ್ಕೆ ಬಿದ್ದುವು. ಸಾವಿರಾರು ವಿಧ ಮೃಗಗಳು ಉದುರಿದುವು. ಆ ಕ್ಷೀರಸಮುದ್ರದಲ್ಲಿ ಆ ಅಲೆಗಳಿಂದ ಹೊರಟ ಧ್ವನಿಯು ಮೂರು ಲೋಕಗಳನ್ನು ವ್ಯಾಪಿಸಿಕೊಂಡಿತು.

೨೧-೨೨. ಹಾಲಿನ ಅಲೆಗಳೆಂಬ ಬಿಳೀ ಬಟ್ಟೆಯನ್ನುಟ್ಟುಕೊಂಡು, ಬಿಳೀ ಮೇಘವೆಂಬ ಪಂಚೆಯನ್ನು ಹೊದ್ದುಕೊಂಡು, ನಾನಾಧಾತುಗಳೆಂಬ ಅಲಂಕಾರವನ್ನು ಧರಿಸಿ ಆ ಮಂದರಪರ್ವತವು ಪ್ರಕಾಶಿಸುತ್ತಿತ್ತು. ಓಡಾಡುತ್ತಿರುವ ಮೋಡಗಳೆಂಬ ಬಟ್ಟೆಗಳನ್ನುಟ್ಟು ತಿರುಗುತ್ತ, ಸುಂಟರಗಾಳಿಯಿಂದ ತುಂಬಲ್ಪಟ್ಟ ಗುಹಾಮುಖಗಳಿಂದ ನಮಸ್ಕರಿಸಿಕೊಳ್ಳುತ್ತಲಿದೆಯೋ, ಎಂಬಂತೆ ಆ ಮಂದರಗಿರಿಯು ತೋರುತ್ತಿತ್ತು.

ನಿರ್ಝರಾಶ್ರುರ್ಮಹಾನಾದಃ ಶೃಂಗೋಚ್ಛ್ರಿತಮಹಾಭುಜಾಃ ।
ಅನಿಶಂ ಸ ಗಿರಿಶ್ರೇಷ್ಠಃ ಸ್ಥಾನಹಾನ್ಯೇವ ರೋದಿತಿ ॥ ೨೩ ॥

ದೇವೋಪಭೋಗ್ಯಾನ್ಸಕಲಾನ್ಮಹಾಂತ ಇತಿ ಚಿಂತಯನ್ ।
ವಾದ್ಯತ್ಸು ದೇವವಾದ್ಯೇಷು ನೃತ್ಯತೀವ ಸ ಮಂದರಃ ॥ ೨೪ ॥

ಏವಂ ಹಿ ಮಥ್ಯಮಾನಸ್ಯ ಕ್ಷೀರಾಬ್ಧೇಸ್ಸುಮಹಾತ್ಮನಃ ।
ಪ್ರಾದುರ್ಭೂತಂ ವಿಷಂ ಘೋರಂ ಕಾಲಾನಲಸಮಪ್ರಭಂ ॥ ೨೫ ॥

ಯೇನ ಪ್ರೋದ್ಭೂತಮಾತ್ರೇಣ ವಿಷಣ್ಣಾ ದೇವದಾನವಾಃ ।
ತತ್ಪಪೌ ಭಗವಾನ್ಶಂಭುಃ ತ್ರೈಲೋಕ್ಯಹಿತಕಾಮ್ಯಯಾ ॥ ೨೬ ॥

---

೨೩. ಶಿಖರಗಳೆಂಬ ಎತ್ತರವಾಗಿರುವ ಭುಜಗಳಿಂದೊಡಗೂಡಿದಾ ಮಹಾ ಮಂದರಗಿರಿಯು, ತನ್ನ ಸ್ಥಾನವಂ ಬಿಟ್ಟುಬಂದುದಕ್ಕಾಗಿ ದುಃಖಿಸುತ್ತಲಿದೆಯೋ ಎಂಬಂತೆ ಪ್ರವಾಹಗಳೆಂಬ ಕಣ್ಣೀರನ್ನು ಸುರಿಸುತ್ತಾ ಮಹತ್ತರವಾದ ಧ್ವನಿಯನ್ನುಂಟು ಮಾಡುತ್ತಿತ್ತು.

೨೪. ದೇವತೆಗಳಿಂದ ಉಪಭೋಗಿಸಲ್ಪಡಲರ್ಹವಾದ ಸಕಲ ಸಂಪತ್ತನ್ನೂ ಭಗವಂತನು ಉತ್ಪತ್ತಿಮಾಡುವ ಶುಭಸಮಯದಲ್ಲಿ ಮಂಗಳವಾದ್ಯಗಳಾಗುತ್ತಿವೆಯೋ ಎಂಬಂತೆ ದೇವವಾದ್ಯಗಳು ಧ್ವನಿಮಾಡುತ್ತಿರಲು ಈ ಮಂಗಳದೃಶ್ಯವನ್ನು ನೋಡಿ ಮಂದರಪರ್ವತವು ಕುಣಿಯುತಲಿದೆಯೋ ಎಂಬಂತೆ ತೋರುತಲಿತ್ತು.

೨೫. ಹೀಗೆ ಸಮುದ್ರವನ್ನು ಕಡೆಯುತ್ತಿರಲಾಗಿ, ಆ ಮಹಾ ಸಮುದ್ರದ ಮಧ್ಯದಿಂದ ಕಾಲಾಗ್ನಿಯಂತೆ ಕಾಣುತ್ತಿದ್ದ ಘೋರವಿಷವು ಉತ್ಪತ್ತಿಯಾಯಿತು.

೨೬. ವಿಷವು ಯಾವಾಗ ಉತ್ಪತ್ತಿಯಾಯಿತೋ ಆ ಕೂಡಲೆ ದೇವತೆಗಳೂ ದಾನವರೂ ಮೂರ್ಛಿತರಾಗಿ ಬಿದ್ದುಬಿಟ್ಟರು. ಆ ಸಮಯದಲ್ಲಿ ಭಗವಂತನಾದ ಶಂಕರನು, ಈ ವಿಷದಿಂದ ಮೂರು ಲೋಕವೂ ಸುಟ್ಟುಹೋದೀತೆಂಬ ಭಯದಿಂದ, ಆ ವಿಷವನ್ನೆಲ್ಲಾ ತ್ರಿಲೋಕಹಿತಾಪೇಕ್ಷೆಯಿಂದ ಕುಡಿದುಬಿಟ್ಟನು.

**ವಿಷೇ ಕಂಠಮನುಪ್ರಾಪ್ತೇ ನೀಲಕಂಠತ್ವಮಾಗತಃ ।**
**ಧಾರಯಾಮಾಸ ತತ್ಕಂಠೇ ಶೋಭಾರ್ಥಂ ಸುರವಾರಿತಃ ॥ ೨೭ ॥**

**ತತಶ್ಚಂದ್ರಕಲಾ ಜಾತಾ ತ್ರೈಲೋಕ್ಯಸ್ಯೈವ ಸುಂದರೀ ।**
**ಜಟಾಜೂಟೇನ ತಾಂ ಚಕ್ರೇ ದೇವದೇವೋ ಮಹೇಶ್ವರಃ ॥ ೨೮ ॥**

**ರಶ್ಮಿಜ್ವಾಲಾವಳೀಪುಂಜವಿಭಾಸಿತಜಗತ್ತ್ರಯಂ ।**
**ವೈಡೂರ್ಯಕೌಸ್ತುಭಂ ಜಾತಂ ಯಂ ಬಭಾರ ಹೃದಾ ಹರಿಃ ॥ ೨೯ ॥**

**ವಾತರಂಹೋ ಮಹಾಕಾಯಃ ಶಶಾಂಕಸದೃಶಚ್ಛವಿಃ ।**
**ಉಚ್ಚೈಃಶ್ರವಾ ಹಯೋ ಜಾತಃ ಸ ಚ ದೇವಾನುಪಾಶ್ರಿತಃ ॥ ೩೦ ॥**

---

೨೭. ಆಗ ದೇವತೆಗಳು ಹಾಹಾಕಾರಮಾಡಿ ತಡೆಯಲು ಆ ವಿಷವು ಕಂಠದಿಂದ ಕೆಳಕ್ಕಿಳಿಯದೆ ಕತ್ತಿನಲ್ಲಿಯೇ ನಿಂತುಬಿಟ್ಟುದರಿಂದ ಆ ವಿಷಕಂಠನು ನೀಲಕಂಠತ್ವವನ್ನು ಹೊಂದಿದನು.

೨೮. ಅನಂತರ ತ್ರಿಲೋಕಸುಂದರಿಯಂತೆ ಕಾಣುತ್ತಿದ್ದ ಚಂದ್ರಕಲೆಯು ಉತ್ಪತ್ತಿಯಾಯಿತು. ಆಗ ಪರಮಾತ್ಮನಾದ ಪರಮೇಶ್ವರನು ಆ ಚಂದ್ರಕಲೆಯನ್ನು ತನ್ನ ಜಟಾಕಲಾಪದಲ್ಲಿ ಇರಿಸಿಕೊಂಡನು.

೨೯. ತನ್ನ ಕಿರಣಜ್ವಾಲಾವಳೀಪುಂಜದಿಂದ ಮೂರುಲೋಕವನ್ನೂ ಬೆಳಕು ಮಾಡುವ ಶಕ್ತಿಯುಳ್ಳ ವೈಡೂರ್ಯಮಯವಾದ ಕೌಸ್ತುಭರತ್ನವು ಬಳಿಕ ಉತ್ಪತ್ತಿಯಾಯಿತು. ಅದು ತಲೆದೋರಿದೊಡನೆಯೇ ಅದನ್ನು ಮಹಾವಿಷ್ಣುವು ತನ್ನ ವಕ್ಷಸ್ಥಳದಲ್ಲಿ ಧರಿಸಿಕೊಂಡನು.

೩೦. ವಾಯುವಿನಂತೆ ವೇಗವುಳ್ಳ, ಮಹಾ ಶರೀರದಿಂದೊಡಗೂಡಿದ ಚಂದ್ರನಿಗೆ ಸಮಾನಕಾಂತಿಯುಳ್ಳ ಉಚ್ಚೈಃಶ್ರವಸ್ಸೆಂಬ ಹೆಸರಿನ ಕುದುರೆಯು ಬಳಿಕ ಉತ್ಪತ್ತಿಯಾಯಿತು. ಅದು ದೇವಲೋಕಕ್ಕೆ ಪ್ರಯಾಣಬೆಳೆಸಿ ದೇವತೆಗಳನ್ನಾಶ್ರಯಿಸಿಕೊಂಡು ನಿಂತಿತು.

**ತತಸ್ಸುರಾ ಸಮುತ್ಪನ್ನಾ ಸಾ ಚ ಪೀತಾ ಮಹಾಸುರೈಃ ।**
**ತತಸ್ತ್ವಪ್ಸರಸೋ ಜಾತಾ ದೇವರಾಮಾ ಮನೋರಮಾಃ ॥ ೩೧ ॥**
**ದೇವೀ ಲಕ್ಷ್ಮೀಸ್ತತೋ ಜಾತಾ ರೂಪೇಣಾಪ್ರತಿಮಾ ಶುಭಾ ॥ ೩೨ ॥**

**ಯಸ್ಯಾಶ್ಶುಭೌ ತಾಮರಸಪ್ರಕಾಶೌ**
**ಪಾದಾಂಬುಜೌ ಸ್ಪೃಷ್ಟತಲಾಂಗುಲೀಕೌ ।**
**ಜಂಘೇ ಶುಭೇ ರೋಮವಿವರ್ಜಿತೇ ಚ**
**ಗೂಢಾಸ್ಥಿಕಂ ಜಾನುಯುಗಂ ಸುರಮ್ಯಂ ॥ ೩೩ ॥**

**ಸುವರ್ಣದಂಡಪ್ರತಿಮೌ ತಥೋರೂ**
**ಚಾಭೋಗ್ಯರಮ್ಯಂ ಜಘನಂ ಘನಂ ಚ ।**
**ಮಧ್ಯಂ ಸುವೃತ್ತಂ ಕುಲಿಶೋದರಾಭಂ**
**ವಳಿತ್ರಯಂ ಚಾರು ಶುಭಂ ದಧಾನಂ ॥ ೩೪ ॥**

---

೩೧. ಬಳಿಕ ಮದ್ಯವು (ಹೆಂಡ) ಉತ್ಪತ್ತಿಯಾಯಿತು. ಅದನ್ನು ರಾಕ್ಷಸರು ಕುಡಿದು ಬಿಟ್ಟರು. ಅನಂತರ ಮನೋಹರಾಕಾರವುಳ್ಳ ಅಪ್ಸರಸ್ತ್ರೀಯರೆಂಬ ಹೆಸರಿನ ದೇವತಾಸ್ತ್ರೀಯರು ಹುಟ್ಟಿದರು.

೩೨. ಬಳಿಕ ಮಹಾಲಕ್ಷ್ಮೀದೇವಿಯು ಅವತರಿಸಿದಳು. ಆ ಮಂಗಳಕರಳಾದ ರಮಾದೇವಿಯು ಅಪ್ರತಿಮರೂಪದಿಂದ ವಿರಾಜಿತಳಾಗಿದ್ದಳು.

೩೩. ಆ ಮಹಾಲಕ್ಷ್ಮಿಯು ಕಮಲದಂತೆ ಪ್ರಕಾಶಮಾನಳಾಗಿದ್ದಳು. ಪಾದ ಕಮಲಗಳು ಕಮಲಪುಷ್ಪಗಳಂತೆ ಬಹು ಸುಂದರವಾಗಿದ್ದವು. ಮೊಣಕಾಲುಗಳು ಶುಭ ಕರವಾಗಿಯೂ, ರೋಮರಹಿತಗಳಾಗಿಯೂ ಇದ್ದುವು. ಎರಡು ತೊಡೆಗಳೂ ಪರಿಪುಷ್ಟ ವಾಗಿಯೂ ಇದರೊಳಗೆ ಮೂಳೆಯೇ ಇಲ್ಲವೇನೋ ಎಂಬಂತೆಯೂ ಕಾಣಿಸುತ್ತಿದ್ದವು.

೩೪. ತೊಡೆಗಳು ಸುವರ್ಣದಂಡದಂತೆ ತೋರುತಲಿದ್ದುವು. ಘನವಾದ ಜಘನ (ಸೊಂಟದ ಹಿಂಬದಿ) ಸ್ಥಳವು ಮನೋಹರವಾದ ಕಾಂತಿಯಿಂದ ಕೂಡಿತ್ತು. ಮಧ್ಯಭಾಗವು (ನಡುವು) ದುಂಡಾಗಿಯೂ ವಜ್ರಾಯುಧದಂತೆ ಕಠಿಣವಾಗಿಯೂ ತೋರುತ್ತಿತ್ತು. ಆ ಮಧ್ಯಭಾಗದಲ್ಲಿರುವ ತ್ರಿವಳಿಗಳು ಮಂಗಳಕರವಾಗಿಯೂ, ಎದ್ದು ಬರುವಂತೆಯೂ ತೋರುತಲಿದ್ದವು.

ಉತ್ತುಂಗವಾಭೋಗಿಸಮಂ ವಿಶಾಲಂ
ಸ್ತನದ್ವಯಂ ಚಾರು ಸುವರ್ಣವರ್ಣಂ ।
ಬಾಹೂ ಸುವೃತ್ತಾವತಿಕೋಮಲೌ ಚ
ಕರದ್ವಯಂ ಪದ್ಮದಳಾಗ್ರಕಾಂತಿ ॥ ೩೫ ॥

ಕಂಠಂ ಚ ಶಂಖಾಗ್ರನಿಭಂ ಸುರಮ್ಯಂ
ಪೃಷ್ಠಂ ಸಮಂ ಚಾರು ಸಿರಾವಿಹೀನಂ ।
ಕರ್ಣೌ ಶುಭೌ ಚಾರು ಶುಭಪ್ರಮಾಣೌ
ಸಂಪೂರ್ಣಚಂದ್ರಪ್ರತಿಮಂ ಚ ವಕ್ತ್ರಂ ॥ ೩೬ ॥

ಕುಂದೇಂದುತುಲ್ಯಾ ದಶನಾಸ್ತಥೋಷ್ಠೌ
ಪ್ರವಾಳಕಾನಾಂ ಪ್ರತಿಪಕ್ಷಭೂತೇ ।
ಸ್ಪಷ್ಟಾ ಚ ನಾಸಾ ಚುಬುಕಂ ಚ ರಮ್ಯಂ
ಕಪೋಲಯುಗ್ಮಂ ಶಶಿತುಲ್ಯಕಾಂತಿ ॥ ೩೭ ॥

ಉನ್ನಿದ್ರನೀಲೋತ್ಪಲ-ಸನ್ನಿಕಾಶಂ
ತ್ರಿವರ್ಣಮಾಕರ್ಣಿಕಮಕ್ಷಿಯುಗ್ಮಂ ।
ಶಿರೋರುಹಾಃ ಕುಂಚಿತನೀಲದೀರ್ಘಾ
ವೀಣೇವ ವಾಣೀ ಮಧುರಾ ಶುಭಾ ಚ ॥ ೩೮ ॥

---

೩೫. ಸ್ತನದ್ವಯಗಳು ಸಮವಾಗಿಯೂ, ವಿಶಾಲವಾಗಿಯೂ, ಸುವರ್ಣಕಾಂತಿಯಂತೆಯೂ ಹೊಳೆಯುತಲಿದ್ದುವು. ತೋಳುಗಳೆರಡೂ ಬಲು ದುಂಡಾಗಿಯೂ, ಕೋಮಲವಾಗಿಯೂ, ಪದ್ಮದಳದಪರಿಯಂತೆ ಕಾಂತಿ ವಿಶಿಷ್ಟವಾಗಿಯೂ ಕಾಣುತಲಿದ್ದುವು

೩೬–೩೮. ಸರ್ವಾಂಗಸುಂದರಿಯಾದ ರಮಾದೇವಿಯ ಕಂಠವು ಶಂಖದ ತುದಿಯಂತಿತ್ತು. ಮುಖವು ಪೂರ್ಣಚಂದ್ರನನ್ನು ಹೋಲುತ್ತಿತ್ತು. ಬಲು ತೆಳುವಾದ ರೇಷ್ಮೆ ಸೀರೆಯನ್ನುಟ್ಟಿದ್ದಳು. ಎರಡು ಕಿವಿಗಳಲ್ಲಿಯೂ ವಜ್ರಖಚಿತ ಕುಂಡಲಗಳನ್ನು ಧರಿಸಿದ್ದಳು. ವಾಣಿಯು ವೀಣೆಯ ಧ್ವನಿಯನ್ನು ಹೋಲುತ್ತಿತ್ತು.

ವಸ್ತ್ರೇ ಸುಸೂಕ್ಷ್ಮೇ ವಿಮಲೇ ದಧಾನಾ
ಚಂದ್ರಾಂಶುತುಲ್ಯೇಽತಿ ಮನೋಽಭಿರಾಮೇ ।
ಶ್ರೋತ್ರದ್ವಯೇನಾಪ್ಯಥ ಕುಂಡಲೇ ಚ
ಸಂತಾನಕಾನಾಂ ಶಿರಸಾಂ ಚ ಮಾಲಾಂ ॥ ೩೯ ॥

ಗಂಗಾಪ್ರವಾಹಪ್ರತಿಮಂ ಚ ಹಾರಂ
ಕಂಠೇನ ಶುಭ್ರಂ ದಧತೀ ಸುವೃತ್ತಂ ॥ ೪೦ ॥

ತಥಾಂಗದೌ ರತ್ನಸಹಸ್ರಚಿತ್ರೌ
ಹಂಸಸ್ವನೌ ಚಾಪ್ಯಥ ನೂಪುರೌ ಚ ।
ಕರೇಣ ಪದ್ಮಂ ಭ್ರಮರೋಪಗೀತಂ
ವೈಡೂರ್ಯನಾಳಂ ಚ ಶುಭಂ ಗೃಹೀತ್ವಾ ॥
ಸ್ವರೂಪಮೂಢೇಷು ಸುರಾಸುರೇಷು
ದೃಷ್ಟಿಂ ದದೌ ಚಾರುಮನೋಽಭಿರಾಮಾ ॥ ೪೧ ॥

ಸಾ ದೇವಸಂಘಾನಸುರಾಂಶ್ಚ ದೃಷ್ಟ್ವಾ
ದದರ್ಶ ದೇವಂ ಜಗತಾಂ ಪ್ರಧಾನಂ ।
ದೇವಾಸುರೇಭ್ಯಸ್ತ್ವತಿರಿಕ್ತರೂಪಂ
ಸೂರ್ಯಾಯುತಾಭಂ ಭುವನೇಷ್ವಜೇಯಂ ॥ ೪೨ ॥

೩೯–೪೨. ಗಂಗಾಪ್ರವಾಹದಂತೆ ಹೊಳೆಯುವ ಹಾರಗಳನ್ನು ಧರಿಸಿದ್ದಳು. ಬಾಜೂಬಂದಿಗಳು ಸಹಸ್ರಾರು ವಿಧವಾದ ರತ್ನಗಳಿಂದ ಕೆತ್ತಲ್ಪಟ್ಟು ಚಿತ್ರವಿಚಿತ್ರವಾಗಿ ತೋರುತ್ತಿದ್ದುವು. ಕಾಲುಗೆಜ್ಜೆಗಳ ಸದ್ದು ಹಂಸಧ್ವನಿಯನ್ನು ಹೋಲುತ್ತಿತ್ತು. ಕೈಯಲ್ಲಿ ಹಿಡಿದಿದ್ದ ಕಮಲಗಳ ಸುವಾಸನೆಗೆ ದುಂಬಿಗಳು ಮುತ್ತಿಕೊಂಡಿದ್ದುವು. ತಮ್ಮ ಸ್ವರೂಪವನ್ನೇ ಮರೆತುಕೊಂಡು ಅಜ್ಞಾನಿಗಳಾಗಿದ್ದ ದೇವಾಸುರರನ್ನು ಆ ಚಾರುಹಾಸಿನಿಯು ದೃಷ್ಟಿಯಿಂದಲೇ ಆಕರ್ಷಿಸುವವಳಾಗಿ ಅವರ ಮಧ್ಯದಲ್ಲಿ ಮನೋಹರನಾಗಿ ಕಂಗೊಳಿಸುತ್ತಿದ್ದ, ಹತ್ತು ಸಹಸ್ರ ಸೂರ್ಯರ ಕಾಂತಿಯಿಂದ ಹೊಳೆಯುತ್ತಿದ್ದ ತ್ರಿಲೋಕೈಕವೀರನಾದ, ನೀಲಾಂಬರಧರನಾದ ಮಹಾವಿಷ್ಣುವನ್ನು ನೋಡಿದಳು.

**ಉನ್ನಿದ್ರನೀಲನಳಿನದ್ಯುತಿ ಚಾರುವರ್ಣಂ**
**ಸಂತಪ್ತಹಾಟಕನಿಭೇ ವಸನೇ ವಸಾನಂ ।**
**ದೃಷ್ಟ್ವೈವ ಜಾತಪುಳಕೋದ್ಗಮಮಾತ್ರಕಂಪಾ**
**ಕ್ಷೀರಾಬ್ಧಿಜಾ ಮದನಬಾಣವಶಂ ಜಗಾಮ ॥ ೪೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಸಮುದ್ರಮಥನೇ ಲಕ್ಷ್ಮೀಸಮುದ್ಭವೋನಾಮ ಚತ್ವಾರಿಂಶತ್ತಮೋಧ್ಯಾಯಃ**



---

೪೩. ಭಗವಂತನಾದ ಆ ಸ್ವಾಮಿಯನ್ನು ನೋಡಿದೊಡನೆಯೇ ರೋಮಾಂಚಿತಳಾಗಿ ಆ ಮಹಾಲಕ್ಷ್ಮಿಯು ಮನ್ಮಥನ ಬಾಣಕ್ಕೆ ವಶಳಾದಳು. ಅಂದರೆ ಆ ಸ್ವಾಮಿಯನ್ನೇ ಮೋಹಿಸಿದಳು

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಸಮುದ್ರಮಥನಕಾಲದಲ್ಲಿ ಮಹಾ ಲಕ್ಷ್ಮಿಯು ಅವತರಿಸಿದಳೆಂಬ ಹೆಸರಿನ ನಲವತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಏಕಚತ್ವಾರಿಂಶತ್ತಮೋಽಧ್ಯಾಯಃ

॥ ರಾಹು ಉವಾಚ ॥

**ಸಾ ಕಾಮಬಾಣಾಭಿಹತಾ ಸಮೀಕ್ಷ್ಯ ಮಧುಸೂದನಂ ।**
**ಸ್ವಯಂವೃತವತೀ ನಾಥಂ ಭರ್ತಾರಮಪರಾಜಿತಂ ॥ ೧ ॥**

**ಪ್ರಕೃತಿಸ್ಸಾ ವಿನಿರ್ದಿಷ್ಟಾ ಪುರುಷಃ ಪುರುಷೋತ್ತಮಃ ।**
**ತಯಾ ವಿಯುಜ್ಯತೇ ನಾಸೌ ಕದಾಚಿದಪಿ ಶತ್ರುಹಾ ॥ ೨ ॥**

**ಶಂಕರಃ ಪುರುಷಃ ಪ್ರೋಕ್ತಃ ಪ್ರಕೃತಿಃ ಪಾರ್ವತೀ ಸ್ಮೃತಾ ।**
**ಪುರುಷಃ ಪಾಕಹಾ ಪ್ರೋಕ್ತಃ ಪ್ರಕೃತಿಶ್ಚ ತಥಾ ಶಚೀ ॥ ೩ ॥**

---

### ನಲವತ್ತೊಂದನೆಯ ಅಧ್ಯಾಯವು

೧. ರಾಹುವು ಹೇಳಿದನು–ಮಧುಸೂದನನನ್ನು ಕಂಡೊಡನೆಯೇ ಆ ಮಹಾಲಕ್ಷ್ಮಿಯು ಕಾಮಬಾಣದಿಂದ ಹೊಡೆಯಲ್ಪಟ್ಟವಳಾಗಿ, ಅಪರಾಜಿತನಾದ ಆ ಸ್ವಾಮಿಯನ್ನು ತಾನಾಗಿಯೇ ಗಂಡನನ್ನಾಗಿ ವರಿಸಿದಳು.

೨. ಎಲೈ ಸಾಲ್ವನೇ, ಚನ್ನಾಗಿ ಕೇಳು. ಪ್ರಕೃತಿಪುರುಷವಿವೇಕವನ್ನು ವಿಸ್ತರಿಸುತ್ತೇನೆ. ಆದಿಲಕ್ಷ್ಮಿಯೇ ಪ್ರಕೃತಿ (ಮಾಯೆ) ಯೆನಿಸುವಳು. ಪುರುಷೋತ್ತಮನಾದ ಮಹಾವಿಷ್ಣುವೇ ಪುರುಷ (ಪರಮಾತ್ಮ) ನೆನಿಸುವನು. ಇವರಿಬ್ಬರೂ ಯಾವಾಗಲೂ ಒಬ್ಬರನ್ನೊಬ್ಬರು ಬಿಟ್ಟಿರುವವರಲ್ಲ.

೩–೨೧. ಈ ಕೆಳಗೆ ಕಂಡಂತೆ ಪುರುಷಪ್ರಕೃತಿಯರನ್ನು ವಿವರಿಸುತ್ತೇವೆ. ಶಂಕರಪಾರ್ವತೀ, ಇಂದ್ರಶಚೀ, ಅಗ್ನಿಸ್ವಾಹಾ, ಯಮಧೂಮ್ರೋರ್ಣಾ, ವಿರೂಪಾಕ್ಷ

ಹುತಾಶನಶ್ಚ ಪುರುಷಃ ಸ್ವಾಹಾ ಚ ಪ್ರಕೃತಿಃ ಸ್ಮೃತಾ ।
ಯಮಶ್ಚ ಪುರುಷಃ ಪ್ರೋಕ್ತೋ ಧೂಮ್ರೋರ್ಣಾ ಪ್ರಕೃತಿಃ ಸ್ಮೃತಾ ॥ ೪ ॥

ವಿರೂಪಾಕ್ಷಶ್ಚ ಪುರುಷಃ ಪ್ರಕೃತಿರ್ನಿಋತಿಃ ಸ್ಮೃತಾ ।
ವರುಣಃ ಪುರುಷಃ ಪ್ರೋಕ್ತೋ ಗೌರೀ ಚ ಪ್ರಕೃತಿಸ್ತಥಾ ॥ ೫ ॥

ವಾಯುಶ್ಚ ಪುರುಷೋ ಜ್ಞೇಯಃ ಪ್ರಕೃತಿಶ್ಚ ತಥಾ ಶಿವಾ ।
ಪುರುಷಶ್ಚ ಧರ್ಮೋ ವೃಕ್ಷ ಸ್ತದ್ವಿಶ್ವಪ್ರಕೃತಿ ಸ್ತಥಾ ॥ ೬ ॥

ಚಂದ್ರಮಾ ಪುರುಷಃ ಪ್ರೋಕ್ತೋ ಜ್ಯೋತ್ಸ್ನಾ ಚ ಪ್ರಕೃತಿಸ್ತಥಾ ।
ಧರ್ಮಶ್ಚ ಪುರುಷಃ ಪ್ರೋಕ್ತಃ ಪ್ರಕೃತಿಶ್ಚ ಕರೀಷಿಣೀ ॥ ೭ ॥

ಯಜ್ಞಶ್ಚ ಪುರುಷಃ ಪ್ರೋಕ್ತೋ ದಕ್ಷಿಣಾ ಪ್ರಕೃತಿಸ್ತಥಾ ।
ದಿವಸಃ ಪುರುಷಃ ಪ್ರೋಕ್ತಃ ಪ್ರಕೃತಿಶ್ಚ ತಥಾ ನಿಶಾ ॥ ೮ ॥

ಆಕಾಶಃ ಪುರುಷಃ ಪ್ರೋಕ್ತಃ ಪ್ರಕೃತಿಶ್ಚ ತಥಾ ಮಹೀ ।
ಓಂಕಾರಃ ಪುರುಷಃ ಪ್ರೋಕ್ತಃ ಸಾವಿತ್ರೀ ಪ್ರಕೃತಿಃ ಸ್ಮೃತಾ ॥ ೯ ॥

ಪ್ರಕೃತಿಸ್ಸಾ ಶುಭಾ ಲಕ್ಷ್ಮೀಃ ವಿಷ್ಣುಃ ಪುರುಷ ಉಚ್ಯತೇ ।
ಸಾ ಸದೇಹಾ ವಿದೇಹಾ ಸಾ ಸಗುಣಾ ನಿರ್ಗುಣಾ ಚ ಸಾ ॥ ೧೦ ॥

ತಯಾ ಸರ್ವಮಿದಂ ವ್ಯಾಪ್ತಂ ತ್ರೈಲೋಕ್ಯಂ ಸ ಚರಾಚರಂ ।
ಸಾ ಕಾಂತಿಃ ಸಾ ಧೃತಿಃ ಸಾ ಶ್ರೀಃ ಸ ಪ್ರಭಾ ಚ ಸನಾತನೀ ॥ ೧೧ ॥

---

ನಿಋುಋತಿ, ವರುಣಗೌರೀ, ವಾಯುಶಿವಾ, ಧರ್ಮವಿಶ್ವಾ, ಚಂದ್ರಜ್ಯೋತ್ಸ್ನಾ, ಧರ್ಮಕರೀಷಿಣೀ, ಯಜ್ಞದಕ್ಷಿಣಾ, ದಿವಸರಾತ್ರಿ, ಆಕಾಶಭೂಮಿ, ಓಂಕಾರಸಾವಿತ್ರೀ, ವಿಷ್ಣುಲಕ್ಷ್ಮೀ, ಸದೇಹವಿದೇಹಾ, ಸಗುಣನಿರ್ಗುಣಾ, ಇವುಗಳಿಂದಲೇ ಸಕಲ ಪ್ರಪಂಚವೂ ತುಂಬಿಕೊಂಡಿದೆ. ಇವುಗಳನ್ನೇ ಅನಾದಿಯಾದ ಪ್ರಕೃತಿ ಪುರುಷ ವಿವೇಕವೆಂದೂ ಕರೆಯುವರು. ಗಂಡ ಹೆಂಡಿರೆಂದರೂ ಪುಂಸ್ತ್ರೀಲಿಂಗಗಳೆಂದರೂ ಇದೇ ಅರ್ಥ. ಲಕ್ಷ್ಮಿಯನ್ನು ಮಾಯೆಯೆಂದು ಹೇಳುವರು ಅವಳಿಂದಲೇ ಚರಾಚರಾತ್ಮಕವಾದೀ ಸಕಲಪ್ರಪಂಚವೂ ವ್ಯಾಪ್ತವಾಗಿದೆ. ಶಾಂತಿ, ಧೃತಿ, ಶ್ರೀ,

**ಸಾ ನಿದ್ರಾ ಸಾ ಶುಭಾ ವಾಣೀ ಸಾ ಚ ದೇವೀ ಸರಸ್ವತೀ ।**
**ರತಿಃ ಪ್ರೀತಿಃ ಕ್ಷಿತಿರ್ದ್ಯೌಶ್ಚ ಸಾ ಗಂಗಾ ಸಾ ಸರಸ್ವತೀ ॥ ೧೨ ॥**

**ತುಷ್ಟಿಃ ಪುಷ್ಟಿರ್ವಪುಃ ಪ್ರಜ್ಞಾ ಸ್ವಧಾ ಮೇಧಾ ಸರಸ್ವತೀ ।**
**ಸೈವ ನದ್ಯಶ್ಚ್ಯಭಾಸ್ಸರ್ವಾಃ ಸೈವ ದೇವೀ ವನಸ್ಪತೀ ॥ ೧೩ ॥**

**ಸಾ ವಾಸ್ತುದೇವತಾ ದೀಕ್ಷಾ ಸಾ ಶಕ್ತಿರ್ವೈಷ್ಣವೀ ಸ್ಮೃತಾ ।**
**ಬುದ್ಧಿರ್ಲಜ್ಜಾ ಧೃತಿಶ್ಶಾಂತಿಃ ಸುಧಾ ಶೋಭಾ ಜಯಾತ್ಮಿಕಾ ॥ ೧೪ ॥**

**ಸಿನೀವಾಲೀ ಕುಹೂ ರಾಕಾ ತ್ವೇವಂ ಚಾನುಮತಿಶ್ಶುಭಾ ।**
**ಕಾತ್ಯಾಯನೀ ಭದ್ರಕಾಳೀ ಸುಪ್ರಭಾ ವಿಜಯಾ ತಥಾ ॥ ೧೫ ॥**

**ಅದಿತಿರ್ದಿತಿ ದೈತ್ಯಾಶ್ಚ ಕಾಲಾಃ ಸ್ನಾಯುಶ್ಚ ಸಿಂಹಿಕಾ ।**
**ಕದ್ರೂಃ ಕ್ರೋಧಾ ತ್ವಿರಾ ಪ್ರಾವಾ ವಿನತಾ ಸುರಭಿಃ ಖಗಾ ॥ ೧೬ ॥**

**ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಕ್ಷಮಾ ಶ್ರದ್ಧಾ ಕ್ರಿಯಾ ರತಿಃ ।**
**ಅನಸೂಯಾ ಸತೀ ಭೂತಿಃ ವಿಭೂತಿರ್ವಾರುಣೀ ತಥಾ ॥ ೧೭ ॥**

**ಅರುಂಧತೀ ವಸುರ್ಜಾಮಿಾ ಲೋಭಾ ಭಾನುರರುಂಧತೀ ।**
**ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ತಥೈವ ಚ ॥ ೧೮ ॥**

---

ಪ್ರಭಾ, ಸನಾತನೀ, ನಿದ್ರಾ, ವಾಣೀ, ದೇವೀ, ಸರಸ್ವತೀ, ರತಿ, ಪ್ರೀತಿ, ದ್ಯೌ, ಗಂಗಾ, ಸರಸ್ವತೀ, ತುಷ್ಟಿ, ವಪು, ಪ್ರಜ್ಞಾ, ಸ್ವಧಾ, ಮೇಧಾ, ಸರಸ್ವತೀ, ನದೀ, ವನಸ್ಪತೀ, ವಾಸ್ತುದೇವತಾ, ದೀಕ್ಷಾ, ವೈಷ್ಣವೀಶಕ್ತಿ, ಬುದ್ಧಿ, ಲಜ್ಜೆ, ಧೃತಿ, ಶಾಂತಿ, ಸುಧಾ, ಶೋಭಾ, ಜಯಾ, ಇರಾ, ಸಿನೀವಾಲೀ, ಕುಹೂ, ರಾಕಾ, ಅನುಮತಿ, ಕಾತ್ಯಾಯನೀ ಭದ್ರಕಾಳೀ, ಸುಪ್ರಭಾ, ವಿಜಯಾ, ಅದಿತಿ, ದಿತಿ, ದೈತ್ಯ, ಕಾಲ, ಸ್ನಾಯುಸಿಂಹಿಕಾ, ಕದ್ರೂ, ಕ್ರೋಧಾ, ಇರಾ, ಪ್ರಾವಾ, ವಿನತಾ, ಸುರಭಿ, ಖಗಕೀರ್ತಿ, ಲಕ್ಷ್ಮೀ, ಧೃತಿ, ಮೇಧಾ, ಕ್ಷಮಾ, ಶ್ರದ್ಧಾ, ಕ್ರಿಯಾ, ರತಿ, ಅನಸೂಯಾ, ಸತೀ, ಭೂತಿ, ವಿಭೂತಿ, ವಾರುಣೀ, ಅರುಂಧತೀ, ವಸು, ಜಾಮಿಾ, ಲೋಭಾ, ಭಾನು, ಅರುಂಧತೀ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ, ವಿಶ್ವಾ, ಮೃಗಾ, ಮೃಗಮಂದಾ,

ಮೃಗಾ ಚ ಮೃಗಮಂದಾ ಚ ಹರಿಭದ್ರಾ ಯುವಾ ತ್ವಿಡಾ ।
ಭೂತಾ ಚ ಕಪಿಲಾ ದಂಷ್ಟ್ರೀ ಸರಮಾ ಸುರಮಾ ತಥಾ ॥ ೧೯ ॥

ರಾಜಶ್ರೀ ಭೂಮಿಪಾಲಾನಾಂ ಬ್ರಹ್ಮಶ್ರೀ ಸ್ತ್ವದ್ವಿದಾಂ ಶುಭಾ ।
ಪುಷ್ಪಶ್ರೀಃ ಕಾನನಾನಾಂ ಸಾ ಜಯಶ್ರೀರ್ಜಯಿನಾಂ ರಣೇ ॥ ೨೦ ॥

ಸ್ವರ್ಗಶ್ರೀಃ ಸ್ವರ್ಗತಾನಾಂ ಸಾ ದೀಕ್ಷಾ ಸಾ ಯಜ್ಞಯಾಜಿನಾಂ ।
ಬುದ್ಧಿರ್ಬುದ್ಧಿಮತಾಂ ದೇವೀ ಕ್ಷಮಾದೇವೀ ಕ್ಷಮಾವತಾಂ ॥ ೨೧ ॥

ಶಿಖಾ ವಹ್ನೌ ಪ್ರಭಾ ಸೂರ್ಯೇ ಜ್ಯೋತ್ಸ್ನಾ ಚಂದ್ರೇ ಪ್ರಕೀರ್ತಿತಾ ।
ಕಾಂತಿಸ್ತಾರಾಗಣಸ್ಯೋಕ್ತಾ ಸಾ ಸಿದ್ಧಿಸ್ಸರ್ವಕರ್ಮಣಾಂ ॥ ೨೨ ॥

ಸಹಸ್ರನೇತ್ರಜಾ ದೃಷ್ಟಿಃ ಸಹಸ್ರನಯನಸ್ಯ ಸಾ ।
ಉಪತ್ಯಕಾ ಪರ್ವತಾನಾಂ ಫಲಶ್ರೀಸ್ಸಾ ಚ ಶಾಖಿನಾಂ ॥ ೨೩ ॥

ಮಹೋದಧೇಶ್ಚ ಸಾ ವೇಲಾ ನಕ್ಷತ್ರಾಣಾಂ ಚ ಕೃತ್ತಿಕಾ ।
ಧನುರ್ಲತಾ ಚ ಮಂತ್ರಾಣಾಂ ಹೇತೀನಾಂ ಚಾಪ್ಯಸೇರ್ಲತಾ ॥ ೨೪ ॥

---

ಹರಿಭದ್ರಾ, ಯುವಾ, ಇಡಾ, ಭೂತೀ, ಕಪಿಲಾ, ದಂಷ್ಟ್ರೀ, ಸರಮಾ, ಸುರಮಾ, ರಾಜಶ್ರೀ, ಬ್ರಹ್ಮಶ್ರೀ, ಪುಷ್ಪಶ್ರೀ, ಜಯಶ್ರೀ, ಸ್ವರ್ಗಶ್ರೀ, ದೀಕ್ಷಾ, ಬುದ್ಧಿ, ಕ್ಷಮಾ, ಇವುಗಳೆಲ್ಲಾ ರಮೆ (ಮಾಯೆ)ಯ ಹೆಸರುಗಳು.

೨೨. ಬೆಂಕಿಯಲ್ಲಿ ಕಾಣುವ ಉರಿ, ಸೂರ್ಯನಲ್ಲಿರುವ ಪ್ರಭೆ, ಚಂದ್ರನಲ್ಲಿರುವ ಬೆಳದಿಂಗಳು, ನಕ್ಷತ್ರಸಮೂಹದಲ್ಲಿರುವ ಕಾಂತಿ, ಇವು ಸಕಲ ಕರ್ಮಗಳಲ್ಲೂ ಸಿದ್ಧಿಪ್ರದ (ಲಕ್ಷ್ಮೀಪ್ರದ)ವೆಂದು ತಿಳಿಯಬೇಕು.

೨೩. ಇನ್ನು ಲಕ್ಷ್ಮಿಯೆಲ್ಲೆಲ್ಲಿರುವಳೆಂಬುದನ್ನು ತಿಳಿಸುತ್ತಾರೆ. ಸೂರ್ಯನ ಕಿರಣಗಳಲ್ಲಿ, ಪರ್ವತದ ಸುಂದರವಾದ ತಪ್ಪಲುಪ್ರದೇಶಗಳಲ್ಲಿ, ಮರಗಳಲ್ಲಿ ಬಿಡುವ ಹಣ್ಣುಗಳಲ್ಲಿ,

೨೪–೩೧. ಸಮುದ್ರದ ಮೇರೆಗಳಲ್ಲಿ, ಕೃತ್ತಿಕಾ, ನಕ್ಷತ್ರದಲ್ಲಿ, ಮಂತ್ರಗಳಲ್ಲಿ, ಶ್ರೇಷ್ಠವಾದ ಧನುರ್ಲತಾಮಂತ್ರದಲ್ಲಿ, ಕತ್ತಿಯ ತುದಿಯಲ್ಲಿ, ಸರ್ವವಿದ್ಯೆಗಳಿಗೆ ಗಾಂಧಾ

**ಗಾಂಧಾರೀ ಸರ್ವವಿದ್ಯಾನಾಂ ವೃಷ್ಟಿಸ್ಸಾ ಜಗತೀತಲೇ ।**
**ಕರ್ಷಕಾಣಾಂ ತಥಾ ಸೀತಾ ಸಸ್ಯಶೋಭಾ ಮಹೀತಲೇ　　　　॥ ೨೫ ॥**

**ಮದಲೇಖಾ ಚ ನಾಗಾನಾಂ ಭೋಗಿನಾಂ ಚ ಫಣಾವಳೌ ।**
**ರತ್ನಾವಳೀ ಚ ಶೇಷಸ್ಯ ಧೃತಿರ್ಭೂಮಂಡಲಸ್ಯ ಸಾ　　　　॥ ೨೬ ॥**

**ಸಾ ಸ್ಥಿತಾ ಸತತಂ ಚಂದ್ರೇ ಬಿಲ್ವೇ ನೀಲೋತ್ಪಲೇ ವೃಷೇ ।**
**ಕುಂಜರೇ ತುರಗೇ ಸಿಂಹೇ ಖಡ್ಗೇ ಚ ವಿಮಲೇ ಶುಭೇ　　　　॥ ೨೭ ॥**

**ಚಾಮರೇ ವ್ಯಜನೇ ಛತ್ರೇ ಭೃಂಗಾರೇ ಗೋಮಯೇ ವನೇ ।**
**ಸಹಸ್ರಕಿರಣೇ ಸೂರ್ಯೇ ಶಕ್ರೇ ವೈಶ್ರವಣೇ ಯಮೇ　　　　॥ ೨೮ ॥**

**ಕಮಲೇ ರಜತೇ ಹೇಮ್ನಿ ಶಂಖೇ ಭದ್ರಾಸನೇ ಶುಭೇ ।**
**ಗೋಮೂತ್ರೇ ಸರ್ಪಿಷಿ ಕ್ಷೀರೇ ದಧ್ನಿ ಕ್ಷೀರಫಲೇಷು ಚ　　　　॥ ೨೯ ॥**

**ವರುಣೇ ಚ ಜಲಾಧ್ಯಕ್ಷೇ ಸಮುದ್ರೇಷು ಜಲೇಷು ಚ ।**
**ಕುಸುಮೇಷು ಚ ಶುಕ್ಲೇಷು ಪ್ರಾಸಾದೇಷು ಸಿತೇಷು ಚ　　　　॥ ೩೦ ॥**

**ಹುತಾಶನೇ ಪ್ರಜ್ವಲಿತೇ ಪಾರ್ಥಿವೇ ಚಾರುಶೋಭಿತೇ ।**
**ರತ್ನೇಷು ಚ ವಿಚಿತ್ರೇಷು ತಥೈವಾಮಲಕೇಷು ಚ　　　　॥ ೩೧ ॥**

---

ರೀರೂಪಳಾಗಿ, ವೃಷ್ಟಿ (ಮಳೆ) ರೂಪಳಾಗಿ, ಬೇಸಾಯಗಾರರಿಗೆ ನೇಗಿಲರೂಪಳಾಗಿ, ಭೂಮಿಯಮೇಲೆ ಸಸ್ಯರೂಪಳಾಗಿ, ಆನೆಗಳ ಮದೋದಕಗಳಲ್ಲಿ, ಸರ್ಪಗಳ ಹೆಡೆಗಳಲ್ಲಿ, ಆದಿಶೇಷನ ಫಣಾರತ್ನಗಳಲ್ಲಿ, ಧೈರ್ಯದಲ್ಲಿ, ಚಂದ್ರನಲ್ಲಿ, ಬೆಟ್ಟದಲ್ಲಿ, ನೀಲೋತ್ಪಲರತ್ನದಲ್ಲಿ, ಎತ್ತಿನಲ್ಲಿ, ಆನೆಯಲ್ಲಿ, ಕುದುರೆಯಲ್ಲಿ ಸಿಂಹದಲ್ಲಿ, ಕತ್ತಿಯಲ್ಲಿ, ನೈರ್ಮಲ್ಯದಲ್ಲಿ, ಶುಭಕಾರ್ಯಗಳಲ್ಲಿ, ಛತ್ರಿ ಚಾಮರ ಬೀಸಣಿಗೆಗಳಲ್ಲಿ, ಭಂಗಾರದಲ್ಲಿ, ಸಗಣಿ, ಕಾಡು, ಸೂರ್ಯಕಿರಣ, ಇಂದ್ರ, ಕುಬೇರ, ಯಮ, ಕಮಲ, ಚಿನ್ನ, ಬೆಳ್ಳಿ, ಶಂಖ, ಮಣಿ, ಗಂಜಳ, ತುಪ್ಪ, ಹಾಲು, ಮೊಸರು, ಹಣ್ಣು, ವರುಣ, ಸಮುದ್ರದ ನೀರು, ಹೂವು, ಮಹಡೀಮನೆ, ಬೆಂಕಿ, ನೆಲ, ರತ್ನ, ನೆಲ್ಲೀಗಿಡಗಳಲ್ಲಿ ಸಹ ಲಕ್ಷ್ಮಿಯು ವಾಸವಾಗಿದಾಳೆ.

**ಯಥಾ ವ್ಯಾಪ್ತಂ ಜಗತ್ಸರ್ವಂ ದೇವದೇವೇನ ಶಾರ್ಙ್ಗಿಣಾ ।**
**ತಥಾ ವ್ಯಾಪ್ತಂ ಜಗತ್ಸರ್ವಂ ರಾಜನ್ಕ್ಷೀರಾಬ್ಧಿಕನ್ಯಯಾ** ॥ ೩೨ ॥

**ಔತ್ತಮಸ್ಯಾನ್ತರೇ ಜಾತಾ ಸಲಿಲಾದ್ವಿಮಲಾಚ್ಛುಭಾ ।**
**ತಾಮಸಸ್ಯಾನ್ತರೇ ರಾಜನ್ ಭೂತಲಾತ್ಸಾ ಸಮುತ್ಥಿತಾ** ॥ ೩೩ ॥

**ಸ್ವಾಯಂಭುವೇಽಂತರೇ ದೇವೀ ಭೃಗೋಸ್ಸಾ ದುಹಿತಾ ಸ್ಮೃತಾ ।**
**ಸ್ವಾರೋಚಿಷೇ ತಥಾ ಜಾತಾ ಸೈವ ದೇವೀ ಹುತಾಶನಾತ್ ·** ॥ ೩೪ ॥

**ಬಿಲ್ವಾತ್ಸಮುತ್ಥಿತಾ ದೇವೀ ರೈವತಸ್ಯಾನ್ತರೇ ಶುಭಾ ।**
**ಉತ್ಫುಲ್ಲಕಮಲೋದ್ಭೂತಾ ಚಾಕ್ಷುಷೇಪಿ ತಥಾಂತರೇ** ॥ ೩೫ ॥

**ವೈವಸ್ವತೇಽತರೇ ಜಾತಾ ತಥೈವಾಮೃತಮಂಥನಾತ್ ।**
**ಕ್ಷೀರಾಬ್ಧಿಜಾತಾಂ ತಾಂ ಪ್ರಾಪ್ಯ ಹೃದಯೇನ ಜನಾರ್ದನಃ** ॥ ೩೬ ॥

**ದಧಾರ ದುರ್ಧರಾಂ ದೇವೀಂ ತ್ರೈಲೋಕ್ಯೇ ತ ವ್ಯೃತೇ ಪ್ರಭುಂ ।**
**ಆದಾಯ ಸಾಽಮೃತಂ ಶುದ್ಧಂ ಶುಭಕರ್ಮಕಮಂಡಲುಂ** ॥ ೩೭ ॥

---

೩೨. ಎಲೈ ! ರಾಜನೇ, ಕೇಳು. ದೇವದೇವನಾದ ಮಹಾವಿಷ್ಣುವಿನಿಂದ ಈ ಸಕಲ ಪ್ರಪಂಚವೂ ಹೇಗೆ ವ್ಯಾಪ್ತವಾಗಿದೆಯೋ ಅದರಂತೆ ಮಹಾಲಕ್ಷ್ಮಿ ಯಿಂದಲೂ ವ್ಯಾಪ್ತವಾಗಿದೆಯೆಂದು ತಿಳಿದುಕೊ.

೩೩-೩೯. ಉತ್ತಮ ಮನ್ವಂತರದಲ್ಲಿ ನೀರಿನಿಂದಲೂ, ತಾಮಸ ಮನ್ವಂತರ ದಲ್ಲಿ ಭೂಮಿಯಿಂದಲೂ, ಸ್ವಾಯಂಭುವ ಮನ್ವಂತರದಲ್ಲಿ ಭೃಗುವಿನ ಮನೆಯಲ್ಲೂ, ಸ್ವಾರೋಚಿಷ ಮನ್ವಂತರದಲ್ಲಿ ಬೆಂಕಿಯಲ್ಲಿಯೂ, ರೈವತ ಮನ್ವಂತರದಲ್ಲಿ ಬಿಲ್ವವೃಕ್ಷ ದಲ್ಲಿಯೂ, ಚಾಕ್ಷುಷ ಮನ್ವಂತರದಲ್ಲಿ ಕಮಲದಲ್ಲಿಯೂ, ವೈವಸ್ವತ ಮನ್ವಂತರದಲ್ಲಿ ಅಮೃತಮಥನಕಾಲದಲ್ಲಿಯೂ ಈ ಮಹಾಲಕ್ಷ್ಮಿಯು ಹುಟ್ಟಿದಳು. ಈ ರೀತಿ ಹುಟ್ಟಿದ ಕ್ಷೀರಾಬ್ಧಿಕನ್ಯೆಯನ್ನು ಭಗವಾನ್ ವಾಸುದೇವನು ಹೃದಯದಲ್ಲಿ ಧರಿಸಿದನು. ಈಗಲೂ ಮೂರು ಲೋಕದಲ್ಲಿಯೂ ಮಹಾವಿಷ್ಣುವು ಲಕ್ಷ್ಮೀ ಸಮೇತನಾಗಿ ಸರ್ವದಾ

**ಏತಸ್ಮಿನ್ನಂತರೇ ಜಾತೋ ವೈದ್ಯೋ ಧನ್ವಂತರಿಸ್ತಥಾ ।**
**ಅಮೃತೇ ಜಾತಮಾತ್ರೇ ತು ದೈತ್ಯಸಂಘಾಸ್ಸಮಾಕುಲಾಃ ॥ ೩೮ ॥**

**ಧನ್ವಂತರಿ ಮುಖೋಸ್ಮಥ್ಯ ಪರಿಭೂಯಚ ದೇವತಾಃ ।**
**ಅಮೃತಂ ಚ ಸಮಾದಾಯ ಜಗ್ಮುರ್ದೈತ್ಯಾ ನಿವೇಶನಂ ॥ ೩೯ ॥**

**ಹೃತಾಮೃತಾನ್ ದೇವಗಣಾನ್ ವಿಷಾಣ್**
**ಆಶ್ವಾಸ್ಯ ದೇವೋ ಭುವನಸ್ಯ ಗೋಪ್ತಾ ।**

---

ಇರುತ್ತಾನೆಂದು ತಿಳಿಯಬೇಕು. ಈ ಮಹಾಲಕ್ಷ್ಮಿಯು ವಿಷ್ಣುವಿನೊಡನೆ ಅನಪಾಯಿನಿಯಾಗಿರುವಳೆಂಬ ವಿಷಯದಲ್ಲಿ ಪ್ರಮಾಣ ಶ್ಲೋಕವನ್ನು ಇಲ್ಲಿ ಬರೆಯುತ್ತೇವೆ.

**ರಾಘವತ್ವೇಽಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ ।**
**ಅನ್ಯೇಷು ಚಾವತಾರೇಷು ವಿಷ್ಣೋರೇಷಾಽನಪಾಯಿನೀ**

ಟಿಪ್ಪಣಿ :–ರಾಮಾವತಾರದಲ್ಲಿ ಸೀತೆಯಾಗಿಯೂ, ಕೃಷ್ಣಾವತಾರದಲ್ಲಿ ರುಕ್ಮಿಣಿಯಾಗಿಯೂ, ಇತರ ಅವತಾರಗಳಲ್ಲಿಯೂ ಸಹ ಇದೇ ಮೇರೆ ಮಹಾಲಕ್ಷ್ಮಿಯು ಮಹಾವಿಷ್ಣುವಿನ ವಕ್ಷಸ್ಥಳದಲ್ಲಿದ್ದುಕೊಂಡು ಸರ್ವದಾ ಅನಪಾಯಿನಿ (ಎಡೆಬಿಡದೆ) ಯಾಗಿ ಇದಾಳೆ.

ಈ ರೀತಿ ಸಮುದ್ರದಲ್ಲಿ ಜನಿಸಿದ ಮಹಾಲಕ್ಷ್ಮಿಯು ಅಮೃತ ಕಲಶವನ್ನು ಕೈಯಲ್ಲಿ ಹಿಡಿದುಕೊಂಡು ಹೊರಟಳು ಈ ಮಧ್ಯದಲ್ಲಿ ಧನ್ವಂತರೀ ರೂಪದಿಂದ ಮಹಾವಿಷ್ಣುವೇ ಆ ಅಮೃತವನ್ನು ತನ್ನ ಕೈಗೆ ತೆಗೆದುಕೊಂಡು ಅವತರಿಸಿದನು. ಈ ರೀತಿ ಅಮೃತವು ಉತ್ಪತ್ತಿಯಾದುದನ್ನು ನೋಡಿ ದೈತ್ಯರು ಗುಂಪುಕೂಡಿ, ಧನ್ವಂತರಿಯನ್ನೂ, ದೇವತೆಗಳನ್ನೂ ಹಿಂಸಿಸಿ ಅಮೃತವನ್ನು ಕಿತ್ತುಕೊಂಡು ಓಡಿಹೋದರು.

೪೦. ರಾಕ್ಷಸರಿಂದ ಅಮೃತವು ಅಪಹೃತವಾದುದನ್ನೂ, ದೇವತೆಗಳು ಅದನ್ನು ಪಾನಮಾಡದೆ ಮೋಸಹೋದುದನ್ನು ನೋಡಿ, ಮಹಾವಿಷ್ಣುವು ಅವರನ್ನು ಸಮಾ

ಸ್ಥಾನೇ ಚ ವಿನ್ಯಸ್ಯ ಗಿರೀಂದ್ರಮುಖ್ಯಂ
ಜಗಾಮ ದೇವೋ ಸುರನಾಥವೇಶ್ಮ ॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರ ಸಂವಾದೇ ಅಮೃತಮಥನಂ ನಾಮ
ಏಕಚತ್ವಾರಿಂಶತ್ತಮೋಽಧ್ಯಾಯಃ



---

ಧಾನ ಮಾಡಿ, ಮಂದರಗಿರಿಯನ್ನು ಸ್ವಸ್ಥಾನದಲ್ಲಿ ಇರಿಸಿ, ಅಸುರರು ಅಮೃತವನ್ನು ತೆಗೆದುಕೊಂಡು ಹೋದ ಮನೆಗೆ ಪ್ರವೇಶಿಸಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಅಮೃತ ಮಥನವೆಂಬ ಹೆಸರಿನ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ದ್ವಿಚತ್ವಾರಿಂಶತ್ತಮೋಽಧ್ಯಾಯಃ

---

॥ ರಾಹುರುವಾಚ ॥

**ಬಭೂವ ನಾರೀ ಕಲ್ಯಾಣೀ ಸ ದೇವೋ ಮಧುಸೂದನಃ ।**
**ಅನಿರ್ದೇಶ್ಯ ವಯೋರೂಪಾ ಸರ್ವಲಕ್ಷಣಪೂರಿತಾ ॥ ೧ ॥**

**ಸಮಾಂಗುಲಿತಲೌ ಶ್ಲಕ್ಷ್ಣೌ ರಕ್ತತುಂಗನಖೌ ಶುಭೌ ।**
**ಬಿಭೃತೇ ಚರಣೌ ಶುಭ್ರೌ ಗೂಢಗುಲ್ಫೌ ಮನೋಹರೌ ॥ ೨ ॥**

**ಜಂಘೇ ಮನೋಹರೇ ಶುಭ್ರೇ ಸ್ಪಷ್ಟೇ ಲೋಮವಿವರ್ಜಿತೇ ।**
**ಗೂಢಸಂಧ್ಯಸ್ಥಿಕೇ ಶ್ಲಕ್ಷ್ಣೇ ಜಾನುನೀ ಚ ತಥಾ ಶುಭೇ ॥ ೩ ॥**

---

## ನಲವತ್ತೆರಡನೆಯ ಅಧ್ಯಾಯವು

೧-೫. ರಾಹುವು ಹೇಳಿದನು:- ಮಹಾವಿಷ್ಣುವು ಮೋಹಿನೀ ರೂಪವನ್ನು ಧರಿಸಿ ರಾಕ್ಷಸರ ಕಣ್ಣಿಗೆ ಗೋಚರವಾದ ಬಗೆಯನ್ನು ಇಲ್ಲಿ ವರ್ಣಿಸಿರುತ್ತಾರೆ

ಕಾಲಿನಿಂದ ಹಿಡಿದು ಶಿರಸ್ಸಿನ ತನಕ ಇರುವ ಸರ್ವಾವಯವಗಳನ್ನೂ ವರ್ಣಿಸಿರುವ ಕ್ರಮವೇನೆಂದರೆ:- ಆ ಮಧುಸೂದನನು ಸುಂದರನಾರಿಯಾಗಿ ಲೋಕ ಮೋಹಿನಿಯಾದನು.

ಆ ಮೋಹಿನಿಯ ವಯಸ್ಸನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ಆಕೆಯು ಸರ್ವ ಲಕ್ಷಣಗಳಿಂದ ಪರಿಪೂರ್ಣಳಾಗಿದ್ದಳು ಕೈಗಳ ಬೆರಳುಗಳ ಹಿಂಭಾಗಗಳು ಕೆಂಪಾ

**ಊರೂ ಕರಿಕರಾಕಾರೌ ಕದಳೀದಳಕೋಮಲೌ ।**
**ಘನಮಾಭೋಗಿ ಜಘನಂ ಮಧ್ಯಂ ಕುಲಿಶಸನ್ನಿಭಂ ॥ ೪ ॥**

**ತ್ರಿವಳೀ ತ್ರಿಪಥಾಧಾರೀ ನಾಭೀ ಪುಷ್ಕರ ಮಂಡಿತಂ ।**
**ಗೂಢಸ್ಫಿಕೇ ಸಮೇ ಪಾರ್ಶ್ವೇ ಸಮಂ ಪೃಷ್ಠಂ ಮನೋರಮಂ ॥ ೫ ॥**

**ಸಮೌ ಸುಸಂಹತೌ ಪೀನೌ ಕೋಮಲಾವಗ್ರಚೂಚುಕೌ ।**
**ಅಭೋಗಿನೌ ಮಂಡಲಿನೌ ಸ್ತನೌ ಕನಕಸನ್ನಿಭೌ ॥ ೬ ॥**

**ಮೃಣಾಳಸದೃಶೌ ಬಾಹೂ ಕರೌ ಕೋಮಲಕೋಮಲೌ ।**
**ಶಂಖಂ ತುಲ್ಯಂ ಶುಭಂ ಕಂಠಂ ಚೋನ್ನತಾ ಚ ಕೃಕಾಟಿಕಾ ॥ ೭ ॥**

**ಮುಖಂ ಪೂರ್ಣೇಂದುಸಂಕಾಶಂ ದ್ವಿಜಾಃ ಕುಂದಸಮಪ್ರಭಾಃ ।**
**ಅಧರೌ ವಿದ್ರುಮಾಕಾರೌ ನಾಸಾ ಸ್ಪಷ್ಟ ಮನೋರಮಾ ॥ ೮ ॥**

**ಮಧೂಕಪುಷ್ಪಸಂಕಾಶೌ ಕಪೋಲೌ ಲಲಿತಾವುಭೌ ।**
**ಭ್ರೂಯುಗ್ಮಂ ಕಾಮಚಾಪಾಂತಸದೃಶಂ ಸುಮನೋಹರಂ ॥ ೯ ॥**

---

ಗಿದ್ದವು. ಪಾದಗಳೆರಡೂ ದುಂಡಾಗಿ ತುಂಬಿಕೊಂಡಿದ್ದವು. ಹಿಮ್ಮಡಿಯಿಂದ ಮೊಳಕಾಲತನಕ ಶುಭ್ರವಾಗಿದ್ದವು ತೊಡೆಗಳು ಆನೇ ಸೊಂಡಲಿನಂತಿದ್ದು ಬಾಳೆ ಯೆಲೆಯಂತೆ ಮೃದುವಾಗಿದ್ದವು. ಮಧ್ಯಭಾಗವು ವಜ್ರಾಯುಧದಂತೆ ಹೊಳೆಯು ತ್ತಿತ್ತು. ತ್ರಿವಳಿಗಳೂ ತ್ರಿಪಥಗಳ ಧಾರೆಯಂತೆ ತೋರುತ್ತಿದ್ದವು. ಹೊಕ್ಕಳು ಸರೋವರದಂತೆ ಕಾಣುತ್ತಿತ್ತು. ಪಾರ್ಶ್ವಗಳೆರಡೂ ಸಮನಾಗಿದ್ದವು.

೬-೧೨. ರಹಸ್ಯೇಂದ್ರಿಯಗಳನ್ನು ಬಿಟ್ಟು ಉಳಿದುವನ್ನು ಮಾತ್ರ ನಾವು ಇಲ್ಲಿ ಬರೆಯುತ್ತೇವೆ. ತಾವರೆದಂಟಿನಂತಹ ತೋಳುಗಳು, ಶಂಖದಂತಿರುವ ಕತ್ತು, ಪೂರ್ಣಚಂದ್ರನಂತಿರುವ ಮುಖ, ಮಲ್ಲೀ ಹೂವುಗಳಂತಿರುವ ಹಲ್ಲಿನ ಸಾಲುಗಳು, ಹವಳದಂತಹ ತುಟಿ, ಸಂಪಿಗೆ ಎಸಳಿನಂತಹ ಮೂಗು, ಕನ್ನಡಿಯಂತಿರುವ ಕೆನ್ನೆಗಳು, ಮನ್ಮಥನ ಬಾಣಗಳಂತಿರುವ ಕಣ್ಣು ಹುಬ್ಬುಗಳು. ಸುಂದರವಾದ ಕಿವಿಗಳು, ಅದರಲ್ಲಿ

ಸಾತಿಪ್ರಲಂಬೌ ಶ್ರವಣೌ ನಾತ್ಯಚಾರೂ ಚ ಕುಂಡಲೌ ।
ಚಿಬುಕಂ ಚ ಮನೋಹಾರಿ ಲಲಾಟಂ ಶಶಿಸುಪ್ರಭಂ ॥ ೧೦ ॥

ಕೃಷ್ಣಮಧ್ಯೇ ಸುರಕ್ತಾಂತೇ ನಯನೇ ಶ್ವೇತಭೂಮಿಕೇ ।
ನೀಲೋತ್ಪಲದಳಾಕಾರೇ ದೀರ್ಘೇ ಚಾತಿಮನೋರಮೇ ॥ ೧೧ ॥

ಕೋಕಿಲಾಳಿಕುಲಾಕಾರಂ ಭಿನ್ನಾಂಜನಚಯಪ್ರಭಂ ।
ಕೇಶಪಾಶಂ ತಥಾ ಕಿಂಚಿದ್ದಧಾರ ಕುಟಿಲಂ ಶುಭಂ ॥ ೧೨ ॥

ಚಂದ್ರರಶ್ಮಿಪ್ರಕಾಶೇನ ವಸ್ತ್ರಯುಗ್ಮೇನ ಭೂಷಿತಾ ॥ ೧೩ ॥

ರೂಪೇಣಾಪ್ರತಿಮಾ ರಾಜನ್ ಸರ್ವಾಲಂಕಾರಭೂಷಿತಾ ।
ಯತ್ರ ಯತ್ರ ಪದನ್ಯಾಸಂ ಕರೋತಿ ಗಜಗಾಮಿನೀ ॥ ೧೪ ॥

ತತ್ರ ತತ್ರೈವ ವಸುಧಾ ಸಪದ್ಮೇವೋಪಲಕ್ಷ್ಯತೇ ।
ಯತ್ರ ಯತ್ರಾತಿಮಧುರಾಂ ದೃಷ್ಟಿಂ ಕ್ಷಿಪತಿ ಭಾಮಿನೀ ॥ ೧೫ ॥

ಸಿತಾಸಿತೋತ್ಪಲೈಸ್ತತ್ರ ಕಿರತೀವ ವಸುಂಧರಾಂ ।
ಯತ್ರ ಯತ್ರ ಸ್ಥಿತಾ ಭಾತಿ ದೇಶೇ ಕನಕವರ್ಣಿನೀ ॥ ೧೬ ॥

---

ಧರಿಸಿರುವ ಕುಂಡಲಗಳು, ಚಂದ್ರನಂತೆ ಹೊಳೆಯುತ್ತಿರುವ ಹಣೆ, ಕನ್ನೈದಿಲೆಯಂತೆ ಕಪ್ಪಾದ ಕಣ್ಣುಗಳು, ಕಪ್ಪಾದ ತಲೆಕೂದಲುಗಳು, ಚಂದ್ರಕಿರಣದಂತೆ ಪ್ರಕಾಶಿಸುತ್ತಿರುವ ಉಟ್ಟಿರುವ ಸೀರೆಯುಳ್ಳ ನಾನಾವಿಧವಾದ ಭೂಷಣಗಳಿಂದಲಂಕೃತಳಾದ, ಅಪ್ರತಿಮ ಸೌಂದರ್ಯದಿಂದ ಕೂಡಿರುವ ಆ ಮೋಹಿನಿಯು, ಗಜಗಮನದಂತೆ ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟು ನಡೆಯುತ್ತಿದ್ದಳು. ಅವಳು ಹೆಜ್ಜೆಯಿಟ್ಟ ಜಾಗದಲ್ಲೆಲ್ಲಾ ಒಂದೊಂದು ಪದ್ಮವಿದೆಯೋ ಎಂಬಂತೆ ಕಾಣುತ್ತಿತ್ತು. ಆಕೆಯು ಎಲ್ಲಿ ದೃಷ್ಟಿಯಿಟ್ಟು ನೋಡುವಳೋ ಅಲ್ಲೆಲ್ಲಾ ನೈದಿಲೆಕನ್ನೈದಿಲೆ ಹೂಗಳು ಭೂಮಿಯ ಮೇಲೆ ಎರಚುವಂತೆ ತೋರುತ್ತಿತ್ತು. ಆ ಮೋಹಿನಿಯು ಎಲ್ಲೆಲ್ಲಿ ನಿಂತು ನಿಂತು ನೋಡುವಳೋ ಆ ಸ್ಥಳಗಳಲ್ಲೆಲ್ಲಾ ಚಿನ್ನವು ತನ್ನಷ್ಟಕ್ಕೆತಾನೇ ಉತ್ಪತ್ತಿಯಾಗುತ್ತಿತ್ತು. ಇಂತಹ ಭುವನಮೋಹಕಳಾದ

ತತ್ರ ತತ್ರೈವ ಸೌವರ್ಣಂ ಸಾ ಕರೋತಿ ನಭಸ್ತಲಂ ।
ತಾಂ ದೃಷ್ಟ್ವಾ ಚಾರುಸರ್ವಾಂಗೀಂ ಮನ್ಮಥಾವಿಷ್ಟಚೇತಸಃ ॥ ೧೭ ॥

ಪ್ರಹ್ಲಾದರಹಿತಾಃ ಸರ್ವೇ ಬಭೂವುರ್ದಾನವಾಸ್ತದಾ ।
ಪಾದಯೋಃ ಪೃಥಿವೀಂ ತಸ್ಯಾ ಧೃತಿಂ ದೇವೀಂ ಚ ಜಂಘಯೋಃ ॥ ೧೮ ॥

ಜಾನುಭ್ಯಾಂ ಚ ತಥಾ ಕ್ಷಾಂತಿಂ ಕಾಂತಿಮೂರುಯುಗೇ ಶುಭೇ ।
ಆಯತಿಂ ನಿಯತಿಂ ಲಕ್ಷ್ಮೀಂ ವೇಲಾಂ ತು ಜಘನೇ ತಥಾ ॥ ೧೯ ॥

ಮಧ್ಯೇ ವಾಹಾಂ ಸತೀಂ ಪೃಷ್ಠೇ ಪಾರ್ಶ್ವಯೋಶ್ಚ ಸುಧಾಂ ಮುಖೇ ।
ರತಿಂ ಪ್ರೀತಿಂ ಕುಚಯುಗೇ ಕಂಠೇ ವಾಣೀಂ ತಥೈವ ಚ ॥ ೨೦ ॥

ಜಯಾಂ ಚ ವಿಜಯಾಂ ಚೈವ ಕರಯೋರ್ಭುಜಯೋಸ್ತಥಾ ।
ಶೋಭಾಂ ಪ್ರಭಾಂ ವಕ್ಷಸಿ ಚ ಶ್ರಿಯಂ ದೇವೀಂ ಮನೋರಮಾಂ ॥ ೨೧ ॥

---

ಮೋಹಿನಿಯನ್ನು ನೋಡಿದೊಡನೆಯೇ ರಾಕ್ಷಸರೆಲ್ಲರೂ ಮನ್ಮಥನ ಏಟಿನಿಂದ ಹೊಡೆಯಲ್ಪಟ್ಟ ಮನಸ್ಸುಳ್ಳವರಾಗಿ ಪಿಶಾಚಿಗಳಂತೆ ಕುಣಿಯತೊಡಗಿದರು.

೧೮ ೨೫. ಆ ಮೋಹಿನಿಯನ್ನು ನೋಡಿದೊಡನೆಯೇ ಸಕಲ ದೈತ್ಯರೂ ಹರ್ಷ (ಪ್ರಹ್ಲಾದ) ರಹಿತರಾದರು. ಆ ಮೋಹಿನಿಯ ವಿಶ್ವರೂಪವು ಎಂತಿದ್ದಿತೆಂದರೆ :- ಆಕೆಯು ಪಾದಗಳಲ್ಲಿ ಭೂಮಿಯನ್ನೂ, ಮೊಳಕಾಲುಗಳಲ್ಲಿ ಧೃತೀ (ಧೈರ್ಯ) ದೇವಿಯನ್ನೂ, ಮಂಡಿಗಳಲ್ಲಿ ಕ್ಷಮಾದೇವಿಯನ್ನೂ, ತೊಡೆಗಳಲ್ಲಿ ಕಾಂತಿದೇವಿಯನ್ನೂ ಜಘನ (ಸೊಂಟದ ಹಿಂಬದಿ) ಪ್ರದೇಶದಲ್ಲಿ ಆಯತಿ ನಿಯತಿ ಲಕ್ಷ್ಮೀ ವೇಲಾದೇವಿಯರನ್ನೂ, ಮಧ್ಯ ದೇಶದಲ್ಲಿ ವಾಹಾದೇವಿಯನ್ನೂ, ಎರಡು ಪಕ್ಕಗಳೂ ಮತ್ತು ಹಿಂಭಾಗದಲ್ಲಿ ಸತಿದೇವಿಯನ್ನೂ, ಮುಖದಲ್ಲಿ ಸುಧೆ (ಅಮೃತ) ಯನ್ನೂ, ಸ್ತನಯುಗಳದಲ್ಲಿ ರತಿಪ್ರೀತಿಯರನ್ನೂ, ಕತ್ತಿನಲ್ಲಿ ಸರಸ್ವತಿಯನ್ನೂ, ಎರಡು ಹಸ್ತಗಳಲ್ಲೂ ಜಯಾವಿಜಯಾದೇವಿಯರನ್ನೂ, ಎರಡು ಭುಜಗಳಲ್ಲಿ ಶೋಭಾಪ್ರಭಾದೇವಿಯರನ್ನೂ, ಎದೆಯಲ್ಲಿ ಮನೋಹರಳಾದ ಶ್ರೀದೇವಿಯನ್ನೂ, ಗಲ್ಲದಲ್ಲಿ ಅರುಂಧತಿ

ಅರುಂಧತೀಂ ಚ ಚುಬುಕೇ ಜಿಹ್ವಾಯಾಂಚ ಸರಸ್ವತೀಂ ।
ಜ್ಯೋತ್ಸ್ನಾಂ ಕಪೋಲಯೋರ್ದೇವೀಂ ನಿದ್ರಾಂ ನೇತ್ರಯುಗೇ ತಥಾ॥೨೨॥

ಕೇಶಪಾಶೇ ತಥಾ ರಾತ್ರೀಂ ದಿಶಃ ಶ್ರೋತ್ರಯುಗೇ ತಥಾ ।
ಭದ್ರಕಾಲೀಂ ಲಲಾಟೇ ಚ ನಾಸಾಯಾಂ ಚ ತಥಾ ಶಚೀಂ ॥ ೨೩ ॥

ಸರ್ವಾಂಗಸಂಧಿಗಾ ನದ್ಯೋ ಲೋಮಸ್ವಥ ವನಸ್ಪತಿಂ ।
ಪಾರ್ಶ್ವಯೋಃ ಪರ್ವತಾಶ್ಚೈವ ದೈತ್ಯೇಶಃ ಸರ್ವದೇವತಾಃ ॥ ೨೪ ॥

ದೃಷ್ಟವಾಂಸ್ತ್ರೀತನುಂ ತತ್ರ ಪ್ರಹ್ಲಾದೋಽರಿ ಕುಲಾಂತಕಃ ।
ವಿಶ್ವರೂಪಧರಾ ದೃಷ್ಟ್ವಾ ಪ್ರಹ್ಲಾದ ಸ್ತಾಂಚ ಯೋಷಿತಂ ॥ ೨೫ ॥

ವಿಷ್ಣುಂ ಮತ್ವಾ ವಿಶಾಲಾಕ್ಷೀಂ ಜ್ಞಾತ್ವಾ ಚೈನಾಮೃತಾರ್ಥಿನೀಂ ।
ಕಾಮಾರ್ತದೈತ್ಯಾನುಮತಃ ಪ್ರಹ್ಲಾದೋ ದೈತ್ಯಸತ್ತಮಃ ॥ ೨೬ ॥

---

ಯನ್ನೂ, ನಾಲಿಗೆಯಲ್ಲಿ ಸರಸ್ವತೀದೇವಿಯನ್ನೂ, ಎರಡು ಕೆನ್ನೆಗಳಲ್ಲಿಯೂ ಜ್ಯೋತ್ಸ್ನಾ (ಬೆಳದಿಂಗಳು) ದೇವಿಯನ್ನೂ, ಎರಡು ಕಣ್ಣುಗಳಲ್ಲಿಯೂ ನಿದ್ರಾದೇವಿಯನ್ನೂ, ಕೇಶಪಾಶ (ತಲೆಕೂದಲು) ಗಳಲ್ಲಿ ರಾತ್ರಿಯನ್ನೂ, ಕಿವಿಗಳಲ್ಲಿ ದಿಕ್ಕುಗಳನ್ನೂ, ಹಣೆಯಲ್ಲಿ ಭದ್ರಕಾಳೀದೇವಿಯನ್ನೂ, ಮೂಗಿನಲ್ಲಿ ಶಚೀದೇವಿಯನ್ನೂ, ಸಕಲ ಅಂಗಗಳ ಸಂದಿ ಸಂದಿಗಳಲ್ಲೂ ಸಮಸ್ತ ನದಿಗಳನ್ನೂ, ಮೈಮೇಲಿನ ಕೂದಲುಗಳಲ್ಲಿ ವಿವಿಧ ವನಸ್ಪತಿಗಳನ್ನೂ, ಎರಡು ಪಕ್ಕೆಗಳಲ್ಲಿ ಪರ್ವತಗಳನ್ನೂ, ಧರಿಸಿ ವಿಶ್ವರೂಪಧಾರಿಣಿಯಾಗಿ ತೋರುತ್ತಿದ್ದಳು ಶತ್ರುಕುಲಾಂತಕನಾದ ಪ್ರಹ್ಲಾದನು ಈ ವಿಧವಾದ ವಿಶ್ವಮೋಹಿನಿಯಲ್ಲಿ ಸಕಲ ದೇವತೆಗಳನ್ನೂ ಸಂದರ್ಶಿಸಿದನು. ಈರೀತಿ ವಿಶ್ವರೂಪಧಾರಿಣಿಯಾದ ಆ ಸ್ತ್ರೀಯನ್ನು ಪ್ರಹ್ಲಾದನು ನೋಡಿದವನಾಗಿ:

೨೬–೩೨. ಈ ಮೋಹಿನೀ ರೂಪವು ಸಾಕ್ಷನ್ಮಹಾವಿಷ್ಣುವೇ ಆಗಿರಬೇಕೆಂದು ನಿರ್ಧರಿಸಿ, ಆ ಮೋಹಿನಿಯು ಅಮೃತವನ್ನು ಪಡೆಯಲು ರಾಕ್ಷಸರ ಬಳಿಗೆ ಬಂದಿರುವಳೆಂದು ತಿಳಿದವನಾಗಿ, ಕಾಮಾತುರರಾದ ಆ ರಾಕ್ಷಸರೊಡನೆ ಈ ವೃತ್ತಾಂತವನ್ನು

ಪ್ರದದಾವಮೃತಂ ತಸ್ಯೈ ಪ್ರಣಿಪತ್ಯ ಪ್ರಸಾದ್ಯ ಚ ।
ಸ್ತ್ರೀರೂಪಮಾಸ್ಥಿತೈರ್ದೇವೈಸ್ತ್ರೈಲೋಕ್ಯಂ ಸಚರಾಚರಂ ॥ ೨೭ ॥

ಸ್ತ್ರೀಚೇಷ್ಟಮಭವತ್ಸರ್ವಂ ತಸ್ಮಿಂಕಾಲ ಉಪಸ್ಥಿತೇ ।
ಉವಾಚ ಸಾ ಸ್ತ್ರೀ ಪ್ರಹ್ಲಾದಂ ದೈತ್ಯ ತ್ವಮಮೃತಂ ವಿನಾ ॥ ೨೮ ॥

ಬ್ರಾಹ್ಮಮೇಕಮಹಃ ಸೌಮ್ಯ ಜೀವಿತಾನ್ನ ವಿಮೋಕ್ಷ್ಯಸೇ ।
ಯೋದ್ಧುಮಭ್ಯುದಿತಾ ದೈತ್ಯದೇವೈರ್ದಿತಿಜಕಾರಣಾತ್ ॥ ೨೯ ॥

ನ ಪ್ರಬೋಧ್ಯಾಸ್ತಮೋಯುಕ್ತಾಸ್ತ್ವಯಾ ದೈತ್ಯ ಜನಾರ್ದನಾಃ ।
ಭಕ್ತೋಽಸಿ ಮೇ ಸದಾ ವತ್ಸ ಸದೈವ ವಿಜಿತೇಂದ್ರಿಯಃ ॥ ೩೦ ॥

ತೇನ ತೇ ದರ್ಶಿತಾ ಸೌಮ್ಯ ಪ್ರಕೃತಿರ್ಯಾ ಪರಾಮಮ ।
ಇತ್ಯೇವಮುಕ್ತ್ವಾ ಪ್ರಹ್ಲಾದಂ ಸೋಮಮಾದಾಯ ಸತ್ವರಾ ॥ ೩೧ ॥

---

ತಿಳಿಸಿ ಅವರೆಲ್ಲರ ಅಪ್ಪಣೆಯನ್ನು ಪಡೆದು ಆ ಅಮೃತವನ್ನು ಅವರಿಂದ ಪಡೆದು ಆ ಮೋಹಿನೀದೇವಿಗೆ ಪ್ರಹ್ಲಾದನು ನಮಸ್ಕಾರಮಾಡಿ ಆಕೆಗೆ ಆ ಅಮೃತವನ್ನು ಸಮರ್ಪಿಸಿ ಆಕೆಯ ಅನುಗ್ರಹವನ್ನು ಪಡೆದನು. ಆ ಸಮಯದಲ್ಲಿ ಸಕಲದೇವತೆಗಳೂ ಸ್ತ್ರೀರೂಪವನ್ನು ಧರಿಸಿದರು. ಚರಾಚರಾತ್ಮಕವಾದ ಮೂರುಲೋಕವೂ ಸ್ತ್ರೀಮಯವಾಯಿತು. ಇದನ್ನು ನೋಡಿ ರಾಕ್ಷಸರೆಲ್ಲರೂ ದಿಗ್ಭ್ರಾಂತರಾಗಿ ತಮೋಗುಣ ವಿಶಿಷ್ಟರಾಗಿ ಮೋಹ (ಮೂರ್ಛೆ) ದಲ್ಲಿ ಮುಳುಗಿಹೋದರು. ಅಂತಹ ಕಾಲದಲ್ಲಿ ಮೋಹಿನಿಯು ದೈತ್ಯರಾಜನಾದ ಪ್ರಹ್ಲಾದನನ್ನು ನೋಡಿ, "ಮಗು, ನಿನ್ನ ಭಕ್ತಿಗೆ ಮೆಚ್ಚಿ ನನ್ನ ವಿಶ್ವರೂಪವನ್ನು ನಿನಗೊಬ್ಬನಿಗೆ ಮಾತ್ರ ತೋರಿಸಿರುತ್ತೇನೆ. ನೀನು ಅಮೃತಪಾನ ಮಾಡದೇಹೋದರೂ ಬ್ರಹ್ಮನ ಒಂದು ಹಗಲಿನಷ್ಟು ಕಾಲ ಜೀವಂತನಾಗಿ ಸುಖವಾಗಿದ್ದು ಆ ಬಳಿಕ ಮೋಕ್ಷವನ್ನು ಪಡೆಯುತ್ತೀ"ಯೆಂದು ವರವನ್ನು ಕೊಟ್ಟು, ಪುನಃ ಹೇಳಿದಳು. "ಈಗ ರಾಕ್ಷಸರೆಲ್ಲರೂ ಮೋಹ (ಅಜ್ಞಾನ) ನಿದ್ರೆಯಿಂದ ಬಿದ್ದಿದ್ದಾರೆ. ಇವರನ್ನು ಈಗ ಎಬ್ಬಿಸಬೇಡ. ದೇವದಾನವರಿಗೆ ಯುದ್ಧವಾಗುವುದನ್ನು ತಪ್ಪಿಸಬೇಕಾಗಿದೆ. ನೀನು ನನ್ನ ಭಕ್ತನಾಗಿ ಜಿತೇಂದ್ರಿಯನಾಗಿರುವೆ, ಆದ್ದರಿಂದಲೇ ನಿನಗೆ ನನ್ನ ನಿಜರೂಪವನ್ನು ತೋರಿಸಿದೆನು. ಅಜಿತೇಂದ್ರಿಯ (ಕಾಮುಕ) ರು ನನ್ನ ಆತ್ಮಸ್ವರೂಪವನ್ನು ನಿಜವಾಗಿ ತಿಳಿಯಲಾರರು." ಈರೀತಿ ಪ್ರಹ್ಲಾದನೊಡನೆ ಹೇಳಿ ವರ

**ಕಾಮಾರ್ತಾದಿತಿಜಾಂ ಸ್ತ್ಯಕ್ತ್ವಾ ಜಗಾಮ ಸುರಮಂದಿರಂ ।**
**ಸ್ತ್ರೀರೂಪಂ ತತ್ರ ಸಂತ್ಯಜ್ಯ ದೇವರೂಪಮುಪಾಶ್ರಿತಃ ॥ ೩೨ ॥**

**ಪಾಯಯಾಮಾಸ ತತ್ಸರ್ವಂ ಸುರಾಂ ಸರ್ವಾಸಮಾಹಿತಾ ।**
**ಮಯಾಪಿ ಮಧ್ಯೇ ದೇವಾನಾಂ ಪೀತಂ ತತ್ಸೂರ್ಯರೂಪಿಣಾ ॥ ೩೩ ॥**

**ಆದಿತ್ಯರೂಪೋ ದೈತ್ಯೋಽಯಂ ಜ್ಞಾತೋಽಹಂ ಶಶಿಭಾಸ್ಕರೈಃ ।**
**ನಿವೇದಿತಶ್ಚ ದೇವಾಯ ತೇನಾಽಪಿ ಲಘುಕಾರಿಣಾ ॥ ೩೪ ॥**

**ಚಕ್ರೇಣ ಪಾತಿತಂ ವತ್ಸ ಸಭುಜಂ ಮಸ್ತಕಂ ಮಮ ।**
**ಅಮೃತಪ್ರಾಶನಾತ್ಪ್ರಾಣೈರ್ನವಿಯುಕ್ತೋಽಸ್ಮಿ ದಾನವ ॥ ೩೫ ॥**

---

ಪ್ರದಾನಮಾಡಿ, ಅಮೃತಕಲಶವನ್ನು ಸ್ವಾಧೀನಮಾಡಿಕೊಂಡು ಬಹಳ ಜಾಗ್ರತೆಯಾಗಿ ಹೋಗಿ (ಸಕಲ ಕಾಮಾರ್ತರಾದ ರಾಕ್ಷಸರನ್ನು ಬಿಟ್ಟು) ದೇವನಗರಿಗೆ ಪ್ರವೇಶಿಸಿದಳು. ಅಲ್ಲಿ ಕೃತಕ ಮೋಹಿನೀರೂಪವನ್ನು ಬಿಟ್ಟು, ದೇವದೇವೋತ್ತಮನಾಗಿ ಮಹಾವಿಷ್ಣುವು ದೇವತೆಗಳಿಗೆ ಕಾಣಿಸಿಕೊಂಡನು.

೩೩. ತಾನು ತಂದಿದ್ದ ಅಮೃತವನ್ನು ಸಮಾಧಾನಚಿತ್ತರಾಗಿ ಕುಳಿತಿದ್ದ ಸಕಲ ದೇವತೆಗಳಿಗೂ ಪಾನಮಾಡಿಸಿದನು. "ಕೇಳ್ಳೈ ! ತಮ್ಮನಾದ ಸಾಲ್ವನೇ, ಆ ಅಮೃತವನ್ನು ದೇವತೆಗಳಿಗೆ ಹಂಚುತ್ತಿದ್ದಾಗ ನಾನೂ ಸಹ ಅಲ್ಲಿ ಸೂರ್ಯನ ಆಕಾರವನ್ನು ಧರಿಸಿ ಅಲ್ಲೇ ಅವರ ಪಙ್ಕ್ತಿಯಲ್ಲಿ ಕುಳಿತು ಅಮೃತವನ್ನು ಪಾನಮಾಡಿದೆನು.

೩೪. ನಾನು ಈ ರೀತಿ ಸೂರ್ಯನ ರೂಪದಿಂದ ವೇಷವನ್ನು ಮರೆಸಿ ಕುಳಿತಿದ್ದ ಸಂಗತಿಯನ್ನು ಸೂರ್ಯಚಂದ್ರರು ತಿಳಿದುಕೊಂಡು ಸೂಕ್ಷ್ಮರೂಪದಿಂದ ಹೋಗಿ ಮಹಾವಿಷ್ಣುವಿನೊನೆ ಹೇಳಿಬಿಟ್ಟರು.

೩೫. "ತಮ್ಮ ! ಕೇಳು. ಈ ವೃತ್ತಾಂತ ತಿಳಿದೊಡನೆ ಮಹಾವಿಷ್ಣುವು ತನ್ನ ಚಕ್ರದಿಂದ ನನ್ನ ಭುಜಸಹಿತವಾಗಿ ಕತ್ತನ್ನು ಕತ್ತರಿಸಿಬಿಟ್ಟನು. ನಾನು ಅಷ್ಟರೊಳಗೆ ಅಮೃತವನ್ನು ಕುಡಿದುಬಿಟ್ಟಿದ್ದೆನಾದ್ದರಿಂದ ಪ್ರಾಣವು ಹೋಗಲಿಲ್ಲ.

ನ ಮೇ ಕಂಠಾದಧೋಭಾಗಮಾಗತಂ ಮಮ ಚಕ್ರಿಣಾ ।
ಶಿರಚ್ಛಿನ್ನಂ ಮಹಾರಾಜ ತತ್ರ ಪ್ರಾಣಾಸ್ತತಃ ಸ್ಥಿತಾಃ ॥ ೩೬ ॥

ಶಿರಸಚ್ಛೇದನಾದ್ದೀನಂ ಮಾಂ ದೃಷ್ಟ್ವಾ ಮಧುಸೂದನಃ ।
ಜಾತಾನುಕಂಪೋ ಭಗವಾನಿದಂ ವಚನಮಬ್ರವೀತ್ ॥ ೩೭ ॥

ಪೀತಾಮೃತಸ್ಯ ದೈತ್ಯಸ್ಯ ಮರಣಂ ನಾಸ್ತಿ ಕರ್ಹಿಚಿತ್ ।
ಮಮಹಸ್ತವಿನಷ್ಟಾನಾಂ ಗತಿರ್ಭವತಿ ಶೋಭನಾ ॥ ೩೮ ॥

ಅಮರತ್ವಂ ತ್ವಮಾಸಾದ್ಯ ವರಂವರಯ ಕಾಂಕ್ಷಿತಂ ।
ತತೋ ಮಯೋಕ್ತೋ ಭಗವಾನ್ ಪ್ರಣಮ್ಯ ಮಧುಸೂದನಃ ॥ ೩೯ ॥

ಲಭೇಯತಾಂ ಹಿ ಸೋಮಾರ್ಕೌ ಮತ್ತೋ ದೇವ ಪರಾಭವಂ ।
ಪೂಜಾಂಚ ಪ್ರಾರ್ಥಯೇ ಲೋಕಾದ್ಗ್ರಹತ್ವಂಚ ಜನಾರ್ದನ ॥ ೪೦ ॥

---

೩೬. ಕತ್ತಿನ ಕೆಳಭಾಗವು ಕತ್ತರಿಸಿಹೋದ್ದರಿಂದ ಕತ್ತರಿಸಿದ ಶಿರಸ್ಸು ಪ್ರಾಣ ಸಹಿತವಾಗಿ ಉಳಿದುಕೊಂಡಿತು

೩೭. ಚಕ್ರದಿಂದ ಕತ್ತರಿಸಲ್ಪಟ್ಟ ಶಿರಸ್ಸುಳ್ಳ, ದೀನನಾದ ನನ್ನನ್ನು ಪರಮಾತ್ಮನು ನೋಡಿ ಪರಮದಯೆಯಿಂದ ಕೂಡಿದವನಾಗಿ ಈ ಮಾತನ್ನು ಹೇಳಿದನು.

೩೮, "ಅಮೃತಪಾನಮಾಡಿದ ದೈತ್ಯನಿಗೆ ಯಾವಾಗಲೂ ಮರಣವಿಲ್ಲ. ಮತ್ತು ನನ್ನ ಹಸ್ತದಿಂದ ಮೃತರಾದವರಿಗೆ ಸದ್ಗತಿಯುಂಟಾಗುವುದು.

೩೯-೪೦. ನೀನೂ ಸಹ ದೇವತ್ವವನ್ನು ಹೊಂದುತ್ತೀ! ನಿನಗೆ ಬೇಕಾದ ವರವನ್ನು ಕೇಳಿಕೊ," ಎಂದು ಮಹಾವಿಷ್ಣುವು ಹೇಳಲು, ನಾನು ಹೀಗೆ ಕೇಳಿಕೊಂಡೆನು—"ಸ್ವಾಮಿ, ನನ್ನನ್ನು ವಂಚಿಸಿದ ಸೂರ್ಯನು ನನ್ನಿಂದ ತಿರಸ್ಕಾರವನ್ನು ಹೊಂದಲಿ. ನನಗೆ ಲೋಕದ ಜನರೆಲ್ಲರೂ ಪೂಜೆಮಾಡುವಂತೆಯೂ, ನವಗ್ರಹಗಳಲ್ಲಿ ನಾನು ಒಬ್ಬನಾಗಿರುವಂತೆಯೂ ವರವನ್ನು ಕರುಣಿಸಬೇಕು.

**ಏವಮುಕ್ತಃ ಸ ಭಗವಾನ್ಮಾಮುವಾಚ ತದಾ ಹರಿಃ ।**
**ಗ್ರಹಸ್ತ್ವಂ ಭವಿತಾ ದೈತ್ಯ ಪೂಜಾಂ ಚೈವೋಪಲಪ್ಸ್ಯಸೇ ॥ ೪೧ ॥**

**ಪರ್ವಕಾಲೇ ಚ ಸಂಪ್ರಾಪ್ತೇ ಚಂದ್ರಾರ್ಕೌ ಛಾದಯಿಷ್ಯಸಿ ॥ ೪೨ ॥**

**ತಮೋ ಮೂರ್ತಿರದೃಶ್ಯಶ್ಚ ವಿಪರೀತಂ ಚರಿಷ್ಯಸಿ ।**
**ಭೂಮಿಛಾಯಾಗತಶ್ಚಂದ್ರಂ ಚಂದ್ರಗೋಽರ್ಕಂಚ ದಾನವಃ ॥ ೪೩ ॥**

**ಯಸ್ಯೋದಯಿಷ್ಯಸಿ ಯದಾ ತದಾ ಭಾಗಮವಾಪ್ಸ್ಯಸಿ ।**
**ಸ್ನಾನೇ ಜಾಪ್ಯೇ ತಥಾ ಹೋಮೇ ದಾನೇ ಶ್ರಾದ್ಧೇ ಸುರಾರ್ಚನೇ ॥ ೪೪ ॥**

**ಪುಣ್ಯಃ ಸಕಾಲೋ ಭವಿತಾ ನಿತ್ಯಮೇವಾಸುರೇಶ್ವರ ।**
**ಏವಮುಕ್ತ್ವಾ ಸ ಭಗವಾನ್‌ತತ್ರೈವಾಂತರಧೀಯತ ॥ ೪೫ ॥**

---

೪೧. ಈ ರೀತಿ ಕೇಳಿಕೊಂಡೊಡನೆಯೇ, ಭಗವಂತನು, “ಹಾಗೆಯೇ ಆಗಲಿ! ನೀನು ಗ್ರಹವಾಗಿರೆಂದೂ ಲೋಕದ ಜನರಿಂದ ಪೂಜಿಸಲ್ಪಡುತ್ತಲೂ ಇರೆಂದೂ ಹೇಳಿದನು.

೪೨-೪೩. ಪರ್ವಕಾಲ ಬಂದಾಗ ಚಂದ್ರಸೂರ್ಯರನ್ನು ನೀನು ಮುಚ್ಚುತ್ತೀಯೆ! ಆಗ ತಮೋಮೂರ್ತಿಯಾಗಿಯೂ ಅದೃಶ್ಯನಾಗಿಯೂ ಇದ್ದುಕೊಂಡು ವಿಪರೀತಕಾರ್ಯವನ್ನು ಮಾಡುತ್ತೀಯೆ! ದಾನವನೇ ನೀನು ಭೂಛಾಯೆಯನ್ನು ಹೊಂದಿದವನಾಗಿ ಚಂದ್ರನನ್ನೂ, ಚಂದ್ರನನ್ನು ಹೊಂದಿದ ಸೂರ್ಯನನ್ನೂ ಪೀಡಿಸುತ್ತೀಯೆ.

೪೪-೪೫. ಯಾವಾಗ ನೀನು ಗೋಚರನಾಗಿ ಉದಯಿಸುತ್ತೀಯೋ ಆ ಕಾಲದಲ್ಲಿ ಬ್ರಾಹ್ಮಣರು ಮಾಡುವ, ಸ್ನಾನ ಜಪ ಹೋಮ ದಾನ ಶ್ರಾದ್ಧ ಸುರಾರ್ಚನೆಗಳಲ್ಲಿ ನೀನೂ ಸಹ ಪಾಲುಗಾರನಾಗುತ್ತೀಯೆ! ಆ ಪರ್ವಕಾಲ (ಗ್ರಹಣಕಾಲ)ವು ಯಾವಾಗಲೂ ಪುಣ್ಯಕಾಲವಾಗಿ ಪರಿಣಮಿಸುವುದು.” ಹೀಗೆಂದು ಹೇಳಿ ಭಗವಾನ್ ಮಧುಸೂದನನು ಅಲ್ಲಿಯೇ ಅಂತರ್ಧಾನನಾದನು.

ಪೀತಶೇಷಮಥಾದಾಯ ಸೋಮಂ ಸುರಗಣೇಶ್ವರಃ ।
ಸುರಲೋಕೇ ಸನ್ನಿಹಿತಂ ಚಕಾರ ಬಲವೃತ್ರಹಾ ॥ ೪೬ ॥

ಮಚ್ಛೀರ್ಷಪಾತಾಭಿವಿವೃದ್ಧಕೋಪಾ
ಹೃತಾಮೃತಾ ದೈತ್ಯಗಣಾಃ ಸಮಸ್ತಾಃ ।
ವ್ಯರ್ಥಭ್ರಮಾದೇವಗಣಾನ್ನಿಹಂತುಂ
ಸನ್ನದ್ಧಸೈನ್ಯಾಃ ಪ್ರಯಯುಸ್ತದಾನೀಂ ॥ ೪೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಅಮೃತವಿಭಾಗೋ ನಾಮ ದ್ವಿಚತ್ವಾರಿಂಶತ್ತಮೋಧ್ಯಾಯಃ



---

೪೬. ಕುಡಿದು ಮಿಕ್ಕಿದ್ದ ಅಮೃತವನ್ನು, ಸುರಗಣಗಳಿಗೊಡೆಯನಾದ ಇಂದ್ರನು, ತೆಗೆದುಕೊಂಡು ಹೋಗಿ ದೇವಲೋಕದಲ್ಲಿ ತನ್ನ ಬಳಿ ಇಟ್ಟುಕೊಂಡನು.

೪೭. ನನ್ನ ಶಿರಸ್ಸನ್ನು ಕತ್ತರಿಸಿದುದಕ್ಕೂ, ಅಮೃತವು ಕೈಬಿಟ್ಟು ಹೋದುದಕ್ಕೂ ಸಕಲ ದೈತ್ಯರೂ ಮಹತ್ತಾದ ಕೋಪದಿಂದ ಕೂಡಿದವರಾಗಿ, ವ್ಯರ್ಥವಾಗಿ ಓಡುತ್ತಾ ದೇವತಾವೃಂದವನ್ನು ಸಂಹರಿಸಬೇಕೆಂದು ಸೈನ್ಯಸನ್ನದ್ಧರಾಗಿ ಯುದ್ಧಕ್ಕೆ ಹೊರಡುವಂಥವರಾದರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಅಮೃತವಿಭಾಗವೆಂಬ ಹೆಸರಿನ ನಲವತ್ತೆರಡನೇ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ತ್ರಿಚತ್ವಾರಿಂಶತ್ತಮೋಽಧ್ಯಾಯಃ

॥ ರಾಹುರುವಾಚ ॥

**ಬಲಿಬಾಣಮಹಾಕೂರ್ಮಂ ಶಂಬರಾವರ್ತಭೀಷಣಂ ।**
**ಅನುಹ್ರಾದಮಹಾಗ್ರಾಹಂ ಕಾಲಕೇಯಮಹಾಜಲಂ ॥ ೧ ॥**

**ಹಿರಣ್ಯಾಕ್ಷಮಹಾರತ್ನಂ ಪ್ರಹ್ರಾದಾಚಲನಿಶ್ಚಲಂ ।**
**ತಥಾ ನಮುಚಿಕಲ್ಲೋಲಂ ಹ್ರಾದಸಂಹ್ರಾದಶಬ್ದವತ್ ॥ ೨ ॥**

**ಹಿರಣ್ಯಕಶಿಪೂದ್ಯೋತಂ ಕಾಲನೇಮಿಬಲಾಹಕಂ ।**
**ಅಮೃತಾಹರಣಕ್ಷುಬ್ಧಂ ತದಾ ದೈತ್ಯಮಹಾರ್ಣವಂ ॥ ೩ ॥**

---

## ನಲವತ್ತಮೂರನೆಯ ಅಧ್ಯಾಯವು

ರಾಹುವು ಹೇಳಿದನು :—

ರಾಕ್ಷಸಸೇನಾಸಮುದ್ರವನ್ನು ವರ್ಣಿಸುತ್ತಾರೆ :—

೧-೪. ಬಲಿಬಾಣರೆಂಬ ಆಮೆಗಳಿಂದಲೂ, ಶಂಬರನೆಂಬ ಸುಳಿಯಿಂದಲೂ, ಅನುಹ್ರಾದನೆಂಬ ಮೊಸಳೆಯಿಂದಲೂ, ಕಾಲಕೇಯನೆಂಬ ಮಹಾಜಲದಿಂದಲೂ, ಹಿರಣ್ಯಾಕ್ಷನೆಂಬ ಮಹಾರತ್ನದಿಂದಲೂ, ಪ್ರಹ್ರಾದನೆಂಬ ಬೆಟ್ಟದಿಂದಲೂ, ನಮುಚಿಯೆಂಬ ಅಲೆಗಳಿಂದಲೂ, ಹ್ರಾದ ಸಂಹ್ರಾದರೆಂಬ ಶಬ್ದಗಳಿಂದಲೂ, ಹಿರಣ್ಯಕಶಿಪುವಿನಿಂದುದ್ಯೋದಿತನಾದ ಕಾಲನೇಮಿಯೆಂಬ ಮೇಘದಿಂದಲೂ ಕೂಡಿದ ಆ ದೈತ್ಯಸಮುದ್ರವು, ಅಮೃತಹರಣದಿಂದ ಬಹುಕ್ಷೋಭೆಯನ್ನು ಹೊಂದಿತು. ಮತ್ತು ದೇವಲೋಕದ

ಕ್ಷುಬ್ಧಂ ದೈತ್ಯಾರ್ಣವಂ ಶ್ರುತ್ವಾ ನಿರ್ಗತಂ ಸಮರಾಯ ಚ ।
ನಿರ್ಯಯುಸ್ತ್ರಿದಶಾಃ ಸರ್ವೇ ಸನ್ನದ್ಧಾ ಯುದ್ಧಕಾಂಕ್ಷಿಣಃ ॥ ೪ ॥

ತತಃ ಪ್ರವರ್ತತೇ ಯುದ್ಧಂ ಘೋರಂ ಭೀರುಭಯಂಕರಂ ।
ದೇವಾನಾಂ ದಾನವಾನಾಂ ಚ ಪರಸ್ಪರವಧೈಷಿಣಾಂ ॥ ೫ ॥

ಪಾತ್ಯಮಾನೇಷು ಶಸ್ತ್ರೇಷು ಕವಚೇಷು ಮಹಾತ್ಮನಾಂ ।
ದೇವಾನಾಂ ದಾನವಾನಾಂ ಚ ವ್ಯುತ್ಪೇತುರ್ಜ್ವಲನಾರ್ಚಿಷಃ ॥ ೬ ॥

ಗಜವಾಜಿಖುರಕ್ಷುಣ್ಣಮುತ್ತಸ್ಥೌ ಸುಮಹದ್ರಜಃ ।
ಯುಗಾಂತಾನಲಧೂಮಾಭಂ ತ್ರೈಲೋಕ್ಯಸ್ಯೈವ ದಹ್ಯತಃ ॥ ೭ ॥

ತಸ್ಮಿನ್ಪ್ರವೃತ್ತೇ ರಜಸಿ ಘೋರೇ ಭೀರುಭಯಂಕರೇ ।
ನಿರ್ಮರ್ಯಾದಮಭೂದ್ಯುದ್ಧಂ ದೇವಾನಾಂ ದಾನವೈಃ ಸಹ ॥ ೮ ॥

---

ಮೇಲೆ ಧಾಳಿಗೂ ಆರಂಭಿಸಿತು. ಯಾವಾಗ ಯುದ್ಧಭೇರಿಯ ಧ್ವನಿಯು ಕಿವಿಗಳಿಗೆ ತಾಕಿತೋ ಆ ಕೂಡಲೇ ಸಕಲ ದೇವತೆಗಳೂ ಯುದ್ಧಸನ್ನದ್ಧರಾಗಿ ರಾಕ್ಷಸರ ಮೇಲೆ ಯುದ್ಧಕ್ಕೆ ಹೊರಟರು.

೫-೬. ಬಳಿಕ ಭಯಂಕರವಾದ ಯುದ್ಧಕ್ಕೆ ಆರಂಭವಾಯಿತು. ಒಬ್ಬರನ್ನೊಬ್ಬರು ಕೊಲ್ಲಬೇಕೆಂದು ದೇವದಾನವರು ಶಸ್ತ್ರಗಳನ್ನು ಪ್ರಯೋಗಿಸುತ್ತಿದ್ದರು. ಮಹಾತ್ಮರಾದ ದೇವತೆಗಳ ಕವಚಗಳ ಮೇಲೆ ಬಿದ್ದ ಶಸ್ತ್ರಾಹತಿಯಿಂದ ಬೆಂಕಿಯ ಉರಿಗಳು ಏಳುತ್ತಿದ್ದುವು.

೭-೧೧. ಆನೆ ಕುದುರೆಗಳ ತುಳಿತದಿಂದೆದ್ದ ಧೂಳು, ಯುಗಾಂತ್ಯದಲ್ಲಿ ಉತ್ಪತ್ತಿಯಾಗುವ ಬೆಂಕಿಯಿಂದ ಹೊರಡುವ ಹೊಗೆಯೋ ಎಂಬಂತೆ ತೋರುತ್ತಿತ್ತು. ಆರೀತಿ ಧೂಳು ಎದ್ದಮೇಲೆ ಭಯಂಕರ ಯುದ್ಧಕ್ಕೆ ಆರಂಭವಾಗಿ ಆ ದೇವದಾನವ

ತತೋ ದೈತ್ಯಸಮುತ್ಥೇನ ತಥಾದೇವೋದ್ಭವೇನ ಚ ।
ರುಧಿರೇಣ ಮಹಾವ್ಯಾಪ್ತಾ ಪ್ರಶಾಂತಂಚರಜಃ ಕ್ಷಣಾತ್ ॥ ೯ ॥

ಧ್ವಜೇ ಚತ್ರೇರಥೇನಾಗೇ ಚಾಮರೇವ್ಯಜನೇಹಯೇ ।
ಸರ್ವತ್ರ ದೃಶ್ಯತೇ ದೈತ್ಯರಕ್ತಂ ಲಾಕ್ಷಾರಸಪ್ರಭಂ ॥ ೧೦ ॥

ತಸ್ಮಿನ್ಯುದ್ಧೇ ಮಹಾರೌದ್ರೇ ದೈತ್ಯದಾನವನಾಶನೇ ।
ಬಭ್ರಮುಃ ಕುಂಜರಾ ಮತ್ತಾ ಮಹಾಮಾತ್ರಾಪ್ರಚೋದಿತಾಃ ॥ ೧೧ ॥

ಹತೈರ್ವೀರೈಸ್ತಥೈವಾನ್ಯೈಃ ಕುಂಜರಾಃ ಸರ್ವತೋಪಮಾಃ ।
ಕುರ್ವಂತಃ ಸ್ವಾನ್ಯನೀಕಾನಿ ದೃಶ್ಯಂತೇ ಶತಶೋ ರಣೇ ॥ ೧೨ ॥

ಛಿನ್ನದಂತಾ ಭಿನ್ನಧ್ವಜಾ ವಿಹಸ್ತಚರಣಾಸ್ತಥಾ ।
ಶೈಲಾಭಾ ಪತಿತಾಸ್ತತ್ರ ಶೋಭಯಂತೋ ರಣಾಜಿರಂ ॥ ೧೩ ॥

---

ಸಂಗ್ರಾಮವು ಮೇರೆ ಮೀರಿಹೋಯಿತು. ಆ ಸಂಗ್ರಾಮದಲ್ಲಿ ದೇವದಾನವರ ದೇಹಗಳಿಂದ ಹೊರಟ ರಕ್ತವು ಭೂಮಿಯನ್ನೆಲ್ಲಾ ಕೆಸರುಮಾಡಿ, ಅದೇ ಧೂಳುಗಳಿಂದ ಹಾಗೆಯೇ ಶಾಂತವಾಯಿತು. ರಾಕ್ಷಸರ ದೇಹದಿಂದ ಹೊರಹೊರಟ ರಕ್ತವು, ಧ್ವಜ ಛತ್ರಿ ರಥ ಆನೆಗಳನ್ನೂ, ಚಾಮರ ವ್ಯಜನ ಮುಂತಾದುವುಗಳನ್ನೂ ನೆನೆಯಿಸಿ ಲಾಕ್ಷಾರಸದಿಂದ ವ್ಯಾಪ್ತವಾದಂತೆ ಕೆಂಪಾಗಿ ಮಾಡಿಬಿಟ್ಟಿತು ಆ ರಣರಂಗಕ್ಕೆ ಮಂತ್ರಿಗಳು ಮದಿಸಿದ ಆನೆಗಳನ್ನು ಕಳುಹಿಸಿದ್ದರು. ಆ ಮದಗಜಗಳು ಗಿರ್ರನೆ ತಿರುಗಿಬೀಳುತ್ತಿದ್ದುವು.

೧೨–೧೪. ಸರ್ವತೋಪಮವಾದ ಆನೆಗಳು ಶತ್ರುಗಳಿಂದಲೂ, ಇತರರಿಂದಲೂ ಹತವಾಗಿ ಬಿದ್ದುವು. ಈರೀತಿ ನೂರಾರು ಆನೆಗಳೂ, ನೂರಾರು ಕುದುರೆಗಳೂ ಅಲ್ಲಿ ತೋರುತ್ತಿದ್ದುವು. ಮುರಿದುಹೋದ ಕೊಂಬುಗಳು, ಕತ್ತರಿಸಿದ ಸೊಂಡಿಲುಗಳು, ಕತ್ತರಿಸಿದ ಕಾಲುಗಳು, ಕಳಚಿಬಿದ್ದ ಬಾವುಟಗಳು, ರಣರಂಗದಲ್ಲಿ ಪ್ರಕಾಶಿಸುತ್ತಾ

ಬಭ್ರಮುಃ ಸಾದಿಭಿರ್ಹೀನಾ ಹಯಾಃ ಸೂರ್ಯಹಯೋಪಮಾಃ ।
ಮೃತಾಶ್ಚ ಶತಶಸ್ತತ್ರ ದೃಶ್ಯಂತೇ ವಿಕೃತಾನನಾಃ ॥ ೧೪ ॥

ಆಗುಲ್ಫಮವಸೀದಂತಿ ದೈತ್ಯಾಃ ಶೋಣಿತಕರ್ದಮೇ ।
ರಥಿಭಿರ್ನಿಹತಾ ನಾಗಾ ನಾಗೈಶ್ಚ ನಿಹತಾ ರಥಾಃ ॥ ೧೫ ॥

ಹಯಾಶ್ಚ ವಿದ್ಧಾ ನಾಗೈಸ್ತು ಸಾದಿಭಿಃ ಕುಂಜರಾ ಹತಾಃ ।
ರಥಸಾದಿಗಜಾರೋಹೈರ್ನಿಹತಾಶ್ಚ ಪದಾತಯಃ ॥ ೧೬ ॥

ಪತ್ತಿನಾ ಮಹತಾ ಸಾದೀ ಕುಂಜರೋ ರಥ ಏವ ಚ ।
ತತಃ ಪ್ರಾವರ್ತತ ನದೀ ರುಧಿರೌಘತರಂಗಿಣೀ ॥ ೧೭ ॥

ಅಸ್ತ್ರಗ್ರಾಹ ಧನುರ್ಮೀನಾ ಚಕ್ರಕೂರ್ಮಾ ಮಹಾಸ್ವರಾ ।
ಛತ್ರಹಂಸಾ ನಾಗವತೀ ಕೇಶಶೈವಲಶಾದ್ವಲಾ ॥ ೧೮ ॥

---

ಬೆಟ್ಟದಷ್ಟು ಎತ್ತರವಾಗಿ ಅಲ್ಲಿ ಬಿದ್ದಿದ್ದುವು. ಹಾಗೆಯೇ ಸೂರ್ಯನ ಕುದುರೆಗಳಂತೆ ಹೊಳೆಯುತ್ತಲಿದ್ದ ಕುದುರೆಗಳು ಸವಾರರಿಲ್ಲದೆ ಅಲ್ಲಿ ಸತ್ತುಬಿದ್ದಿದ್ದುದನ್ನು ನೋಡ ಬಹುದಾಗಿತ್ತು.

೧೫–೨೩. ರಾಕ್ಷಸರು ರಕ್ತದ ಮಡುವಿನಲ್ಲಿ ಮುಳುಗಿಮುಳುಗಿ ಏಳುತ್ತಿದ್ದರು. ರಥಿಕರಿಂದ ಆನೆಗಳೂ, ಆನೆಗಳಿಂದ ರಥಗಳೂ ನಾಶವಾಗುತ್ತಿದ್ದವು. ಕುದುರೆಗಳು ಆನೆ ಗಳಿಂದಲೂ, ಕಾಲಾಳುಗಳಿಂದ ಆನೆಗಳೂ ಸಂಹೃತವಾಗುತ್ತಿದ್ದುವು. ರಥದಮೇಲಿನ ಮತ್ತು ಆನೆಯಮೇಲಿನ ಸವಾರರಿಂದ ಕೆಳಗಿದ್ದ ಸೈನಿಕರು ಹತರಾಗುತ್ತಿದ್ದರು ಮಹಾಸೈನಿಕರಿಂದ ಕುದುರೆ ಸವಾರರೂ, ಆನೆಯ ಸವಾರರೂ, ಆನೆ ಕುದುರೆ ರಥಗಳೂ ನಾಶವಾಗುತ್ತಿದ್ದುವು. ಅಲ್ಲಿ ಆಗ ಉತ್ಪತ್ತಿಯಾದ ರಕ್ತಸಮೂಹದಿಂದ ಒಂದು ನದಿಯೇ ಹರಿಯಲಾರಂಭಿಸಿತು. ಆ ನದಿಯಲ್ಲಿ ಅಸ್ತ್ರಗಳೇ ಮೊಸಳೆಗಳಾಗಿದ್ದವು. ಧನುಸ್ಸೇ ಮೀನುಗಳು, ಚಕ್ರಗಳೇ ಆಮೆಗಳು, ಛತ್ರಗಳೇ ಹಂಸಗಳು, ರಾಕ್ಷಸರ

**ದೈತ್ಯಶೀರ್ಷೋಪಲಾ ರೌದ್ರಾ ತಥಾ ಭೀರುಭಯಾವಹಾ ।**
**ಬಾಹುಸರ್ಪಾ ಮಹಾವರ್ತಾ ಶೂರಾಣಾಂ ಹರ್ಷವರ್ಧಿನೀ ॥ ೧೯ ॥**

**ಅಪಾರಗಮ್ಯಾ ಪತ್ತೀನಾಂ ಫೇನಪುಂಜಸಮಾಕುಲಾ ।**
**ತಸ್ಮಿನ್ ಯುದ್ಧೇ ಮಹಾಘೋರೇ ತುಮುಲೇ ಲೋಮಹರ್ಷಣೇ ॥ ೨೦ ॥**

**ಆಕೀರ್ಣಾ ವಸುಧಾಭಾತಿ ವದನೈಃ ಕಮಲೋಪಮೈಃ ।**
**ವಿವೃತೈಶ್ಚ ಮಹಾದಂಷ್ಟ್ರೈರ್ದಾನವಾನಾಂ ಮಹಾತ್ಮನಾಂ ॥ ೨೧ ॥**

**ಬಾಹುಭಿಶ್ಚಾಂಗದೈಶ್ಚೈವ ರಕ್ತಚಂದನರೂಷಿತೈಃ ।**
**ಹಸ್ತಿಹಸ್ತೈರ್ಮಹಾಪ್ರಾಸೈರಸಿಭಿಶ್ಚ ಮಹಾಧನೈಃ ॥ ೨೨ ॥**

**ತಾಲವೃಂತೈಸ್ತಥಾಛತ್ರೈಶ್ಚಾಮರೈರ್ಯಷ್ಟಿಭಿಸ್ತಥಾ ।**
**ಮುಕುಟೈಃ ಕುಂಡಲೈಶ್ಚೈವ ಶುಶುಭೇ ಭೂರ್ವಿಭೂಷಿತಾ ॥ ೨೩ ॥**

---

ಕತ್ತುಗಳೇ ಕಲ್ಲುಗಳು, ಕತ್ತರಿಸಿಹೋದ ತೋಳುಗಳೇ ಹಾವುಗಳು, ಶೂರರ ಹರ್ಷ ಧ್ವನಿಗಳೇ ಸುಳಿಗಳು. ಕಾಲಾಳುಗಳ ಬಾಯಿಂದ ಹೊರಡುತ್ತಿರುವ ನೊರೆಗಳಿಂದ ಆ ನದಿಯು ವ್ಯಾಪ್ತವಾಗಿತ್ತು. ರೋಮಾಂಚವನ್ನುಂಟುಮಾಡುತ್ತಿದ್ದ ಆ ಮಹಾ ತುಮುಲಯುದ್ಧದಲ್ಲಿ ಭೂಮಿಯು ಕೆದರಿಹೋದಂತೆ ಕಾಣುತ್ತಿತ್ತು. ಕಮಲಕ್ಕೆ ಸಮನಾದ ಮುಖಗಳಿಂದಲೂ, ಮಹಾ ಮಹಾ ರಾಕ್ಷಸರ ಕೋರೆದಾಡೆಗಳಿಂದಲೂ, ರಕ್ತಗಂಧದಿಂದ ಲೇಪಿಸಲ್ಪಟ್ಟ ಬಾಹುಗಳಿಂದಲೂ, ಭುಜಭೂಷಣಗಳಿಂದಲೂ ಆ ರಣರಂಗವು ಎಲ್ಲಾ ಕಡೆಗಳಲ್ಲೂ ಶೋಭಿಸುತ್ತಿತ್ತು. ಮತ್ತು ಆ ಯುದ್ಧಭೂಮಿಯು ಆನೆ ಸೊಂಡಿಲುಗಳಿಂದಲೂ, ಕತ್ತಿ ಗುರಾಣಿ ಮುಂತಾದ ಆಯುಧಗಳಿಂದಲೂ, ಛತ್ರ ಚಾಮರಗಳಿಂದಲೂ, ಬೀಸಣಿಗೆ ಮತ್ತು ಬೆತ್ತಗಳಿಂದಲೂ, ಕಿರೀಟಗಳು ಕುಂಡಲಗಳೇ ಮುಂತಾದ ಆಭರಣಗಳಿಂದಲೂ ಅಲಂಕರಿಸಲ್ಪಟ್ಟಂತೆ ಕಾಣುತ್ತಿತ್ತು.

ತತಸ್ತೇ ದಾನವಾಃ ಕ್ರುದ್ಧಾಃ ಸ್ವಯುದ್ಧೇನ ದೀವೇಪ್ಸವಃ ।
ಅಭಿದ್ರವಂತಿ ದೇವೇಶಂ ಸಹಸ್ರಾಕ್ಷಂ ಪುರಂದರಂ ॥ ೨೪ ॥

ದೈತ್ಯಾನಾಂ ಪತತಾಂ ದೃಷ್ಟ್ವಾ ಪ್ರಹ್ರಾದಂ ದೇವಸೂದನಂ ।
ಪ್ರಪ್ಯದ್ಯಯೌ ಗಜೇನಾಽಽಜೌ ದೇವರಾಜೋ ಮಹಾಬಲಃ ॥ ೨೫ ॥

ಹುತಾಶನೋಽಪಿ ನಮುಚಿಮನುಹ್ರಾದಂ ತಥಾ ಶಶೀ ।
ವರುಣಶ್ಚ ತಥಾ ಬಾಣಂ ಯಮೋ ದೇವಸ್ತಥಾ ಬಲಿಂ ॥ ೨೬ ॥

ಹಿರಣ್ಯಕಶಿಪುಂ ರುದ್ರೋ ವಾಯುರ್ವೃತ್ರಾಸುರಂ ರಣೇ ।
ವಿರೂಪಾಕ್ಷಂ ತಥಾ ಶಂಭುರ್ಹಿರಣ್ಯಾಕ್ಷಂ ಧನೇಶ್ವರಃ ॥ ೨೭ ॥

ಅನ್ಯೇಚ ದೈತ್ಯಾಃ ಶತಶಃಸಂಯುಕ್ತಾ ದೇವತಾಗಣೈಃ ।
ದ್ವಂದ್ವಯುದ್ಧಸಹಸ್ರೇಷು ತೇಪ್ರವರ್ತತ ದಾನವೈಃ ॥ ೨೮ ॥

---

೨೪-೨೫. ಅನಂತರದಲ್ಲಿ ಯುದ್ಧೋನ್ಮತ್ತರಾದ ರಾಕ್ಷಸರು ಸ್ವರ್ಗವನ್ನು ಜಯಿಸಬೇಕೆಂಬ ಕುತೂಹಲದಿಂದ ಸಹಸ್ರಾಕ್ಷನಾದ ದೇವರಾಜನನ್ನು ಯುದ್ಧದಲ್ಲಿ ಎದುರಿಸಿ ನಿಂತರು. ಹೀಗೆ ಮೇಲೆ ಬೀಳಲು ಬಂದ ಆ ರಾಕ್ಷಸರನ್ನು ನೋಡಿ ದೇವೇಂದ್ರನು ಐರಾವತಾರೋಹಿಯಾಗಿ ಹಿಂದಕ್ಕೆ ಬಂದು ದೇವತೆಗಳ ಶತ್ರುವಾದ ಪ್ರಹ್ರಾದನೊಡನೆ ಕದನಕ್ಕೆ ನಿಂತನು.

೨೬-೨೮. ಅದೇ ಮೇರೆ ಅಗ್ನಿಯು ನಮುಚಿಯನ್ನೂ, ಇಂದ್ರನು ಅನುಹ್ರಾದನನ್ನೂ, ವರುಣನು ಬಾಣಾಸುರನನ್ನೂ, ಯಮನು ಬಲಾಸುರನನ್ನೂ, ರುದ್ರನು ಹಿರಣ್ಯಕಶಿಪುವನ್ನೂ, ವಾಯುವು ವೃತ್ರಾಸುರನನ್ನೂ, ಶಂಭುವು ವಿರೂಪಾಕ್ಷನನ್ನೂ, ಕುಬೇರನು ಹಿರಣ್ಯಾಕ್ಷನನ್ನೂ ಎದುರಿಸಿ ದ್ವಂದ್ವಯುದ್ಧಕ್ಕೆ ನಿಂತರು. ಇದೇ ಮೇರೆ ಸಹಸ್ರಾರು ಮಂದಿ ದೈತ್ಯರು ಎದುರಾಳಿಗಳಾದ ದೇವತಾಗಣದೊಡನೆ ದ್ವಂದ್ವ ಯುದ್ಧಕ್ಕೆ ಆರಂಭಿಸಿದರು.

**ಪ್ರಾಯಶೋ ವಿಜಿತಾ ದೇವಾ ಯಯುರ್ಭಗ್ನಾ ದಿಶೋ ದಶ ।**
**ದಾನವಾಶ್ಚ ಜಯಂ ಲಬ್ಧ್ವಾ ದೇವಾನನುಯಯುರ್ಬಲಾತ್** ॥ ೨೯ ॥

**ತೇ ಭಗ್ನಾಸ್ತ್ರಿದಶಾಃ ಸರ್ವೇ ದಾನವೈಶ್ಚಾಪ್ಯಭಿದ್ರುತಾಃ ।**
**ತ್ರಾಣಾರ್ಥಮಥ ಸಂಪ್ರಾಪ್ತಾ ನರನಾರಾಯಣಾಶ್ರಮಂ** ॥ ೩೦ ॥

**ದೇವಾನಾಮಭಯಂ ದತ್ವಾ ನರನಾರಾಯಣೌ ತದಾ ।**
**ಶಂಖಚಕ್ರಾಯುಧಧರೌ ಯುದ್ಧಾಯ ಸಮುಪಸ್ಥಿತೌ** ॥ ೩೧ ॥

**ನರನಾರಾಯಣೌ ದೃಷ್ಟ್ವಾ ತತ್ಕ್ಷುಬ್ಧಂ ದೈತ್ಯಸಾಗರಂ ।**
**ಸರ್ವಾಯುಧವಿಸರ್ಗೇಣ ತಯೋರ್ಯುದ್ಧಂ ವ್ಯವಸ್ಥಿತಂ** ॥ ೩೨ ॥

**ಗಜಾಭ್ರಜಾಲಸಂಛನ್ನಂ ಶರಧಾರೌಘವರ್ಷಣಂ ।**
**ಚಲತ್ಖಡ್ಗಲತಾವಿದ್ಯುದ್ದೈತ್ಯದುರ್ದಿನಮಾಬಭೌ** ॥ ೩೩ ॥

---

೨೯-೩೦. ಕಡೆಗೆ ದೇವತೆಗಳು ಸೋತು ದಿಕ್ಕುದಿಕ್ಕುಗಳಿಗೆ ಓಡಿಹೋದರು. ಗೆದ್ದ ರಾಕ್ಷಸರು ಸುಮ್ಮನಿರದೆ ಓಡುತ್ತಿದ್ದ ದೇವತೆಗಳ ಬೆನ್ನಟ್ಟಿ ಓಡಿಸಿಕೊಂಡು ಹೋದರು. ಸಂರಕ್ಷಕರನ್ನೇ ಕಾಣದೆ ದೇವತೆಗಳು ಓಡಿಹೋಗಿ ನರನಾರಾಯಣಾಶ್ರಮವನ್ನು (ಬದರೀಕ್ಷೇತ್ರ) ಸೇರಿಕೊಂಡರು.

೩೧-೩೩. ಆಶ್ರಮಕ್ಕೆ ಓಡಿಬಂದ ದೇವತೆಗಳ ಗುಂಪನ್ನು ನೋಡಿ ನರನಾರಾಯಣರು ಅವರಿಗೆ ಅಭಯಪ್ರದಾನಮಾಡಿ ಶಂಖಚಕ್ರಾಯುಧಗಳನ್ನು ಧರಿಸಿ ರಾಕ್ಷಸರನ್ನು ಎದುರಿಸಿ ನಿಂತರು ಸಮುದ್ರದಂತೆ ಓಡಿಬಂದು ನಿಂತಿದ್ದ ಆ ದೈತ್ಯರೂಪ ಸಾಗರವು ಆಗ ಬಹಳ ಕ್ಷೋಭೆಯನ್ನು ಹೊಂದಿ ನರನಾರಾಯಣರನ್ನು ಎದುರಿಸಿ ತಾವು ಕಲಿತಿದ್ದ ಸಕಲಾಸ್ತ್ರಗಳನ್ನೂ ಪ್ರಯೋಗಿಸಿದಾಗ್ಯೂ, ಗಜಗಳೆಂಬ ಮೇಘಗಳಿಂದ ಮುಚ್ಚಲ್ಪಟ್ಟದ್ದಾಗಿ, ಬಾಣಧಾರೆಗಳೆಂಬ ಮಳೆಗಳಿಂದಾವರಿಸಿ, ಚಲಿಸುತ್ತಿರುವ ಕತ್ತಿಯ ಅಲಗೆಂಬ ಮಿಂಚಿನಿಂದ ಕೂಡಿದುದಾಗಿ ಆ ದಿನವು ರಾಕ್ಷಸರಿಗೆ ದುರ್ದಿನ (ಮೇಘದಿಂದ ಮುಚ್ಚಿಕೊಂಡ ದಿನ) ವಾಗಿ ಪರಿಣಮಿಸಿತು.

ತತಃ ಶರೈಃ ರುಕ್ಮವಿಭೂಷಿತಾಗ್ರೈಃ
ಸುನೇತ್ರಪುಂಖೈರ್ಜ್ವಲನಾರ್ಕವರ್ಣೈಃ ।
ಬಿಭೇದ ಗಾತ್ರಾಣಿ ನರೋ ರಿಪೂಣಾಂ
ಜಹಾರ ಶೀರ್ಷಾಣಿ ಸಕುಂಡಲಾನಿ ॥ ೩೪ ॥

ನಾರಾಯಣೋಪ್ಯುತ್ತಮವೀರ್ಯತೇಜಾ
ಶ್ಚಕ್ರೇಣಚಕ್ರೇ ದಿತಿನಂದನಾನಾಂ ।
ವಿದಾರಯಾಮಾಸ ಮಹಾನುಭಾವ
ಸ್ತಸ್ಮಿನ್ರಣೇಘೋರತರೇ ತದಾನೀಂ ॥ ೩೫ ॥

ವೀರ್ಯಂ ತಯೋರಪ್ರತಿಮಂ ನಿರೀಕ್ಷ್ಯ
ತೇ ದಾನವಾ ಭಗ್ನನಿಕೃತ್ತಯೋಧಾಃ ।
ಹೃತಾಮೃತಾ ಜೀವಿತಮಾತ್ರಶೇಷಾ
ವೇಗೇನಯಾತಾ ವರುಣಾಧಿವಾಸಂ ॥ ೩೬ ॥

ಲಬ್ಧ್ವಾ ಜಯಂ ದೇವಪತಿರ್ಮಹಾತ್ಮಾ
ಪ್ರಹ್ರಾದಮಾಜೌ ಚ ತಥಾ ವಿಜಿತ್ಯ ।

---

೩೪-೩೬. ಮಹಾವೀರ್ಯವಂತನಾದ ನರನಾರಾಯಣನು ಆಗ ತನ್ನ ಚಕ್ರದಿಂದ ಯುದ್ಧಮಾಡಲಾರಂಭಿಸಿದನು. ಆ ಚಕ್ರವು ಅರಿಗಳ ತಲೆಗಳನ್ನು ಕೊಚ್ಚಿಕೊಂಡು ಬರಲಾರಂಭಿಸಿತು. ಆಗ ರಾಕ್ಷಸರು ಚಕ್ರದ ಮಹಿಮೆಯನ್ನು ನೋಡಿ ಅದರ ಮುಂದೆ ನಿಲ್ಲಲಾರದೆ ಅನೇಕರು ಪ್ರಾಣಬಿಟ್ಟರು. ಅನೇಕರು ದಿಕ್ಕಾಪಾಲಾಗಿ ಓಡಿದರು. ಉಳಿದ (ಹತಶೇಷ) ಅಸುರರೆಲ್ಲರೂ ಬೇರೆ ಯಾರೂ ದಿಕ್ಕಿಲ್ಲದೆ ಪಾತಾಳ ಲೋಕಕ್ಕೆ ಓಡಿಹೋಗಿ ಬದುಕಿಕೊಂಡರು.

೩೭. ಇತ್ತಕಡೆ ಇಂದ್ರನು ತನ್ನನ್ನೆದುರಿಸಿ ಯುದ್ಧಕ್ಕೆ ನಿಂತಿದ್ದ ಪ್ರಹ್ರಾದನನ್ನು ಸೋಲಿಸಿ ಜಯವನ್ನು ಪಡೆದು, ಮಹಾನುಭಾವರಾದ, ಧರ್ಮಾತ್ಮರಾದ

ಸಂಪೂಜಯಾಮಾಸ ಮಹಾನುಭಾವೌ
ಧರ್ಮಾತ್ಮಜೌ ತಾಪಸಸಂಘಮುಖ್ಯೌ ॥ ೩೭ ॥
ಸಂಪೂಜ್ಯ ತೌ ಧರ್ಮಸುತೌ ಜಿತಾರಿ
ರ್ದೇವೈಃಪ್ರಹೃಷ್ಟೈರನುಯಾಸ್ಯಮಾನಃ ।
ಜಗಾಮ ನಾಕಂ ತ್ರಿದಶಪ್ರಧಾನಃ
ಸುಖೀ ಬಭೂವಾಥ ಗತಜ್ವರಶ್ಚ ॥ ೩೮ ॥
ಏವಂ ಪ್ರಭಾವೋ ಭಗವಾನ್ಸವಿಷ್ಣು
ರ್ವೈರಂ ನ ಮೇ ರೋಚತಿ ತೇನ ನಿತ್ಯಂ ।
ಸಂಧಿಂ ಕುರುಷ್ವಾತ್ಮಹಿತಾಯ
ರಾಜಂಚ್ಛಕ್ರೇಣ ತೇನಾರಿ ನಿಷೂದನೇನ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಹುವಾಕ್ಯೇನ ದೇವದಾನವ ಯುದ್ಧ ವರ್ಣನೋ ನಾಮ ತ್ರಿಚತ್ವಾರಿಂಶತ್ತಮೋಧ್ಯಾಯಃ

---

ತಾಪಸರ ಗುಂಪಿಗೊಡೆಯರಾದ ನರನಾರಾಯಣರನ್ನು ಯಥಾವಿಧಿಯಾಗಿ ಪೂಜೆ ಮಾಡಿದನು.

೩೮-೩೯. ದೇವೇಂದ್ರನು ದೇವತೆಗಳೊಡನೆ ಕೂಡಿದವನಾಗಿ ಆ ನರನಾರಾಯಣರನ್ನು ಪೂಜಿಸಿ ಸ್ವರ್ಗಕ್ಕೆ ಪ್ರಯಾಣಮಾಡಿ ಸುಖದಿಂದಿದ್ದನು. "ಅಯ್ಯಾ! ಸಾಲ್ವನೇ, ಕೇಳು. ಇಂತಹ ಮಹಾಮಹಿಮಾಶಾಲಿಯಾದ ಮಹಾವಿಷ್ಣುವಿನ ಪ್ರಭಾವವನ್ನು ನಿನಗೆ ತಿಳಿಸಿರುತ್ತೇನೆ. ಇಂತಹ ಮಹಾತ್ಮನೊಡನೆ ದ್ವೇಷಮಾಡುವುದು ಯುಕ್ತವಲ್ಲವೆಂದು ನನಗೆ ತೋರುತ್ತದೆ. ಆದ್ದರಿಂದ ನಿನ್ನ ಹಿತಕ್ಕೋಸ್ಕರವಾಗಿಯೇ ತ್ರಿದಶೇಶ್ವರನಾದ ಇಂದ್ರನೊಡನೆ ಸಂಧಿಯನ್ನು ಮಾಡಿಕೊ" ಳೆಂದು ರಾಹುವು ತನ್ನ ತಮ್ಮನೊಡನೆ ಹೇಳಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ರಾಹುವಾಕ್ಯದಿಂದ ದೇವದಾನವ ಯುದ್ಧವರ್ಣನೆ ಎಂಬ ಹೆಸರಿನ ನಲವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

---

**॥ ಮಾರ್ಕಂಡೇಯ ಉವಾಚ ॥**

**ಏವಮುಕ್ತಸ್ತದಾ ಸಾಲ್ವೋ ರಾಹುಣಾ ಭೀಮವಿಕ್ರಮಃ ।**
**ಜಗಾದ ಭ್ರಾತರಂ ವಾಕ್ಯಂ ಸಾರಭೂತಮುಹೇತುಮುತ್ ॥ ೧ ॥**

**॥ ಸಾಲ್ವ ಉವಾಚ ॥**

**ಅಸಾರೇ ಗ್ರಹ ಸಂಸಾರೇ ನಿತ್ಯೇ ಸತತಯಾಯಿನಿ ।**
**ಭವ ಮುಕ್ತ್ಯೈ ಮತಿಃ ಕಾರ್ಯಾ ರುಜೋಪಕರಣೇಷು ವಾ**
**ಜಂತವಸ್ತ್ರಿವಿಧಾ ಲೋಕೇ ತ್ರಿಧಾ ಯೇಷಾಂ ವಿಚೇಷ್ಟಿತಂ ॥ ೨ ॥**

---

## ನಲವತ್ತನಾಲ್ಕನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳುತ್ತಾನೆ— ಭಯಂಕರ ಪರಾಕ್ರಮಿಯಾದ ಸಾಲ್ವನು ಅಣ್ಣನಾದ ರಾಹುವಿನಿಂದ ಇಂತು ಹೇಳಲ್ಪಟ್ಟವನಾಗಿ, ಆ ಅಣ್ಣನೊಡನೆ ಸಾರಭೂತವಾದ ಒಂದು ಮಾತನ್ನು ಹೇಳಿದನು–

೨–೫. ಸಾಲ್ವನು ಹೇಳುತ್ತಾನೆ—"ಎಲೈ, ರಾಹುಗ್ರಹವೇ, ಕೇಳು. ಸಾರವೆಂದು ಯಾವ ಸಂಸಾರವನ್ನು ಜನರು ತಿಳಿದುಕೊಂಡಿರುವರೋ ಆ ಸಂಸಾರವು ಪ್ರವಾಹರೂಪವಾಗಿ ಹರಿದುಹೋಗುತಲಿದೆ. ಇದು ನಿಜವಾಗಿ ಸಾರವುಳ್ಳದ್ದಲ್ಲವಾದ್ದರಿಂದ ಈ ಸಂಸಾರದುಃಖದ ಬಿಡುಗಡೆಗೆ ಪ್ರಯತ್ನಮಾಡುವುದು ಬುದ್ಧಿಶಾಲಿಗಳ ಲಕ್ಷಣ. ಈ ಸಂಸಾರವು ಸಕಲರೋಗೋಪಕರಣಗಳಿಂದ ಕೂಡಿರುವಂಥಾದ್ದು. ಲೋಕದಲ್ಲಿ ಮೂರು ವಿಧವಾದ ಪ್ರಾಣಿಗಳಿರುವದು. ಅವರುಗಳ ನಡೆವಳಿಕೆಯೂ ಮೂರು ಪ್ರಕಾ

ತಾಮಸಾ ರಾಜಸಾಶ್ಚೈವ ಸಾತ್ವಿಕಾಶ್ಚ ಗ್ರಹೇಶ್ವರ ।
ಭವಕ್ಷಯೇ ಯೇ ವಿಮುಖಾ ಭವೋಪಕರಣೇಷು ಚ ॥ ೩ ॥

ಲೋಕದ್ವಿತಯವಿಭ್ರಷ್ಟಾಸ್ತಾಮಸಾಸ್ತೇ ಪ್ರಕೀರ್ತಿತಾಃ ।
ಭವಕ್ಷಯಮತಿಭ್ರಷ್ಟಾ ಭವೋಪಕರಣೇ ಸ್ಥಿತಾಃ ॥ ೪ ॥

ರಾಜಸಾಂಶೇ ವಿನಿರ್ದಿಷ್ಟಾ ಮಧ್ಯಸ್ಥಾಃ ಸರ್ವಜಂತುಷು ।
ಭವೋಪಕರಣೇ ದೈತ್ಯ ಮತಿರ್ಯೇಷಾಂ ನ ವಿದ್ಯತೇ ॥ ೫ ॥

ಭವಕ್ಷಯೇ ಮತಿರ್ಯೇಷಾಂ ಸಾತ್ವಿಕಾಸ್ತೇ ಪ್ರಕೀರ್ತಿತಾಃ ।
ತಾಮಸತ್ವಾನ್ಮಯಾ ದೈತ್ಯ ಮತಿಃ ಪೂರ್ವಂ ಭವಕ್ಷಯೇ ॥ ೬ ॥

ನ ಕೃತಾ ತೇನ ವಕ್ಷ್ಯಾಮಿ ರಾಜ್ಯತಂತ್ರಮನುಷ್ಠಿತಂ ।
ಮನ್ವಂತರೇಽಪಿ ಸಂಪೂರ್ಣೇ ಮೃತಿರ್ಯೇಷಾಂಗ್ರಹೋತ್ತಮ ॥ ೭ ॥

---

ರವಾಗಿವೆ. ಅವುಗಳನ್ನು ತಾಮಸ ರಾಜಸ ಸಾತ್ವಿಕಗಳೆಂದು ಹೇಳುವರು. ಎಲೈ, ಗ್ರಹೇಶ್ವರನೇ ! ಯಾರು ಸಂಸಾರಪಾಶವನ್ನು ಬಿಡಿಸಿಕೊಳ್ಳಲು ಮನಸ್ಸುಮಾಡದೆ, ಸಂಸಾರೋಪಕರಣ (ವಿಷಯಸುಖ) ಗಳಲ್ಲೇ ಮಗ್ನರಾಗಿರುವರೋ, ಅವರು ಈಲೋಕ ಪರಲೋಕ ಸುಖಗಳನ್ನು ಕಳೆದುಕೊಂಡು ಭ್ರಷ್ಟರಾಗುವರು. ಅವರನ್ನು ತಾಮಸರೆಂದು ತಿಳಿಯಬೇಕು ಮತ್ತು ಭವರೋಗವನ್ನು ನಾಶಮಾಡಿಕೊಳ್ಳುವ ಬುದ್ಧಿಯೇ ಇಲ್ಲದೆ, ಸಂಸಾರದಲ್ಲೇ ನಿರತರಾಗಿರುವವರಾರೋ ಅವರನ್ನು ರಾಜಸರೆಂದು ತಿಳಿದುಕೊಳ್ಳಬೇಕು. ಇವರುಗಳು ಸಕಲಪ್ರಾಣಿಗಳಲ್ಲಿ ಮಧ್ಯಸ್ಥರೆನಿಸಿಕೊಳ್ಳುವರು. ರಾಹುವೇ, ಕೇಳು. ಯಾವ ಪುಣ್ಯಾತ್ಮರು ಸಂಸಾರಸುಖದಲ್ಲಿ ವಿಮುಖರಾಗಿ, ಸಂಸಾರದುಃಖವನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಪಡುವರೋ ಅವರನ್ನು ಸಾತ್ವಿಕರೆಂದು ತಿಳಿದುಕೊಳ್ಳಬೇಕು.

೬-೭. ನಾನು ತಮೋಗುಣವಿಶಿಷ್ಟನಾದ್ದರಿಂದ ಸಂಸಾರನಾಶವಿಷಯದಲ್ಲಿ ಇದುವರೆಗೂ ಬುದ್ಧಿಹುಟ್ಟಲಿಲ್ಲ. ಇದಕ್ಕಾಗಿ ಬಹಳ ವ್ಯಥೆಪಡುತ್ತಿದ್ದೇನೆ ರಾಜ್ಯತಂತ್ರದಲ್ಲಿ ನನ್ನ ಆಶೆಯು ಮುಗಿಯಲೇ ಇಲ್ಲ. ಯಾರಿಗೆ ಮನ್ವಂತರ ಪೂರ್ತಿಯಾದರೂ ಮರಣವುಂಟಾಗುವುದಿಲ್ಲವೋ, ಅವರು ಮರಣವಿಚಾರದಲ್ಲಿ ಉದ್ವೇಗವನ್ನು

**ಉದ್ವಿಜಂತ್ಯೇವ ತೇ ಮೃತ್ಯೋರ್ಮಹನ್ಮೃತ್ಯುಕೃತಂ ಭಯಂ ।**
**ಅವಶ್ಯಂ ದೈತ್ಯ ಮರ್ತವ್ಯಂ ಸರ್ವೇಣೇಹ ಶರೀರಿಣಾ ॥ ೮ ॥**

**ಸೋಽಹಂ ಮೋಕ್ಷಪರಿಭ್ರಷ್ಟಃ ಕಾಮಯೇ ಕೇಶವಾದ್ವಧಂ ।**
**ಇಷ್ಟಂ ಯಜ್ಞೈಸ್ತಪಸ್ತಪ್ತಂ ರಿಪೂಣಾಂ ಮೂರ್ಧನಿ ಸ್ಥಿತಂ ॥ ೯ ॥**

**ಮರ್ತವ್ಯೇ ಚ ಧ್ರುವೇ ರಾಮಾನ್ಮರಣಂ ಕಾಮಯಾಮ್ಯಹಂ ।**
**ಸಂಪ್ರಾಪ್ಯ ಕೇಶವಾನ್ಮೃತ್ಯುಂ ಗತಿಂ ಪ್ರಾಪ್ಸ್ಯಾಮ್ಯನುತ್ತಮಾಂ ॥ ೧೦ ॥**

**ಭೂಯೋ ರಾಜ್ಯಮವಾಪ್ಸ್ಯಾಮಿ ನಾಕಭ್ರಷ್ಟೋ ಗ್ರಹೋತ್ತಮ ।**
**ವಿವಾಸ್ಯ ವಾಸವಂ ಸ್ವರ್ಗಾತ್ಪರಿಭೂಯ ಪುನಃ ಪುನಃ ॥ ೧೧ ॥**

**ಕಥಂ ಸಂಧಿಂ ಕರಿಷ್ಯಾಮಿ ತೇನಾಹಂ ಜೀವಿತಪ್ರಿಯಃ ।**
**ಪ್ರಣಾಮಾದ್ದೇವರಾಜಸ್ಯ ಕೇಶವಾನ್ಮರಣಂ ವರಂ ॥ ೧೨ ॥**

---

ಹೊಂದುತ್ತಾರೆ. ಮತ್ತು ಅವರಿಗೆ ಮರಣದ ಭಯವಿದ್ದೇ ಇರುತ್ತದೆ. ಯಾವ ಶರೀರಿಯಾಗಲೀ ಹುಟ್ಟಿದಮೇಲೆ ಸಾಯಲೇಬೇಕು. ಈಗ ನಾನು ಮೋಕ್ಷದಿಂದ ವಂಚಿತನಾಗಿದೇನೆ. ಮಹಾವಿಷ್ಣುವಿನಿಂದ ಮರಣವು ಬಂದರೆ ನನಗೆ ಉತ್ತಮಗತಿಯೇ ಪ್ರಾಪ್ತವಾಗುತ್ತದೆ.

೯–೧೨. ಯಜ್ಞಗಳಿಂದ ತಪಸ್ಸನ್ನು ಮಾಡಿದೆನು. ರಿಪುಗಳನ್ನು ಗೆದ್ದೆನು. ಒಂದುವೇಳೆ ಪರಶುರಾಮನಿಂದ ವಧೆಯಾಗುವುದಾದರೆ ಆ ಭಗವಂತನಿಂದ ಮರಣವನ್ನು ನಾನೇ ಇಚ್ಛಿಸುತ್ತೇನೆ. ಭಗವಂತನಿಂದ ಮರಣವಾದ ಮೇಲೆ, ಅತ್ಯಂತ ಶ್ರೇಷ್ಠವಾದ ಗತಿಯನ್ನು ಹೊಂದಿಯೇ ಹೊಂದುತ್ತೇನೆ. ಪುಣ್ಯವಿಶೇಷದಿಂದ ಸ್ವರ್ಗವಾಸವು ಮುಗಿದ ಮೇಲೂ ಪುನಃ ರಾಜ್ಯವನ್ನು ಸಂಪಾದಿಸಿಯೇ ಸಂಪಾದಿಸುತ್ತೇನೆ. ಆಗಲೂ ಇಂದ್ರನೊಡನೆ ಯುದ್ಧಮಾಡಿ ಸ್ವರ್ಗವನ್ನು ಗೆದ್ದು ಇಂದ್ರನನ್ನು ಹೊರಡಿಸಿಯೇ ಹೊರಡಿಸುತ್ತೇನೆ. ಪದೇ ಪದೇ ಹೀಗೆ ನಾನು ಜಯಶೀಲನಾಗಿ ರಾಜ್ಯವನ್ನು ಸಂಪಾದಿಸುವ ಶಕ್ತಿಯಿರುವಾಗ ಬದುಕಬೇಕೆಂಬ ಆಶೆಯಿಂದ ಇಂದ್ರನೊಡನೆ ಸಂಧಿಯನ್ನದೆಂತು ಮಾಡಿಕೊಳ್ಳಲಿ ? ಮತ್ತು ದೇವರಾಜನಿಗೆ ಅದೆಂತು ಪ್ರಣಾಮಮಾಡಲಿ ? ಇದಕ್ಕಿಂತ ಪರಮಾತ್ಮನಿಂದ ಮರಣವೇ ಲೇಸು.

**ಸಮೀಕ್ಷ್ಯ ಸಾಧು ಪಶ್ಯಾಮಿ ಕೇಶವಾನ್ಮರಣಂ ರಣೇ ।**
**ಶಕ್ರೇಣ ಕೃತಸಂಧಾನಂ ಪಾತಾಲನಿಲಯಂ ತಥಾ　　॥ ೧೩ ॥**

**ತ್ಯಕ್ಷ್ಯಂತಿ ಮಾಂ ದೈತ್ಯಗಣಾ ವೃದ್ಧಂ ಪತಿಮಿವಾಂಗನಾಃ ।**
**ದಿವಿ ಭೂಮೌ ತಥಾ ಸ್ವರ್ಗೇ ಪಾತಾಲೇ ಗಗನೇ ಜಲೇ　　॥ ೧೪ ॥**

**ದೇಹಿನಾಂ ಮೃತ್ಯುರಭ್ಯೇತಿ ತಸ್ಯ ನಾಸ್ತಿ ಪಲಾಯನಂ ।**
**ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ　　॥ ೧೫ ॥**

**ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಹಿ ಜೀವಿತಂ ।**
**ಅವಶ್ಯಭಾವಿನ್ಯರ್ಥೇಽಸ್ಮಿನ್ಸರ್ವೇಷಾಂ ಗ್ರಹ ಸರ್ವದಾ　　॥ ೧೬ ॥**

**ಪುಣ್ಯಭಾಜೋಹಿ ಮರಣಂ ಸಂಗ್ರಾಮೇ ಯದಿ ಜಾಯತೇ ।**
**ಸೋಽಹಂ ಕ್ಷತ್ರಿಯಧರ್ಮೇಣ ಸಂಪೂಜ್ಯ ಸಮರೇ ಹರಿಂ　　॥ ೧೭ ॥**

---

೧೩-೧೪. ಇದನ್ನೆಲ್ಲಾ ಆಲೋಚಿಸಿನೋಡಿ ಕೇಶವನಿಂದ ರಣರಂಗದಲ್ಲಿ ಮರಣವೇ ಲೇಸೆಂದು ನಿರ್ಧರಿಸಿದೇನೆ. ಇಂದ್ರನೊಡನೆ ರಾಜಿಮಾಡಿಕೊಂಡು, ಪಾತಾಳದಲ್ಲಿ ವಾಸಮಾಡುವ ನನ್ನನ್ನು ಕಂಡು ದೈತ್ಯರೆಲ್ಲರೂ ವೃದ್ಧನಾದ ಪತಿಯನ್ನು ಅಗಲುವ ಹೆಂಗಸಿನಂತೆ ನನ್ನನ್ನು ಅಗಲಿ ಹೊರಟುಹೋಗುತ್ತಾರೆ. ಸ್ವರ್ಗದಲ್ಲಿರಲಿ, ಭೂಮಿಯಲ್ಲಿರಲಿ, ಪಾತಾಳದಲ್ಲಿರಲಿ, ನೀರಿನಲ್ಲಿ ಹುದುಗಿಕೊಂಡೇ ಇರಲಿ, ದೇಹಿಗಳಿಗೆ ಮೃತ್ಯುವು ಉಂಟೇ ಉಂಟು.

೧೫-೨೦. ಪ್ರಾಣಿಗಳಿಗೆ ಮೃತ್ಯುವು ಬಂದೇಬರುವುದೇ ಧರ್ಮವಾಗಿರುವಲ್ಲಿ ಅಂಥವನು ಎಲ್ಲಿಗೂ ಓಡಿಹೋಗಿ ತಪ್ಪಿಸಿಕೊಳ್ಳಲಾರನು. ಸಕಲಸಂಪತ್ತುಗಳೂ ನಾಶವನ್ನೇ ಕೊನೆಯಾಗುಳ್ಳವು. ಸಕಲ ಯಶಸ್ಸುಗಳೂ ಪತನಾಂತವಾದುವುಗಳಾಗಿವೆ. ಸಂಯೋಗವು ವಿಯೋಗವನ್ನೇ ಕೊನೆಯಾಗುಳ್ಳುದು. ಜೀವಿತವು ಮರಣಾಂತವಾಗಿಯೇ ಇರತಕ್ಕದು. ಈ ಅವಶ್ಯವಾಗಿ ಅನುಭವಿಸಲೇಬೇಕಾದ ಅರ್ಥದಲ್ಲಿ ಸಕಲರೂ ಸಮಾನರು. ಎಲೈ, ಗ್ರಹರಾಜನೇ! ಕ್ಷತ್ರಿಯನಾದ ನನಗೆ ಪುಣ್ಯವಿಶೇಷದಿಂದ ರಣರಂಗದಲ್ಲಿ ಮರಣವು ಪ್ರಾಪ್ತವಾದರೆ, ಕ್ಷತ್ರಿಯ ಧರ್ಮದಿಂದ ಆ ಭಗವಂತ

ತಸ್ಮಾತ್ ಮೃತ್ಯುಮನುಪ್ರಾಪ್ಯ ಗತಿಂ ಪ್ರಾಪ್ಸ್ಯಾಮಿಶೋಭನಂ ।
ನೈವೇದ್ಯೈಃ ಪುಷ್ಪಧೂಪಾದ್ಯೈರ್ನ ತಥಾ ಪೂಜಿತೋ ಹರಿಃ ॥ ೧೮ ॥

ತೋಷಮಾಯಾತಿ ದೈತ್ಯೇಂದ್ರ ಸ್ವಧರ್ಮೇಣ ಯಥಾ ನೃಣಾಂ ।
ಭ್ರಾತ್ರಾ ಜ್ಯೇಷ್ಠೇನಯದ್ವಾಚ್ಯಂ ಸುಹೃದಾ ಹಿತಮಿಚ್ಛತಾ ॥ ೧೯ ॥

ತದುಕ್ತೋಽಸ್ಮಿ ತ್ವಯಾ ನಾಥ ದೈವಾತ್ತನ್ಮೇ ನ ರೋಚತೇ ।
ಸ ತ್ವಂ ಗಚ್ಛ ಮಹಾಭಾಗ ದಿವಿದ್ರಷ್ಟಾಽಸಿ ಮಾಂ ಪುನಃ ।
ದೇಹಾಂತರಮನುಪ್ರಾಪ್ತಂ ಗೃಹ ದಿವ್ಯೇನ ಚಕ್ಷುಷಾ ॥ ೨೦ ॥

॥ ಮಾರ್ಕಂಡೇಯ ಉವಾಚ ॥

ಇತ್ಯೇವ ಸಾಲ್ವಸ್ಯ ನಿಶಮ್ಯ ವಾಕ್ಯಂ
ಕಾಲಾನುರೂಪಂ ಚ ತಥಾ ವಿದಿತ್ವಾ ।

---

ನನ್ನು ಪೂಜಿಸಿ ಆತನಿಂದ ಮೃತನಾಗಿ ಪರಮಪದವನ್ನು ಹೊಂದುತ್ತೇನೆ. ಸ್ವಧರ್ಮಾನುಷ್ಠಾನ ಮಾಡುತ್ತಿರುವವರಿಗೆ ಭಗವಂತನು ಒಲಿಯುವಂತೆ, ಬಾಹ್ಯೋಪಚಾರಗಳಾದ, ಪುಷ್ಪ ಧೂಪ ದೀಪ ನೈವೇದ್ಯ ತಾಂಬೂಲಾದಿಗಳಿಂದ ತೃಪ್ತನಾಗುವುದಿಲ್ಲ. ಅಯ್ಯ ! ಪ್ರೀತಿಯ ಅಣ್ಣನಾದ ರಾಜುವೇ ! ನೀನು ನನಗಿಂತ ಜ್ಯೇಷ್ಠನಾದುದರಿಂದಲೂ, ನನ್ನಲ್ಲಿ ನಿನಗೆ ಅಪಾರವಾದ ಅಪ್ರತಿಮವಾದ ಪ್ರೇಮವಿರುವುದರಿಂದಲೂ, ನನಗೆ ಆಪ್ತನಾದ ಸ್ನೇಹಿತನಾಗಿದ್ದುಕೊಂಡು ಯಾವ ಮಾತನ್ನು ಹೇಳಬೇಕಾಗಿತ್ತೋ ಆ ಮಾತನ್ನು ನನ್ನೊಡನೆ ಹೇಳಿಯಾಯಿತು. ನೀನು ಹೇಳಿದ ಮಾತನ್ನು ಕೇಳಿದ ಮೇಲೆ ಆ ಮಾತು ಸರಿಯಲ್ಲವೆಂದು ತೋರುತ್ತದೆ. ಆದ್ದರಿಂದ ಎಲೈ ಮಹಾಭಾಗನೇ ! ನೀನಿನ್ನು ಹೊರಡು. ಪುನಃ ನನ್ನನ್ನು ನೀನು ಸ್ವರ್ಗದಲ್ಲಿ ಕಾಣುವಿಯಂತೆ. ನಾನು ದಿವ್ಯದೃಷ್ಟಿಯಿಂದ ನೋಡುತಲಿದೇನೆ. ನನಗೆ ದೇಹಾಂತರಪ್ರಾಪ್ತಿಯಾಗುವುದನ್ನು ಸಹ ತಿಳಿಯುತಲಿದೇನೆ.

೨೧ ಮಾರ್ಕಂಡೇಯನು ಹೇಳುತ್ತಾನೆ:- ಈ ರೀತಿಯಾಗಿ ಸಾಲ್ವನು ಹೇಳಿದಮಾತನ್ನು ಕೇಳಿ ಕಾಲಾನುರೂಪವಾಗಿ ನಡೆಯಬೇಕಾಗಿರುವ ಭವಿಷ್ಯತ್ತನ್ನು ಸಹ

ನ ಕಿಂಚಿದುಕ್ತ್ವೈವ ಜಗಾಮ ರಾಹು
ರ್ದಿವಂ ಮಹಾತ್ಮಾ ಜಗತಾಂ ಪ್ರಧಾನಃ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಸಾಲ್ವವಾಕ್ಯಂ ನಾಮ
ಏಕೋನಚತ್ವಾರಿಂಶೋಽಧ್ಯಾಯಃ



---

ತಿಳಿದವನಾಗಿ ರಾಹುವು ತಮ್ಮನ ಮಾತಿಗೆ ಏನೊಂದುತ್ತರವನ್ನೂ ಕೊಡಲಾರದವನಾಗಿ, ಯಾವ ಮಾತನ್ನೂ ಆಡದೆ, ಆ ಜಗತ್ಪ್ರಧಾನನಾದ ಗ್ರಹರಾಜನಾದ ಆ ರಾಹುವು ತನ್ನ ನಿವಾಸಸ್ಥಳವಾದ ಸ್ವರ್ಗಕ್ಕೆ ಹೊರಟುಹೋದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಸಾಲ್ವವಾಕ್ಯವೆಂಬ ಹೆಸರಿನ
ನಲವತ್ತನಾಲ್ಕನೇ ಅಧ್ಯಾಯವು ಮುಗಿದುದು



॥ ಶ್ರೀಃ ॥

---

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
### ಪಂಚಚತ್ವಾರಿಂಶತ್ತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ರಾಹೌ ದಿವಮನುಪ್ರಾಪ್ತೇ ಸಾಲ್ವೇ ರಾಜ್ಞಿ ಸಭಾಂ ಗತೇ ।
ರಾಮೇಣ ಪ್ರೇಷಿತೋ ದೂತಃ ಸಂಪ್ರಾಪ್ತಸ್ತ್ವಕೃತವ್ರಣಃ ॥ ೧ ॥

ಸ ಪ್ರವಿಷ್ಟಃ ಸಭಾಂ ರಮ್ಯಾಂ ಸಾಲ್ವ ರಾಜ್ಞಾ ಚ ಪೂಜಿತಃ ।
ಪಾದ್ಯಾರ್ಘ್ಯಾಚಮನೀಯಾದ್ಯೈರ್ನಿಷಣ್ಣೋ ವಾಕ್ಯಮಬ್ರವೀತ್ ॥ ೨ ॥

॥ ಅಕೃತವ್ರಣ ಉವಾಚ ॥

ದೂತೋಽಹಂ ಪ್ರೇಷಿತಃ ಸಾಲ್ವ ರಾಮೇಣಾಕ್ಲಿಷ್ಟಕರ್ಮಣಾ ।
ಶ್ರುತ್ವಾ ರಾಮಸ್ಯವಚನಂ ತತಃ ಕುರು ಯಥೇಪ್ಸಿತಂ ॥ ೩ ॥

---

### ನಲವತ್ತೈದನೆಯ ಅಧ್ಯಾಯವು

೧-೨. ಮಾರ್ಕಂಡೇಯನು ಹೇಳಿದನು:- ರಾಹುವು ಇನ್ನೂ ಸ್ವರ್ಗವನ್ನು ತಲಪುವುದರೊಳಗಾಗಿಯೇ ಸಾಲ್ವರಾಜನು ರಾಜಸಭೆಯನ್ನು ಪ್ರವೇಶಿಸುತ್ತಿರುವಲ್ಲಿ ಪರಶುರಾಮನ ಕಡೆಯಿಂದ ಅಕೃತ ವ್ರಣನೆಂಬ ಒಬ್ಬ ದೂತನು ರಾಜಸಭೆಗೆ ಬಂದನು. ಆತನು ಬಂದೊಡನೆಯೇ ಸಾಲ್ವನು ಪಾದ್ಯಾರ್ಘ್ಯಾದಿಗಳಿಂದ ಆತನನ್ನು ಪೂಜಿಸಿದ ಬಳಿಕ ಆ ದೂತನು ಕುಳಿತುಕೊಂಡು ಈ ಮಾತನ್ನು ಹೇಳಿದನು:-

೩. ಆ ಅಕೃತವ್ರಣನೆಂಬ ದೂತನು ಹೇಳುತ್ತಾನೆ:- "ಎಲೈ, ಸಾಲ್ವಮಹಾ ರಾಜನೇ ! ನಾನು ಪರಶುರಾಮನ ದೂತನು. ಮಹಾತ್ಮನಾದ ಆ ರಾಮನಿಂದ ಹೇಳಿಕಳುಹಲ್ಪಟ್ಟಿರುವ ಮಾತನ್ನು ನಿನ್ನೊಡನೆ ಹೇಳುತ್ತೇನೆ. ಆ ಮಾತನ್ನು ಕೇಳಿದ ಬಳಿಕ ನಿನ್ನ ಇಷ್ಟಾನುಸಾರವಾಗಿ ಮಾಡಬಹುದು.

ಆಹ ತ್ವಾಂ ಭಾರ್ಗವೋ ರಾಮಸ್ತ್ರ್ಯಂಬಕೇಣ ವಿಸರ್ಜಿತಃ ।
ತ್ವಯಾ ಯುದ್ಧಾಯ ದೈತ್ಯೇಂದ್ರ ಸಂಗ್ರಾಮೇ ಕ್ರಿಯತಾಂ ಕ್ಷಣಂ ॥ ೪ ॥

ವಿವಾಸ್ಯ ವಾಸವಂ ಸ್ವರ್ಗಾದ್ದೇವಾನ್ ಜಿತ್ವಾ ಸದಾಽಹವೇ ।
ಅನಯಸ್ಯಾಽಸ್ಯ ಘೋರಸ್ಯ ಫಲಂ ಪ್ರಾಪ್ನುಹಿ ದುರ್ಮತೇ ॥ ೫ ॥

ನಾಹಂ ಪ್ರಮತ್ತೇ ವಿಶ್ವಸ್ತೇ ಪ್ರಹರಾಮಿ ಕದಾಚನ ।
ತೇನ ತೇ ಪ್ರೇಷಿತೋ ದೂತಸ್ತಸ್ಮಾದ್ಯುದ್ಧೇ ಸ್ಥಿರೋ ಭವ ॥ ೬ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತಸ್ತದಾ ಸಾಲ್ವೋ ಬ್ರಾಹ್ಮಣಂ ವಾಕ್ಯಮಬ್ರವೀತ್ ।
ನಾಹಂ ರಾಮಕೃತೇ ಬ್ರಹ್ಮನ್ಸನ್ನಹ್ಯಾಮಿ ಕದಾಚನ ॥ ೭ ॥

---

೪. ಈಶ್ವರನಿಂದ ಭೂಲೋಕಕ್ಕೆ ಕಳುಹಲ್ಪಟ್ಟಿರುವ ಭಾರ್ಗವರಾಮನು ನಿನ್ನೊಡನೆ ಯುದ್ಧಮಾಡಬೇಕೆಂದಿರುವುದರಿಂದ ಒಂದು ಕ್ಷಣಕಾಲವನ್ನು ಯುದ್ಧಕ್ಕಾಗಿ ಉಪಯೋಗಿಸಬೇಕೆಂದು ಹೇಳಿರುವನು.

೫. "ನೀನು ಇಂದ್ರನನ್ನು ಸ್ವರ್ಗದಿಂದ ಹೊರಡಿಸಿ, ದೇವತೆಗಳನ್ನು ಯುದ್ಧದಲ್ಲಿ ಗೆದ್ದು ಓಡಿಸಿದ್ದೀಯೆ. ಈ ನಿನ್ನ ಭಯಂಕರವಾದ ಅನೀತಿಗೆ ತಕ್ಕ ಫಲವನ್ನು ನೀನು ಈಗ ಹೊಂದುತ್ತೀಯೆ.

೬. ನಾನು ಅಜ್ಞಜ್ಞಾನದಲ್ಲಿರುವ ಜನರನ್ನೂ, ವಿಶ್ವಾಸವುಳ್ಳ ಜನರನ್ನೂ ಯಾವಾಗಲೂ ಹೊಡೆಯುವವನಲ್ಲ. ಆದ್ದರಿಂದ ನಿನಗೆ ಎಚ್ಚರಿಕೆ ಕೊಡುವುದಕ್ಕಾಗಿ ನಿನ್ನ ಬಳಿಗೆ ದೂತರನ್ನು ಕಳಿಸಿದ್ದೇನೆ. ಆದ್ದರಿಂದ ಯುದ್ಧಸನ್ನದ್ಧನಾಗು."

೭-೮. ಮಾರ್ಕಂಡೇಯನು ಹೇಳುತ್ತಾನೆ:- ಈ ರೀತಿ ಹೇಳಿದ ದೂತನ ಮಾತನ್ನು ಕೇಳಿ ಸಾಲ್ವನು ಆ ದೂತನೊಡನೆ ಈ ಮಾತನ್ನು ಹೇಳಿದನು. "ಎಲೈ, ಅಕೃತವ್ರಣನೇ ! ನಾನು ರಾಮನೊಡನೆ ಯುದ್ಧಮಾಡಲು ಸನ್ನಾಹಮಾಡುವುದಿಲ್ಲ.

**ಕಿಂತು ಸೈನ್ಯೇನ ಸರ್ವೇಣ ಸನ್ನದ್ಧೇನ ವರೂಥಿನಾ ।**
**ಮಹಾದೇವಂ ವಿಜೇಷ್ಯಾಮಿ ಯೇನ ರಾಮೋ ವಿಸರ್ಜಿತಃ ॥ ೮ ॥**

**ಸನ್ನದ್ಧಸೈನ್ಯಸಹಿತಂ ಮಹಾದೇವಜಯೈಷಿಣಂ ।**
**ಯದಿ ಮಾಂ ಯೋತ್ಸ್ಯತೆ ರಾಮೋ ಹಂತಾಽಸ್ಮಿ ತಮಹಂ ಮೃಧೇ ॥ ೯ ॥**

**ಸ ತ್ವಂ ಗಚ್ಛ ಯಥಾಕಾಮಂ ರಾಮಾಯ ವಿನಿವೇದಯ ।**
**ಏತದ್ವಚನಮಾದಾಯ ಸಾಲ್ವಸ್ಯ ಸ ಮಹಾತ್ಮನಃ ॥ ೧೦ ॥**

**ಜಗಾಮ ರಾಮಂ ಧರ್ಮಜ್ಞಂ ಸಾಲ್ವವಾಕ್ಯ ನಿವೇದಿತಃ ।**
**ಗತ್ವಾ ಶಶಂಸ ರಾಮಾಯ ಸೈಂಹಿಕೇಯವಿಚೇಷ್ಟಿತಂ ॥ ೧೧ ॥**

**ತೇನ ವಾಕ್ಯೇನ ರಾಮೋಽಪಿ ರೋಷಾದ್ದೈತ್ಯಪುರಂ ಯಯೌ ।**
**ರಾಮದೂತೆ ಗತೇ ತಸ್ಮಿನ್ ದೈತ್ಯಾನ್ಸಾಲ್ವಃ ಪ್ರಚೋದಯತ್ ॥ ೧೨ ॥**

---

ಆದರೆ, ಆ ಪರಶುರಾಮನು ಯಾರಿಂದ ಭೂಲೋಕಕ್ಕೆ ಕಳುಹಿಸಲ್ಪಟ್ಟಿರುವನೋ ಆ ಮಹಾದೇವನೊಡನೆ ಚತುರಂಗಬಲಸಹಿತನಾಗಿ ಹೋಗಿ ಯುದ್ಧಮಾಡಿ ಆ ಈಶ್ವರನನ್ನೇ ಜಯಿಸುತ್ತೇನೆ.

೯. ನಾನು ಈರೀತಿ ಮಹಾದೇವನನ್ನು ಜಯಿಸಲು ಸೈನ್ಯಸಮೇತನಾಗಿ ಹೊರಟಾಗ ಆ ನಿನ್ನ ಪರಶುರಾಮನೇನಾದರೂ ನನ್ನ ಸಂಗಡ ದಾರಿಯಲ್ಲಿ ಯುದ್ಧಕ್ಕೆ ಬರುವುದಾದರೆ ಅವನನ್ನು ಯುದ್ಧದಲ್ಲಿ ಸಂಹಾರಮಾಡುತ್ತೇನೆ.

೧೦-೧೧. ನಾನು ಈರೀತಿ ಹೇಳಿದ ಮಾತನ್ನು ನಿನ್ನ ರಾಮನ ಸಂಗಡ ಹೋಗಿ ಹೇಳು.'' ಈರೀತಿ ಸಾಲ್ವನು ಹೇಳಿದ ಮಾತನ್ನು ಆ ಅಕೃತವ್ರಣನಾಮಕ ದೂತನು ಕೇಳಿದವನಾಗಿ ಕೂಡಲೆ ಹಿಂದಕ್ಕೆ ಹೋಗಿ ಪರಶುರಾಮನೊಡನೆ ಎಲ್ಲ ವೃತ್ತಾಂತವನ್ನೂ ಹೇಳಿದನು.

೧೨-೧೭. ಈ ಮಾತು ಕಿವಿಗೆ ಬಿದ್ದೊಡನೆಯೇ ರಾಮನು ಕೋಪದಿಂದ ಸಾಲ್ವನಗರಿಗೆ ಹೊರಟನು. ಪರಶುರಾಮನ ದೂತನು ಹೊರಟುಹೋದ ಬಳಿಕ ಸಾಲ್ವನು ದೈತ್ಯರನ್ನು ಎಚ್ಚರಗೊಳಿಸಿದನು. ಆಗ ಸಮರಶೂರರಾದ ದೈತ್ಯಸೈನಿಕರು

ಸನ್ನಹ್ಯಧ್ವಂ ವಿಜೇಷ್ಯಾಮಃ ಸಗಣಂ ,ಭಗಸೂದನಂ ।
ತತಸ್ತೇದಾನವಾಃ ಸರ್ವೇ ಸಾಲ್ವವಾಕ್ಯಪ್ರಚೋದಿತಾಃ　　॥ ೧೩ ॥

ಸನ್ನದ್ಧಾ ಸ್ವಗೃಹೇಭ್ಯಸ್ತು ರಾಜದ್ವಾರಮುಪಾಗತಾಃ ।
ಕುಂಜರಾಣಾಂ ನಿನಾದೇನ ಶಂಖಭೇರೀರವೇಣ ಚ　　॥ ೧೪ ॥

ರಾಜದ್ವಾರೇ ಮಹಾಂಚ್ಛಬ್ದಸ್ತುಮುಲಃ ಸಮುಪದ್ಯತ ।
ಹುತ್ವಾ ಹುತಾಶನಂ ಸ್ನಾತಃ ಸಾಲ್ವಃ ಸಂಪೂಜ್ಯ ಚ ದ್ವಿಜಾನ್　　॥ ೧೫ ॥

ಆರುರೋಹ ಗಜಂ ಮತ್ತಂ ಶೈಲಾಗ್ರಂ ಸವಿತಾ ಯಥಾ　　॥ ೧೬ ॥

ವಿನಿರ್ಗತಂ ದೈತ್ಯಪತಿಂ ಸಮೀಕ್ಷ್ಯ
ದೈತ್ಯೇಶ್ವರಾಃ ಕಾಲಸಮಾನವರ್ಣಾಃ ।

---

ಯುದ್ಧಸನ್ನದ್ಧರಾಗಿ ಸಾಲ್ವನಿಂದ ಪ್ರಚೋದಿತರಾಗಿ ಅರಮನೆಯ ಬಳಿಗೆ ಬಂದೇ ಬಂದರು ಆಗ ಸಮರಸನ್ನಾಹ ಸೂಚಕವಾದ ರಣಭೇರಿಯು ಮೊಳಗಿತು ಆನೆಗಳ ಕೂಗಿನಿಂದಲೂ, ಶಂಖ ಭೇರೀ ನಿನಾದಗಳಿಂದಲೂ, ರಾಜದ್ವಾರದಲ್ಲಿ ಮಹತ್ತಾದ ಶಬ್ದವು ಉತ್ಪನ್ನವಾಯಿತು. ಆಗ ಸಾಲ್ವನು ಸ್ನಾನಮಾಡಿ ಜಪ ಹೋಮಾದಿಗಳನ್ನು ಮುಗಿಸಿ ಬ್ರಾಹ್ಮಣ ಸಮಾರಾಧನೆಯನ್ನು ಮಾಡಿ ಸೂರ್ಯನು ಉದಯಪರ್ವತವನ್ನೇರಿದಂತೆ, ಮತ್ತಗಜವನ್ನಾರೋಹಿಸಿ ಯುದ್ಧಕ್ಕೆ ಹೊರಟನು. ಈ ರೀತಿ ಸಮರಕ್ಕೋಸ್ಕರ ಹೊರಟ ಸಾಲ್ವನನ್ನು ನೋಡಿ ಯಮನಿಗೆ ಸಮಾನ ದರ್ಪವುಳ್ಳ ದೈತ್ಯಸೈನಿ

ಊಚುಸ್ತದಾ ತಂ ಸಮರೇಷ್ವಜೇಯಂ
ಜಯಸ್ವಶಂಭುಂ ಯುಧಿಸಂಪ್ರಗೃಹ್ಯ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಭಾರ್ಗವರಾಮ ಯುದ್ಧಾರಂಭಣಂ ನಾಮ ಪಂಚಚತ್ವಾರಿಂಶತ್ತಮೋಽಧ್ಯಾಯಃ



ಕರು ಒಟ್ಟಿಗೆ ಸೇರಿ ಸಾಲ್ವನನ್ನು ಕುರಿತು, "ಜಯಿಸು! ಜಯಿಸು! ಯುದ್ಧದಲ್ಲಿ ಈಶ್ವರನನ್ನು ಜಯಿಸು!" ಎಂಬುದಾಗಿ ಜಯಜಯಕಾರವನ್ನು ಮಾಡಿದರು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಭಾರ್ಗವರಾಮ ಯುದ್ಧಾರಂಭವೆಂಬ ಹೆಸರಿನ ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಷಟ್ಚತ್ವಾರಿಂಶತ್ತಮೋಽಧ್ಯಾಯಃ

---

**॥ ಮಾರ್ಕಂಡೇಯ ಉವಾಚ ॥**

**ವ್ಯಸ್ಪಂದತಾಥ ಸಾಲ್ವಸ್ಯ ರಾಜನ್ಬಾಹುರದಕ್ಷಿಣಃ ।**
**ಹೃದಯಂಚ ತಥಾ ಪೃಷ್ಠಂ ನಯನಂಚಾಪ್ಯದಕ್ಷಿಣಂ ॥ ೧ ॥**

**ಶೂನ್ಯಚಿತ್ತಶ್ಚ ವಿಮನಾಃ ಕಂಪತೇಚ ಮುಹುರ್ಮುಹುಃ ।**
**ಪಪಾತ ನಾಯಕಶ್ಚಾಪಿ ಕಿರೀಟಾತ್ತಾರಕಪ್ರಭಃ ॥ ೨ ॥**

**ಆಕ್ರಮಂತಿ ಗಜಾಃ ಪಾದಂ ತಥಾ ವಾಮೇನ ದಕ್ಷಿಣಂ ।**
**ಕರೇಣ ವೇಷ್ಟಯಂತಿಸ್ಮ ತಥಾ ದಂತಮದಕ್ಷಿಣಂ**
**ಮದಂ ತ್ಯಜ್ಯಂತಿ ಯೇ ಮತ್ತಾಸ್ತುರಗಾಶ್ಚ ಮುಹುರ್ಮುಹುಃ ॥ ೩ ॥**

---

## ನಲವತ್ತಾರನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳುತ್ತಾನೆ— ಅನಂತರ ಸಾಲ್ವನ ಎಡಭುಜವು ಅದುರಿತು. ಮತ್ತು ಎಡಭಾಗದ ಎದೆಯೂ, ಬೆನ್ನಿನ ಎಡಭಾಗವೂ, ಎಡಗಣ್ಣೂ ಸಹ ಅದುರಿತು.

೨. ಕೇಳೈ ವಜ್ರಭೂಪಾಲಕನೇ! ಸಾಲ್ವನು ಶೂನ್ಯಮನಸ್ಕನಾಗಿ ಬಾರಿಬಾರಿಗೂ ನಡುಗುತ್ತಿದ್ದನು. ಆತನ ಕಿರೀಟದಲ್ಲಿ ಕೆತ್ತಿದ್ದ ತಾರಕಪ್ರಭೆಯೆಂಬ ನಾಯಕರತ್ನವು ಕಳಚಿಬಿತ್ತು.

೩–೪. ಆನೆಗಳು ತಮ್ಮ ಸೊಂಡಲಿನಿಂದ ಬಲಗಾಲನ್ನೂ, ಮತ್ತೊಮ್ಮೆ ಸೊಂಡಿಲಿನಿಂದ ಎಡಗಡೆ ಕೊಂಬನ್ನೂ ಸುತ್ತುತ್ತಿದ್ದುವು. ಮತ್ತು ಮದೋದಕವನ್ನು

**ಸಂಸ್ಪೃಶಂತಿ ತಥಾ ವಾಮಂ ಪಾರ್ಶ್ವಂಪ್ರೋಥೇನ ವಾಮುನಾ**
**ವೃಕಾಃ ಸೃಗಾಲಾಃ ಶಾರ್ದೂಲಾ ಬಿಡಾಲಾ ಗರ್ದಭಾಃ ಶಶಾಃ ॥ ೪ ॥**

**ವಾಮೀಭೂತ್ವಾ ದಾನವಾನಾಂ ಯಾಂತಿ ದಕ್ಷಿಣತಸ್ತತಃ ।**
**ಏಣಾ ವರಾಹಾಃ ಪೃಷತೋ ಯಾಂತಿ ತೇಷಾಂಚ ವಾಮತಃ ॥ ೫ ॥**

**ದೀಪ್ತಾಯಾಂ ದಿಶಿ ವಾಶಂತಿ ಮೃಗಾಸ್ತೇಷಾಮಪಸ್ವರಂ ।**
**ತೈಲಪಂಕಗುಡಾಂಗಾರಚರ್ಮಕೇಶತೃಣಾನಿ ಚ ॥ ೬ ॥**

**ದಾನವಾನಾಂ ಪ್ರಯಾತಾನಾಂ ಸಂಭವಂತ್ಯಗ್ರತಸ್ತಥಾ ।**
**ಏವಂ ವಿಧಾ ದುರ್ನಿಮಿತ್ತಾ ಜಾತಾಃ ಸಾಲ್ವಸ್ಯ ಪಶ್ಯತಃ ॥ ೭ ॥**

**ಮತಿಃ ಸುನಿಶ್ಚಿತೈವಾಽಸೀನ್ಮರಣಂ ಪ್ರತಿ ಯಾದವ ।**
**ಸ ಯಯೌ ಸಹ ಸೈನ್ಯೇನ ಮಹತಾ ಚತುರಂಗಿಣಾ ॥ ೮ ॥**

**ಕೈಲಾಸಪರ್ವತಂ ಯೋದ್ಧುಂ ಮಹಾದೇವೇನ ಶೂಲಿನಾ ॥ ೯ ॥**

---

ಸುರಿಸುತ್ತಿದ್ದುವು. ಕುದುರೆಗಳು ಎಡಪಾರ್ಶ್ವವನ್ನು ಮೂತಿಯಿಂದ ಮುಟ್ಟಿಕೊಳ್ಳುತ್ತಿದ್ದುವು. ತೋಳಗಳೂ, ನರಿಗಳೂ, ಹುಲಿಗಳೂ, ಬೆಕ್ಕು, ಕತ್ತೆಗಳೂ ಮತ್ತು ಮೊಲಗಳೂ ಸಹ ರಾಕ್ಷಸರ ಬಲಗಡೆಯಿಂದ ಓಡಿಹೋಗುತ್ತಿದ್ದುವು.

೫-೭. ಜಿಂಕೆಗಳೂ ಹಂದಿಗಳೂ ಕಣ್ಣೀರು ಸುರಿಸುತ್ತಾ ರಾಕ್ಷಸರ ಎಡಭಾಗದಲ್ಲಿ ಬಂದುವು. ಎಲ್ಲಾ ದಿಕ್ಕುಗಳನ್ನೂ ಪ್ರಕಾಶಮಾಡುತ್ತಾ ಮೃಗಗಳು ಆ ರಾಕ್ಷಸರಿದ್ದ ಸ್ಥಳದಲ್ಲಿ ಅಪಸ್ವರದಿಂದ ಅರಚಿಕೊಳ್ಳುತ್ತಿದ್ದುವು. ಪ್ರಯಾಣ ಹೊರಟಿದ್ದ ರಾಕ್ಷಸರ ಮುಂಭಾಗದಲ್ಲಿ ಎಣ್ಣೆ, ಕೆಸರು, ಬೆಲ್ಲ, ಇದ್ದಿಲು, ಚರ್ಮ, ಕೂದಲು, ಹುಲ್ಲುಗಳು ಉದುರಿ ಬೀಳುತ್ತಿದ್ದುವು. ಸಾಲ್ವನು ನೋಡುತ್ತಿರುವಾಗಲೇ ಈ ಅಪಶಕುನಗಳೆಲ್ಲವೂ ಕಣ್ಣಿಗೆ ಕಾಣಿಸಿದುವು.

೮-೯. ಈ ಉತ್ಪಾತವನ್ನು ನೋಡಿ ಸಾಲ್ವನು ತನಗೆ ಮರಣವು ಸನ್ನಿಹಿತವಾಯಿತೆಂದು ನಿರ್ಧರಿಸಿಕೊಂಡನು. ಆದರೂ ಅವನು ಚತುರಂಗಬಲಸಹಿತನಾಗಿ ಈಶ್ವರನೊಡನೆ ಯುದ್ಧಮಾಡಬೇಕೆಂದು ಕೈಲಾಸಪರ್ವತವನ್ನು ಕುರಿತು ಪ್ರಯಾಣ ಮಾಡಿದನು.

ಯುದ್ಧೋತ್ಸುಕೇ ದೈತ್ಯಪತೌ ಪ್ರಯಾತೇ
ವ್ಯದೃಶ್ಯತಾಗ್ರೇಚರಚಂಡವೇಗಃ ।
ರಾಮಃ ಪ್ರವಾಳಾರುಣಕೋಮಲೇನ
ದೀಪ್ತಪ್ರತಾಪೇನವಿರಾಜಮಾನಃ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಸಾಲ್ವಸೇನಾದುರ್ನಿಮಿತ್ತ ದರ್ಶನಂ ನಾಮ ಷಟ್‌ಚತ್ವಾರಿಂಶತ್ತಮೋಧ್ಯಾಯಃ



೧೦. ಸಾಲ್ವನು ಯುದ್ಧೋತ್ಸಾಹದಿಂದ ಹೊರಟು ಮುಂದೆ ಬರುತ್ತಿರುವಲ್ಲಿ ಪ್ರಚಂಡಪರಾಕ್ರಮಶಾಲಿಯಾದ ಪರಶುರಾಮನು ಹವಳದಂತೆ ಇರುವ ಅರುಣ ಕೋಮಲಮುಖದಿಂದಲೂ, ದೀಪದ ಪ್ರಕಾಶದಂತೆಯೂ ಪ್ರಕಾಶಿಸುತ್ತಾ ಸಾಲ್ವನ ಕಣ್ಣಿಗೆ ಕಾಣಿಸಿಕೊಂಡನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಸಾಲ್ವಸೇನಾ ದುರ್ನಿಮಿತ್ತದರ್ಶನವೆಂಬ ಹೆಸರಿನ ನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಸಪ್ತಚತ್ವಾರಿಂಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ವಹ್ನಿಜ್ವಾಲಾಗ್ರವರ್ಣೇನ ಜಟಾಜೂಟೇನ ರಾಜಿತಂ ।
ಗಗನಾರ್ಧಮಿವಾಽಽರೂಢಂ ನಿದಾಘೇ ರವಿಮಂಡಲಂ ॥ ೧ ॥

ಆಧಾರಂ ಸರ್ವದೇವಾನಾಂ ತಪಸಾದ್ಯೋತಿತಪ್ರಭಂ ।
ಸೇವಮಾನಮಿವಾಸೀನಂ ಪೀತಗಾತ್ರಮರಿಂದಮಂ ॥ ೨ ॥

ಏಕಮೇಕಾಕಿನಂ ವೀರಂ ಸಹಸ್ರಶತಮಂಡಿತಂ ।
ಪಿಂಡಿತಂ ಸಕಲಂ ಧಾಮ ಬ್ರಹ್ಮಕ್ಷತ್ರಿಯ ತೇಜಸಾಂ ॥ ೩ ॥

---

### ನಲವತ್ತೇಳನೆಯ ಅಧ್ಯಾಯವು

೧–೭ ಮಾರ್ಕಂಡೇಯನು ಹೇಳುತ್ತಾನೆ—ಸಾಲ್ವನಿಗೆ ಗೋಚರನಾದ ಆ ಪರಶುರಾಮನು ಹೇಗಿದ್ದನೆಂದರೆ- ಯಜ್ಞೇಶ್ವರನ ಜ್ವಾಲೆಯ ತುದಿಯಂತೆ ಕಾಣಿಸುತ್ತಿರುವ ಜಟಾಸಮೂಹದಿಂದ ಕೂಡಿದವನಾಗಿ ಸೂರ್ಯಮಂಡಲವು ಆಕಾಶದ ಅರ್ಧ ಭಾಗವನ್ನು ವ್ಯಾಪಿಸಿಕೊಳ್ಳುತ್ತಲಿದೆಯೋ ಎಂಬಂತೆ ಕಾಣಿಸುತ್ತಿದ್ದನು. ಇವನೇ ಸರ್ವ ದೇವತೆಗಳಿಗೂ ಆಧಾರನು. ತಪಸ್ಸಿನಿಂದ ಪ್ರಕಾಶಿಸುತ್ತಾ, ಲೋಕೈಕವೀರನೆನಿಸಿದವನು ಈತನೇ. ಬ್ರಹ್ಮ ಕ್ಷತ್ರಿಯಕಾಂತಿಗಳಿಂದ ನೂರಾರು ಸಾವಿರಾರು ಉಂಡೆಗಳಾಗಿ ಮಾಡಲ್ಪಟ್ಟ ಸಕಲ ನಿವಾಸಸ್ಥಾನವೂ ಈ ಮಹಾತ್ಮನೇ. ಕೃಷ್ಣಾಜಿನವನ್ನು ಹೊದೆದು ಪ್ರಕಾಶಿಸುತ್ತಾ, ಬಲದಿಂದ ಕೊಬ್ಬಿದ, ಸೂರ್ಯತೇಜದಿಂದ ಮನೋಹರನಾದ, ಚಿನ್ನದ ದಂಡೆಗಳಂತೆ ಕಾಣುವ ದೋರ್ದಂಡಗಳುಳ್ಳ, ತೀಕ್ಷ್ಣವಾದ ಕೊಡಲಿಯಿಂದ

ಕೃಷ್ಣಾಜಿನೋತ್ತರಾಸಂಗಂಭ್ರಾಜಮಾನಂ ಬಲೋದ್ಧತಂ ।
ಸ್ನಿಗ್ಧಯಾ ರಂಜಿತಮಿವ ಪ್ರಾಯೇಣರವಿತೇಜಸಾ ॥ ೪ ॥

ವಿರಾಜಮಾನಂ ದೋರ್ದಂಡರುಕ್ಮದಂಡೇನ ಭಾಸ್ವತಾ ।
ಪರಶ್ವಧೇನ ತೀಕ್ಷ್ಣೇನ ವಿಮಲಾಕಾಶವರ್ಚಸಾ ॥ ೫ ॥

ತಪಸ್ವಿನಮನಾದೃಶ್ಯಂ ಯಮಕಾಲಾಂತಕೋಪಮಂ ।
ಕಂಪಮಾನಂ ಪದನ್ಯಾಸೈರ್ವಸುಧಾಂ ಸಕಲಾಂ ತಥಾ ॥ ೬ ॥

ಮುಷ್ಣಂತಂ ಸರ್ವತೇಜಾಂಸಿ ಪ್ರಭಾತೇ ರವಿಮಂಡಲಂ ।
ಪ್ರಾಂಶುಂ ಕನಕವರ್ಣಾಂಗಂ ಸಿತಯಜ್ಞೋಪವೀತಿನಂ ॥ ೭ ॥

ಗಂಗಾಯಾಃ ಪ್ರವಹೇಣೈವ ಮೇರುಶೃಂಗಂ ವಿರಾಜಿತಂ ।
ತೇಜಸಾದಹನಾಕಾರಂ ಪ್ರಜಾಸಂಹಾರಕಾರಣಂ ॥ ೮ ॥

ವಿಷಮಂಪ್ರಮಥೇಶಸ್ಯ ತೃತೀಯಮಿವ ಲೋಚನಂ ।
ಅಪ್ರಸಹ್ಯಮನಾವಾರ್ಯಂ ದುರ್ಲಂಘ್ಯಂ ಜೀವಿತಚ್ಛಿದಂ ॥ ೯ ॥

---

ಪ್ರಕಾಶಮಾನವಾದ, ಆಕಾಶದ ಬಣ್ಣದಂತಿರುವ ಕಾಲಾಂತಕಯಮನಂತೆ ಕೋಪಿಷ್ಠನಾದ, ಮಹಾತಪಸ್ವಿಯಾದ ಪರಶುರಾಮನನ್ನು ಸಾಲ್ವನು ನೋಡಿದನು. ಈ ಮಹಾತ್ಮನು ಕಾಲಿಟ್ಟಾಗಲೆಲ್ಲಾ ಭೂಮಿಯು ನಡುಗುತ್ತಿತ್ತು ಸಕಲವಿಧವಾದ ತೇಜಸ್ಸುಗಳೂ ಈ ಮಹನೀಯನ ತೇಜಸ್ಸಿನ ಮುಂದೆ ಮಂಕಾಗಿ ಹೋಗುತ್ತಿದ್ದುವು. ಅತ್ಯಂತ ಉನ್ನತವಾಗಿ ಸುವರ್ಣದ ವರ್ಣದಂತಿರುವ ದೇಹಕಾಂತಿಯಿಂದಲೂ, ಶುಭ್ರವಾದ ಯಜ್ಞೋಪವೀತದಿಂದಲೂ ಪ್ರಕಾಶಿಸುತ್ತಾ,

೮-೧೬. ಗಂಗಾಪ್ರವಾಹದಿಂದ ಮೇರುಶಿಖರವದೆಂತು ಪ್ರಕಾಶಿಸುವುದೋ ಅಂತಹ ತೇಜಸ್ಸಿನಿಂದ ಸುಡುತ್ತಿರುವ ಆಕಾರವುಳ್ಳವನಾಗಿಯೂ, ಪ್ರಜಾ ಸಂಹಾರಕನಾಗಿಯೂ, ಈಶ್ವರನ ಮೂರನೇ ಕಣ್ಣಿನಂತೆ ಪ್ರಕಾಶಿಸುವವನೂ,ಅನಾದ್ಯ ವಿದ್ಯಾಸಂಹಾರ

ಕಾಲೇನೇವ ಭುಜಂ ಸವ್ಯಂ ದೈತ್ಯ ಹೇತೋಃ ಪ್ರಸಾರಿತಂ ।
ರಾಮೇದೃಷ್ಟಿಪಥಂ ಪ್ರಾಪ್ತೇ ದಾನವಾನಾಂ ಸಮಂತತಃ ॥ ೧೦ ॥

ಹಾಹಾಕಾರೋ ಮಹಾನಾಸೀತ್ತಮೇಕಂ ನಿಘ್ನತಾಂ ರಣೇ ।
ಶಸ್ತ್ರಧಾರಣವಿಭ್ರಷ್ಟ ಬ್ರಾಹ್ಮಣ್ಯಂ ಸ್ವಪಥಾತ್‌ಚ್ಯುತಂ ॥ ೧೧ ॥

ಘಾತಯಧ್ವಂ ದುರಾಚಾರಮೇನಮೂಚುಃ ಪರಸ್ಪರಂ ।
ಏವಮಾದ್ರವತಾಂ ತೇಷಾಂ ಬಹೂನಾಮಾತತಾಯಿನಾಂ ॥ ೧೨ ॥

ಜಗ್ರಾಹ ವೇಗಂ ಸರ್ವೇಷಾಂ ಮರುತಾಮಿವ ಪರ್ವತಃ ।
ಸ ಹನ್ಯಮಾನೋ ನಾರಾಚೈಸ್ತೋಮರೈರ್ಮುಸಲೈಸ್ತಥಾ ॥ ೧೩ ॥

ಗದಾಭಿರಸಿಭಿಃ ಪಾಶೈರ್ಭುಶುಂಡಿಭಿರಯೋಗುಡೈಃ ।
ಪಟ್ಟಿಸೈರ್ಭಿಂಡಿಪಾಲೈಶ್ಚ ಹುತ್ಯೈಃ ಶೂಲೈಃ ಪರಶ್ವಧೈಃ ॥ ೧೪ ॥

ನ ವಿವ್ಯಥೇ ಹ್ಯಮೇಯಾತ್ಮಾ ಧರಾಧರ ಇವಾಽನಿಲೈಃ ॥ ೧೫ ॥

ಸಂವೇಷ್ಟಿತಂ ಸರ್ವತ ಏವಸೈನ್ಯೈ
ರದೃಷ್ಟಯುದ್ಧೋಽಪಿ ರಣೇ ಮಹಾತ್ಮಾ ।
ದೈತ್ಯಾರ್ಣವಂ ಗೋಷ್ಪದತುಲ್ಯ
ಮಾತ್ರಮಮನ್ಯತಾಜೌ ರಣಚಂಡವೇಗಃ ॥ ೧೬ ॥

ಇತಿ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಯುದ್ಧೇ ಭಾರ್ಗವರಾಮ
ದರ್ಶನಂನಾಮ ಸಪ್ತಚತ್ವಾರಿಂಶತ್ತಮೋಧ್ಯಾಯಃ

---

ಕಾರಣನಾಗಿಯೂ, ಕ್ಷತ್ರಿಯ ಸಂಹಾರಕ್ಕೋಸ್ಕರ ಬಲತೋಳನ್ನೆತ್ತಿಕೊಂಡಿರುವವನಾಗಿಯೂ ಇರುವ ಪರಶುರಾಮನು ಸಕಲದೈತ್ಯರ ನೇತ್ರಗಳಿಗೂ ಗೋಚರಿಸಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಭಾರ್ಗವರಾಮದರ್ಶನವೆಂಬ ಹೆಸರಿನ
ನಲವತ್ತೇಳನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಅಷ್ಟಚತ್ವಾರಿಂಶತ್ತಮೋಧ್ಯಾಯಃ

---

**॥ ಮಾರ್ಕಂಡೇಯ ಉವಾಚ ॥**

**ಸಿಂಹಿಕಾ ಪುತ್ರಸೈನ್ಯೇನ ಹನ್ಯಮಾನಸ್ತದಾ ರಣೇ ।**
**ಗೋಚರಾಭ್ಯಾಗತಾನ್ಸರ್ವಾನ್ರಾಮೋ ನಿನ್ಯೇ ಯಮಕ್ಷಯಂ ॥ ೧ ॥**

**ತೇನಕೃತ್ತಾಃ ಪರಶುನಾ ಯಥಾ ಪರಶುನಾ ಮೃಗಾಃ ।**
**ಆಲಿಂಗ್ಯ ಶೇರತೇ ಕ್ಷೋಣೀಂ ದಾನವಾಸ್ತೇಮದೋದ್ಧತಾಃ ॥ ೨ ॥**

**ತೀಕ್ಷ್ಣಧಾರಾಗ್ರದುಷ್ಪ್ರೇಕ್ಷ್ಯ ಕುಠಾರಚ್ಛಿನ್ನಮಸ್ತಕೈಃ ।**
**ಆತತಾರ ತದಾ ಭೂಮಿಂ ಕುಶೈರ್ವೇದಿಮಿವಾಧ್ವರೇ ॥ ೩ ॥**

---

### ನಲವತ್ತೆಂಟನೇ ಅಧ್ಯಾಯ.

೧. ಮಾರ್ಕಂಡೇಯನು ಹೇಳುತ್ತಾನೆ— ಸೈಂಹಿಕೇಯನ ಸೈನಿಕರಿಂದ ಹೊಡೆಯಲ್ಪಟ್ಟ ಆ ಪರಶುರಾಮನು ತನ್ನ ಕಣ್ಣಿಗೆ ಕಂಡ ಸೈನಿಕರನ್ನೆಲ್ಲಾ ಯುದ್ಧದಲ್ಲಿ ಯಮಪುರಕ್ಕೆ ಅಟ್ಟಿದನು.

೨. ಕೊಡಲಿಯಿಂದ ಕತ್ತುಕತ್ತರಿಸಲ್ಪಟ್ಟ ಮೃಗಗಳು ಭೂಮಿಯಲ್ಲಿ ಹೇಗೆ ಒರಗಿಬೀಳುವುವೋ ಆ ರೀತಿಯಾಗಿ ಮದೋದ್ಧತರಾದ ರಾಕ್ಷಸರು ಪರಶುರಾಮನ ಕೊಡಲಿಯ ಏಟಿನಿಂದ ಭೂಮಿಯಲ್ಲಿ ಸತ್ತುಬಿದ್ದರು.

೩. ಯಜ್ಞದಲ್ಲಿ ದರ್ಭೆಗಳಿಂದ ವಿಸ್ತರಿಸಲ್ಪಟ್ಟ ವೇದಿಕೆಯಂತೆ ತೀಕ್ಷ್ಣಧಾರೆಯುಳ್ಳ ತುದಿಯಿಂದ ಕೂಡಿದ (ಹರಿತವಾದ) ಕೊಡಲಿಯಿಂದ ಕತ್ತರಿಸಲ್ಪಟ್ಟ ದಾನವರ ಕತ್ತುಗಳಿಂದ ಆ ರಣಭೂಮಿಯು ಹರಡಿಹೋಯಿತು.

ಪರಶ್ವಧಾಗ್ರಸಂಭಿನ್ನದೈತ್ಯದೇಹಸಮುದ್ಭವಂ ।
ಪ್ರಸುಸ್ರಾವ ತದಾ ರಕ್ತಂ ಯೇನಾಸೀತ್ಕರ್ದಮಂ ಮಹತ್ ॥ ೪ ॥

ತೇ ಹನ್ಯಮಾನಾ ರಾಮೇಣ ರಾಮಮೇವಾऽಭಿದುದ್ರುವುಃ ।
ಪರಿಪೂರ್ಣೇ ಯಥಾ ಕಾಲೇ ಶಲಭಾ ಜಾತವೇದಸಂ ॥ ೫ ॥

ರಾಮಸ್ಯ ಪ್ರಮುಖೇ ದೈತ್ಯಾಸ್ತದಾ ತಿಷ್ಠಂತಿಯೇ ನೃಪ ।
ನಿಮೇಷಾಂತರಮಾತ್ರೇಣ ತೇಪ್ರಯಾಂತಿ ಯಮಕ್ಷಯಂ ॥ ೬ ॥

ಕುಂಜರಸ್ತುರಗಃ ಪತ್ತಿರ್ನಾಗಜೌ ಯಾದವ ದೃಶ್ಯತೇ ।
ದ್ವಿತೀಯಂ ಪ್ರದದೌ ಯಸ್ಯ ಪ್ರಹಾರಂ ಭೃಗುನಂದನಃ ॥ ೭ ॥

ಏಕಪ್ರಹಾರಾಭಿಗತಾನ್ದಾನವಾನ್ಪರ್ವತೋಪಮಾನ್ ।
ಅಪಶ್ಯಾಮ ರಣೇ ತತ್ರ ಬ್ರಹ್ಮಣಾ ಸಹಿತಾ ವಯಂ ॥ ೮ ॥

---

೪-೫. ಪರಶುರಾಮನಿಂದ ಹತರಾದ ಸೈನಿಕರು ಪರಶುರಾಮನ ಬಳಿಗೇಬಂದು ಸೇರಿಕೊಳ್ಳುತ್ತಿದ್ದುದನ್ನು ನೋಡಿದರೆ ಕಾಲವು ಸಮೀಪಿಸಿ ಬಂದ ಕೂಡಲೇ ಪತಂಗದ ಹುಳುಗಳು ಬೆಂಕಿಯನ್ನು ಹಣ್ಣೆಂದು ಭ್ರಮಿಸಿ ಬೆಂಕಿಗೇ ಬಿದ್ದು ಸಾಯುವಂತೆ ತೋರುತ್ತಿತ್ತು.

೬. ಪರಶುರಾಮನ ಮುಂದೆ ಬಂದು ಯಾವಯಾವ ರಾಕ್ಷಸರು ನಿಂತುಕೊಳುತ್ತಿದ್ದರೋ ಅವರೆಲ್ಲರೂ ಆತನ ಜ್ವಾಲೆಯಿಂದ ಒಂದು ನಿಮಿಷದೊಳಗಾಗಿ ಯಮನ ಸಮಾಪವನ್ನು ಹೊಂದುತ್ತಿದ್ದರು.

೭. ಪರಶುರಾಮನು ಎರಡನೇ ಏಟನ್ನು ಹೊಡೆದಮೇಲೆ ಆನೆ ಕುದುರೆ ಕಾಲಾಳುಗಳೊಂದೂ ಆ ಯುದ್ಧರಂಗದಲ್ಲಿ ಕಾಣುತ್ತಲೇ ಇರಲಿಲ್ಲ

೮. ಕೊಡಲಿಯ ಒಂದೇ ಏಟಿಗೆ ಸತ್ತುಬಿದ್ದ ಬೆಟ್ಟದರಾಶಿಯಂತಹ ರಾಕ್ಷಸರ ಸೈನ್ಯವನ್ನು ನಾವು ಬ್ರಹ್ಮನಿಂದ ಸಹಿತರಾಗಿ ಹೋಗಿ ಅಲ್ಲಿ ನೋಡಿದೆವು.

ರಾಮೇಣಹನ್ಯಮಾನಾನಾಂ ದಾನವಾನಾಂ ಮುಹುರ್ಮುಹುಃ ।
ಆರಾವಃಶ್ರೂಯತೆ ಘೋರೋ ವನಾನಾಮಿವದಹ್ಯತಾಂ ॥ ೯ ॥

ಆಕ್ರಮ್ಯ ಪದ್ಭ್ಯಾಂ ತರಸಾ ರಥಸ್ಥಾನಾಮಥಾಹರತ್ ।
ಶೀರ್ಷಾಣಿ ತೇನತೀಕ್ಷ್ಣೇನ ತಥಾ ಪರಶುನಾ ರಣೇ ॥ ೧೦ ॥

ರಾಮೇಣಾಕ್ರಮ್ಯಮಾಣೇಷು ರಥೇಷು ರಥಯೂಥಪಾಃ ॥
ಭೂಮೌ ನಿವಿಷ್ಟಮೂರ್ಧಾನಸ್ತತ್ಯಜುರ್ಜೀವಿತಂ ಹಯಾಃ ॥ ೧೧ ॥

ನಿಷ್ಪಿಪೇಷ ರಥಸ್ಥಾನಾಂ ದಾರಯನ್ಕುಂಜರಾನ್ರಣೇ ।
ಬಭ್ರಮೋ ತತ್ರತತ್ರೈಕಃ ಕಾಲೋತ್ಸೃಷ್ಟ ಇವಾಂತಕಃ ॥ ೧೨ ॥

ವಿಚ್ಛಿಂದನ್ಯೋಧಶೀರ್ಷಾಣಿ ರಣೇ ರಾಮೋ ರಥಾದ್ರಥಂ ।
ವ್ರಜನ್ಭಾತಿ ವಿಶಾಲಾಕ್ಷೋ ವೃಕ್ಷಾತ್ವೃಕ್ಷಮಿವಾಽಣ್ಡಜಃ ॥ ೧೩ ॥

---

೯. ಕಾಡುಗಿಚ್ಚಿನಿಂದ ಸುಡಲ್ಪಡುತ್ತಿರುವ ಕಾಡಿನಲ್ಲಿ ಹೇಗೆ ಮೃಗಗಳ ಆರ್ತಧ್ವನಿ ಕೇಳಿಬರುವುದೋ ಅದರಂತೆ ಬಾರಿಬಾರಿಗೂ ಪರಶುರಾಮನಿಂದ ಸಂಹೃತರಾಗುತಲಿದ್ದ ದಾನವರ ಆರ್ತಧ್ವನಿಯು ಕೇಳಿಬರುತ್ತಿತ್ತು.

೧೦–೧೨. ರಥದಲ್ಲಿದ್ದ ಸೈನಿಕ ಜನರನ್ನು ಪಾದಗಳಿಂದ ಮೆಟ್ಟಿಕೊಂಡು ಸಿಗಿಯುತ್ತಲೂ ಅವರ ತಲೆಗಳನ್ನು ತೀಕ್ಷ್ಣವಾದ ಕೊಡಲಿಯಿಂದ ತರಿಯುತ್ತಲೂ ಬಂದನು. ಈರೀತಿ ರಥದಲ್ಲಿದ್ದ ರಥಿಕರು ಸಾಯುತ್ತ ಬರಲು ರಥಕ್ಕೆ ಕಟ್ಟಿದ್ದ ಕುದುರೆಗಳು ನೆಲದ ಮೇಲೆ ಕತ್ತನ್ನು ಚಾಚಿ ಬಿದ್ದುಕೊಂಡು ಪ್ರಾಣವನ್ನು ಬಿಡುತ್ತಿದ್ದುವು.

೧೩. ರಥದಲ್ಲಿ ಕುಳಿತಿದ್ದ ಯೋಧರ ತಲೆಗಳನ್ನು ಕತ್ತರಿಸಿದ ಬಳಿಕ ಬೇರೊಂದು ರಥದ ಬಳಿಗೆ ಹೋಗುತ್ತಿದ್ದ ಶೂರನಾದ ಪರಶುರಾಮನನ್ನು ನೋಡಿದರೆ ಮರದಿಂದ ಮರಕ್ಕೆ ಹಾರುತ್ತಿದ್ದ ಪಕ್ಷಿಯಂತೆ ಕಾಣುತ್ತಿತ್ತು.

**ಸ ಶರಾಂಚಿತಸರ್ವಾಂಗಃ ಶೋಣಿತೇನ ಸಮುಕ್ಷಿತಃ ।**
**ರರಾಜ ರಾಮಃ ಸಮರೇ ರಶ್ಮಿಮಾನಿವಭಾಸ್ಕರಃ ॥ ೧೪ ॥**

**ದೈತ್ಯಬಾಹುವಿನಿರ್ಮುಕ್ತಾನಾಮಾಯುಧಾಂಚ್ಛತಶಸ್ತಥಾ ।**
**ಪರಶ್ವಧಾಗ್ರೇಣ ರಣೇ ಚಿಚ್ಛೇದ ರಣಕರ್ಕಶಃ ॥ ೧೫ ॥**

**ತೇಷಾಂ ಸಂಛಿದ್ಯಮಾನಾನಾಂ ಪ್ರಾದುರಾಸೀದ್ಧುತಾಶನಃ ।**
**ಯೇನ ತಾನೇವ ತರಸಾ ಕ್ಷಿತೌ ಚಕ್ರೇಸ ಭಸ್ಮಸಾತ್ ॥ ೧೬ ॥**

**ಬಹುತ್ವಾದ್ದೈತ್ಯಯೋಧಾನಾಂ ರಾಮಸ್ಸಂಛಾದಿತೋ ರಣೇ ।**
**ಹೇತಿಪುಂಜೇನ ಮಹತಾ ಶೈಲಾಭೇನ ನ ದೃಶ್ಯತೇ ॥ ೧೭ ॥**

**ಹೇತಿಪುಂಜಂ ವಿಧೂಯೋಗ್ರಮಭ್ರಪುಂಜಂ ಯಥಾ ರವಿಃ ।**
**ಪುನರ್ದರ್ಶನಮಾಯಾತಿ ಸಂಹರ್ತಾ ದೈತ್ಯತೇಜಸಾಂ ॥ ೧೮ ॥**

---

೧೪. ತನ್ನ ಮೇಲೆ ಬಂದು ಬೀಳುತ್ತಿದ್ದ ಬಾಣಗಳು ದೇಹದಲ್ಲಿ ನಾಟಿಕೊಂಡಿರಲು ಸರ್ವಾಂಗವೂ ರಕ್ತದಿಂದ ಸೋರುತ್ತಿರಲು ಆ ಪರಶುರಾಮನು ಆ ಕಾಲದಲ್ಲಿ ಸಹಸ್ರಾರು ಕಿರಣಗಳಿಂದ ಕಾಣುತಲಿರುವ ಸೂರ್ಯನಂತೆ ತೋರುತಲಿದ್ದನು.

೧೫. ರಣಭಯಂಕರನಾದ ಆ ಪರಶುರಾಮನು ರಾಕ್ಷಸರ ಬಾಹುಗಳಿಂದ ಬಿಡಲ್ಪಟ್ಟ ನೂರಾರು ಸಾವಿರಾರು ಸಂಖ್ಯಾಕವಾದ ಬಾಣಗಳನ್ನು ಹರಿತವಾದ ಕೊಡಲಿಯ ತುದಿಯಿಂದ ಕತ್ತರಿಸಿಹಾಕುತ್ತಿದ್ದನು.

೧೬. ಹೀಗೆ ಛಿನ್ನಭಿನ್ನಮಾಡಲ್ಪಡುತಲಿರುವ ಆ ರಾಕ್ಷಸರ ಮುಂದೆ ಯಜ್ಞೇಶ್ವರನು ಪ್ರತ್ಯಕ್ಷನಾಗಿ ನಿಂತು ತನ್ನ ಜ್ವಾಲೆಯಿಂದ ಅವರನ್ನು ಬಲುಬೇಗ ಸುಟ್ಟು ಬೂದಿಮಾಡಿದನು.

೧೭. ದೈತ್ಯಯೋದ್ಧರ ಮಹತ್ತರವಾದ ಆ ಸೈನ್ಯದಿಂದ ಮುಚ್ಚಲ್ಪಟ್ಟವನಾದ ಆ ಪರಶುರಾಮನು, ಪರ್ವತದಂತೆ ಎತ್ತರವಾಗಿ ಬಿದ್ದಿದ್ದ ಕತ್ತಿಗಳ ಗುಂಪಿನಲ್ಲಿ ಸಿಕ್ಕಿಹೋಗಿ ಕಣ್ಣಿಗೇ ಕಾಣಿಸದೇ ಹೋದನು.

೧೮. ಸೂರ್ಯನು ಮೇಘಪಂಙ್ತಿಯನ್ನು ಭೇದಿಸಿಕೊಂಡು ಹೇಗೆ ಕಾಣಿಸುವನೋ, ಅದೇ ರೀತಿಯಾಗಿ ಆ ಕತ್ತಿಯ ರಾಶಿಯನ್ನು ಕೊಡಹಿಕೊಂಡು ಆ ಪರಶುರಾಮನು ದೈತ್ಯರ ತೇಜಸ್ಸನ್ನು ಮುರಿದು ಕಣ್ಣಿಗೆ ಕಾಣಿಸಿಕೊಂಡನು.

ಬ್ರಹ್ಮಾ ಸುರಗಣೈಃ ಸಾರ್ಧಮೃಷಿಭಿಶ್ಚ ಮಹಾತ್ಮಭಿಃ ।
ಪೂಜಯಾಮಾಸ ತದ್ಯುದ್ಧಂ ಸಾಧುವಾದೇನ ಯಾದವ ॥ ೧೯ ॥

ದೃಷ್ಟವಂತಶ್ಚ ಧನುಷಾ ಯುದ್ಧಾನಿ ಚ ಮುಹುರ್ಮುಹುಃ ।
ತಥೈವಾಽಶ್ಚರ್ಯಭೂತಾನಿ ಲೋಕಾನಾಂ ಖಡ್ಗಚರ್ಮಣಾ ॥ ೨೦ ॥

ಅಪೂರ್ವ ಏಷ ಸಂಗ್ರಾಮೋ ರಾಮಸ್ಯ ಬಹುಭಿಃ ಸಹ ।
ಪರಶ್ವಧಾಯುಧಸ್ಯೋಗ್ರ ಇತಿ ದೇವಾಸ್ತಥಾಽಬ್ರುವನ್ ॥ ೨೧ ॥

ಪೂಜ್ಯಮಾನಃ ಸ ರಾಮೋಽಪಿ ದೇವಪುಷ್ಪೋತ್ಕರೈಸ್ತದಾ ।
ಚಿಚ್ಛೇದ ಯುಧಿ ದೈತ್ಯಾನಾಂ ಶಿರಾಂಸಿಶ ತಶೋ ರಣೇ ॥ ೨೨ ॥

ದೈತ್ಯಶೋಣಿತದಿಗ್ಧಾಂಗಂ ಭಾರ್ಗವಂ ಲಘುವಿಕ್ರಮಂ ।
ಅಲಾತಚಕ್ರಪ್ರತಿಮಂ ತದಾ ಪಶ್ಯತಿ ಯಾದವ ॥ ೨೩ ॥

---

೧೯. ಬ್ರಹ್ಮನು ಸಕಲ ದೇವತೆಗಳೊಡನೆಯೂ, ಮಹಾತ್ಮರಾದ ಋಷಿಗಳೊಡನೆಯೂ ಕೂಡಿ ಆ ಯುದ್ಧವನ್ನು ಸಾಧುಸಾಧುವೆಂದು ಹೇಳುವ ಮಾತುಗಳಿಂದ ಪೂಜೆಮಾಡಿದನು. (ಅಂದರೆ ಸ್ತುತಿಸಿದನೆಂದರ್ಥ).

೨೦. ಧನುರ್ಯುದ್ಧವನ್ನು ಪುನಃಪುನಃ ನೋಡುತ್ತಾ, ಖಡ್ಗಚರ್ಮಗಳಿಂದ ತುಂಬಲ್ಪಟ್ಟ ಆಶ್ಚರ್ಯಕರವಾದ ಆ ಯುದ್ಧವನ್ನು ದೇವತೆಗಳು ನೋಡಿದರು.

೨೧. ಒಂದೇ ಒಂದು ಕೊಡಲಿಯನ್ನು ತೆಗೆದುಕೊಂಡು ಉಗ್ರನಾದ ಪರಶುರಾಮನು ಬಹುಜನ ರಾಕ್ಷಸರೊಡನೆ ಮಾಡುತ್ತಿರುವೀ ಸಂಗ್ರಾಮವು ಅಪೂರ್ವವಾದುದೆಂದು ದೇವತೆಗಳು ಹೇಳುತ್ತಿದ್ದರು.

೨೨. ಈರೀತಿ ಪ್ರಶಂಸಿತನಾಗಿ ಪರಶುರಾಮನು ದೇವತೆಗಳಿಂದ ಸುರಿಸಲ್ಪಟ್ಟ ಪುಷ್ಪವೃಷ್ಟಿ (ಹೂವಿನ ಮಳೆ) ಯುಳ್ಳವನಾಗಿ, ದೈತ್ಯರ ಶಿರಸ್ಸುಗಳನ್ನು ಸಹಸ್ರಾವಧಿ ತರಿಯುತ್ತಿದ್ದನು.

೨೩. ಎಲೈ, ವಜ್ರಭೂಪಾಲನೇ! ಕೇಳು ದೈತ್ಯರ ರಕ್ತಗಳಿಂದ ಬಳಿಯಲ್ಪಟ್ಟ ಅವಯವವುಳ್ಳಂಥಾ, ಬಹು ಪರಾಕ್ರಮವುಳ್ಳ ಆ ಭಾರ್ಗರಾಮನನ್ನು ಆಗ ನೋಡಿದುದೇ ಆದರೆ ತಿರುಗುತ್ತಿರುವ ಕೊಳ್ಳಿಯ ಚಕ್ರದಂತೆ ಕಾಣಿಸುತ್ತಿತ್ತು.

ಭ್ರಮತಾಽನೇನ ರೌದ್ರೇಣ ರಣೇ ಕಾಲಾಗ್ನಿವರ್ಚಸಾ ।
ಕೃತಾಃ ಸಮರಶೌಂಡೇನ ಭೀಮಾ ರುಧಿರನಿಮ್ನಗಾಃ ॥ ೨೪ ॥

ಪರಶ್ವಧಾಗ್ರವಿಕ್ಷೇಪಗತಜೀವಿತಕುಂಜರೈಃ ।
ಪಾದೋಪಲೈಶ್ಚ ಸಮರೇ ಪ್ರತಸ್ತಾರ ಸ ಭಾರ್ಗವಃ ॥ ೨೫ ॥

ದಂತಿದಂತಪದನ್ಯಾಸಪ್ರಾಪ್ತಂ ಕುಂಜರಮಸ್ತಕಂ ।
ವಿನಿಘ್ನನ್ಸ ಗಜಾರೋಹಾಂಚ್ಛ್ಯೇನವದ್ವಿಚರನ್ ಲಘು ॥ ೨೬ ॥

ಆರುಹ್ಯ ಕುಂಜರಂಚೈಕಂ ಕುಂಜರಾತ್ಕುಂಜರಾಂತರಂ ।
ಅಪಶ್ಯಾಮ ರಣೇ ರಾಮಂ ವಿಚರಂತಂ ಯಥಾಸುಖಂ ॥೨೭॥

ಭೂಯೋ ಭೂಮಿಗತೋ ರಾಮಃ ಕುಂಜರಾಣಾಂ ಪರಶ್ವಧಾ ।
ಚಕಾರ ಕದನಂ ಘೋರಂ ಪ್ರಲಯಾಗ್ನಿರಿವೋತ್ಥಿತಃ ॥ ೨೮ ॥

---

೨೪. ಈ ರೀತಿ ಕೊಳ್ಳಿಯ ಚಕ್ರದಂತೆ ಸುತ್ತುತ್ತಿದ್ದ, ಕಾಲಾಗ್ನಿ ತೇಜಸ್ಸಿನಿಂದ ಕೂಡಿದ, ಆ ಸಮರವೀರನಾದ ಪರಶುರಾಮನಿಂದ ಆ ಯುದ್ಧದಲ್ಲಿ ಭಯಂಕರವಾದ ಅನೇಕ ರಕ್ತದ ನದಿಗಳು ನಿರ್ಮಾಣಮಾಡಲ್ಪಟ್ಟವು.

೨೫. ಕೊಡಲಿಯ ಏಟಿನಿಂದ ಪ್ರಾಣಬಿಟ್ಟ ಆನೆಗಳ ಕಾಲುಗಳೆಂಬ ಕಲ್ಲು ಬಂಡೆಗಳನ್ನು ಆ ರಾಮನು ಸಮರಾಂಗಣದಲ್ಲಿ ದಾಟಿಕೊಂಡು ನಡೆಯುತ್ತಿದ್ದನು.

೨೬. ಆ ಆನೆಗಳೆಂಬ ಕಲ್ಲುಗಳನ್ನು ದಾಟುವಾಗ ವಿಘ್ನರೂಪವಾಗಿ ಬಿದ್ದ ಆನೆಗಳ ಕೊಂಬುಗಳಿಂದ ವಿಸ್ತೃತವಾದ ಬೆಟ್ಟದಂತಹ ಆನೆಯ ತಲೆಗಳನ್ನು ಪರಶು ರಾಮನು ಗಿಡಗನಂತೆ ಹಾರಿ ಸುಲಭವಾಗಿ ದಾಟುತ್ತಿದ್ದನು.

೨೭. ಒಂದು ಆನೆಯ ಮೇಲೆ ಹತ್ತಿ ಮತ್ತೊಂದಾನೆಯ ಮೇಲೆ ಹಾರುತ್ತಾ ಇದ್ದ ಆ ಪರಶುರಾಮನು ರಣರಂಗದಲ್ಲಿ ಇಚ್ಛಾನುಸಾರವಾಗಿ ಆಟವಾಡುತ್ತಿದ್ದಂತೆ ಕಾಣುತ್ತಿದ್ದನು

೨೮-೩೩. ಈ ರೀತಿ ಆಟವಾಡಿದನಂತರ ಪರಶುರಾಮನು ಪುನಃ ಯುದ್ಧ ಭೂಮಿಯಲ್ಲಿ ನಿಂತು ಗಜಯುದ್ಧಕ್ಕೆ ಆರಂಭಿಸಿದನು. ಪರಶುರಾಮನಿಂದಾದ ಈ

ಭಿನ್ನಾಗ್ರಹಸ್ತಾನ್ ವಿರದಾರ್ದ್ವಿರದಾಂಚ್ಛೋಣಿತೋಕ್ಷಿತಾನ್ ।
ಕ್ಷಿತೌ ಗತ್ವಾನ ಪಶ್ಯಾಮಃ ಶ್ಯಾಮೀಕೃತದಿಗಂತರಾನ್ ॥ ೨೯ ॥

ಏವಂ ಹಿ ಯುಧ್ಯತಾ ತೇನ ರಣೇ ಕಾಲಾಗ್ನಿವರ್ಚಸಾ ।
ಹತಾನಿ ದಾನವೇಂದ್ರಾಣಾಂ ಪ್ರಯುತಾನ್ಯರ್ಬುದಾನಿ ಚ ॥ ೩೦ ॥

ಏಷಾಂ ಪ್ರಹಾರಂ ಸಂಸೋಢುಂ ಸೇಯಂ ಶಕ್ತಾವಸುಂಧರಾ ।
ತೇಷಾಂ ಪ್ರಹಾರಭಿನ್ನಾಂಗೋ ನೈವ ರಾಮೋ ವ್ಯಕಂಪತ ॥ ೩೧ ॥

ದೃಷ್ಟ್ವಾ ಪ್ರಹಾರವೈಕ್ಲಬ್ಯಂ ನಿಹತಾಂಶ್ಚ ಮಹಾಸುರಾನ್ ।
ಪ್ರದುದ್ರುವುರ್ದೈತ್ಯಗಣಾಃ ಸಾಲ್ವಂ ಶರಣಮಾಹವೇ ॥ ೩೨ ॥

ಅಲ್ಪಾವಶಿಷ್ಟಾನ್ ದಿತಿಜಾನ್ ಪ್ರನಷ್ಟಾನ್
ಸಂವೀಕ್ಷ್ಯ ಸಾಲ್ವಃಸ್ವಹಿತೇನಿವಿಷ್ಟಃ ।

---

ಯುದ್ಧವು ನಡೆದುದನ್ನು ನೋಡಿದರೆ ಮೇಲಕ್ಕೆದ್ದು ಬಂದ ಬಡಬಾಗ್ನಿಯೋ ಎಂಬಂತೆ ತೋರುತ್ತಿತ್ತು. ಕಾಲುಗಳನ್ನೂ ಸೊಂಡಿಲುಗಳನ್ನೂ ಮುರಿದುಕೊಂಡು ಆನೆಗಳು ಭೂಮಿಯಲ್ಲಿಬಿದ್ದವು. ದೈತ್ಯರು ಬಿದ್ದು ಪ್ರಾಣಕಳೆದುಕೊಂಡುದನ್ನು ಲೆಖ್ಖಮಾಡಿ ನೋಡಲಾಗಿ ಒಂದು ಕೋಟಿ ಹತ್ತುಲಕ್ಷ ಜನ ರಾಕ್ಷಸರು ಸತ್ತಂತೆ ತಿಳಿಯಬಂತು. ಇಷ್ಟು ಜನರ ಪ್ರಹಾರವನ್ನು ಧರಿಸಲು ಭೂಮಿಗೆ ಶಕ್ತಿಯೇ ಇರಲಿಲ್ಲ. ಇಷ್ಟು ಜನರ ಏಟಿನಿಂದ ಪರಶುರಾಮನ ದೇಹವು ಕ್ಷತವಿಕ್ಷತವಾಗಿದ್ದಾಗ್ಯೂ ಸ್ವಲ್ಪವಾದರೂ ಅಳುಕ ಲಿಲ್ಲ. ಪರಶುರಾಮನ ಪ್ರಹಾರವೈಕಲ್ಯವನ್ನೂ ಇಷ್ಟುಜನ ರಾಕ್ಷಸರು ಸತ್ತುಹೋದು ದನ್ನೂ ನೋಡಿ ಹತಶೇಷರಾದ ರಾಕ್ಷಸರು ಏನೂತೋರದೆ ಸಾಲ್ವನ ಹತ್ತಿರಕ್ಕೆ ಬಂದು ಶರಣವನ್ನು ಕೋರಿದರು. ಈ ರೀತಿ ಬಹುಸಂಖ್ಯಾಕ ರಾಕ್ಷಸರು ಮೃತರಾದು ದನ್ನೂ, ವುಳಿದ ಅಲ್ಪಸ್ವಲ್ಪ ಜನರು ತನ್ನ ಬಳಿಗೆ ಬಂದು ಮರೆಹೊಕ್ಕುದನ್ನೂ

**ರಾಮಂ ಯಯೌ ತೇನ ಗಜೇನ ಯುದ್ಧೇ**
**ರಾಮಾದ್ರಣೇ ಯುದ್ಧಮಭೀಪ್ಸಮಾನಃ** ॥ ೩೩ ॥

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಸಾಲ್ವಸೈನ್ಯವಧೋ ನಾಮ ಅಷ್ಟಚತ್ವಾರಿಂಶತ್ತಮೋಧ್ಯಾಯಃ**

---

ನೋಡಿ ಸಾಲ್ವನು ತನ್ನ ಗಜದ ಮೇಲೆ ಏರಿ ಹಾಗೆಯೇ ಯುದ್ಧರಂಗದಲ್ಲಿ ಪರಶುರಾಮನನ್ನೆದುರಿಸಿ ಅವನೊಡನೆ ಯುದ್ಧಮಾಡಲು ಹೊರಟನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಸಾಲ್ವಸೈನ್ಯವಧೆಯೆಂಬ ಹೆಸರಿನ ನಲವತ್ತೆಂಟನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಏಕೋನಪಂಚಾಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ತತಃ ಸಾಲ್ವೋ ಮಹಾತೇಜಾಃ ಕುಂಜರೇಣ ತರಸ್ವಿನಾ ।
ಅರ್ಪಯಾಮಾಸ ಧರ್ಮಜ್ಞ ರೇಣುಕಾನಂದ ವರ್ಧನಂ ॥ ೧ ॥

ಸ್ತಬ್ಧಕರ್ಣೋ ವಿವೃತ್ತಾಕ್ಷಃ ಕೃತ್ವಾ ಕುಂಡಲಿನಂ ಕರಂ ।
ಗ್ರೀವಾಂ ಸಂಚಾಲಯನ್ನಾಗೋ ಯಯೌ ಗಜಮದೋದ್ಧತಂ ॥ ೨ ॥

ದೃಷ್ಟ್ವಾಽಽಪತತಸ್ತಸ್ಯ ವೇಗಂ ರಾಮೋಽಪಿ ತಂ ಗಜಂ ।
ಹುಂಕಾರಮಾತ್ರೇಣ ರಣೇ ಸ್ತಂಭಯಾಮಾಸ ವೇಗಿತಂ ॥ ೩ ॥

---

## ನಲವತ್ತೊಂಭತ್ತನೆಯ ಅಧ್ಯಾಯ

೧. ಮಾರ್ಕಂಡೇಯನು ಹೇಳುತ್ತಾನೆ:- ಅನಂತರ ಆ ಸಾಲ್ವನು ಮಹಾ ವೇಗಶಾಲಿಯಾದ ಆನೆಯೊಡನೆ ಪರಶುರಾಮನ ಎದುರಿಗೆ ಬಂದು ಮೇಲೆ ಬಿದ್ದನು.

೨-೩. ಆ ಆನೆಯು ಕಿವಿಗಳನ್ನಲ್ಲಾಡಿಸದೆ ಕಣ್ಣನ್ನು ತಿರುಗಿಸುತ್ತಾ ಸೊಂಡಲನ್ನು ಕುಂಡಲಾಕಾರವಾಗಿ ಸುತ್ತಿಕೊಂಡು ಕತ್ತನ್ನಲ್ಲಾಡಿಸುತ್ತಾ ಬಹು ವೇಗದಿಂದ ಕೊಬ್ಬಿ ಪರಶುರಾಮನ ಮೇಲೆ ಬೀಳುವುದಕ್ಕೆ ಬಂತು. ಹೀಗೆ ಮೇಲೆ ಬೀಳಲು ಓಡಿ ಬಂದ ಆ ಆನೆಯ ವೇಗವನ್ನು ಕಂಡು ಪರಶುರಾಮನು ಒಂದಾವರ್ತಿ ಹುಂಕಾರ ಮಾಡಲು; ಆ ಆನೆಯ ವೇಗವು ಥಟ್ಟನೆ ನಿಂತುಹೋಯಿತು.

**ಸ್ತಂಭಯಾಮಾಸ ನಾಗೇಂದ್ರಂ ಶೈಲೇಂದ್ರಶಿಖರೋಪಮಂ ।**
**ತಸ್ಥೌ ಸ ಪುರತಸ್ತಸ್ಯ ಸಾಲ್ವಸ್ಯ ಸಮರಪ್ರಿಯಃ ॥ ೪ ॥**

**ಪರಶುಂ ರುಧಿರಾಕ್ತಾಂಗಂ ಸಕಲಂಕಮಲಂ ಕರೇ ।**
**ಧಾರಯನ್ ವಿಷ್ಣುವದ್ಭಾತಿ ಸಕಲಂಕಮಲಂಕರೇ ॥ ೫ ॥**

**ದಂತಿನಾ ದಂತಿನಃ ಪೃಷ್ಠಂ ರಾಮಸ್ಯಾಽಽರೋಢುಮಿಚ್ಛತಃ ।**
**ಜಹಾರ ವೇಗವಾನ್ವೇಗಂ ಶರೈಃ ಸನ್ನತಪರ್ವಭಿಃ ॥ ೬ ॥**

**ಸಾಲ್ವಸಾಯಕಸಂಘಾತವಿಮುಖೀ ಕೃತವಿಕ್ರಮಂ ।**
**ರಾಮಂ ರಣೇ ದೈತ್ಯಗಣಾಶ್ಛಾದಯಂತಿ ವರಾಯುಧೈಃ ॥ ೭ ॥**

**ಮಹತಾ ಸೋಽಽಸ್ತ್ರಪುಂಜೇನ ರಾಮಃ ಸಂಛಾದಿತೋ ರಣೇ ।**
**ನಿಮೀಲಿತಾಕ್ಷಶ್ಚಿಕ್ಷೇಪ ಸಾಲ್ವಾಯ ಪರಶುಂ ತದಾ ॥ ೮ ॥**

---

೪. ಯುದ್ಧಪ್ರಿಯನಾದ ಆ ಪರಶುರಾಮನು ಈರೀತಿ ಹಿಮವತ್ಪರ್ವತದಂತೆ ಎತ್ತರವಾದ ಆ ಆನೆಯನ್ನು ಸ್ತಂಭಿಸಿ, ಸಾಲ್ವನ ಮುಂದೆ ಬಂದು ನಿಂತುಕೊಂಡನು.

೫. ರಕ್ತದಿಂದ ನೆನೆಸಲ್ಪಟ್ಟು ಕಳಂಕದಿಂದಲೂ ಅಶುದ್ಧಿಯಿಂದಲೂ ಕೂಡಿದ ಕೊಡಲಿಯನ್ನು ಕೈಯ್ಯಲ್ಲಿ ಹಿಡಿದು, ಆ ಪರಶುರಾಮನು ಆ ಸಮರಾಂಗಣದಲ್ಲಿ ವಿಷ್ಣುವಿನಂತೆ ಹೋಗುತ್ತಿದ್ದನು.

೬-೭. ಪರಶುರಾಮನೆಂಬ ಆನೆಯನ್ನು ತನ್ನ ಆನೆಯಿಂದ ಹತ್ತಿಸಲಪೇಕ್ಷೆಯುಳ್ಳ ಸಾಲ್ವನ ವೇಗವನ್ನು ರಾಮನು ತಡೆಯಲು, ಆ ಸಾಲ್ವನು ನಾನಾ ಬಾಣಗಳನ್ನು ಪ್ರಯೋಗಿಸಿ ರಾಮನ ಪರಾಕ್ರಮವನ್ನು ತಡೆಯಲಾರಂಭಿಸಿದೊಡನೆಯೇ, ದೈತ್ಯರ ಗುಂಪು ನಾನಾ ವಿಧವಾದ ಆಯುಧಗಳಿಂದ ಆ ಪರಶುರಾಮನನ್ನು ಮುಚ್ಚಿಬಿಟ್ಟಿತು.

೮. ಆ ಅಸ್ತ್ರ (ಬಾಣ) ಪರಂಪರೆಯಿಂದ ಮುಚ್ಚಿಹೋದ ಆ ರಾಮನು ನಿಮಿಷಕಾಲ ಕಣ್ಣುಮುಚ್ಚಿಕೊಂಡವನಾಗಿ ಕೂಡಲೆ ತನ್ನ ಕೊಡಲಿಯನ್ನು ಆ ಸಾಲ್ವನ ಮೇಲೆ ಪ್ರಯೋಗಿಸಿದನು.

**ಆಗಚ್ಛಮಾನಂ ವೇಗೇನ ಸಾಲ್ವಸ್ತಂ ಪರಶುಂ ರಣೇ ।**
**ಆಯುಧೈರ್ವಾರಯಾಮಾಸ ನ ಶಶಾಕ ಚ ಶತ್ರುಹಾ ॥ ೯ ॥**

**ಸ ಸಾಲ್ವಾಯುಧಸಂಘಾತಂ ಭಂಕ್ತ್ವಾ ಸರ್ವಮಶೇಷತಃ ।**
**ಜಹಾರ ಶೀರ್ಷಂ ಸಾಲ್ವಸ್ಯ ಮುಕುಟೋತ್ತಮಭೂಷಿತಂ ॥ ೧೦ ॥**

**ರಾಮೋಽಪಿ ಭೂತಲಾತ್ಪ್ರಾಪ್ಯ ಗದಾಂ ಹೇಮವಿಭೂಷಿತಾಂ ।**
**ಆವಿಧ್ಯ ನಿಜಘಾನೋಗ್ರಂ ಸಾಲ್ವಂ ಕುಂಜರಸಂಸ್ಥಿತಂ ॥ ೧೧ ॥**

**ದ್ವಾವಂಕುಶಧರೌ ಶ್ರೇಷ್ಠೌ ದ್ವೌ ಚ ಚರ್ಮಾಸಿಧಾರಿಣೌ ।**
**ಪತಾಕಾಧಾರಿಣಂ ಚೈಕಂ ಗಜಸ್ಯ ಜಘನೇ ಸ್ಥಿತಂ ॥ ೧೨ ॥**

**ದೇಹಂಚ ತಸ್ಯ ಸಾಲ್ವಸ್ಯ ಪತಾಕಾಂಚ ಮನೋರಮಾಂ ।**
**ಏತದಾದಾಯ ಸಕಲಮಾಜಗಾಮ ವಸುಂಧರಾಂ ॥ ೧೩ ॥**

---

೯-೧೦. ವೇಗದಿಂದ ತನ್ನ ಮೇಲೆ ಹರಿದು ಬೀಳುತ್ತಿದ್ದ ಆ ಕೊಡಲಿಯನ್ನು ಸಾಲ್ವನು ನಾನಾವಿಧ ಆಯುಧಗಳಿಂದ ತಡೆದಾಗ್ಯೂ, ಆ ಆಯುಧಗಳು ಕೊಡಲಿಯನ್ನು ತಡೆಯಲಾರದೆ ಹೋದುವು. ಕಡೆಗೆ ಆ ಕೊಡಲಿಯು ಕಿರೀಟದಿಂದಲಂಕೃತನಾದ ಆ ಸಾಲ್ವನ ತಲೆಯನ್ನು ಕತ್ತರಿಸಿತು.

೧೧-೧೩. ಆ ಕೂಡಲೆ ಆ ರಾಮನು ಚಿನ್ನದಿಂದಲಂಕೃತವಾದುದೊಂದು ಗದೆಯನ್ನು ಭೂಮಿಯಿಂದ ಮೇಲಕ್ಕೆತ್ತಿ ಆನೆಯ ಮೇಲೆ ಕೂತಿದ್ದ ಸಾಲ್ವನ ಮೇಲೆ ಪ್ರಯೋಗಿಸಲು ಆ ಗದೆಯು, ಅಂಕುಶವನ್ನು ಧರಿಸಿ ಆನೆಯ ಮೇಲೆ ಕುಳಿತಿದ್ದ ಇಬ್ಬರನ್ನೂ, ಕತ್ತಿ ಗುರಾಣಿಗಳನ್ನು ಹಿಡಿದು ಮುಂಭಾಗದಲ್ಲಿ ಕುಳಿತಿದ್ದ ಇಬ್ಬರನ್ನೂ, ಆನೆಯ ಬೆನ್ನಿನ ಮೇಲೆ ಬಾವುಟವನ್ನು ಹಿಡಿದು ಕುಳಿತಿದ್ದವನನ್ನೂ ಮತ್ತು ಆ ಸಾಲ್ವನ ದೇಹವನ್ನೂ, ಮನೋಹರವಾದ ಬಾವುಟವನ್ನೂ ಹೊಡೆದು ಉರುಳಿಸಿ, ಈ ಸಕಲ ಪದಾರ್ಥಗಳನ್ನೂ ತೆಗೆದುಕೊಂಡು ಪುನಃ ಭೂಮಿಯ ಮೇಲೆ ನಿಂತಿತು.

ಸಿಂಹನಾದೇನ ರಾಮಸ್ಯ ವಿತ್ರಸ್ತೋ ಗಜಯೂಥಪಃ ।
ಆರ್ತನಾದಂ ಮಹತ್ಕೃತ್ವಾ ಪ್ರದುದ್ರಾವ ನರಾಧಿಪ ॥ ೧೪ ॥

ರಾಮಕರ್ಮಣಿ ವೃತ್ತೇ ತು ಭೂತಲಾತ್ಪರಶುಂ ರಣೇ ।
ಜಗ್ರಾಹ ವೇಗವಾನ್ವೇಗಾದ್ದಾನವಾಂತಚಿಕೀರ್ಷಯಾ ॥ ೧೫ ॥

ದೃಷ್ಟ್ವಾ ಸಪರಶುಂರಾಮಂ ಸಾಲ್ವಂ ಚ ವಿನಿಪಾತಿತಂ ।
ಹತಶೇಷಾಸ್ತು ತೇ ದೈತ್ಯಾಃ ಪ್ರವಿಷ್ಟಾ ವರುಣಾಲಯಂ ॥ ೧೬ ॥

ಏತಸ್ಮಿನ್ನೇವ ಕಾಲೇ ತು ದೇವಾಃ ಸೇನ್ದ್ರಪುರೋಗಮಾಃ ।
ಆಯೋಧನಮುಪಾಜಗ್ಮುಃ ಪುರಸ್ಕೃತ್ಯ ಪಿತಾಮಹಂ ॥ ೧೭ ॥

ಪ್ರಣಾಮಮಕರೋತ್ತೇಷಾಂ ರಾಮೋ ರತಿಕರಃ ಪಿತುಃ ।
ಪೂಜಯಿತ್ವಾ ತು ತೇ ರಾಮಂ ಯಯುರ್ದೇವಾಃ ಸ್ವಮಾಲಯಂ ॥ ೧೮ ॥

---

೧೪. ಆ ಗಜಸೈನ್ಯದ ಅಧಿಪತಿಯು ಪರಶುರಾಮನು ಮಾಡಿದ ಸಿಂಹನಾದವನ್ನು ಕೇಳಿ ಆರ್ತನಾಗಿ ಕೂಗಿಕೊಳ್ಳುತ್ತಾ ಓಡಿಹೋದನು. ಕೇಳೈಯ ! ವಜ್ರನರಪತಿಯೇ.

೧೫-೧೬. ಪುನಃ ಆ ಪರಶುರಾಮನು, ಭೂಮಿಯಿಂದ ಪರಶುವನ್ನು ಮೇಲಕ್ಕೆತ್ತಿ ಹಿಡಿದು ಉಳಿದಿದ್ದ ರಾಕ್ಷಸರನ್ನು ಮುಗಿಸಿಬಿಡಬೇಕೆಂದು ಪ್ರಯತ್ನಿಸಲು, ಆ ರೀತಿ ಕೊಡಲಿಯನ್ನು ಕೈಯಲ್ಲಿ ಹಿಡಿದು ನಿಂತಿದ್ದ ಪರಶುರಾಮನನ್ನೂ, ಸತ್ತುಬಿದ್ದಿದ್ದ ಸಾಲ್ವನನ್ನೂ ನೋಡಿ ಹತಶೇಷರಾದ ದಾನವರು ಓಡಿಹೋಗಿ ಸಮುದ್ರದೊಳಹೊಕ್ಕು ಪಾತಾಳವನ್ನು ಪ್ರವೇಶಿಸಿದರು.

೧೭. ಇದೇ ಸಮಯದಲ್ಲಿ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಬ್ರಹ್ಮನನ್ನು ಮುಂದೆಬಿಟ್ಟುಕೊಂಡು ಬಂದು ಆ ಯುದ್ಧರಂಗಕ್ಕೆ ಪ್ರವೇಶಿಸಿದರು.

೧೮. ಆ ರೀತಿ ರಣರಂಗಕ್ಕೆ ಬಂದ ದೇವಾದಿದೇವತೆಗಳನ್ನು ನೋಡಿ, ತಂದೆಯ ಪ್ರೀತಿಪುತ್ರನಾದ ಆ ರಾಮನು ಅವರನ್ನೆಲ್ಲಾ ನಮಸ್ಕರಿಸಿದನು. ಆ ದೇವತೆಗಳೂ ಸಹ ಆ ರಾಮನನ್ನು ಪೂಜೆಮಾಡಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಶಕ್ರೋಽಪಿ ಲಬ್ಧ್ವಾ ತ್ರಿದಿವಂ ರಾಮಬಾಹುಪ್ರಸಾಧಿತಂ ।
ವಿಜಹಾರ ದಿವಂ ರಾಜನ್ಪಾಲಯಾನೋ ಜಗತ್ರಯಂ　　　॥ ೧೯ ॥

ರಥೇನ ಸಿಂಹಯುಕ್ತೇನ ಮಹಾದೇವೋಽಪಿ ಭಾರ್ಗವಂ ।
ಆದಾಯ ಪ್ರಯಯೌ ಶೀಘ್ರಂ ಕೈಲಾಸಂ ಪರ್ವತೋತ್ತಮಂ　　　॥ ೨೦ ॥

ಸ್ನೇಹೇನ ಚಾಽಸ್ಯ ಗಾತ್ರಾಣಾಂ ಚಕ್ರೇ ಸಮ್ಮಾರ್ಜನಂ ಹರಃ ।
ಯೇನಾಽಸೀದ್ಬಲವಾನ್ ರಾಮೋ ನಿರ್ವ್ರಣಶ್ಚ ಮಹಾಯಶಾಃ　　　॥ ೨೧ ॥

ಗತವ್ರಣಂ ಶ್ರಿಯೋಪೇತಂ ಜಯಂ ಲಬ್ಧ್ವಾ ಹ್ಯುಪಸ್ಥಿತಂ ।
ರಾಮಂ ಪ್ರಹರತಾಂ ಶ್ರೇಷ್ಠಂ ಶಂಕರೋ ವಾಕ್ಯಮಬ್ರವೀತ್　　　॥ ೨೨ ॥

॥ ಶಂಕರ ಉವಾಚ ॥

ರಾಮರಾಮ ಮಹಾಭಾಗ ತ್ವಯಾಽಹಂ ಪರಿತೋಷಿತಃ ।
ತಸ್ಮಾತ್ತವಾಹಂ ದಾಸ್ಯಾಮಿ ಚಾಸ್ತ್ರಗ್ರಾಮಂ ಹ್ಯನುತ್ತಮಂ　　　॥ ೨೩ ॥

---

೧೯. ರಾಮನ ಬಾಹುಬಲದಿಂದ ಸಾಧಿಸಲ್ಪಟ್ಟ ಇಂದ್ರಲೋಕವನ್ನು ಪಡೆದು, ಇಂದ್ರನು ತ್ರಿಲೋಕಾಧಿಪತಿಯಾಗಿ ಸುಖವಾಗಿದ್ದನು.

೨೦-೨೨. ಪರಶುರಾಮನ ವಿಜಯವೃತ್ತಾಂತವನ್ನು ಕೇಳಿ ಮಹಾದೇವನು ಸಿಂಹರಥದಲ್ಲಿ ಬಂದು ಪರಶುರಾಮನನ್ನು ಅದರಲ್ಲಿ ಕುಳ್ಳಿರಿಸಿಕೊಂಡು ಕೈಲಾಸಪರ್ವತಕ್ಕೆ ಹೋಗಿ, ಬಹು ಸ್ನೇಹದಿಂದ ಆ ಪರಶುರಾಮನ ಮೈಯನ್ನು ಒಂದಾವರ್ತಿ ಸವರಿದನು. ಆ ಕೂಡಲೆ ರಾಮನ ಮೈಮೇಲಿನ ಗಾಯಗಳೆಲ್ಲಾ ಮಾಯವಾಗಿ ಆ ಪರಶುರಾಮನು ಎಂದಿನಂತೆ ಮಹಾಪರಾಕ್ರಮದಿಂದ ಪ್ರಕಾಶಿಸಿದನು. ಈರೀತಿ ವ್ರಣವನ್ನು ಪರಿಹಾರಮಾಡಿಕೊಂಡು ವಿಜಯಲಕ್ಷ್ಮಿಯಿಂದ ಕೂಡಿ ಮನೋಹರನಾಗಿ ಕುಳಿತಿದ್ದ ಪರಶುರಾಮನನ್ನು ಕುರಿತು ಈಶ್ವರನು ಈ ವಾಕ್ಯವನ್ನು ಹೇಳಿದನು.

೨೩-೨೮. ಈಶ್ವರನು ಹೇಳುತ್ತಾನೆ:- "ರಾಮ! ನೀನು ಪುಣ್ಯಶಾಲಿ! ಪರಶುರಾಮ! ನಿನ್ನಿಂದ ನಾನು ಬಹಳ ತೃಪ್ತನಾಗಿದ್ದೇನೆ. ನಿನಗೆ ಸಮಸ್ತ ಅಸ್ತ್ರಗಳನ್ನೂ ಉಪದೇಶಿಸುತ್ತೇನೆ. ಧನುರ್ವೇದವನ್ನಭ್ಯಾಸಮಾಡಿ ನಾನು ಹೇಳಿಕೊಡತಕ್ಕ

ಅಸ್ತ್ರಾಣಾಂ ಧಾರಣೇ ಶಕ್ತಸ್ತ್ವಮೇಕೋ ಭುವಿ ಭಾರ್ಗವ ।
ತವ ಧೈರ್ಯಮನೌಪಮ್ಯಂ ತವಸತ್ವಮನುತ್ತಮಂ ॥ ೨೪ ॥

ಅಸ್ತ್ರಯೋಗಮಿಹಸ್ಥಸ್ತ್ವಂ ಕೃತ್ವಾ ಪುತ್ರ ಶನೈಃ ಶನೈಃ ।
ಸರ್ವಾಸ್ತ್ರವಿತ್ತಮೋ ರಾಮ ಗಂತಾಸಿ ಪಿತರಂ ಸ್ವಕಂ ॥ ೨೫ ॥

ಯಶ್ಚೈಷ ಪರಶುರ್ದಿವ್ಯಃ ಪಿತ್ರಾ ದತ್ತಸ್ತವಾನಘ ।
ಅದ್ಯ ಪ್ರಭೃತಿ ತೇ ಕ್ಷಿಪ್ತಃ ಕರಂ ಭೂಯಃ ಸಮೇಷ್ಯತಿ ॥ ೨೬ ॥

ಉಪಲಕ್ಷಣಮೇತಚ್ಚ ತಥಾ ತವ ಭವಿಷ್ಯತಿ ।
ಛೇತ್ಸ್ಯಾಮಿ ತೇ ಸಂಶಯಾಂಶ್ಚ ನಿರ್ವೃತ್ತೋ ಭವಪುತ್ರಕ ॥ ೨೭ ॥

॥ ಮಾರ್ಕಂಡೇಯ ಉವಾಚ ॥

ಇತ್ಯೇವಮುಕ್ತಃ ಪರಿಪೂರ್ಣಕಾಮೋ
ರಾಮೋ ಮಹಾತ್ಮಾಜಿತಸೈನ್ಯನಾವಃ ।

---

ಅಸ್ತ್ರಗಳನ್ನು ಧಾರಣೆಮಾಡಲು ಭೂಲೋಕದಲ್ಲಿ ನೀನೊಬ್ಬನೇ ಸಮರ್ಥನಯ್ಯ! ಆದ್ದರಿಂದ ನೀನು ನಮ್ಮಲ್ಲಿಯೇ ಇದ್ದುಕೊಂಡು ಅಸ್ತ್ರಪ್ರಯೋಗವನ್ನೆಲ್ಲಾ ಕಲಿತುಕೋ. ಅನಂತರದಲ್ಲಿ ಮೆಲ್ಲಮೆಲ್ಲನೆ ನೀನು ಸರ್ವಾಸ್ತ್ರವೇತ್ತನಾಗಿ, ಧನುರ್ವೇದ ನಿಷ್ಣಾತನಾಗಿ ನಿನ್ನ ತಂದೆಯ ಬಳಿಗೆ ಹೋಗುವಿಯಂತೆ! ನಿನ್ನ ತಂದೆ ಅನುಗ್ರಹಿಸಿಕೊಟ್ಟಿರತಕ್ಕ ಈ ಪರಶುವು ನಮ್ಮಲ್ಲಿರುವ ತನಕ ಅಂತರ್ಧಾನವಾಗಿದ್ದು ನೀನು ಧನುರ್ವೇದವನ್ನು ಕಲಿತ ಬಳಿಕ ನಿನ್ನ ಕೈಗೆ ಬಂದು ಸೇರುತ್ತದೆ ನಿನಗೆ ಇದೇ ಉಪಲಕ್ಷಣವೆನಿಸಿ ನಿನ್ನ ಹೆಸರನ್ನು (ಪರಶುರಾಮ) ಮುಂದೆ ತರುತ್ತದೆ. ಮತ್ತು ನಿನ್ನ ಮನಸ್ಸಿನಲ್ಲಿ ಏನಾದರೂ ಸಂಶಯಗಳಿದ್ದರೆ ಅದನ್ನು ಪರಿಹರಿಸಿಕೊಡುತ್ತೇನೆ. ಸುಖವಾಗಿ ನೀನು ಇಲ್ಲಿಯೇ ಇದ್ದುಕೊಂಡಿರು.

೨೮. ಮಾರ್ಕಂಡೇಯನ ಹೇಳುತ್ತಾನೆ :- ಈರೀತಿ ಶಂಕರನಿಂದ ಹೇಳಲ್ಪಟ್ಟವನಾಗಿ ಆ ಪರಶುರಾಮನು ಸಕಲ ಸೈನ್ಯಗಳೆಂಬ ನಾವೆಗಳನ್ನು ದಾಟಿ (ಗೆದ್ದ) ದವ

**ಉವಾಸ ತತ್ರ ಪ್ರಮಥೈಃ ಸಮೇತಃ**
**ಸರ್ವಾಣ್ಯಥಾಸ್ತ್ರಾಣ್ಯನುಶಿಕ್ಷಮಾಣಃ　　　॥ ೨೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಸಾಲ್ವವಧೋ ನಾಮ ಏಕೋನಪಂಚಾಶತ್ತಮೋಽಧ್ಯಾಯಃ**

---

ನಾಗಿ, ಪೂರ್ಣಕಾಮನೆನಿಸಿಕೊಂಡು, ಆ ಕೈಲಾಸನಿಲಯದಲ್ಲಿ ಈಶ್ವರನ ಪ್ರಥಮ ಗಣಗಳ ಜತೆಯಲ್ಲಿ ಸಕಲವಾದ ಅಸ್ತ್ರಗಳನ್ನೂ ಈಶ್ವರನಿಂದ ಪಾಠಹೇಳಿಸಿಕೊಳ್ಳುತ್ತಾ ಸುಖವಾಗಿದ್ದನು.

ಇಲ್ಲಿಗೆ ಶ್ರೀ ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಸಾಲ್ವವಧೆಯೆಂಬ ಹೆಸರಿನ ನಲವತ್ತೊಂಭತ್ತನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಪಂಚಾಶತ್ತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

**ಬ್ರಹ್ಮಾಸ್ತ್ರಂ ವೈಷ್ಣವಂ ರೌದ್ರಮಾಗ್ನೇಯಮಥ ವಾಸವಂ ।**
**ಅಸ್ತ್ರಂಚ ನೈಋತಂ ಯಾಮ್ಯಂ ಕೌಬೇರಮಥ ವಾರುಣಂ ॥ ೧ ॥**

**ವಾಯುವ್ಯಮಥ ಸೌಮ್ಯಂಚ ಸೌರಂ ಪಾರ್ವತಮೇವ ಚ ।**
**ಚಕ್ರಾಸ್ತ್ರಮಥ ವಜ್ರಾಸ್ತ್ರಂ ಪಾಶಾಸ್ತ್ರಂ ಸಾರ್ಪಮೇವ ಚ ॥ ೨ ॥**

**ಗಾಂಧರ್ವಂ ಸ್ವಾಪನಂ ಭೌತಂ ತಥಾ ಪಾಶುಪತಂ ಶುಭಂ ।**
**ಐಷೀಕಂ ತರ್ಜನಂ ಪ್ರಾಸಂ ಭಾರುಂಡಂ ನರ್ತನಂ ತಥಾ ॥ ೩ ॥**

---

## ಐವತ್ತನೆಯ ಅಧ್ಯಾಯ

೧-೬. ಮಾರ್ಕಂಡೇಯನು ಹೇಳುತ್ತಾನೆ—ಮಹಾದೇವನ ಮನೆಯಲ್ಲಿ ವಾಸ ಮಾಡುತ್ತಾ ಇದ್ದಾಗ ಆ ಪರಮೇಶ್ವರನಿಂದ ಉಪದೇಶಿಸಲ್ಪಟ್ಟ ಅಸ್ತ್ರಗಳಾವುವೆಂದರೆ:-

ಬ್ರಹ್ಮ, ವಿಷ್ಣು, ರೌದ್ರ, ಆಗ್ನೇಯ, ವಾಸವ, ನೈಋತ, ಯಮ, ಕುಬೇರ **ಅರುಣ, ವಾಯುವ್ಯ, ಸೌಮ್ಯ, ಸೌರ, ಪಾರ್ವತ, ಚಕ್ರಾಸ್ತ್ರ, ವಜ್ರಾಸ್ತ್ರ, ಪಾಶ, ಸಾರ್ಪ, ಗಾಂಧರ್ವ, ಸ್ವಾಪನ, ಭೌತ, ಪಾಶುಪತ, ಐಷೀಕ, ತರ್ಜನ, ಪ್ರಾಸ, ಭಾರುಂಡ, ನರ್ತನ, ಅಸ್ತ್ರರೋಧನ, ಆದಿತ್ಯ, ದೈವತ, ಮಾನವ, ಅಕ್ಷಿಸಂತರ್ಜನ,**

ಅಸ್ತ್ರರೋಧನಮಾದಿತ್ಯಂ ರೈವತಂ ಮಾನವಂ ತಥಾ ।
ಅಕ್ಷಿಸಂತರ್ಜನಂ ಭೀಮಂ ಜೃಂಭಣಂ ರೋಧನಂ ತಥಾ ॥ ೪ ॥

ಸೌಪರ್ಣಮಥ ಪರ್ಜನ್ಯಂ ರಾಕ್ಷಸಂ ಮೋಹನಂ ತಥಾ ।
ಕಾಲಾಸ್ತ್ರಂ ದಾನವಾಸ್ತ್ರಂಚ ಅಸ್ತ್ರಂ ಬ್ರಹ್ಮಶಿರಸ್ತಥಾ ॥ ೫ ॥

ಏತಾನ್ಯನ್ಯಾನಿ ಚಾಽನ್ಯಾನಿ ರಾಮೋ ನಿವಸನೇ ತತಃ ।
ಸಪ್ರಯೋಗರಹಸ್ಯಾನಿ ಸಸಂಹಾರಾಣಿ ಚಾಪ್ಯಥ ॥ ೬ ॥

ಆಜಹಾರ ಮಹಾದೇವಾತ್ಪ್ರಸಾದಸುಮುಖಾತ್ತತಃ ।
ಏವಂ ಹಿ ವಸತಃ ಕಾಲೋ ಯಯೌ ರಾಮಸ್ಯ ಧೀಮತಃ ॥ ೭ ॥

ಹರಪ್ರಸಾದಸಂಜಾತವಿಸ್ರಂಭೋ ಭೃಗುನಂದನಃ ।
ಧ್ಯಾನಾಸಕ್ತಂ ಹರಂ ದೇವಂ ಕದಾಚಿದಥದೃಷ್ಟವಾನ್ ॥ ೮ ॥

---

ಭೀಮ, ಜೃಂಭಣ, ರೋಧನ, ಸೌಪರ್ಣ, ಪಾರ್ಜನ್ಯ, ರಾಕ್ಷಸ, ಮೋಹನ, ಕಾಲಾಸ್ತ್ರ ದಾನವಾಸ್ತ್ರ,ಬ್ರಹ್ಮಶಿರವೇ ಮುಂತಾದ ಮಹಾಽಸ್ತ್ರಗಳನ್ನು ಪ್ರಯೋಗ (ಬಿಡು)ಮಾಡುವುದು, ಉಪಸಂಹರಿಸು (ಹಿಂತಿರುಗಿಸು) ವುದರ ರಹಸ್ಯಗಳನ್ನು ಶಿವನ ಮನೆಯಲ್ಲಿ ಕಲಿತನು.

೭-೯. ಈ ರೀತಿ ಅನುಗ್ರಹಮಾಡಿದ ಮಹಾದೇವನಿಂದ ರಾಮನು ಸಕಲ ಶಸ್ತ್ರಾಸ್ತ್ರಗಳನ್ನೂ ಕಲಿತನು ಈರೀತಿ ಪರಶುರಾಮನು ಬಹುಕಾಲ ಕೈಲಾಸದಲ್ಲಿಯೇ ವಾಸವಾಗಿದ್ದನು. ಈ ರೀತಿಯಾದ ಈಶ್ವರಪ್ರಸಾದದಿಂದ ರಾಮನಿಗೂ ಶಿವನಿಗೂ ಬಹುವಿಶ್ವಾಸವು ಬೆಳೆಯುತ್ತ ಬಂದಿತು. ಹೀಗಿರುವಲ್ಲಿ ಒಂದು ದಿವಸ ಶಿವನು ಧ್ಯಾನಾ

ಧ್ಯಾನಪ್ರಸಕ್ತಂ ಸ ಹರಂ ಸಮೀಕ್ಷ್ಯ
ರಾಮಸ್ತು ಸಂಜಾತ ಕುತೂಹಲೇನ ।
ವಿಸಿಷ್ಮಯೇ ಧರ್ಮಭೃತಾಂ ವರಿಷ್ಠಃ
ಸ ಚೇತಸಾ ಯಾದವವಂಶಚಂದ್ರ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಅಸ್ತ್ರಪ್ರದಾನಂ ನಾಮ
ಪಂಚಾಶತ್ತಮೋಧ್ಯಾಯಃ

---

ಸಕ್ತನಾಗಿ ಕುಳಿತಿದ್ದುದನ್ನು ಪರಶುರಾಮನು ಕಂಡನು. ಭಗವಂತನಾದ ಪರಮೇಶ್ವರನೇ ಈ ರೀತಿ ಧ್ಯಾನಕ್ಕೆ ಕುಳಿತಿದ್ದುದನ್ನು ನೋಡಿ ಪರಶುರಾಮನು ಆಶ್ಚರ್ಯಪಡುತ್ತಾ ಈ ವಿಚಾರವನ್ನು ಕೇಳಲು ಕುತೂಹಲದಿಂದ ಕೂಡಿದವನಾಗಿದ್ದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಅಸ್ತ್ರಪ್ರದಾನವೆಂಬ ಹೆಸರಿನ ಐವತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

——

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ॥ ಏಕ ಪಂಚಾಶತ್ತಮೋಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ಕೈಲಾಸಶಿಖರೇ ರಮ್ಯೇ ನಾನಾಧಾತುವಿಚಿತ್ರಿತೇ ।**
**ನಾನಾದ್ರುಮಲತಾಕೀರ್ಣೇ ನಾನಾ ಪಕ್ಷಿನಿನಾದಿತೇ ॥ ೧ ॥**

**ಗಂಗಾನಿರ್ಝರಸಂಜಾತೇ ಸತತಂ ಚಾರುನಿಸ್ವನೇ ।**
**ದೇವದೇವಂ ಮಹಾದೇವಂ ಪರ್ಯಪೃಚ್ಛತಭಾರ್ಗವಃ ॥ ೨ ॥**

**॥ ರಾಮ ಉವಾಚ ॥**

**ದೇವದೇವ ಮಹಾದೇವ ಗಂಗಾಲುಲಿತ ಮೂರ್ಧಜ ।**
**ಶಶಾಂಕಲೇಖಾಸಂಯುಕ್ತ ಜಟಾಭಾರಾತಿಭಾಸ್ವರ ॥ ೩ ॥**

---

### ಐವತ್ತೊಂದನೆಯ ಅಧ್ಯಾಯವು

೧-೨. ಮಾರ್ಕಂಡೇಯನು ಹೇಳಿದನು :- ನಾನಾವಿಧ ಗೈರಿಕಾದಿ ಧಾತುಗಳಿಂದ ರಮ್ಯವಾಗಿಯೂ ವಿವಿಧ ವೃಕ್ಷಲತೆಗಳಿಂದಲೂ, ನಾನಾ ವಿಧ ಪಕ್ಷಿಗಳ ಧ್ವನಿಯಿಂದಲೂ ಕೂಡಿದುದಾಗಿಯೂ, ಗಂಗೋತ್ಪತ್ತಿಗೆ ಮೂಲಸ್ಥಾನವಾಗಿಯೂ ಇರುವ ಕೈಲಾಸಗಿರಿಯಲ್ಲಿ ಪರಶುರಾಮನು ಈಶ್ವರನನ್ನು ಕುರಿತು ಈ ಮಾತನ್ನು ಹೇಳಿದನು.

೩-೫. ಪರಶುರಾಮನು ಹೇಳುತ್ತಾನೆ :- ಸ್ವಾಮಿ ! ನೀನು ಗಂಗೆಯನ್ನು ತಲೆಯಲ್ಲಿ ಹೊತ್ತಿರುವೆ. ಚಂದ್ರರೇಖೆಯಿಂದ ಕೂಡಿರುವಿ. ಅವನನ್ನು ಜಡೆಯಲ್ಲಿ

ಪಾರ್ವತಿದತ್ತದೇಹಾರ್ಧ ಕಾಮಕಾಲಾಂಗನಾಶನ ।
ಭಗನೇತ್ರಾಂತಕಾಚಿಂತ್ಯ ಪೂಷ್ಣೋ ದಶನಶಾತನ ॥ ೪ ॥

ತ್ವತ್ತಃ ಪರತರಂ ದೇವಂ ನಾಽನ್ಯಂ ಪಶ್ಯಾಮಿ ಕಂಚನ ।
ಪೂಜಯಂತಿ ಸದಾಲಿಂಗಂ ತವ ದೇವಾಃ ಸವಾಸವಾಃ ॥ ೫ ॥

ಸ್ತುವಂತಿ ತ್ವಾಮೃಷಿಗಣಾ ಧ್ಯಾಯಂತಿ ಚಮುಹುರ್ಮುಹುಃ ।
ಪೂಜಯಂತಿ ತಥಾ ಭಕ್ತ್ಯಾ ವರದಂ ಪರಮೇಶ್ವರ ॥ ೬ ॥

ಜಗತೋಽಸ್ಯ ಸಮುತ್ಪತ್ತಿ ಸ್ಥಿತಿಸಂಹಾರಪಾಲನೆ ।
ತ್ವಾಮೇಕಂ ಕಾರಣಂ ಮನ್ಯೆ ತ್ವಯಿ ಸರ್ವಂಪ್ರತಿಷ್ಠಿತಂ ॥ ೭ ॥

ಕಂ ತ್ವಂ ಧ್ಯಾಯಸಿ ದೇವೇಶ ತತ್ರ ಮೇ ಸಂಶಯೋ ಮಹಾನ್ ।
ಆಚಕ್ಷ್ವ ತನ್ಮೇ ಭಗವನ್ಯದ್ಯನುಗ್ರಾಹ್ಯತಾ ಮಯಿ ॥ ೮ ॥

---

ಹೂವಿನಂತೆ ಮುಡಿದಿರುವಿ. ಅರ್ಧನಾರೀಶ್ವರನೆನೆಸಿರುವಿ. ಕಾಮ ಯಮಾದಿಗಳನ್ನು ನಾಶಮಾಡಿದ್ದೀ ! ನಿನಗಿಂತ ಬೇರೆ ದೇವರನ್ನು ನಾನು ನೋಡಿಯೇ ಇಲ್ಲ. ನಿನ್ನ (ಶಿವ)ಲಿಂಗವನ್ನು ಇಂದ್ರಾದಿದೇವತೆಗಳೆಲ್ಲರೂ ಸರ್ವದಾ ಪೂಜಿಸುತ್ತಿರುವರು.

೬-೯. ಸ್ವಾಮಿ ! ನಿನ್ನನ್ನು ಸಕಲ ದೇವತೆಗಳೂ ಧ್ಯಾನಿಸುತ್ತಾರೆ. ವರಪ್ರದನಾದ ನಿನ್ನನ್ನು ಪುನಃ ಪುನಃ ಪೂಜಿಸುತ್ತಾರೆ. ಈ ಪ್ರಪಂಚದ ಉತ್ಪತ್ತಿಗೂ, ಸ್ಥಿತಿಗೂ, ನೀನೇ ಕಾರಣನೆಂಧೂ ನಿನ್ನಲ್ಲೇ ಸಕಲ ಲೋಕವೂ ಅಡಗಿದೆಯೆಂದೂ ನಾನು ತಿಳಿದುಕೊಂಡಿದ್ದೇನೆ ಇಂತಹ ಅನಾದ್ಯಂತನಾದ ನೀನು ಅಪಾರನ್ನು ಕುರಿತು ಧ್ಯಾನಮಾಡುತ್ತಿರುವೆಯೋ, ಕಾಣೆ!! ಈ ವಿಷಯದಲ್ಲಿ ನನಗೆ ಬಹಳ ಸಂಶಯವುಂಟಾ

ಪ್ರಸಾದಸಾಂಮುಖ್ಯತಯಾಮುಯೈತ
ದ್ವಿಸ್ರಂಭಮಾಸಾದ್ಯ ಜಗತ್ಪ್ರಧಾನ
ಭವಂತಮೀಡ್ಯಂ ಪ್ರಣಿಪತ್ಯ ಮೂರ್ಧ್ನಾ
ಪೃಚ್ಛಾಮಿ ಸಂಜಾತಕುತೂಹಲಾತ್ಮಾ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಪರಶುರಾಮೋಪಾಖ್ಯಾನೇ ಶಂಕರಗೀತಾಸು ರಾಮಪ್ರಶ್ನೋ ನಾಮೈಕಪಂಚಾಶತ್ತಮೋಽಧ್ಯಾಯಃ

---

ಗಿದೆ. ನನ್ನಲ್ಲಿ ನಿನಗೆ ಅನುಗ್ರಹಬುದ್ಧಿ ಇದ್ದರೆ ಅದನ್ನು ದಯೆಯಿಟ್ಟು ತಿಳಿಸಬೇಕು. ನೀನು ನನ್ನಲ್ಲಿ ತುಂಬಾ ವಿಶ್ವಾಸವಿಟ್ಟಿರುವುದರಿಂದ, ನಾನು ಈ ಪ್ರಶ್ನೆಯನ್ನು ಬಹಳ ಸರಾಗದಿಂದ ಕೇಳಿಬಿಟ್ಟಿದ್ದೇನೆ.''

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಪರಶುರಾಮರ ಚರಿತ್ರೆಯಲ್ಲಿ ಶಂಕರಗೀತಾ ಪ್ರಕರಣದ ಪೀಠಿಕಾರೂಪವಾದ ರಾಮಪ್ರಶ್ನೆಯೆಂಬ ಹೆಸರಿನ ಐವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ದ್ವಿಪಂಚಾಶತ್ತಮೋಽಧ್ಯಾಯಃ

॥ ಶಂಕರ ಉವಾಚ ॥

ತ್ವದುಕ್ತೋಯಮನುಪ್ರಶ್ನೋ ರಾಮರಾಜೀವಲೋಚನ ।
ತ್ವಮೇಕಃ ಶ್ರೋತುಮರ್ಹೋಽಸಿ ಮತ್ತೋ ಭೃಗುಕುಲೋದ್ವಹ ॥ ೧ ॥

ಯತ್ತತ್ಪರಮಕಂ ಧಾಮ ಮಮ ಭಾರ್ಗವನಂದನ ।
ಯತ್ತದಕ್ಷರಮವ್ಯಕ್ತಂ ಪರಂ ಯಸ್ಮಾನ್ನ ವಿದ್ಯತೇ ॥ ೨ ॥

ಜ್ಞಾನಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ಚಾಶ್ರಿತಂ ।
ತ್ವಾಮಹಂ ಪುಂಡರೀಕಾಕ್ಷಂ ಚಿಂತಯಾಮಿ ಜನಾರ್ದನಂ ।
ಏತದ್ರಾಮರಹಸ್ಯಂ ತೇ ಯಥಾವತ್ಕಥಿತಂ ವಚಃ ॥ ೩ ॥

---

### ಐವತ್ತೆರಡನೆಯ ಅಧ್ಯಾಯವು

೧. ಪರಮೇಶ್ವರನು ಹೇಳಿದನು :- " ರಾಜೀವಾಕ್ಷನಾದೆಲೈ ರಾಮನೇ ! ನಿನ್ನಿಂದ ಕೇಳಲ್ಪಟ್ಟ ಈ ಉಪ ಪ್ರಶ್ನೆಯ ವಿಚಾರವನ್ನು ನನ್ನಿಂದ ತಿಳಿದುಕೊಳ್ಳಲು ನೀನೊಬ್ಬನೇ ಅರ್ಹನಲ್ಲದೆ ಮತ್ತೊಬ್ಬರಾರಿಗೂ ಈ ಯೋಗ್ಯತೆ ಇಲ್ಲವಯ್ಯ ? ಭೃಗು ಕುಲ ಲಲಾಮ !!

೨-೩. ಕೇಳೈ ! ಭೃಗು ಪುತ್ರ ನಂದನನೇ ! ನನ್ನ ಶ್ರೇಷ್ಠವಾದ ಸ್ಥಾನ ವನ್ನು ತಿಳಿಸುತ್ತೇನೆ ಯಾವುದು ನಾಶವಿಲ್ಲದೆ ಇರುವುದೋ, ಯಾವುದು ಕಣ್ಣಿಗೆ ಕಾಣದೆ ಅವ್ಯಕ್ತವಾಗಿಯೇ ಇರುವುದೋ, ಯಾವುದಕ್ಕಿಂತಲೂ ಶ್ರೇಷ್ಠವಾದ ಬೇರೆ ವಸ್ತುವೇ ಇಲ್ಲವೋ, ಜ್ಞಾನದಿಂದಲೇ ತಿಳಿದುಕೊಂಡು, ಜ್ಞಾನದಿಂದಲೇ ಹೊಂದ

ಯೇ ಭಕ್ತಾಸ್ತಮಜಂ ದೇವಂ ನ ತೇ ಯಾಂತಿ ಪರಾಭವಂ ।
ತಮನಾಶಮಜಮವ್ಯಕ್ತಂ ಸರ್ವಭೂತಪರಾಯಣಂ ॥ ೪ ॥

ನಾರಾಯಣಮನಿರ್ದೇಶ್ಯಂ ಜಗತ್ಕಾರಣಕಾರಣಂ ।
ಸರ್ವತಃ ಪಾಣಿಪಾದಂತಂ ಸರ್ವತೋಽಕ್ಷಿಶಿರೋಮುಖಂ ॥ ೫ ॥

ಸರ್ವತಃ ಶ್ರುತಿಮಾಲ್ಲೋಕೇ ಸರ್ವಮಾವೃತ್ಯತಿಷ್ಠತಿ ।
ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ ॥ ೬ ॥

ಅಸಕ್ತಂ ಸರ್ವತಶ್ಚೈವ ನಿರ್ಗುಣಂ ಗುಣಭೋಕ್ತೃ ಚ ।
ಬಹಿರಂತಶ್ಚ ಭೂತಾನಾಮಚರಶ್ಚರ ಏವ ಚ ॥ ೭ ॥

ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕಂ ಚಯತ್ ।
ಅವಿಭಕ್ತಂ ವಿಭಕ್ತೇಷು ವಿಭಕ್ತಮಿವ ಚ ಸ್ಥಿತಂ ॥ ೮ ॥

---

ಬೇಕಾಗಿರುವ, ಎಲ್ಲರ ಹೃದಯಾಂತರಾಳದಲ್ಲಿ ಕುಳಿತಿರುವ; ಎಲ್ಲ ಪ್ರಪಂಚಕ್ಕೂ ಆಶ್ರಯಸ್ಥಾನವಾದ, ಪುಂಡರೀಕಾಕ್ಷನಾದ ನಿನ್ನನ್ನೇ ನಾನು ಸರ್ವದಾ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದೇನೆ. ಈ ಮಾತು ನಿಜ, ಮತ್ತು ಬಹಳ ಗುಟ್ಟಾದುದಯ್ಯ! ಇದೇ ನಿನ್ನ ಅವತಾರ ರಹಸ್ಯವೆಂದು ತಿಳಿಯೈ! ಭಾರ್ಗವರಾಮ!

೪-೯. ಹುಟ್ಟು ಸಾವುಗಳಿಲ್ಲದೆ ಇರುವ ಆ ಪರಬ್ರಹ್ಮಸ್ವರೂಪವನ್ನಾರು ತಿಳಿಯುವರೋ, ಅವರು ಯಾವಾಗಲೂ ಜಯಶಾಲಿಗಳೇ ಸರಿ. ಕೇಳೈ, ಪರಬ್ರಹ್ಮಸ್ವರೂಪನೆ! ನಿನ್ನ ಮಹಿಮೆಯನ್ನೇ ನಾನು ಈಗ ನಿನ್ನ ಮುಂದೆ ವರ್ಣಿಸುತ್ತೇನೆ! ಆ ಪರಬ್ರಹ್ಮನು ಸಕಲಕ್ಕೂ ಪ್ರಭುವು. ಹುಟ್ಟುವುದೂ, ಬೆಳೆಯುವುದೂ, ನಾಶವಾಗುವುದೂ ಅವನ ಸ್ವಭಾವವಲ್ಲ. ಅವನು ಯಾರಿಗೂ ಕಾಣಿಸಿಕೊಳ್ಳುವುದಿಲ್ಲ. ಸಕಲ ಭೂತಗಳಲ್ಲೂ ಅವನು ತುಂಬಿಕೊಂಡಿದ್ದಾನೆ. ಜಗತ್ಕಾರಣನಾದ ಬ್ರಹ್ಮನಿಗೂ ಅವನೇ ಕಾರಣನು. ಅವನನ್ನು ಬೆಟ್ಟು ತೋರಿಸಿ ಕಂಡುಹಿಡಿಯಲು ಆಗುವುದಿಲ್ಲ, ಅವನ ಕೈಕಾಲುಗಳು ಎಲ್ಲೆಲ್ಲೂ ಹರಡಿವೆ. ಅವನು ಎಲ್ಲ ಕಡೆಗಳಲ್ಲೂ ಕಣ್ಣು ತಲೆಗಳುಳ್ಳವನು. ವೇದಗಳು ಹೊಗಳುವುದು ಅವನನ್ನೇ. ಅವನ ಕಿವಿಗಳು ಎಲ್ಲವನ್ನೂ ಕೇಳಬಲ್ಲುದು. ಲೋಕವನ್ನೆಲ್ಲಾ ಆವರಿಸಿಕೊಂಡು ಅವನಿದ್ದಾನೆ. ಸಕಲ ಇಂದ್ರಿಯ ಗುಣಗಳಿಗೂ ಅವನು ಸಿಕ್ಕದೆ ಇರುವವನು. ಅವನಿಗೆ ಯಾವ ಇಂದ್ರಿಯವೂ ಇಲ್ಲ.

ಭೂತವರ್ತಿ ಚ ತತ್‌ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ।
ಜ್ಯೋತಿಷಾಮಪಿತಜ್ಜ್ಯೋತಿಃ ತಮಸಾಂ ಪರಮುಚ್ಯತೇ ॥ ೯ ॥
ಅನಾದಿಮತ್ಪರಂಬ್ರಹ್ಮ ನ ಸತ್ತನ್ನಾಸದುಚ್ಯತೇ ।
ಪ್ರಕೃತಿರ್ವಿಕೃತಿಯೋರ್ಽಸೌ ಜಗತಾಂ ಭೂತಭಾವನಃ ॥ ೧೦ ॥
ಯಸ್ಮಾತ್ಪರತರಂ ನಾಸ್ತಿ ತಂ ದೇವಂ ಚಿಂತಯಾಮ್ಯಹಂ ।
ಇಚ್ಛಾಮಾತ್ರಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೧೧ ॥
ಯಸ್ಯ ದೇವಾದಿದೇವಸ್ಯ ತಂ ದೇವಂ ಚಿಂತಯಾಮ್ಯಹಂ ।
ಯಸ್ಮಿನ್ಸರ್ವಂ ಯತಃ ಸರ್ವಂ ಯಃ ಸರ್ವಂ ಸರ್ವತಶ್ಚ ಯಃ ॥ ೧೨ ॥
ಯಶ್ಚ ಸರ್ವಮಯೋ ನಿತ್ಯಸ್ತಂ ದೇವಂ ಚಿಂತಯಾಮ್ಯಹಂ ।
ಯೋಗೀಶ್ವರಂ ಪದ್ಮನಾಭಂ ವಿಷ್ಣುಂ ಜಿಷ್ಣುಂ ಜಗತ್ಪತಿಂ ॥ ೧೩ ॥

---

ಅವನು ಯಾವುದನ್ನೂ ಅಂಟಿಸಿಕೊಳ್ಳುವುದಿಲ್ಲ. ಗುಣವಿಲ್ಲದವನಾದರೂ ಗುಣಗಳಿಂದ ಭೋಗಪಡುವವನು ಅವನೇ. ಪ್ರಾಣಿಗಳ ಒಳಗೂ ಹೊರಗೂ ಆಕಾಶದಂತೆ ಅವನು ತುಂಬಿದ್ದಾನೆ. ಚರಾಚರವಿಶ್ವವೆಲ್ಲವೂ ಅವನೇ. ಇದು ಬಹು ಸೂಕ್ಷ್ಮವಾದ್ದರಿಂದ ತಿಳಿಯಲಸಾಧ್ಯವಾಗಿದೆ. ಅವನು ತಿಳಿದವರಿಗೆ ಹತ್ತಿರದಲ್ಲೂ, ತಿಳಿಯದವರಿಗೆ ದೂರದಲ್ಲೂ ಇರುತ್ತಾನೆ. ಎಲ್ಲೆಲ್ಲೂ ತುಂಬಿರುವ ಅವನನ್ನು ನಾವು ಬೇರೆ ಬೇರೆ ಭಾಗವಾಗಿರುವವನಂತೆ ತಿಳಿಯುತ್ತಿದ್ದೇವೆ. ಹಿಂದಿದ್ದವನೂ, ಈಗ ಇರುವವನೂ, ಮುಂದೆ ಇರುವವನೂ ಅವನೇ. ಪಪ್ರಂಚವನ್ನು ಕಾಪಾಡಬಲ್ಲವನೂ, ನುಂಗಿಬಿಡುವವನೂ ಅವನೇ. ತೇಜಸ್ಸುಗಳನ್ನೆಲ್ಲಾ ಬೆಳಗಿಸುವವನೂ ಅವನೇ. ಕತ್ತಲೆ (ಅಜ್ಞಾನಿ) ಗೆ ಅವನು ಬಹು ದೂರದಲ್ಲಿದ್ದಾನೆ.

೧೦-೧೪. ಆ ಪರಬ್ರಹ್ಮನು ಅನಾದಿಯು. ಅದರ ವಿನಹ ಬೇರೆಯೇನೂ ಇಲ್ಲವೇ ಇಲ್ಲ. ಪ್ರಕೃತಿ ವಿಕೃತಿಗಳೆರಡೂ ಅವನೇ. ಅವನಿಗಿಂತ ಬೇರೆ ಯಾವುದೂ ಇಲ್ಲ. ಅಂಥ ಬ್ರಹ್ಮವಸ್ತುವನ್ನೇ ನಾನು ಸದಾ ಧ್ಯಾನಿಸುತ್ತೇನೆ. ಚರಾಚರಾತ್ಮಕವಾದೀ ತ್ರಿಲೋಕವೂ ಇವನ ಇಚ್ಛೆಯಲ್ಲಿ ನಿಂತಿದೆ. ಆ ದೇವರನ್ನು ನಾನು ಧ್ಯಾನಿಸುವೆನು. ಯಾವನಲ್ಲಿ ಈ ಜಗತ್ತು ನಿಂತಿದೆಯೋ, ಯಾವನಿಂದ ಈ ಜಗತ್ತು ಇದೆಯೋ, ಯಾವನು ಈ ಜಗದಾಕಾರವಾಗಿ ಕಾಣುವನೋ, ಎಲ್ಲೆಲ್ಲೂ ತುಂಬಿರುವವನಾವನೋ ಅವನನ್ನೇ ನಾನು ಧ್ಯಾನಿಸುತ್ತಿದ್ದೇನೆ. ಯೋಗೀಶ್ವರ, ಪದ್ಮನಾಭ, ವಿಷ್ಣು, ಜಿಷ್ಣು,

**ಜಗನ್ನಾಥಂ ವಿಶಾಲಾಕ್ಷಂ ಚಿಂತಯಾಮಿ ಜಗದ್ಗುರುಂ ।**
**ಶುಚಿಂ ಶುಚಿಪದಂ ಹಂಸಂ ತತ್ಪರಂ ಪರಮೇಷ್ಠಿನಂ ॥ ೧೪ ॥**

**ಯುಕ್ತ್ವಾ ಸರ್ವಾತ್ಮನಾತ್ಮಾನಂ ತಂ ಪ್ರಪದ್ಯೇಪ್ರಜಾಪತಿಂ ।**
**ಯಸ್ಮಿನ್ ವಿಶ್ವಾನಿ ಭೂತಾನಿ ತಿಷ್ಠಂತಿಚ ವಿಶಂತಿ ಚ ॥ ೧೫ ॥**

**ಗುಣಭೂತಾನಿ ಭೂತೇಶೇ ಸೂತ್ರೇ ಮಣಿಗಣಾ ಇವ ।**
**ಯಸ್ಮಿನ್ನಿತ್ಯೇ ತತೇ ತಂತೌ ದೃಷ್ಟೇ ಸ್ರಗಿವ ತಿಷ್ಠತಿ ॥ ೧೬ ॥**

**ಸದಸದ್ಗ್ರಥಿತಂವಿಶ್ವಂ ವಿಶ್ವಾಂಗೇವಿಶ್ವಕರ್ಮಣಿ ।**
**ಹರಿಂ ಸಹಸ್ರಶಿರಸಂ ಸಹಸ್ರಚರಣೇಕ್ಷಣಂ ॥ ೧೭ ॥**

**ಪ್ರಾಹುರ್ನಾರಾಯಣಂ ದೇವಂ ಯಂ ವಿಶ್ವಸ್ಯಪರಾಯಣಂ ।**
**ಅಣೀಯಸಾಮಣೀಯಾಂಸಂ ಸ್ಥವಿಷ್ಠಂಚ ಸ್ಥವೀಯಸಾಂ ॥ ೧೮ ॥**

---

ಜಗತ್ಪತಿ, ಜಗನ್ನಾಥ, ವಿಶಾಲಾಕ್ಷ ಮುಂತಾಗಿ ವಿಷ್ಣುಸಹಸ್ರನಾಮಗಳಿಂದ ಪೂಜಿಸಲ್ಪಡುವವನಾವನೋ ಆ ದೇವನನ್ನು ನಾನು ಧ್ಯಾನಿಸುತ್ತೇನೆ. ಶುಚಿ, ಶುಚಿಸ್ಥಾನ, ಹಂಸ, ಹಂಸಾತೀತ, ಪರಮೇಷ್ಠಿ ಎಂದು ಅವನನ್ನು ಹೇಳುವರು.

೧೫-೨೨ ಯಾವ ಪರಬ್ರಹ್ಮನು ಸರ್ವಾತ್ಮಕನಾಗಿ ತನ್ನನ್ನೇ ತಾನು ಸೇರಿಕೊಂಡಿರುವನೋ ಆ ಪ್ರಜಾನಾಥನನ್ನು ನಾನು ಧ್ಯಾನಿಸುವೆನು. ಈ ಪ್ರಪಂಚವೂ, ಸಕಲಪ್ರಾಣಿಗಳೂ ಯಾವನ ಆಧಾರದಲ್ಲಿ ನಿಂತಿವೆಯೋ, ಯಾವನ ಮುಖದಲ್ಲಿ ಪ್ರವೇಶಿಸುತಲಿವೆಯೋ, ಆ ಗುಣಭೂತನಾದ ಪರಮೇಶ್ವರನಲ್ಲಿ, ದಾರದಲ್ಲಿ ಪೋಣಿಸಿದ ಮಣಿಗಳ ಹಾಗೆ, ಈ ಪ್ರಾಣಿಗಳೆಲ್ಲವೂ ನಾರಿನಲ್ಲಿ ಕಟ್ಟಿದ ಹೂವಿನ ಹಾಗೆ ಜೋಡಿಸಲ್ಪಟ್ಟಿರುವುವು. ಸದಸದಾತ್ಮಕವಾದ ಈ ವಿಶ್ವವು, ಈ ವಿಶ್ವಕರ್ಮನ ವಿಶ್ವಾಂಗದಲ್ಲಿ ಮಾಲೆಯಂತೆ ಕಟ್ಟಲ್ಪಟ್ಟಿದೆ ಈ ವಿಶ್ವರೂಪಿಯು ಸಾವಿರತಲೆ, ಸಾವಿರಕಾಲು, ಸಾವಿರ ಕಣ್ಣುಗಳಿಂದ ಕೂಡಿ ನಾರಾಯಣನೆಂದು ಹೇಳಿಸಿಕೊಳ್ಳುವನು ಈ ನಾರಾಯಣನು ಅಣುವಿಗಿಂತ ಅಣುವಾಗಿಯೂ, ದೊಡ್ಡದಕ್ಕಿಂತ ದೊಡ್ಡದಾಗಿಯೂ, ದಪ್ಪಕ್ಕಿಂತ

ಗರೀಯಸಾಂ ಗರಿಷ್ಠಂಚ ಶ್ರೇಷ್ಠಂಚಶ್ರೇಯಸಾಮಪಿ ।
ಯಂವಾಕೇಷ್ವನುವಾಕೇಷು ನಿಷತ್ಸೂಪನಿಷತ್ಸ್ವಪಿ ॥ ೧೯ ॥

ಗೃಣಂತಿ ಸತ್ಯಕರ್ಮಾಣಾಂ ಸತ್ಯಂಸತ್ಯೇಷು ಸಾಮಸು ।
ಚತುರ್ಭಿಶ್ಚತುರಾತ್ಮಾನಂ ಸತ್ತ್ವಸ್ಥಂ ಸಾತ್ತ್ವತಾಂ ಪತಿಂ ॥ ೨೦ ॥

ಯಂ ದಿವ್ಯೈರ್ದೇವಮರ್ಚಂತಿ ಗುಹ್ಯೈಃ ಪರಮನಾಮಭಿಃ ।
ಯಮನನ್ಯೋ ವ್ಯಪೇತಾಶೀರಾತ್ಮಾನಂ ವೀತಕಲ್ಮಷಂ ॥ ೨೧ ॥

ಇಷ್ಟ್ವಾನಂತ್ಯಾಯ ಗೋವಿಂದಂ ಪಶ್ಯತ್ಯಾತ್ಮನ್ಯವಸ್ಥಿತಂ ।
ಪುರಾಣಃ ಪುರುಷಃಪ್ರೋಕ್ತೋ ಬ್ರಹ್ಮಾಪ್ರೋಕ್ತೋ ಯುಗಾದಿಷು ॥ ೨೨ ॥

ಕ್ಷಯೇ ಸಂಕರ್ಷಣಃ ಪ್ರೋಕ್ತಸ್ತಮುಪಾಸ್ಯಮುಪಾಸ್ಮಹೇ ।
ಯಮೇಕಂಬಹುಧಾತ್ಮಾನಂ ಪ್ರಾದುರ್ಭೂತಮಧೋಕ್ಷಜಂ ॥ ೨೩ ॥

---

ದಪ್ಪನಾಗಿಯೂ, ಶ್ರೇಷ್ಠಕ್ಕಿಂತ ಶ್ರೇಷ್ಠನಾಗಿಯೂ, ಇದಾನೆಂದೂ, ವೇದ ಋಕ್ಕುಗಳೂ, ಸೂಕ್ತಗಳೂ, ಅನುವಾದಕಗಳೂ, ಹೆಚ್ಚೇನು? ಸಕಲ ವೇದಗಳೂ, ಉಪನಿಷತ್ತುಗಳೂ ಹೊಗಳುತಲಿವೆ. ಸತ್ಯಕರ್ಮನಾದೀ ಪರಮಾತ್ಮನನ್ನು ಸಾಮವೇದಗಳು ಸತ್ಯಾತ್ಮಕನೆಂದು ಹೊಗಳಿವೆ. ಚತುರ್ವೇದಗಳೂ ಈ ಚತುರಾತ್ಮನನ್ನು ಸತ್ವಸ್ಥನೆಂದೂ ಸತ್ಯಪತಿಯೆಂದೂ ಹೊಗಳುತಲಿವೆ. ಯಾರು ಪರಮರಹಸ್ಯವಾದ ವಿಷ್ಣುಸಹಸ್ರನಾಮಗಳಿಂದ ಈ ಮಹಾತ್ಮನನ್ನು ಪೂಜಿಸುವರೋ ಅವರು ಸಕಲಪಾಪಗಳನ್ನೂ ಕಳೆದುಕೊಂಡು, ತಮ್ಮ ಹೃದಯಾರವಿಂದದಲ್ಲಿ ಪರಮಾತ್ಮನನ್ನು ನೋಡುವರು. ಪುರಾಣಪುರುಷನಾದೀ ಪರಬ್ರಹ್ಮನನ್ನು ಯುಗಾದಿಯಲ್ಲಿ ಬ್ರಹ್ಮನೆಂದು ಹೇಳುವರು.

೨೩-೨೯. ಸಂಹಾರಕಾಲದಲ್ಲಿ ಸಂಕರ್ಷಣನೆನ್ನುವರು. ಆ ಪರಬ್ರಹ್ಮನು ಇರುವವನೊಬ್ಬನೇ ಆದರೂ ಬಹುವಿಧವಾಗಿ ಹುಟ್ಟಿ ತೋರುವನಾದ್ದರಿಂದ ಅಧೋಕ್ಷಜನೆನ್ನುವರು. ಕ್ರಿಯಾವಂತರಾದ ಭಕ್ತರು ಸಕಲ ಇಷ್ಟಾರ್ಥಗಳನ್ನೂ ಕೊಡುವ ಈ

**ನಾನ್ಯಭಕ್ತಾಃ ಕ್ರಿಯಾವಂತೋ ಯಜಂತೇ ಸರ್ವಕಾಮದಂ ।**
**ಯಮಾಹುರ್ಜಗತಾಂ ಕೋಶಂ ಯಸ್ಮಿನ್ಸನ್ನಿಹಿತಾಃ ಪ್ರಜಾಃ ॥ ೨೪ ॥**

**ಯಸ್ಮಿಂಲ್ಲೋಕಾಃ ಸ್ಫುರಂತೀಮೆ ಜಾಲೆ ಶಕುನಯೋಯಥಾ ।**
**ಋತಮೇಕಾಕ್ಷರಂ ಬ್ರಹ್ಮ ಯತ್ತತ್ಸದಸತಃ ಪರಂ ॥ ೨೫ ॥**

**ಅನಾದಿಮಧ್ಯಪರ್ಯಂತಂ ನ ದೇವಾನರ್ಷಯೋ ವಿದುಃ ।**
**ಯಂ ಸುರಾಸುರಗಂಧರ್ವಾಸ್ಸಸಿದ್ಧರ್ಷಿಮಹೋರಗಾಃ ॥ ೨೬ ॥**

**ಪ್ರಯತಾ ನಿತ್ಯಮರ್ಚಂತಿ ಪರಮಂದುಃಖಭೇಷಜಂ ।**
**ಅನಾದಿನಿಧನಂ ದೇವಮಾತ್ಮಯೋನಿಂ ಸನಾತನಂ ॥ ೨೭ ॥**

**ಅಪ್ರತ್ಯರ್ಕ್ಯಮವಿಜ್ಞೇಯಂ ಹರಿಂ ನಾರಾಯಣಂ ಪ್ರಭುಂ ।**
**ಅತಿವಾಯ್ವಿಂದ್ರಕರ್ಮಾಣಂ ಚಾತಿಸೂರ್ಯಾಗ್ನಿತೇಜಸಂ ॥ ೨೮ ॥**

**ಅತಿಬುದ್ಧೀಂದ್ರಿಯಗ್ರಾಮಂ ತಂ ಪ್ರಪದ್ಯೆ ಪ್ರಜಾಪತಿಂ ।**
**ಯಂ ವೈ ವಿಶ್ವಸ್ಯ ಕರ್ತಾರಂ ಜಗತಸ್ತಸ್ಥುಷಾಂ ಪತಿಂ ॥ ೨೯ ॥**

---

ಪರಮಾತ್ಮನನ್ನು ಪೂಜಿಸುತ್ತಾರೆ. ಈ ಬ್ರಹ್ಮನನ್ನು ಲೋಕದ ಕಣಜವೆನ್ನುವರು ಏಕೆಂದರೆ, ಈ ಕಣಜದಲ್ಲಿ ಸಕಲ ಪ್ರಾಣಿಗಳೂ ತುಂಬಿಕೊಂಡಿವೆ. ಈ ಪರಬ್ರಹ್ಮ ವಸ್ತುವಿನಲ್ಲಿ ಸಕಲ ಪ್ರಪಂಚವೂ ಬಲೆಯಲ್ಲಿ ಸಿಕ್ಕಿಕೊಂಡ ಹಕ್ಕಿಗಳಂತೆ ಸಿಕ್ಕಿಕೊಂಡಿವೆ. ಈ ಏಕಾಕ್ಷರ (ಓಂ) ಪರಬ್ರಹ್ಮವು ಸತ್ಯವೇ ಆದುದೆಂದು ತಿಳಿಯಬೇಕು. ಇದಕ್ಕಿಂತ ಬೇರೆಯೇನೂ ಇಲ್ಲವೇ ಇಲ್ಲ. ಈ ವಿಷಯವನ್ನು ಉಪನಿಷತ್ತುಗಳೆಲ್ಲವೂ ವಿವಿಧವಾಗಿ ಹೊಗಳಿರುತ್ತವೆ. ಆದಿ ಮಧ್ಯಾಂತರಹಿತನಾದ ಈ ಪರಮಪುರುಷನನ್ನು ದೇವತೆಗಳೂ ಋಷಿಗಳೂ ಸಹ ತಿಳಿಯಲಾರರು. ಇಂತಹ ಮಹಾನುಭಾವನನ್ನು ಸುರಾಸುರ ಗಂಧರ್ವರೂ, ಸಿದ್ಧರೂ, ಋಷಿಗಳೂ, ಉರಗರೂ ಪರಿಶುದ್ಧರಾಗಿ ನಿತ್ಯವೂ ಪೂಜಿಸುತ್ತಾರೆ. ದುಃಖ ರೋಗಕ್ಕೆ ಔಷಧರೂಪನಾದ, ಸನಾತನ (ಪುರಾಣ) ನಾದ, ಊಹಿಸಲಶಕ್ಯನಾದ ತಿಳಿಯಲಶಕ್ಯನಾದ, ಇಂದ್ರಿಯಗಳಿಗೆ ಸಿಲುಕದ. ಸೂರ್ಯಾಗ್ನಿಗಳಿಗೆ ಮಿಗಿಲಾದ ತೇಜಸ್ಸುಳ್ಳ, ಬುದ್ಧಿಗೆ ಅತೀತನಾದ, ವಿಶ್ವಕರ್ತೃವಾದ, ಜಗತ್ತಿನಲ್ಲಿ ತೋರುವ ಎಲ್ಲಾ ಪದಾರ್ಥಗಳಿಗೂ ಯಜಮಾನನಾದ ಪರಬ್ರಹ್ಮನನ್ನು ನಾನು ಧ್ಯಾನಿಸುತ್ತೇನೆ.

ವದಂತಿ ಜಗತೋಽಧ್ಯಕ್ಷಮಕ್ಷರಂ ಪರಮಂ ಪದಂ ।
ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ ॥ ೩೦ ॥

ಚಂದ್ರಾದಿತ್ಯೌಚ ನಯನೇ ತಂ ದೇವಂ ಚಿಂತಯಾಮ್ಯಹಂ ।
ಯಸ್ಯ ತ್ರಿಲೋಕೀ ಜಠರೇ ಯಸ್ಯ ಕಾಷ್ಠಾಶ್ಚ ವಾಹನಾಃ ॥ ೩೧ ॥

ಯಸ್ಯ ಶ್ವಾಸಶ್ಚ ಪವನಸ್ತಂ ದೇವಂ ಚಿಂತಯಾಮ್ಯಹಂ ।
ವಿಷಯೇ ವರ್ತಮಾನಾನಾಂ ಯಂ ತಂ ವೈಶೇಷಿಕೈರ್ಗುಣೈಃ ॥ ೩೨ ॥

ಪ್ರಾಹುರ್ವಿಷಯಗೋಪ್ತಾರಂ ತಂ ದೇವಂ ಚಿಂತಯಾಮ್ಯಹಂ ।
ಪರಃ ಕಾಲಾತ್ಪರೋ ಯಜ್ಞಾತ್ಪರಸ್ಸದಸತಶ್ಚ ಯಃ ॥ ೩೩ ॥

ಅನಾದಿರಾದಿರ್ವಿಶ್ವಸ್ಯ ತಂ ದೇವಂ ಚಿಂತಯಾಮ್ಯಹಂ ।
ಪದ್ಭ್ಯಾಂ ಯಸ್ಯ ಕ್ಷಿತಿರ್ಜಾತಾ ಶ್ರೋತ್ರಾಭ್ಯಾಂಚ ತಥಾ ದಿಶಃ ॥ ೩೪ ॥

---

೩೦-೩೯. ಈ ಪರಮಪುರುಷನನ್ನು ಜಗತ್ತಿಗೆ ಅಧ್ಯಕ್ಷನೆಂದೂ, ಅಕ್ಷರಸ್ಥನೆಂದೂ ಕರೆಯುತ್ತಾರೆ. ಈ ಪರಮಾತ್ಮನಿಗೆ ಅಗ್ನಿಯೇ ಮುಖವು. ಸ್ವರ್ಗವೇ ತಲೆಯು. ಆಕಾಶವೇ ಹೊಕ್ಕಳು. ಭೂಮಿಯೇ ಪಾದಗಳು. ಚಂದ್ರಸೂರ್ಯರೇ ಕಣ್ಣುಗಳು. ಈತನ ಹೊಟ್ಟೆಯಲ್ಲಿ ಮೂರುಲೋಕಗಳೂ ಅಡಗಿವೆ ಕಾಲಪುರುಷನೇ ಈತನ ವಾಹನವು. ಗಾಳಿಯೇ ಉಸಿರು. ಯಜ್ಞಕ್ಕಿಂತಲೂ ಕಾಲಕ್ಕಿಂತಲೂ ಸದಸತ್ತುಗಳಿಂದಲೂ ಇವನು ಹೊರಚ್ಚಾದವನು ವಿಷಯಾಸಕ್ತರಾದವರಿಗೆ ವಿಶೇಷಗುಣಗಳಿಂದ ವಿಷಯಗೋಪನ (ನಿಗ್ರಹ) ಮಾಡಿಸಲು ಶಕ್ತನಾದ ಆ ಪರಮಾತ್ಮನನ್ನು ನಾನು ಸದಾ ಧ್ಯಾನಿಸುವೆನು. ಪ್ರಪಂಚಕ್ಕೆ ಅನಾದಿಯೆಂದೂ ಆದಿಯೆಂದೂ ಯಾವನನ್ನು ಹೇಳುವರೋ, ಯಾವನ ಪಾದಗಳಿಂದ ಭೂಮಿಯು ಹುಟ್ಟಿತೋ, ಕಿವಿಗಳಿಂದ ದಿಕ್ಕುಗಳು ಉತ್ಪತ್ತಿಯಾದುವೊ, ಯಾವನ ಪೂರ್ವಭಾಗದಲ್ಲಿ ಅಮರನಗರಿಯಿರು

ಪೂರ್ವಭಾಗೇ ದಿವಂ ಯಸ್ಯ ತಂ ದೇವಂ ಚಿಂತಯಾಮ್ಯಹಂ ।
ನಾಭ್ಯಾಂ ಯಸ್ಯಾಂತರಿಕ್ಷಸ್ಯ ನಾಸಾಭ್ಯಾಂ ಪವನಸ್ಯ ಚ ॥ ೩೫ ॥

ಪ್ರಸ್ವೇದಾದಂಭಸಾಂ ಜನ್ಮ ತಂ ದೇವಂ ಚಿಂತಯಾಮ್ಯಹಂ ॥ ೩೬ ॥

ವರಾಹಶೀರ್ಷಂ ನರಸಿಂಹರೂಪಂ
ದೇವೇಶ್ವರಂ ವಾಮನರೂಪರೂಪಂ ।
ತ್ರೈಲೋಕ್ಯನಾಥಂ ವರದಂ ವರೇಣ್ಯಂ
ತಂರಾಮನಿತ್ಯಂ ಮನಸಾನತೋಽಸ್ಮಿ ॥ ೩೭ ॥

ವಕ್ತ್ರಾದ್ಯಸ್ಯಬ್ರಾಹ್ಮಣಾಸ್ಸಂಪ್ರಸೂತಾ
ಯದ್ವಕ್ಷಸಃ ಕ್ಷತ್ರಿಯಾಃ ಸಂಪ್ರಸೂತಾಃ ।
ಯಸ್ಯೋರುಯುಗ್ಮಾಚ್ಚ ತಥೈವವೈಶ್ಯಾಃ
ಪದ್ಭ್ಯಾಂತಥಾಯಸ್ಯ ಶೂದ್ರಾಃ ಪ್ರಸೂತಾಃ ॥ ೩೮ ॥

---

ವುದೋ ಆ ದೇವರನ್ನು ಧ್ಯಾನಿಸುತ್ತೇನೆ ಯಾರ ನಾಭಿಯಿಂದ ಆಕಾಶವಾಯಿತೋ, ಯಾವನ ಮೂಗಿನಿಂದ ವಾಯು ಜನಿಸಿದನೋ, ಯಾರ ಮೈ ಬೆವರಿನಿಂದ ಸಮುದ್ರ ಗಳು ಹುಟ್ಟಿದುವೋ ಅಂಥಾ ದೇವರನ್ನು ಧ್ಯಾನಮಾಡುತ್ತೇನೆ. ಹಂದಿಯ ತಲೆಯಂತೆ ನರಸಿಂಹ ರೂಪದಂತೆ, ವಾಮನ ರೂಪಿನಂತೆ ಅವತಾರಮಾಡಿದ, ತ್ರಿಲೋಕ ರಕ್ಷಕ ನಾದ ಮಹಾಸ್ವಾಮಿಯನ್ನು ಧ್ಯಾನಿಸುತ್ತೇನೆ. ರಾಮಾ ! ಇನ್ನೂ ಕೇಳು. ಮುಖ ದಿಂದ ಬ್ರಾಹ್ಮಣರನ್ನೂ, ಬಾಹುಗಳಿಂದ ಕ್ಷತ್ರಿಯರನ್ನೂ, ತೊಡೆಯಿಂದ ವೈಶ್ಯರನ್ನೂ ಕಾಲುಗಳಿಂದ ಶೂದ್ರರನ್ನೂ ಉತ್ಪತ್ತಿಮಾಡಿದ ಮಹಾನುಭಾವನನ್ನು ನಾನು ಧ್ಯಾನಿಸು ವೆನು. ಅದೆಂತು ಜಗತ್ತೆಲ್ಲವೂ ಯಾರಿಂದ ವ್ಯಾಪ್ತವಾಗಿದೆಯೋ, ಯಾವನ ವಿಭೂತಿ (ಮಹಿಮೆ) ಗಳಿಂದ ಲೋಕವೆಲ್ಲವೂ ತುಂಬಿದೆಯೋ ಅಂಥಾ ವರದರಾಜನನ್ನು ನಾನು

**ವ್ಯಾಪ್ತಂ ತಥಾ ಯೇನ ಜಗತ್ಸಮಗ್ರಂ**
**ವಿಭೂತಿಭಿರ್ಭೂತಭವೋದ್ಭವೇನ ।**
**ದೇವಾಧಿನಾಥಂ ವರದಂ ವರೇಣ್ಯಂ**
**ತಂ ರಾಮನಿತ್ಯಂ ಮನಸಾ ನತೋಽಸ್ಮಿ ॥ ೩೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶ್ರೀ ಭಾರ್ಗವರಾಮಪ್ರಶ್ನೇ ಶಂಕರಗೀತಾಸುಧ್ಯೇಯನಿರ್ದೇಶೋ ನಾಮ ದ್ವಿಪಂಚಾಶತ್ತಮೋಧ್ಯಾಯಃ**

---

ನಿತ್ಯವೂ ಧ್ಯಾನಿಸುತ್ತಲಿದೇನೆ. ಕೇಳಯ್ಯ, ರಾಮ!!'' ಎಂದು ಈಶ್ವರನು ಪರಶುರಾಮನೊಡನೆ ಹೇಳಿದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಶ್ರೀ ಭಾರ್ಗವರಾಮ ಪ್ರಶ್ನೆಯೆಂಬ ಶಂಕರಗೀತೆಯಲ್ಲಿ ಧ್ಯೇಯನಿರ್ದೇಶವೆಂಬ ಹೆಸರಿನ ಐವತ್ತೆರಡನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ತ್ರಿಪಂಚಾಶತ್ತಮೋಽಧ್ಯಾಯಃ

---

॥ ರಾಮ ಉವಾಚ ॥

ವಾರಾಹಂ ನಾರಸಿಂಹಂ ಚ ವಾಮನಂಚ ಮಹೇಶ್ವರ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ಪ್ರಾದುರ್ಭಾವಾನ್ಮಹಾತ್ಮನಃ ॥ ೧ ॥

॥ ಶಂಕರ ಉವಾಚ ॥

ಅದಿತಿಶ್ಚ ದಿತಿಶ್ಚೈವ ದ್ವೇ ಭಾರ್ಯೇ ಕಶ್ಯಪಸ್ಯ ಚ ।
ಅದಿತಿರ್ಜನಯಾಮಾಸ ದೇವಾನಿಂದ್ರಪುರೋಗಮಾನ್ ॥ ೨ ॥

ದಿತಿಶ್ಚ ಜನಯಾಮಾಸ ದ್ವೌ ಪುತ್ರೌ ಭೀಮವಿಕ್ರಮೌ ।
ಹಿರಣ್ಯಾಕ್ಷಂ ದುರಾಧರ್ಷಂ ಹಿರಣ್ಯಕಶಿಪುಂ ತಥಾ ॥ ೩ ॥

---

### ಐವತ್ತಮೂರನೆಯ ಅಧ್ಯಾಯ

೧. ಪರಶುರಾಮನು ಹೇಳುತ್ತಾನೆ— ಎಲೈ, ಪರಮೇಶ್ವರನೇ ವರಾಹ ನರಸಿಂಹ ವಾಮನಾವತಾರಗಳನ್ನು ಮಾಡಿದ ಮಹಾವಿಷ್ಣುವಿನ ಉತ್ಪತ್ತಿಕ್ರಮಗಳನ್ನು ನಿನ್ನ ಬಾಯಿಂದ ಕೇಳಬೇಕೆಂದು ಆಸೆಯಾಗಿದೆ.

೨. ಈಶ್ವರನು ಹೇಳುತ್ತಾನೆ- ಕಶ್ಯಪರಿಗೆ ಅದಿತಿ, ದಿತಿ ಯೆಂಬುದಾಗಿ ಇಬ್ಬರು ಹೆಂಡತಿಯರಿದ್ದರು. ಅವರಲ್ಲಿ ಆ ದಿತಿಯು ಇಂದ್ರನೇ ಮೊದಲಾದ ದೇವತೆಗಳನ್ನು ಪ್ರಸುವಿಸಿದಳು.

೩. ದಿತಿಯು ಭಯಂಕರ ಪರಾಕ್ರಮಿಗಳಾದ ಹಿರಣ್ಯಾಕ್ಷ, ಹಿರಣ್ಯಕಶಿಪುಗಳೆಂಬಿಬ್ಬರು ಮಕ್ಕಳನ್ನು ಪಡೆದಳು.

ತತೋಽಭಿಷಿಕ್ತವಾಂಚ್ಛಕ್ರಂ ದೇವರಾಜ್ಯೇಪ್ರಜಾಪತಿಃ ।
ದಾನವಾನಾಂ ತಥಾ ರಾಜ್ಯೆ ಹಿರಣ್ಯಾಕ್ಷಂ ಬಲೋತ್ಕಟಂ ॥ ೪ ॥

ಅಭಿಷಿಚ್ಯ ತಯೋಃ ಪ್ರಾದಾತ್ಸ್ವರ್ಗಂ ಪಾತಾಲಮೇವ ಚ ।
ಪಾತಾಲಂ ಶಾಸತಿ ತಥಾ ಹಿರಣ್ಯಾಕ್ಷೇ ಮಹಾಽಸುರೇ ॥ ೫ ॥

ಧರಾಧಾರಾಧರಾಂತ್ಯಕ್ತ್ವಾ ಖಮುತ್ಪೇತೂ ರಯಾತ್ಪುರಾ ।
ಪಕ್ಷವಂತೋ ಮಹಾಭಾಗ ನೂನಂ ಭಾವ್ಯರ್ಥಚೋದಿತಾಃ ॥ ೬ ॥

ಧರಾಧರಪರಿತ್ಯಕ್ತಾ ಧರಾ ಚಲನಿಬಂಧನಾ ।
ಯದಾ ತದಾ ದೈತ್ಯಪುರಂ ಸಕಲಂ ವ್ಯಾಪ್ತಮಂಭಸಾ ॥ ೭ ॥

ದೃಷ್ಟ್ವೈವ ಸ್ವಪುರಂ ವ್ಯಾಪ್ತಮಂಭಸಾ ದಿತಿಜೋತ್ತಮಃ ।
ಸೈನ್ಯಮುದ್ಯೋಜಯಾಮಾಸ ಜಾತಶಂಕಃ ಸುರಾನ್ಪ್ರತಿ ॥ ೮ ॥

---

೪-೧೨. ಬಳಿಕ ಬ್ರಹ್ಮನು ಇಂದ್ರನನ್ನು ಸ್ವರ್ಗಲೋಕಕ್ಕೂ, ಹಿರಣ್ಯಾಕ್ಷನನ್ನು ದಾನವ (ಪಾತಾಳ) ಲೋಕಕ್ಕೂ ಅಧಿಪತಿಗಳನ್ನಾಗಿ ಮಾಡಿದನು. ಈ ರೀತಿ ಇವರಿಬ್ಬರೂ ಸ್ವರ್ಗಪಾತಾಳಗಳೆರಡನ್ನೂ ಪರಿಪಾಲಿಸಿಕೊಂಡು ಬರುತ್ತಿರುವಲ್ಲಿ ಭೂಮಿಯ ಮೇಲಿದ್ದ ಪರ್ವತಗಳೆಲ್ಲಾ ರೆಕ್ಕೆಗಳನ್ನು ಬಿಚ್ಚಿಕೊಂಡು ಇದ್ದಕ್ಕಿದ್ದಂತೆ ಆಕಾಶಕ್ಕೆ ಹಾರಿದುವು. ಮುಂದೆ ನಡೆಯಬೇಕಾಗಿದ್ದ ಕೆಲಸಕ್ಕಾಗಿಯೇ ಈ ಕೆಲಸ ನಡೆಯಿತು. (ಪೂರ್ವದಲ್ಲಿ ಬೆಟ್ಟಗಳಿಗೆಲ್ಲಾ ರೆಕ್ಕೆಗಳಿದ್ದುವು.) ಯಾವಾಗ ಭಾರವಾಗಿದ್ದ ಬೆಟ್ಟಗಳೆಲ್ಲಾ ಹಾರಿಹೋದುವೋ ಆಗ ಭೂಮಿಗೆ ಭಾರ ಕಮ್ಮಿಯಾಗಿ ಸಡಿಲವಾಗಿ ಹೋಯಿತು. ಆಗ ಭೂಮಿ ಬಿರುಕುಬಿಟ್ಟು ಆ ಬಿರುಕಿನಿಂದ ಪಾತಾಳದಲ್ಲೆಲ್ಲಾ ನೀರು ತುಂಬಿಕೊಂಡಿತು. ಈ ರೀತಿ ತನ್ನ ಪಟ್ಟಣದಲ್ಲಿ ನೀರು ತುಂಬಿಹೋದುದನ್ನು ನೋಡಿ ಹಿರಣ್ಯಾಕ್ಷನು ಇದು ತನ್ನ ಜ್ಞಾತಿಗಳಾದ ದೇವತೆಗಳ ಕೆಲಸವಿರಬಹುದೆಂದು ಸಂದೇಹಪಟ್ಟವನಾಗಿ ದೇವತೆಗಳ ಮೇಲೆ ಯುದ್ಧಮಾಡಲು ಸೈನ್ಯಸಹಿತ ತೆರಳಿದನು. ಚತುರಂಗ

ಉದ್ಯುಕ್ತೇನ ಸ ಸೈನ್ಯೇನ ದೈತ್ಯಾನಾಂ ಚತುರಂಗಿಣಾ ।
ವಿಜಿತ್ಯ ತ್ರಿದಶಾಂಜನ್ಯೇ ಆಜಹಾರ ತ್ರಿವಿಷ್ಟಪಂ　　　　॥ ೯ ॥

ಹೃತಾಧಿಕಾರಾಸ್ತ್ರಿದಶಾ ಜಗ್ಮುಃ ಶರಣಮಂಜಸಾ ।
ದೇವರಾಜಂ ಪುರಸ್ಕೃತ್ಯ ವಾಸುದೇವಮಜಂ ವಿಭುಂ　　　　॥ ೧೦ ॥

ತ್ರಿದಶಾಚ್ಛರಣಂ ಪ್ರಾಪ್ತಾನ್ಹಿರಣ್ಯಾಕ್ಷ ವಿವಾಸಿತಾನ್ ।
ಸಂಯೋಜ್ಯಾಽಭಯದಾನೇನ ವಿಸಸರ್ಜ ಜನಾರ್ದನಃ　　　　॥ ೧೧ ॥

ವಿಸೃಜ್ಯ ತ್ರಿದಶಾನ್ಸರ್ವಾಶ್ಚಿಂತಯಾಮಾಸ ಕೇಶವಃ ।
ಕಿನ್ನು ರೂಪ ಮಹಂ ಕೃತ್ವಾ ಘಾತಯಿಷ್ಯೇ ಸುರಾರ್ದನಂ　　　　॥ ೧೨ ॥

ತಿರ್ಯಙ್ಮನುಷ್ಯದೇವಾನಾಮವಧ್ಯಃ ಸ ಸುರಾಂತಕಃ ।
ಬ್ರಹ್ಮಣೋ ವರದಾನೇನ ತಸ್ಮಾತ್ತಸ್ಯ ವಧೇಪ್ಸಯಾ　　　　॥ ೧೩ ॥

---

ಬಲ ಸಹಿತವಾಗಿ ಹೊರಟ ಆ ದೈತ್ಯಸೈನ್ಯವು ದೇವತೆಗಳನ್ನು ಜಯಿಸಿ ಸ್ವರ್ಗವನ್ನು ಆಕ್ರಮಿಸಿಕೊಂಡಿತು. ದೇವತೆಗಳೆಲ್ಲರೂ ತಮ್ಮ ತಮ್ಮ ಅಧಿಕಾರಗಳನ್ನು ಕಳೆದುಕೊಂಡವರಾಗಿ ದಿಕ್ಕಿಲ್ಲದೆ ಮಹಾವಿಷ್ಣುವನ್ನು ಇಂದ್ರನೊಡನೆ ಶರಣುಹೊಂದಿದರು. ಈ ರೀತಿ ಶರಣಾಗತರಾಗಿ ಬಂದ ದೇವತೆಗಳನ್ನು ನೋಡಿ ಕೇಶವನು ಅವರಿಗೆ ಅಭಯ ಪ್ರದಾನಮಾಡಿ ಅವರನ್ನು ಬೀಳ್ಕೊಟ್ಟು ನಾನೀಗ ಯಾವ ರೂಪವನ್ನು ಧರಿಸಿ ರಾಕ್ಷಸರನ್ನು ಸಂಹರಿಸಲೆಂದು ಆಲೋಚಿಸಿದನು.

೧೩-೨೩. ಪಶು ಪಕ್ಷಿ ಮೃಗಾದಿಗಳಿಂದಾಗಲೀ ಮಾನವ ದೇವರ್ಕಳಿಂದಾಗಲೀ ಅವನನ್ನು ವಧಿಸಲಾಗುವುದಿಲ್ಲ. ಅವನಿಗೆ ಬ್ರಹ್ಮನ ವರಮಹಿಮೆಯು ಅಪಾರವಾಗಿದೆ ಆದ್ದರಿಂದ ನಾನು ನೃ ವರಾಹ (ಮನುಷ್ಯ ಮತ್ತು ಹಂದಿಯ) ರೂಪನಾಗಿ ಅವತ

ನೃವರಾಹೋ ಭವಿಷ್ಯಾಮಿ ನದೇವೋ ನ ಚ ಮಾನುಷಃ ।
ತಿರ್ಯಗ್ರೂಪೇಣ ಚೈವಾಹಂ ಘಾತಯಿಷ್ಯಾಮಿ ತಂ ತತಃ ॥ ೧೪ ॥

ಏತಾವದುಕ್ತ್ವಾ ಸಂಗೇನ ನೃವರಾಹೋಽಭವತ್ಪ್ರಭುಃ ।
ಚೂರ್ಣಿತಾಂಜನಶೈಲಾಭಸ್ತಪ್ತಜಾಂಬೂನದಾಂಬರಃ ॥ ೧೫ ॥

ಯಮುನಾವರ್ತಕೃಷ್ಣಾಂಗಃ ತದಾವರ್ತತನೂರುಹಃ ।
ತದೋಘ ಇವ ದುರ್ವಾರ್ಯಸ್ತತ್ಪಿತ್ರಾ ತೇಜಸಾ ಸಮಃ ॥ ೧೬ ॥

ತತ್ಪ್ರವಾಹ ಇವಾಕ್ಷೋಭ್ಯ ಸ್ತತ್ಪ್ರವಾಹ ಇವೌಘವಾನ್ ।
ತತ್ಪ್ರವಾಹಾಮಲತನುಸ್ತತ್ಪ್ರವಾಹಮನೋಹರಃ ॥ ೧೭ ॥

ಸಜಲಾಂಜನಕೃಷ್ಣಾಂಗಃ ಸಜಲಾಂಬುದಸಚ್ಛವಿಃ ।
ಪೀತವಾಸಾಸ್ತದಾ ಭಾತಿ ಸವಿದ್ಯುದಿವ ತೋಯದಃ ॥ ೧೮ ॥

---

ರಿಸಿ ಆ ದುರಾತ್ಮನನ್ನು ಸಂಹರಿಸುತ್ತೇನೆ. ಈ ರೀತಿ ಮಹಾ ಪ್ರಭುವು ಸಂಕಲ್ಪಮಾಡಿದೊಡನೆ " ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ " ಎಂಬಂತೆ ಆ ಮಹಾನುಭಾವನು ನೃ ವರಾಹ ರೂಪದಿಂದ ಕಾಣಿಸಿಕೊಂಡನು.

ಆ ನೃ ವರಾಹವನ್ನು ಇಲ್ಲಿ ವರ್ಣಿಸಲಾಗಿದೆ. ಅರೆದು ಪುಡಿ ಮಾಡಿದ ಕಾಡಿಗೆಯ ಬೆಟ್ಟದಂತೆಯೂ ಕಾಯಿಸಿದ ಚಿನ್ನದಂತಹ ಬಣ್ಣದ ಬಟ್ಟೆಯನ್ನು ಧರಿಸಿಯೂ ಯಮುನಾನದಿಯ ಸುಳಿಯಂತೆ ಕಪ್ಪಾದ ದೇಹವುಳ್ಳವನಾಗಿಯೂ ಅದೇ ಬಣ್ಣದ ಕೂದಲುಗಳುಳ್ಳವನಾಗಿಯೂ, ಕಪ್ಪು ಮೋಡದಂತೆ ಹೊಳೆಯುತ್ತಲೂ, ಪೀತಾಂಬರ ಧಾರಿಯಾದ್ದರಿಂದ ಮಿಂಚಿನಿಂದ ಕೂಡಿದ ಮೋಡದಂತೆಯೂ, ಎದೆಯಲ್ಲಿ ಶುದ್ಧ ಸ್ಫಟಿಕ ಹಾರವನ್ನು ಧರಿಸಿದ್ದುದರಿಂದ ಚಂದ್ರನಂತೆ ಪ್ರಕಾಶಿಸುತ್ತಲೂ, ಇದ್ದ ಆ ಪರಮಾತ್ಮನು ನೀರಿನಿಂದ ತುಂಬಿದ ಮೋಡದಂತೆ ಕಾಣುತ್ತಿದ್ದನು. ಆ ಮೂರ್ತಿಯು ಚಂದ್ರರೇಖೆ

**ಉರಸಾ ಧಾರಯನ್ಹಾರಂ ಶಶಾಂಕಸದೃಶಚ್ಛವಿಃ ।**
**ಶುಶುಭೇ ಸರ್ವಭೂತಾತ್ಮಾ ಸಬಲಾಕ ಇವಾಂಬುದಃ ॥ ೧೯ ॥**

**ಶಶಾಂಕಲೇಖಾವಿಮಲೇ ದಂಷ್ಟ್ರೇ ತಸ್ಯ ವಿರೇಜತುಃ ।**
**ಮೇಘಾಂತರಿತಬಿಂಬಸ್ಯ ದ್ವೌ ಭಾಗೌ ಶಶಿನೋ ಯಥಾ ॥ ೨೦ ॥**

**ಕರಾಭ್ಯಾಂ ಧಾರಯನ್ಭಾತಿ ಶಂಖಚಕ್ರೇ ಜನಾರ್ದನಃ ।**
**ಚಂದ್ರಾರ್ಕಸದೃಶೇ ರಾಮ ಪಾದಚಾರೀವ ಪರ್ವತಃ ॥ ೨೧ ॥**

**ಮಹಾಜೀಮೂತಸಂಕಾಶೋ ಮಹಾಜೀಮೂತಸನ್ನಿಭಃ ।**
**ಮಹಾಜೀಮೂತವದ್ವೇಗೀ ಮಹಾಬಲಪರಾಕ್ರಮಃ ॥ ೨೨ ॥**

**ದಾನವೇಂದ್ರವಧಾಕಾಂಕ್ಷೀ ಹಿರಣ್ಯಾಕ್ಷಸಭಾಂ ಯಯೌ ।**
**ಹಿರಣ್ಯಾಕ್ಷೋಪಿತಂ ದೃಷ್ಟ್ವಾ ನೃವರಾಹಂ ಜನಾರ್ದನಂ ॥ ೨೩ ॥**

---

ಯುತಿದ್ದ ಎರಡು ಕೋರೇ ಹಲ್ಲುಗಳನ್ನು ಹೊಂದಿತ್ತು. ಮೂತಿಯು ವರಾಹದಂತೆಯೂ, ಉಳಿದ ಅಂಗವು ಮನುಷ್ಯರಂತೆಯೂ, ಇತ್ತು. ಆ ನೃ ವರಾಹನು ತನ್ನೆರಡು ಕೈಗಳಿಂದಲೂ ಶಂಖಚಕ್ರವನ್ನು ಧರಿಸಿದ್ದನು. ಸೂರ್ಯ ಚಂದ್ರರಂತೆ ಹೊಳೆಯುತ್ತಿದ್ದ ಆ ಮೂರ್ತಿಯನ್ನು ನೋಡಿದರೆ ಬೆಟ್ಟವು ಕಾಲುಗಳಿಂದ ನಡೆಯುತಲಿದೆಯೋ ಎಂಬಂತೆ ಕಾಣುತ್ತಿತ್ತು. ಆ ಮಹಾನುಭಾವನು ಮಹಾ ಮೇಘದಂತೆ ಪ್ರಕಾಶಿಸುತ್ತಾ ಮಹಾ ಪರಾಕ್ರಮಶಾಲಿಯಾಗಿ ರಾಕ್ಷಸರಂ ಸಂಹಾರಮಾಡುವುದಕ್ಕಾಗಿ ಹಿರಣ್ಯಾಕ್ಷನ ರಾಜಸಭೆಯನ್ನು ಪ್ರವೇಶಿಸಿದನು. ನೃ ವರಾಹರೂಪಧಾರೀ ಜನಾರ್ದನನು ತನ್ನ ಸಭೆಗೆ ಬಂದುದನ್ನು ಹಿರಣ್ಯಾಕ್ಷನು ನೋಡಿದನು.

ದಾನವಾಂಶ್ಚೋದಯಾಮಾಸ ತಿರ್ಯಗ್ಗಾತ್ರಮನುಪೂರ್ವಕಂ ।
ಗೃಹ್ಯತಾಂ ವಧ್ಯತಾಂಚೈವಕ್ರೀಡಾರ್ಥಂ ಸ್ಥಾಪ್ಯತಾಂ ತಥಾ ॥ ೨೪ ॥

ಇತ್ಯೇವಮುಕ್ತಾಃ ಸಂರಬ್ಧಾಃ ಪಾಶಹಸ್ತಾಂಸ್ತುದಾನವಾನ್ ।
ಜಿಘೃಕ್ಷಮಾಣಾಂಶ್ಚಕ್ರೇಣ ಜಘಾನ ಶತಶೋ ರಣೇ ॥ ೨೫ ॥

ಹನ್ಯಮಾನೇಷು ದೈತ್ಯೇಷು ಹಿರಣ್ಯಾಕ್ಷೋಽಥ ದಾನವಾನ್ ।
ಚೋದಯಾಮಾಸ ಸಂರಬ್ಧಾನ್ನರಾಹಾಧಿಕಕಾರಣಾತ್ ॥ ೨೬ ॥

ಚೋದಿತಾ ದಾನವೇಂದ್ರೇಣ ದಾನವಾಃ ಶಸ್ತ್ರಪಾಣಯಃ ।
ಪ್ರವವರ್ಷುಸ್ತಥಾ ದೇವಂ ಶಸ್ತ್ರವರ್ಷೇಣ ಕೇಶವಂ ॥ ೨೭ ॥

ದೈತ್ಯಾಃ ಶಸ್ತ್ರನಿಪಾತೇನ ದೇವದೇವಸ್ಯ ಚಕ್ರಿಣಃ ।
ನೈವ ಶೇಕುರ್ವ್ಯಥಾ ಕರ್ತುಂ ಯತ್ನವಂತೋಽಪಿನಿರ್ಭಯಾಃ ॥ ೨೮ ॥

---

೨೪-೩೦. ಅಪರೂಪವಾದ ಹಂದಿಯ ಆಕಾರ ಮನುಷ್ಯಾಕಾರಗಳಿಂದ ಕೂಡಿದ ಒಂದು ಪ್ರಾಣಿಯು ರಾಜಸಭೆಗೆ ನುಗ್ಗಿದುದನ್ನು ನೋಡಿ ಹಿರಣ್ಯಾಕ್ಷನು ರಾಕ್ಷಸರನ್ನು ಕುರಿತು " ಈ ಮೃಗವನ್ನು ಹಿಡಿದು ಕೊಂದುಬಿಡಿ. ಅಥವಾ ಕ್ರೀಡಾವನದಲ್ಲಿ ಇಡಿಸಿರಿ " ಹೀಗೆ ಹೇಳಿದೊಡನೆ ಸಂಭ್ರಮದಿಂದ ಅನೇಕ ರಾಕ್ಷಸರು ಪಾಶ (ಹಗ್ಗ) ಗಳನ್ನು ಕೈಗೆ ತೆಗೆದುಕೊಂಡು ಅದನ್ನು ಕಟ್ಟಲು ಪ್ರಯತ್ನಪಡಲು ನೃವರಾಹ ಮೂರ್ತಿಯು ಚಕ್ರವನ್ನು ಪ್ರಯೋಗಿಸಿ ನೂರಾರು ಮಂದಿ ದಾನವರನ್ನು ಯಮಪುರಿಗೆ ಅಟ್ಟಿದನು. ಹೀಗೆ ರಾಕ್ಷಸರು ಹತರಾದುದನ್ನು ನೋಡಿ ಆಶ್ಚರ್ಯಪಡುತ್ತಾ ಈ ಹಂದಿಯನ್ನು ಕೊಲ್ಲಿರೆಂದು ಶಸ್ತ್ರಾಸ್ತ್ರ ಧಾರಿಗಳಾದ ಬಹುಮಂದಿ ರಾಕ್ಷಸರನ್ನು ಪುನಃ ರಣರಂಗಕ್ಕೆ ಕಳುಹಿದನು. ಅವರೆಲ್ಲರೂ ನೃವರಾಹರೂಪೀ ಪರಮಾತ್ಮನ ಮೇಲೆ ಶಸ್ತ್ರಾಸ್ತ್ರಗಳ ಮಳೆಯನ್ನೆ ಸುರಿಸಿದರು. ರಾಕ್ಷಸರು ಎಷ್ಟೇ ಪ್ರಯತ್ನಪಟ್ಟಾಗ್ಯೂ ವ್ಯರ್ಥ

ಹನ್ಯಮಾನೋಽಪಿದೈತ್ಯೇಂದ್ರೈರ್ದಾನವಾನ್ಮಧುಸೂದನಃ ।
ಜಘಾನ ಚಕ್ರೇಣ ತದಾ ಶತಶೋಽಥ ಸಹಸ್ರಶಃ ॥ ೨೯ ॥

ಹನ್ಯಮಾನೇಷು ಸೈನ್ಯೇಷು ಹಿರಣ್ಯಾಕ್ಷಃ ಸ್ವಯಂ ತತಃ ॥
ಉತ್ಥಾಯ ಧನುಷಾ ದೇವಂ ಪ್ರವವರ್ಷ ಸುರೋತ್ತಮಂ ॥ ೩೦ ॥

ಹಿರಣ್ಯಾಕ್ಷಸ್ತು ತಾರ್ದೃಷ್ಟ್ವಾ ವಿಫಲಾಂಶ್ಚ ಶಿಲೀಮುಖಾನ್ ।
ಶಿಲೀಮುಖಾರ್ಭಾಸಂಪಶ್ಯನ್ಸಮುಪಶ್ಯನ್ಮಹದ್ಭಯಂ ॥ ೩೧ ॥

ತತೋಽಸ್ತ್ರೈರ್ಯುಯುಧೇ ತೇನ ದೇವದೇವೇನ ಚಕ್ರಿಣಾ ।
ತಾನ್ಯಸ್ಯ ಫಲಹೀನಾನಿ ಚಕಾರ ಭಗವಾರ್ನ್ಸ್ವಯಂ ॥ ೩೨ ॥

ತತೋ ಗದಾಂ ಕಾಂಚನಪಟ್ಟನದ್ಧಾಂ
ವಿಭೂಷಿತಾಂ ಕಿಂಕಿಣಿಜಾಲಸಂಘೈಃ ।
ಚಿಕ್ಷೇಪ ದೈತ್ಯಾಧಿಪತಿಃ ಸ ಘೋರಾಂ
ತಾಂ ಚಾಪಿ ದೇವೋ ವಿಫಲೀಚಕಾರ ॥ ೩೩ ॥

---

ವಾಯಿತೇ ಹೊರತು ಪರಮಾತ್ಮನ ಮೇಲೆ ಅವರ ಆಟವೊಂದೂ ಸಾಗಲಿಲ್ಲ. ಕಡೆಗೆ ಪರಮಾತ್ಮನ ಚಕ್ರಕ್ಕೆ ದಾನವರೆಲ್ಲರೂ ಆಹುತಿಯಾಗುತ್ತಾ ಬಂದರು. ಇದನ್ನು ನೋಡಿ ಹಿರಣ್ಯಾಕ್ಷನು ತಾನೇ ಸ್ವಂತವಾಗಿ ಯುದ್ಧಕ್ಕೆ ಹೊರಟು ಧನುಸ್ಸಿನಿಂದ ಬಾಣಗಳನ್ನು ಹೂಡಿ ಹೂಡಿ ಮಧುಸೂದನನನ್ನು ಮುಚ್ಚಿಬಿಟ್ಟನು.

೩೧-೩೩ ಅವನು ಬಿಟ್ಟ ಬಾಣಗಳೆಲ್ಲವೂ ವ್ಯರ್ಥವಾಗುತ್ತ ಬರಲು ಹಿರಣ್ಯಾಕ್ಷನಿಗೆ ಬಹಳ ಭಯವಾಯಿತು ಬಳಿಕ ಇನ್ನೂ ಕೆಲವು ಅಸ್ತ್ರಗಳನ್ನು ಪ್ರಯೋಗಿಸಿದರೂ ಸಹ, ಭಗವತ್ಸಂಕಲ್ಪದಿಂದ ಅವೆಲ್ಲ ವ್ಯರ್ಥವಾದುವು. ಆಗ ಹಿರಣ್ಯಾಕ್ಷನು ಚಿನ್ನದ ಪಟ್ಟಿಗಳಿಂದಲೂ ಚಿನ್ನದ ಕಿರುಗಂಟೆಗಳಿಂದಲೂ ಹೊಳೆಯುತ್ತಿದ್ದ ಗದೆಯೊಂದನ್ನು ವೇಗವಾಗಿ ದೇವಾದಿದೇವನ ಮೇಲೆ ಕೋಪದಿಂದ ಪ್ರಯೋಗಿಸಲು ಅದನ್ನೂ ಸಹ ಭಗವಂತನು ವಿಫಲಮಾಡಿದನು. ಅನಂತರ ಪಟ್ಟೆಮಡಿಗಳಿಂದ ಬಿಗಿಯಲ್ಪಟ್ಟಿದ್ದ ಕೊಳ್ಳಿಯ ಉರಿಯಂತೆ ಕಣ್ಣು ಕುಕ್ಕುತ್ತಿದ್ದ ಒಂದು ಶಕ್ತ್ಯಾಯುಧವನ್ನು ವರಾಹ

ಶಕ್ತಿಂ ತತಃ ಪಟ್ಟಿಪಿನದ್ಧ ಮಧ್ಯಾ
ಮುಲ್ಕಾನಲಾಭಾಂ ತಪನೀಯಚಿತ್ರಾಂ ।
ಚಿಕ್ಷೇಪ ದೈತ್ಯಸ್ಸವರಾಹಕಾಯೇ
ಹುಂಕಾರದಗ್ಧಾ ನಿಪಪಾತಸಾ ಚ ॥ ೩೪ ॥

ತತಸ್ತ್ರಿಶೂಲಂ ಜ್ವಲಿತಾಗ್ರಶೂಲಂ
ಸಶೀಘ್ರಗಂ ದೇವಗಣಸ್ಯ ಸಂಖ್ಯೇ ।
ದೈತ್ಯಾಧಿಪಸ್ತಸ್ಯ ಸಜರ್ಜವೇಗಾ
ದವೇಕ್ಷಿತಃ ಸೋಽಪಿ ಜಗಾಮಭೂಮಿಂ ॥ ೩೫ ॥

ಶಂಖಸ್ವನೇನಾಽಪಿ ಜನಾರ್ದನಶ್ಚ
ವಿದ್ರಾವ್ಯ ದೈತ್ಯಾನ್ಸಕಲಾನ್ಮಹಾತ್ಮಾ ।
ಸಕುಂಡಲಂ ದೈತ್ಯಗಣಾಧಿಪಸ್ಯ
ಚಿಚ್ಛೇದ ಚಕ್ರೇಣ ಶಿರಃ ಪ್ರಸಹ್ಯ ॥ ೩೬ ॥

---

ರೂಪೀ ದೇವದೇವನ ಮೇಲೆ ದಾನವಾಧಿಪನು ಪ್ರಯೋಗಿಸಲು ಅದನ್ನೂ ಸಹ ಪರಮಾತ್ಮನು ಒಂದೇ ಒಂದು ಹುಂಕಾರದಿಂದ ಕೆಳಗೆ ಬೀಳುವಂತೆ ಮಾಡಿದನು. ಅನಂತರ ಹಿರಣ್ಯಾಕ್ಷನು ಜ್ವಲಿಸುತ್ತಿದ್ದ, ಬಹು ವೇಗದಿಂದ ಹೋಗಬಲ್ಲ, ಒಂದಾನೊಂದು ತ್ರಿಶೂಲವನ್ನು ದೇವತಾಗಣದ ಮೇಲೆ ಪ್ರಯೋಗಿಸಲು ಅದೂ ನೋಡು ನೋಡುತಲಿದ್ದಂತೆ ವ್ಯರ್ಥವಾಗಿ ಭೂಮಿಯಲ್ಲಿ ಬಿದ್ದುಹೋಯಿತು.

೩೬-೩೮. ಸಕಲ ರಾಕ್ಷಸರನ್ನೂ ಪರಮಾತ್ಮನು ಶಂಖಧ್ವನಿಯಿಂದ ದಿಕ್ಕಾಪಾಲಾಗಿ ಚದುರಿಸಿ ತನ್ನ ಚಕ್ರಾಯುಧದಿಂದ ಕುಂಡಲಸಹಿತನಾದ ಹಿರಣ್ಯಾಕ್ಷ ದೈತ್ಯನ ಶಿರಸ್ಸನ್ನು ಕತ್ತರಿಸಿದನು. ಈ ರೀತಿ ಹಿರಣ್ಯಾಕ್ಷನು ಸಂಹೃತನಾಗಲು ಆ ರಣರಂಗಕ್ಕೆ ಇಂದ್ರಬ್ರಹ್ಮಾದಿಗಳಿಬ್ಬರೂ ಬಂದು ಭಗವಂತನನ್ನು ಪೂಜೆಮಾಡಿದರು. ಕೇಳೈ ! ಭಾರ್ಗವರಾಮ ! ನಾನೂ ಕೂಡ ಆಗ ಆ ರಣರಂಗಕ್ಕೆ ಹೋಗಿ ನೃವರಾಹಸ್ವಾಮಿ

ನಿಪಾತಿತೇ ದೈತ್ಯಪತೌ ಸದೇವಃ
ಸಂಪೂಜಿತಃ ಶಕ್ರಪಿತಾಮಹಾಭ್ಯಾಂ ।
ಮಯಾ ಚ ಸರ್ವೈಸ್ತ್ರಿದಶೈಃ ಸಮೇತೈ
ರ್ಜಗಾಮ ಕಾಷ್ಠಾಂ ಮನಸಾತ್ವಭೀಷ್ಟಾಂ ॥ ೩೭ ॥

ಶಕ್ರೋಽಪಿಲಬ್ಧ್ವಾ ತ್ರಿದಿವಂಮಹಾತ್ಮಾ
ಚಿಚ್ಛೇದ ಪಕ್ಷಾಂಧರಣೀಧರಾಣಾಂ ।
ರರಕ್ಷ ಚೇಮಾಂ ಸಕಲಾಂ ತ್ರಿಲೋಕೀಂ
ಧರ್ಮೇಣ ಧರ್ಮಜ್ಞಭೃತಾಂ ವರಿಷ್ಠಃ ॥ ೩೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಂಕರಗೀತಾಸುನೃವರಾಹಪ್ರಾದುರ್ಭಾವೇ
ಹಿರಣ್ಯಾಕ್ಷವಧೋ ನಾಮ ತ್ರಿಪಂಚಾಶತ್ತಮೋಽಧ್ಯಾಯಃ

---

ಯಾಗಿದ್ದ ನಿನ್ನನ್ನು ಪೂಜಿಸಿದೆನಯ್ಯ ! ಅನಂತರ ಸಕಲರೂ ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಬೆಳಸಿ ಸುಖವಾಗಿದ್ದರು. ಬಳಿಕ ಇಂದ್ರನು ಸ್ವರ್ಗಕ್ಕೆ ಹೋಗಿ ಅಲ್ಲಿಂದ ವಜ್ರಾಯುಧ ಧಾರಿಯಾಗಿ ಹೊರಟು ಎಲ್ಲ ಪರ್ವತಗಳ ರೆಕ್ಕೆಗಳನ್ನೂ ಕತ್ತರಿಸಿ ಲೋಕಕ್ಷೇಮವನ್ನುಂಟುಮಾಡಿದವನಾಗಿ ತ್ರಿಲೋಕವನ್ನು ಸುಖದಿಂದ ಪಾಲಿಸುತ್ತಿದ್ದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಹಿರಣ್ಯಾಕ್ಷ ವಧೆಯೆಂಬ ಹೆಸರಿನ ಐವತ್ತಮೂರನೇ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಚತುಷ್ಪಂಚಾಶತ್ತಮೋಽಧ್ಯಾಯಃ

---

॥ ಶಂಕರ ಉವಾಚ ॥

**ಹಿರಣ್ಯಾಕ್ಷೇ ತತೋ ದೈತ್ಯೇ ಭ್ರಾತ್ರಾ ತಸ್ಯ ಮಹಾತ್ಮನಃ ।**
**ಹಿರಣ್ಯಕಶಿಪುರ್ನಾಮ ಚಕಾರೋಗ್ರಂ ಮಹತ್ತಪಃ** ॥ ೧ ॥

**ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।**
**ಜಪೋಪವಾಸನಿರತಃ ಸ್ನಾನಮೌನಾಶ್ರಿತವ್ರತಃ** ॥ ೨ ॥

**ತಪಃ ಶಮದಮಾಭ್ಯಾಂ ಚ ಬ್ರಹ್ಮಚರ್ಯೇಣ ಚಾಽನಘ ।**
**ಬ್ರಹ್ಮಾ ಪ್ರೀತಮನಾಸ್ತಸ್ಯ ಸ್ವಯಮಾಗತ್ಯ ಭಾರ್ಗವ** ॥ ೩ ॥

---

॥ ಐವತ್ತನಾಲ್ಕನೆಯ ಅಧ್ಯಾಯವು ॥

೧. ಶಂಕರನು ಹೇಳುತ್ತಾನೆ :- “ ಹಿರಣ್ಯಾಕ್ಷನು ಸತ್ತುಹೋದಮೇಲೆ ಆ ಮಹಾತ್ಮನ ತಮ್ಮನಾದ ಹಿರಣ್ಯಕಶಿಪುವು ಮಹತ್ತರವಾದ ತಪಸ್ಸನ್ನು ಮಾಡಿದನು.

೨-೮. ಜಪೋಪವಾಸ ನಿರತನಾಗಿ, ಸ್ನಾನಮೌನಾದಿಗಳಿಂದ ಕೂಡಿ, ಶಮದಮಾದಿಗಳಿಂದಲೂ ಬ್ರಹ್ಮಚರ್ಯದಿಂದಲೂ ಕೂಡಿ ಆ ಹಿರಣ್ಯಕಶಿಪುವು ಬ್ರಹ್ಮನನ್ನು ಕುರಿತು ಹನ್ನೊಂದುಸಾವಿರ ವರ್ಷಕಾಲ ತಪಸ್ಸುಮಾಡಿದನು. ಆಗ ಅವನ ತಪಸ್ಸಿಗೆ ಬ್ರಹ್ಮನು ಮೆಚ್ಚಿ ಪ್ರತ್ಯಕ್ಷನಾದ ಬಗೆಯುದೆಂತೆಂದೊಡೆ,– ಸೂರ್ಯನಂತೆ ಪ್ರಕಾಶಿಸುತ್ತಿದ್ದ ಹಂಸವಾಹನದ ಮೇಲೆ, ಆದಿತ್ಯರೂ, ಸಾಧ್ಯರೂ, ಮರುತ್ತಗಳೂ, ಅಶ್ವಿನೀ

ವಿಮಾನೇನಾರ್ಕವರ್ಣೇನ ಹಂಸಯುಕ್ತೇನ ಭಾಸ್ವತಾ ।
ಆದಿತ್ಯೈಸ್ಸಹಿತಃ ಸಾಧ್ಯೈಸ್ಸಹಿತೋ ಮರುದಶ್ವಿಭಿಃ ॥ ೪ ॥

ರುದ್ರೈರ್ವಿಶ್ವಸಹಾಯೈಶ್ಚ ಯಕ್ಷರಾಕ್ಷಸಪನ್ನಗೈಃ ।
ದಿಗ್ಭಿರ್ವಿದಿಗ್ಭಿಶ್ಚ ತಥಾ ಖೇಚರೈಶ್ಚ ಮಹಾಗ್ರಹೈಃ ॥ ೫ ॥

ನಿಮ್ನಗಾಭಿಃ ಸಮುದ್ರೈಶ್ಚ ಮಾಸರ್ತ್ವಯನಸಂಧಿಭಿಃ ।
ನಕ್ಷತ್ರೈಶ್ಚ ಮುಹೂರ್ತೈಶ್ಚ ಕಾಲಸ್ಯಾವಯವೈಸ್ತಥಾ ॥ ೬ ॥

ದೇವರ್ಷಿಭಿಃ ಪುಣ್ಯತಮೈಃ ಸಿದ್ಧೈಃ ಸಪ್ತರ್ಷಿಭಿಸ್ತಥಾ ।
ರಾಜರ್ಷಿಭಿಃ ಪುಣ್ಯತಮೈರ್ಗಂಧರ್ವೈರಪ್ಸರೋಗಣೈಃ ॥ ೭ ॥

ಚರಾಚರಗುರುಃ ಶ್ರೀಮಾನ್ವೃತಃ ಸರ್ವೈರ್ದಿವೌಕಸೈಃ ।
ಬ್ರಹ್ಮಾ ಬ್ರಹ್ಮವಿದಾಂ ಶ್ರೇಷ್ಠೋ ದೈತ್ಯಂ ವಚನಮಬ್ರವೀತ್ ॥ ೮ ॥

---

ದೇವತೆಗಳೂ, ಏಕಾದಶ ರುದ್ರರೂ, ಯಕ್ಷರಾಕ್ಷಸ ಪನ್ನಗರೂ, ದಿಕ್ಪಾಲಕರೂ ವಿದಿಕ್ಪಾಲಕರೂ, ಆಕಾಶಗಾಮಿಗಳಾದ ಮಹಾ ಗ್ರಹಗಳೂ, ಹೊಳೆಗಳೂ ಸಮುದ್ರಗಳೂ ಮಾಸ ಋತು ಅಯನ ಸಂಧಿಗಳು, ನಕ್ಷತ್ರಗಳು, ಮುಹೂರ್ತಗಳು, ಕಾಲಗಳು, ಕಾಲಾಂಗಗಳು, ಪುಣ್ಯಾತ್ಮರಾದ ದೇವರ್ಷಿಗಳೂ ಸಪ್ತರ್ಷಿಗಳೂ, ರಾಜರ್ಷಿಗಳೂ, ಗಂಧರ್ವಾಪ್ಸರೋಗಣಗಳೇ ಮುಂತಾದ ಸಕಲ ದೇವಲೋಕವಾಸಿಗಳೊಡನೆ ಕೂಡಿ ಹಿರಣ್ಯಕಶಿಪುವಿನ ಮುಂದೆಬಂದು ನಿಂತುಕೊಂಡು ಬ್ರಹ್ಮವೇತ್ತರಲ್ಲುತ್ತಮನಾದ ಬ್ರಹ್ಮನು ಹಿರಣ್ಯಕಶಿಪುವನ್ನು ಕುರಿತು ಈ ಮಾತನ್ನು ಹೇಳಿದನು.

॥ ಬ್ರಹ್ಮೋವಾಚ ॥

ಪ್ರೀತೋಽಸ್ಮಿ ತವ ಭಕ್ತಸ್ಯ ತಪಸಾಽನೇನ ಸುವ್ರತ ।
ವರಂ ವರಯ ಭದ್ರಂ ತೇ ಯಥೇಷ್ಟಂ ಕಾಮಮಾಪ್ನುಹಿ ॥ ೯ ॥

॥ ಹಿರಣ್ಯಕಶಿಪುರುವಾಚ ॥

ನ ದೇವಾಸುರಗಂಧರ್ವಾ ನಯಕ್ಷೋರಗರಾಕ್ಷಸಾಃ ।
ನ ಮಾನುಷಾಃ ಪಿಶಾಚಾ ವಾ ಹನ್ಯುರ್ಮಾಂ ದೇವಸತ್ತಮ ॥ ೧೦ ॥

ಋಷಯೋಽಪಿ ನ ಮಾಂ ಶಾಪಂ ಕ್ರುದ್ಧಾ ಲೋಕಪಿತಾಮಹ ।
ಶಪೇಯುಸ್ತಪಸಾ ಯುಕ್ತಾ ವರಮೇತತ್ವೃಣೋಮ್ಯಹಂ ॥ ೧೧ ॥

ನ ಶಸ್ತ್ರೇಣ ನ ಚಾಸ್ತ್ರೇಣ ಗಿರಿಣಾ ಪಾದಪೇನ ಚ ।
ನ ಶುಷ್ಕೇಣ ನ ಚಾಽರ್ದ್ರೇಣ ವಧಂ ಮೇ ಸ್ಯಾತ್ಕಥಂಚನ ॥ ೧೨ ॥

ಭವೇಯಮಹಮೇವಾರ್ಕಃ ಸೋಮೋ ವಾಯುರ್ಹುತಾಶನಃ ।
ಸಲಿಲಂ ಚಾಂತರಿಕ್ಷಂಚ ನಕ್ಷತ್ರಾಣಿ ದಿಶೋದಶ ॥ ೧೩ ॥

---

೯. ಬ್ರಹ್ಮನು ಹೇಳಿದನು :- " ಭಕ್ತನಾದ ನಿನ್ನ ತಪಸ್ಸಿನಿಂದ ತೃಪ್ತನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿ ಏನೇನು ಆಶೆಯಿದೆಯೋ ಅದನ್ನೆಲ್ಲಾ ಕೇಳಿಕೋ, ಕೊಡುತ್ತೇನೆ.

೧೦-೧೨. ಹಿರಣ್ಯಕಶಿಪುವು ಹೇಳುತ್ತಾನೆ :- ನನಗೆ ದೇವತೆ, ಅಸುರ, ಗಂಧರ್ವ, ಯಕ್ಷ, ಉರಗ, ರಾಕ್ಷಸ, ಮನುಷ್ಯ, ಪಿಶಾಚ ಇವುಗಳಾವುದರಿಂದಲೂ ಮರಣವುಂಟಾಗಕೂಡದು. ಋಷಿಗಳು ಕೋಪಿಸಿಕೊಂಡು ನನಗೆ ಶಾಪವನ್ನು ಕೊಡಕೂಡದು. ಅಸ್ತ್ರಶಸ್ತ್ರಗಳಿಂದಲೂ, ಬೆಟ್ಟ, ಮರ, ಹಸಿಯ ಬಿಸಿಯ ಪದಾರ್ಥಗಳಿಂದಲೂ ನಾನು ಸಾಯಬಾರದು. ಈ ರೀತಿ ನನಗೆ ವರವನ್ನು ಕೊಡು.

೧೩-೧೪. ನಾನೇ ಸೂರ್ಯ, ಚಂದ್ರ, ಅಗ್ನಿ, ನೀರು, ಆಕಾಶ, ನಕ್ಷತ್ರ,

ಅಹಂ ಕ್ರೋಧಶ್ಚ ಕಾಮಶ್ಚ ವರುಣೋ ವಾಸವೋ ಯಮಃ ।
ಧನದಶ್ಚ ತಥಾಽಧ್ಯಕ್ಷೋ ಯಕ್ಷಃ ಕಿಂಪುರುಷಾಧಿಪಃ ॥ ೧೪ ॥

॥ ಬ್ರಹ್ಮೋವಾಚ ॥

ಏತೇ ದಿವ್ಯವರಾಸ್ತಾತ ಮಯಾ ದತ್ತಾಸ್ತವಾದ್ಭುತಾಃ ।
ಸರ್ವಾನ್ಕಾಮಾನಿಮಾಂಸ್ತಸ್ಮಾತ್ಪ್ರಾಪ್ಸ್ಯಸಿ ತ್ವಂ ನ ಸಂಶಯಃ ॥ ೧೫ ॥

॥ ಶಂಕರ ಉವಾಚ ॥

ಏವ ಮುಕ್ತ್ವಾ ಸ ಭಗವಾನ್ಜಗಾಮಾಽಕಾಶಮೇವ ಹಿ ।
ವೈರಾಜಂ ದೇವಸದನಂ ಮಹರ್ಷಿಗಣಸೇವಿತಂ ॥ ೧೬ ॥

ತತೋ ದೇವಾಶ್ಚ ನಾಗಾಶ್ಚ ಗಂಧರ್ವಾ ಮುನಯಸ್ತಥಾ ।
ವರಪ್ರದಾನಂ ಶ್ರುತ್ವೈವ ಪಿತಾಮಹಮುಪಸ್ಥಿತಾಃ ॥ ೧೭ ॥

---

ದಿಕ್ಕು, ಕೋಪ, ಕಾಮ, ವರುಣ, ಚಂದ್ರಯಮಾದಿಗಳೂ, ಕುಬೇರ, ಯಕ್ಷ, ಕಿಂಪುರುಷರ ಅಧ್ಯಕ್ಷನಾಗಿಯೂ ಇರುವಂತೆ ವರವನ್ನು ಕೊಡು.

೧೫ ಬ್ರಹ್ಮನು ಅದಕ್ಕೆ ಹೇಳುತ್ತಾನೆ :- " ಅಪ್ಪ, ಹಿರಣ್ಯಕಶಿಪು ! ಇದು ದಿವ್ಯ ವರಗಳನಿಸಿಕೊಂಡಿವೆ. ಈ ಅದ್ಭುತವಾದ ದಿವ್ಯವರಗಳನ್ನು ನಿನಗೆ ಅನುಗ್ರಹಿಸಿದ್ದೇನೆ. ಇವುಗಳನ್ನು ನೀನು ಪಡೆದು ಅವುಗಳಿಂದ ಸೌಖ್ಯಹೊಂದುವ ವಿಷಯದಲ್ಲಿ ಸಂಶಯವಿಲ್ಲ."

೧೬. ಶಂಕರನು ಹೇಳುತ್ತಾನೆ :- " ಈರೀತಿ ಬ್ರಹ್ಮನು ಹೇಳಿ ಮಹರ್ಷಿ ಗಣದಿಂದ ಸೇವಿತನಾಗಿ ವೈರಾಜವೆಂಬ ದೇವಸಭೆಯನ್ನು ಕುರಿತು ಪ್ರಯಾಣಮಾಡಿದನು.

೧೭. ಅನಂತರ ದೇವತೆಗಳೂ, ನಾಗರೂ, ಗಂಧರ್ವರೂ, ಋಷಿಗಳೂ ಸಹ ಈ ವರಪ್ರದಾನ ವೃತ್ತಾಂತವನ್ನು ಕೇಳಿದವರಾಗಿ ಕೂಡಲೆ ಬ್ರಹ್ಮನ ಸಮೀಪಕ್ಕೆ ಎಲ್ಲರೂ ಕೂಡಿಯೇ ಬಂದರು.

॥ ದೇವಾ ಊಚುಃ ॥

ವರೇಣಾಽನೇನ ಭಗವರ್ನ್ಧಿಷ್ಯತಿ ಸ ನೋಽಸುರಃ ।
ತನ್ನಃ ಪ್ರಸೀದ ಭಗವನ್ವಧೋಽಸ್ಯಸ್ಯವಿಚಿಂತ್ಯತಾಂ ॥ ೧೮ ॥

ಭಗವಾನ್ಸರ್ವಭೂತಾನಾಂ ಸ್ವಯಂಭೂರಾದಿಕೃತ್ಪ್ರಭುಃ ।
ಸ್ರಷ್ಟಾ ಚ ಹವ್ಯಕವ್ಯಾನಾಂ ಚಾಽವ್ಯಕ್ತಃ ಪ್ರಕೃತಿರ್ಧ್ರುವಃ ॥ ೧೯ ॥

॥ ಶಂಕರ ಉವಾಚ ॥

ಸರ್ವಲೋಕಹಿತಂ ವಾಕ್ಯಂ ಶ್ರುತ್ವಾದೇವಃ ಪ್ರಜಾಪತಿಃ ।
ಪ್ರೋವಾಚ ವರದೋ ವಾಕ್ಯಂ ಸರ್ವಾನ್ದೇವಗಣಾಂಸ್ತತಃ । ॥ ೨೦ ॥

॥ ಬ್ರಹ್ಮೋವಾಚ ॥

ಅವಶ್ಯಂ ಸ್ತ್ರಿದಶಾಸ್ತೇನ ಪ್ರಾಪ್ತವ್ಯಂ ತಪಸಃ ಫಲಂ ।
ತತಸ್ತಸ್ಯ ವಧಂ ವಿಷ್ಣುಸ್ತಪಸೋಽಽನಂತೆ ಕರಿಷ್ಯತಿ ॥ ೨೧ ॥

---

೧೮-೧೯. ದೇವತೆಗಳು ಹೇಳುತ್ತಾರೆ :- "ಸ್ವಾಮಿ, ನೀವು ಕೊಟ್ಟ ಈ ವರಬಲದಿಂದ ಆ ದೈತ್ಯನು ನಮ್ಮೆಲ್ಲರನ್ನೂ ಸಂಹರಿಸಿಬಿಡುತ್ತಾನೆ. ಮುಂದೆ ನಮ್ಮ ಗತಿಯೇನು ? ಭಗವನ್ ! ಆದುದರಿಂದ ಆ ರಕ್ಕಸನ ವಧೆಗೆ ಉಪಾಯವನ್ನು ಹುಡುಕಿ ನಮ್ಮನ್ನು ಸಂರಕ್ಷಿಸಬೇಕು. ನೀನು ಸ್ವಯಂ ಉತ್ಪತ್ತಿಯಾದ ಮಹಾನುಭಾವನು ನೀನು ಸೃಷ್ಟಿಯ ಆದಿಯನ್ನು ನಿರ್ಮಿಸಿದವನು. ಹವ್ಯಕವ್ಯಗಳೆಂಬ ಆಹಾರಗಳನ್ನು ದೇವಪಿತೃಗಣಕ್ಕೋಸ್ಕರ ನೀನು ನಿರ್ಮಿಸಿರುತ್ತೀ- ನೀನು ಆದಿಯಲ್ಲಿ ಅವ್ಯಕ್ತವಾಗಿದ್ದು ಬಳಿಕ ಪ್ರಕೃತಿಯಾಗಿ ಧ್ರುವವೆನಿಸಿಕೊಂಡೆ."

೨೦. ಈಶ್ವರನು ಹೇಳಿದನು—"ಸರ್ವಲೋಕಕ್ಕೂ ಹಿತವನ್ನುಂಟುಮಾಡುವ ದೇವತೆಗಳ ಮಾತನ್ನು ಕೇಳಿ ಆ ಚತುರ್ಮುಖಬ್ರಹ್ಮನು ಸಕಲ ದೇವತಾವೃಂದವನ್ನೂ ಕುರಿತು ಇದರಡಿ ವಿವರಿಸುವಂತೆ ಮಾತನಾಡಿದನು"

೨೧. ಪರಮೇಷ್ಠಿಯು ಹೇಳುತ್ತಾನೆ—"ದೇವತೆಗಳಿರಾ ! ಕೇಳಿರಿ. ಅವನು ಮಾಡಿದ ತಪಸ್ಸಿನ ಫಲವನ್ನು ಅವನು ಮೊದಲು ಚೆನ್ನಾಗಿ ಅನುಭವಿಸಲಿ. ಅನಂತರ

॥ ಶಂಕರ ಉವಾಚ ॥

ಏವಂ ಶ್ರುತ್ವಾ ಸುರಾಃ ಸರ್ವೇ ವಾಕ್ಯಂ ಪಂಕಜಜನ್ಮನಃ ।
ಸ್ವಾನಿ ಸ್ಥಾನಾನಿ ದಿವ್ಯಾನಿ ಜಗ್ಮುಸ್ತೇನ್ಯೆ ಮುದಾನ್ವಿತಾಃ ॥ ೨೨ ॥

ಲಬ್ಧಮಾತ್ರೇ ವರೇ ತಸ್ಮಿನ್ಸರ್ವಾಃ ಸೋಽಬಾಧತ ಪ್ರಜಾಃ ।
ಹಿರಣ್ಯಕಶಿಪುರ್ದೈತ್ಯೋ ವರದಾನೇನದರ್ಪಿತಃ ॥ ೨೩ ॥

ಆಶ್ರಮೇಷು ಮಹಾತ್ಮಾನೋ ಮುನೀಂದ್ರಾನ್ಸಂಶಿತವ್ರತಾನ್ ।
ಸತ್ಯಧರ್ಮರತಾನ್ದಾಂತಾನ್ದುರಾಧರ್ಷೋಭವಂಸ್ತು ಸಃ ॥ ೨೪ ॥

ದೇವಾಂಸ್ತ್ರಿಭುವನಸ್ಥಾಂಶ್ಚ ಪರಾಜಿತ್ಯ ಮಹಾಸುರಃ ।
ತ್ರೈಲೋಕ್ಯಂ ವಶಮಾನೀಯ ಸ್ವರ್ಗೇ ವಸತಿ ದಾನವಃ ॥ ೨೫ ॥

ಯದಾ ವರಮದೋನ್ಮತ್ತೋ ಹ್ಯಾವಾಸಂ ಕೃತವಾನ್ ದಿವಿ ।
ಯಾಜ್ಞೀಯಾನ್ಕೃತವಾನ್ದೈತ್ಯಾನಯಾಜ್ಞೀಯಾಶ್ಚ ದೇವತಾಃ ॥ ೨೬ ॥

---

ಅವನ ತಪೋಫಲಭೋಗವು ಮುಗಿದಬಳಿಕ ಮಹಾವಿಷ್ಣುವು ಅವನನ್ನು ಸಂಹಾರ ಮಾಡುತ್ತಾನೆ.''

೨೨. ಈಶ್ವರನು ಪರಶುರಾಮನೊಡನೆ ನಿರೂಪಿಸುತ್ತಾನೆ—ಈರೀತಿ ಹೇಳಿದ ಬ್ರಹ್ಮನ ಮಾತನ್ನು ಕೇಳಿದವರಾಗಿ ಸಕಲ ಸುರವೃಂದವೂ ಹರ್ಷದಿಂದ ಕೂಡಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು.

೨೩-೨೮. ವರವನ್ನು ಸಂಪಾದಿದೊಡನೆಯೇ ಹಿರಣ್ಯಕಶಿಪುವು ಪ್ರಜೆಗಳನ್ನು ಹಿಂಸಿಸುವುದಕ್ಕಾರಂಭಿಸಿದನು. ಆಶ್ರಮವಾಸಿಗಳಾದ ಮಹಾತ್ಮರಾದ ಋಷಿಜನರನ್ನೂ ಜಿತೇಂದ್ರಿಯರಾದ ಸತ್ಯಧರ್ಮನಿರತರಾದ ಯೋಗಿಜನರನ್ನೂ, ಮೂರು ಲೋಕದಲ್ಲಿರುವ ದೇವತೆಗಳನ್ನೂ ಹಿಂಸಿಸಿ, ಮೂರು ಲೋಕವನ್ನೂ ಗೆದ್ದು ಸ್ವರ್ಗದಲ್ಲಿ ವಾಸ ಮಾಡಲಾರಂಭಿಸಿದನು. ಈರೀತಿ ವರಮದೋನ್ಮತ್ತನಾದ ದೈತ್ಯನು ಸ್ವರ್ಗದಲ್ಲಿ ವಸತಿಮಾಡಿದೊಡನೆ ದೇವತೆಗಳಿಗೆ ಸಿಕ್ಕುತ್ತಿದ್ದ ಹವಿರ್ಭಾಗಗಳನ್ನು ರಾಕ್ಷಸರು ಕಿತ್ತು

ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾಸ್ತಥಾಽಶ್ವಿನೌ ।
ಭೃಗವೋಂಗಿರಸ ಸ್ಸಾಧ್ಯಾ ಮರುತಶ್ಚ ಸವಾಸವಾಃ ॥ ೨೭ ॥

ಶರಣ್ಯಂ ಶರಣಂ ವಿಷ್ಣುಮುಪತಸ್ಥುರ್ಮಹಾಬಲಂ ।
ದೇವಂ ಬ್ರಹ್ಮಮಯಂ ವಿಷ್ಣುಂ ಬ್ರಹ್ಮಭೂತಂ ಸನಾತನಂ ॥ ೨೮ ॥

ಭೂತಭವ್ಯಭವಿಷ್ಯಸ್ಯ ಪ್ರಭುಂ ಲೋಕಂಪರಾಯಣಂ ।
ನಾರಾಯಣಂ ವಿಭುಂ ದೇವಾಃ ಶರಣ್ಯಂ ಶರಣಂ ಗತಾಃ ॥ ೨೯ ॥

॥ ದೇವಾ ಊಚುಃ ॥

ತ್ರಾಯಸ್ವ ನೋಽದ್ಯ ದೇವೇಶ ಹಿರಣ್ಯಕಶಿಪೋರ್ವಧಾತ್ ।
ತ್ವಂ ಹಿ ನಃ ಪರಮೋರಾಜಾ ಬ್ರಹ್ಮಾದೀನಾಂ ಸುರೋತ್ತಮ ॥ ೩೦ ॥

ಪ್ರೋತ್ಫುಲ್ಲಾಮಲಪತ್ರಾಕ್ಷ ಶತ್ರುಪಕ್ಷಕ್ಷಯಂಕರ ।
ಕ್ಷಯಾಯ ದಿತಿವಂಶಸ್ಯ ಶರಣಂ ತ್ವಂ ಭವಸ್ವ ನಃ ॥ ೩೧ ॥

---

ಕೊಂಡು, ದೇವತೆಗಳಿಗೆ ಸಿಕ್ಕುತ್ತಿದ್ದ ಯಜ್ಞಹವಿಸ್ಸಿಗೆ ಕಲ್ಲುಹಾಕಿದರು. ಈ ಪೆಟ್ಟು ಹವಿರ್ಭಾಗಾಧಿಕಾರಿಗಳಾದ ಆದಿತ್ಯ, ವಸು, ರುದ್ರ, ವಿಶ್ವೇದೇವ, ಅಶ್ವಿನೀಯು, ಭೃಗು, ಅಂಗೀರಸ, ಸಾಧ್ಯ, ಮರುದ್ಗಣ, ಇವರಿಗೆಲ್ಲಾ ತಗುಲಿತು. ಕೂಡಲೆ ಅವರೆಲ್ಲರೂ ಗುಂಪಾಗಿ ಸೇರಿ ಬ್ರಹ್ಮಮಯನಾದ, ಬ್ರಹ್ಮಭೂತನಾದ, ಸನಾತನನಾದ ಮಹಾವಿಷ್ಣುವಿನ ಬಳಿಗೆ ಹೋಗಿ ಅವನನ್ನು ಮರೆಹೊಕ್ಕರು.

೨೬. ಕಾಲತ್ರಯಾಬಾಧಿತನಾದ, ಲೋಕಸೇವಾಸಕ್ತನಾದ, ಮಹಾಪ್ರಭುವೆನಿಸಿದ ನಾರಾಯಣನನ್ನು ಈರೀತಿ ದೇವತೆಗಳು ಶರಣುಹೊಂದಿದರು.

೩೦–೩೧. ದೇವತೆಗಳು ಹೇಳುತ್ತಾರೆ—"ಸ್ವಾಮಿ, ಹಿರಣ್ಯಕಶಿಪುವಿನ ಬಾಧೆ ಬಹು ಹೆಚ್ಚಾಯಿತು. ಅವನನ್ನು ಸಂಹರಿಸಿ ನಮ್ಮನ್ನು ಕಾಪಾಡಬೇಕು. ನೀನು ನಮಗೆ ಮತ್ತು ಬ್ರಹ್ಮಾದಿಗಳಿಗೂ ಸಹ ಧೊರೆಯಾಗಿರುತ್ತೀ. ಅರಳಿದ ಕಮಲದಳದಂತೆ ನೇತ್ರಗಳುಳ್ಳ ಶತ್ರುಪಕ್ಷಭಯಂಕರನಾದ, ದೈತ್ಯರ ನಾಶಕ್ಕಾಗಿ ಸೊಂಟಕಟ್ಟಿ ನಿಂತಿರುವ ಭಗವಂತಾ! ನೀನೇ ನಮಗೆ ಗತಿಯ್ಯೆ! ದಯಾಳುವೇ!"

॥ ಶ್ರೀಭಗವಾನುವಾಚ ॥

ಭಯಂ ತ್ಯಜಧ್ವಮಮರಾ ಅಭಯಂ ವೋ ದದಾಮ್ಯಹಂ ।
ತಥೈವ ತ್ರಿದಿವಂ ದೇವಾಃ ಪ್ರತಿಪದ್ಯತ ಮಾಚಿರಂ ॥ ೩೨ ॥

ಏಷೋಽಮುಂ ಸಬಲಂ ದೈತ್ಯಂ ವರದಾನೇನ ದರ್ಪಿತಂ ।
ಅವಧ್ಯಮಮರೇಂದ್ರಾಣಾಂ ದಾನವೇಂದ್ರಂ ನಿಹನ್ಮ್ಯಹಂ ॥ ೩೩ ॥

॥ ಶಂಕರ ಉವಾಚ ॥

ಏವಮುಕ್ತ್ವಾ ಸ ಭಗವಾನ್ವಿಸೃಜ್ಯ ತ್ರಿದಿವೇಶ್ವರಾನ್ ।
ನಾರಸಿಂಹಂ ವಪುಶ್ಚಕ್ರೇ ಸಹಸ್ರಾಂಶುಸಮಪ್ರಭಂ ॥ ೩೪ ॥

ಪ್ರಾಂಶುಂ ಕನಕಶೈಲಾಭಂ ಜ್ವಾಲಾಪುಂಜವಿಭೂಷಿತಂ ।
ದೈತ್ಯಸೈನ್ಯಮಹಾಂಭೋಧಿ ವಡವಾನಲವರ್ಚಸಂ ॥ ೩೫ ॥

ಸಂಧ್ಯಾನುರಕ್ತಮೇಘಾಭಂ ನೀಲವಾಸಸಮುಚ್ಛ್ರಿತಂ ।
ದೇವದಾರುವನಚ್ಛನ್ನಂ ಯಥಾ ಮೇರು ಮಹಾಗಿರಿಂ ॥ ೩೬ ॥

---

೩೨–೩೩. ಮಹಾವಿಷ್ಣುವು ಹೇಳುತ್ತಾನೆ—ದೇವತೆಗಳಿರಾ! ಭಯಪಡದೆ ಧೈರ್ಯವಾಗಿರಿ ನಿಮಗೆ ಅಭಯಪ್ರದಾನ ಮಾಡುತ್ತೇನೆ. ಈ ಕೆಲಸ ನನ್ನಿಂದಾಯಿತೆಂದು ತಿಳಿದು ಊರಿಗೆಹೋಗಿ ಸುಖವಾಗಿರಿ. ಈಗ ನಾನೇ, ವರದಾನದಿಂದ ಕೊಬ್ಬಿದ ಆ ಭಯಂಕರ ದೈತ್ಯನನ್ನು ಸಮೂಲವಾಗಿ ನಾಶಮಾಡಿ ನಿಮ್ಮನ್ನು ಸಂತೋಷಪಡಿಸುತ್ತೇನೆ.

೩೪–೪೩. ಶಂಕರನು ಹೇಳುತ್ತಾನೆ—ಈರೀತಿ ಹೇಳಿ ಮಹಾವಿಷ್ಣುವು ದೇವತೆಗಳನ್ನು ಸ್ವಸ್ಥಾನಕ್ಕೆ ಕಳುಹಿಸಿ ನರಸಿಂಹಾವತಾರವನ್ನು ತಾಳಿದನು. ಆ ನರಸಿಂಹ ರೂಪವನ್ನು ವರ್ಣಿಸುತ್ತಾರೆ—ಸೂರ್ಯನಂತೆ ಕಾಂತಿಯುಳ್ಳ, ಮೇರುಪರ್ವತದಂತೆ

ಸಂಪೂರ್ಣ ವಕ್ತ್ರದಶನೈಃ ಶಶಾಂಕಶಕಲೋಪಮೈಃ ।
ಪೂರ್ಣಂ ಮುಕ್ತಾಫಲೈಃ ಶುಭ್ರೈಃ ಸಮುದ್ರಮಿವ ಕಾಂಚನಂ ॥ ೩೭ ॥

ನಖೈರ್ವಿದ್ರುಮಸಂಕಾಶೈರ್ವಿರಾಜಿತಕರದ್ವಯಂ ।
ದೈತ್ಯನಾಥಕ್ಷಯಕರೈಃ ಕ್ರೋಧಸ್ಯೇವ ಯವಾಂಕುರೈಃ ॥ ೩೮ ॥

ಸಟಾಭಾಸಂ ಸಕುಟಿಲಂ ವಹ್ನಿಜ್ವಾಲಾಗ್ರಪಿಂಗಲಂ ।
ಧಾರಯನ್ಭಾತಿ ಸರ್ವಾತ್ಮಾ ದಾವಾನಲಮಿವಾಚಲಃ ॥ ೩೯ ॥

ದೃಶ್ಯಾದೃಶ್ಯಮುಖೇ ತಸ್ಯ ಜಿಹ್ವಾಭ್ಯುದಿತಚಂಚಲಾ ।
ಪ್ರಲಯಾಂತಾಂಬುದಸ್ಯೇವ ಚಂಚಲಾ ತು ತಟಿಲ್ಲತಾ ॥ ೪೦ ॥

ಆವರ್ತಿಭಿರ್ಲೋಮಘನೈರ್ವ್ಯಾಪ್ತಂ ವಿಗ್ರಹಮೂರ್ಜಿತಂ ।
ಮಹಾಕಟಿತಟಸ್ಕಂಧ ಮುಲಾತ ಪ್ರತಿಮೇಕ್ಷಣಂ ॥ ೪೧ ॥

---

ಮಹೋನ್ನತವಾದ, ಜ್ವಾಲಾವಳಿಂದಲಂಕೃತವಾದ, ದೈತ್ಯಸೈನ್ಯವೆಂಬ ಮಹಾಸಮುದ್ರವನ್ನು ಹೀರುವದರಲ್ಲಿ ಬಡಬಾಗ್ನಿಯಂತೆ ಇರುವ, ಸಂಧ್ಯಾಕಾಲದ ಮೇಘದಂತೆ ಪ್ರಕಾಶಿಸುವ, ನೀಲವಸ್ತ್ರವನ್ನುಟ್ಟು ಪ್ರಕಾಶಿಸುತ್ತಿರುವ, ದೇವದಾರುವನದಿಂದ ಮುಚ್ಚಿಕೊಂಡ ಮೇರುಪರ್ವತದಂತೆ ಕಂಗೊಳಿಸುವ, ಸಂಪೂರ್ಣವಾಗಿ ಮುಖದಲ್ಲೆಲ್ಲಾ ಚಂದ್ರನ ಚೂರಿನಂತಹ ತೀಕ್ಷ್ಣದಂತಗಳನ್ನುಳ್ಳ ಮುತ್ತು ಸುವರ್ಣಗಳಿಂದ ಕೂಡಿದ ಸಮುದ್ರದಂತೆ ರಾರಾಜಿಸುತ್ತಿರುವ, ಹವಳದಂತಿರುವ ಉಗುರುಗಳನ್ನುಳ್ಳ, ಎರಡು ಕೈಗಳಿಂದ ಹೊಳೆಯುತಲಿರುವ, ದೈತ್ಯನಾಥನನ್ನು ನಾಶಮಾಡುವುದಕ್ಕಾಗಿ ಎದ್ದ ಕೋಪದ ಮೊಳಕೆಗಳೋ ಎಂಬಂತಿರುವ ಸಟಾಭಾರದಿಂದ ಭಾಸಮಾನನಾದ, ಮಹಾವಹ್ನಿಜ್ವಾಲೆಗಳಂತೆ ಹೊಂಬಣ್ಣವಾಗಿರುವ ದಾವಾಗ್ನಿ ಪರ್ವತವೋ ಎಂಬಂತೆ ತೋರುತ್ತಿರುವ ಕಂಡು ಕಾಣದಂತೆ ಚಾಚಿಕೊಂಡಿರುವ ನಾಲಗೆಯಿಂದೊಡಗೂಡಿದ, ಪ್ರಳಯಕಾಲದ

**ಕಲ್ಪಾಂತಮೇಘನಿರ್ಘೋಷಜ್ವಾಲಾನಿಶ್ವಾಸಮಾರುತಂ ।**
**ದುರ್ನಿರೀಕ್ಷ್ಯಂ ದುರಾಧರ್ಷಂ ವಜ್ರಮಧ್ಯವಿಭೀಷಣಂ ॥ ೪೨ ॥**

**ಕೃತ್ವಾ ಮೂರ್ತಿಂನೃಸಿಂಹಸ್ಯ ದಾನವೇಂದ್ರಸಭಾಂ ಯಯೌ ।**
**ತಾಂಬಭಂಜ ತು ವೇಗೇನ ದೈತ್ಯಾನಾಂ ಭಯವರ್ಧನಃ ॥ ೪೩ ॥**

**ಭಜ್ಯಮಾನಾಂ ಸಭಾಂ ದೃಷ್ಟ್ವಾ ನೃಸಿಂಹೇನ ಮಹಾತ್ಮನಾ ।**
**ಹಿರಣ್ಯಕಶಿಪೂ ರಾಜಾ ದಾನವಾನ್ಸಮಚೋದಯತ್ ॥ ೪೪ ॥**

**ಸತ್ತ್ವಜಾತಮಿದಂ ಘೋರಂ ಚಾಪೂರ್ವಂ ಪುನರಾಗತಂ ।**
**ಘಾತಯಧ್ವಂ ದುರಾಧರ್ಷಂ ಯೇನ ಮೇ ನಾಶಿತಾ ಸಭಾ ॥ ೪೫ ॥**

**ತಸ್ಯ ತದ್ವಚನಂ ಶ್ರುತ್ವಾ ದೈತ್ಯಾಃ ಶತಸಹಸ್ರಶಃ ।**
**ಆಯುಧೈರ್ವಿವಿಧೈರ್ಜಘ್ನುರ್ದೇವದೇವಂ ಜನಾರ್ದನಂ ॥ ೪೬ ॥**

---

ಮೇಘದಂತೆ ತೋರುವ ಮೈಯಲ್ಲೆಲ್ಲಾ ಗುಂಗುರು ಗುಂಗುರಾಗಿರುವ ಒರಟು ಕೂದಲುಳ್ಳ, ಸೊಂಟದಲ್ಲೂ ಕತ್ತಿನಲ್ಲೂ ಉರಿಯುವ ಕೊಳ್ಳಿಗಳಂತೆ ಬಣ್ಣವುಳ್ಳ, ಕಲ್ಪಾಂತರದಲ್ಲಿ ಮೇಘವು ಗರ್ಜಿಸುತ್ತಿರುವಂತೆ ಉಸಿರುಬಿಡುತ್ತಿರುವ, ವಜ್ರನಖದಿಂದ ಕೂಡಿ ನೋಡುವುದಕ್ಕೇ ಸಾಧ್ಯವಿಲ್ಲದ ನರಸಿಂಹಾವತಾರವನ್ನು ತಳೆದು ಆ ಮಹಾವಿಷ್ಣುವು ಹಿರಣ್ಯಕಶಿಪುವಿನ ಸಭೆಗೆ ನುಗ್ಗಿ ಆ ಸಭೆಯನ್ನು ಭಂಗ (ಧ್ವಂಸ) ಮಾಡಿ ರಾಕ್ಷಸರಿಗೆ ಹೆದರಿಕೆಯನ್ನುಂಟುಮಾಡಿದನು.

೪೪–೫೦. ಈ ರೀತಿ ನಾಶವಾಗುತ್ತಿದ್ದ ಸಭಾಮಂದಿರವನ್ನು ನೋಡಿ ಹಿರಣ್ಯಕಶಿಪುವು ಆ ಅಪೂರ್ವ ಪ್ರಾಣಿಯನ್ನು ಕೊಲ್ಲಲು ಅದರ ಮೇಲೆ ರಾಕ್ಷಸರನ್ನು ಕಳುಹಿಸಿದನು. ಆ ಕೂಡಲೆ ಸಹಸ್ರಾರುಮಂದಿ ಆಯುಧಪಾಣಿಗಳಾದ ರಾಕ್ಷಸವೀರರು

ನಾನಾಯುಧ್ಮಸಹಸ್ರಾಣಿ ತಸ್ಯ ಗಾತ್ರೇಷು ಭಾರ್ಗವ ।
ವಿಶೀರ್ಣಾನ್ಯೇವ ದೃಶ್ಯಂತೆ ಮೃಲ್ಲೋಷ್ಟಾನೀವ ಪರ್ವತೇ ॥ ೪೭ ॥

ದೈತ್ಯಾಯುಧಾನಾಂ ವೈಫಲ್ಯಂ ಕೃತ್ವಾ ಹತ್ವಾ ಚ ದಾನವಾ್ ।
ಕರಪಾದಪ್ರಹಾರೈಶ್ಚ ಶತಶೋऽಥ ಸಹಸ್ರಶಃ ॥ ೪೮ ॥

ಜಗ್ರಾಹ ವೇಗಾ ದ್ದೈತೇಯಂ ಹಿರಣ್ಯಕಶಿಪುಂ ತತಃ ।
ನೃಸಿಂಹಹೇತೋರ್ವಿಕ್ರಾಂತಮುಸ್ತ್ರವರ್ಷಮಹಾಂಬುದಂ ॥ ೪೯ ॥

ವೇಗೇನೋತ್ಸಂಗಮಾರೋಪ್ಯ ಕದಲೀದಲಲೀಲಯಾ ।
ದಾರಯಾಮಾಸ ದೈತ್ಯೇಶವಕ್ಷಸ್ಥಲಮಹಾಗಿರಿಂ ॥ ೫೦ ॥

ಕೃತ್ವಾ ತಮಸುಭಿರ್ಹೀನಂ ದೈತ್ಯೇಶಂ ಕೇಶವಃ ಸ್ವಯಂ ।
ಅಸುರಾಣಾಂ ವಿನಾಶಂ ಚ ಕ್ರುದ್ಧೋ ನರಹರಿರ್ವ್ಯಧಾತ್ ॥ ೫೧ ॥

---

ಆ ನರಸಿಂಹನ ಮೇಲೆ ಬಿದ್ದು ಹೊಡೆಯಲುಪಕ್ರಮಿಸಿದರು. ಆ ಸ್ವಾಮಿಯ ಮೈಮೇಲೆ ಸಹಸ್ರಾರು ಆಯುಧಗಳು ಬಿದ್ದು ಘಾಯಮಾಡಿ ಅಲ್ಲಲ್ಲಿಯೇ,ಮುದುರಿಕೊಂಡು ಬೆಟ್ಟದಮೇಲೆ ಮಣ್ಣಿನ ಹೆಂಟೆ ಬಿದ್ದಂತೆ ಬಿದ್ದುಹೋದುವು. ಅನಂತರ ಆ ಮಹಾಪ್ರಭುವು ಆ ರಾಕ್ಷಸರನ್ನು ಸದೆಬಡಿದು ಬಲುಬೇಗ ಬಂದು ಹಿರಣ್ಯಕಶಿಪುವನ್ನು ಹಿಡಿದುಕೊಂಡನು. ಬಳಿಕ ಅವನ ಎದೆಯೆಂಬ ಮಹಾಪರ್ವತವನ್ನು ಭೇದಿಸಿ ತೊಡೆಯಮೇಲೆ ಕೆಡವಿಕೊಂಡನು. ಆಗಲೀಗ ಹಿರಣ್ಯಕಶಿಪುವಿನ ಪ್ರಾಣವಾಯುವು ಹಾರಿಹೋಯಿತು.

೫೧-೫೨. ಈ ರೀತಿ ನರಸಿಂಹಸ್ವಾಮಿಯು ಹಿರಣ್ಯಕಶಿಪುವನ್ನು ಸಂಹಾರಮಾಡಿ ಸಕಲ ಅಸುರರನ್ನೂ ನಾಶಗೊಳಿಸಿ ರಕ್ತಕಲೆಗಳಿಂದ ಶೋಭಿಸುತ್ತಿದ್ದನು. ಇಂತಹ ಮಹಾನುಭಾವನನ್ನು ಇಂದ್ರಾದಿ ದೇವತೆಗಳು ತಮ್ಮ ಲೋಕದಿಂದ ಕೆಳಕ್ಕಿ

ಹತ್ವಾಽಸುರಂ ಶೋಣಿತಬಿಂದುಚಿತ್ರಂ
ಸಂಪೂಜ್ಯ ದೇವಾಃ ಸಹ ವಾಸವೇನ ।
ಜಗ್ಮುಃಸ್ವಧಿಷ್ಣ್ಯಾನಿ ಮುದಾ ಸಮೇತಾ
ದೇವೋಽಪ್ಯಥಾಂತರ್ಹಿತಮೂರ್ತಿರಾಸ　　॥ ೫೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಂಕರಗೀತಾಸು ನರಸಿಂಹ ಪ್ರಾದುರ್ಭಾವೋ ನಾಮ ಚತುಷ್ಪಂಚಾಶತ್ತಮೋಽಧ್ಯಾಯಃ

---

ಳಿದು ಬಂದು ಪೂಜೆಮಾಡಿ ಹಿಂತಿರುಗಿ ತಮ್ಮ ಸ್ಥಳಗಳಿಗೆ ಹೋಗಿ ಸೇರಿಕೊಂಡರು. ಬಳಿಕ ಪರಮಾತ್ಮನು ಇದ್ದಲ್ಲಿಯೇ ಅಂತರ್ಧಾನವಾದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಶಂಕರಗೀತೆಯಲ್ಲಿ ನರಸಿಂಹ ಪ್ರಾದುರ್ಭಾವವೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಪಂಚಪಂಚಾಶತ್ತಮೋಽಧ್ಯಾಯಃ

---

॥ ಶಂಕರ ಉವಾಚ ॥

ಹತೋ ಹಿರಣ್ಯಕಶಿಪೌ ದಾನವೇ ದೇವಕಂಟಕೇ ।
ಹತಶೇಷಾಸ್ತು ದೈತೇಯಾಃ ಪಾತಾಲತಲಮಾಶ್ರಿತಾಃ ॥ ೧ ॥

ಪಾತಾಲತಲಸಂಸ್ಥೇಷು ದಾನವೇಷು ಮಹಾಯಶಾಃ ।
ಪ್ರಹ್ಲಾದಪೌತ್ರೋ ಧರ್ಮಾತ್ಮಾ ವಿರೋಚನಸುತೋ ಬಲಿಃ ॥ ೨ ॥

ಆರಾಧ್ಯ ತಪಸೋಗ್ರೇಣ ವರಂ ಲೇಭೆ ಪಿತಾಮಹಾತ್ ।
ಅವಧ್ಯತ್ವಮಜೇಯತ್ವಂ ಸಮರೇಷು ಸುರಾಸುರೈಃ ॥ ೩ ॥

---

## ಐವತ್ತೈದನೆಯ ಅಧ್ಯಾಯ

೧-೩. ಈಶ್ವರನು ಹೇಳಿದನು :- ಲೋಕಕಂಟಕನಾದ ಹಿರಣ್ಯಕಶಿಪುವು ಸತ್ತಮೇಲೆ ಬದುಕಿ ಉಳಿದ ರಾಕ್ಷಸರು ಪಾತಾಳಕ್ಕೆ ಹೋಗಿ ಸೇರಿಕೊಂಡರು. ಆಗ ಪಾತಾಳಲೋಕದಲ್ಲಿ ಪ್ರಹ್ಲಾದನ ಮೊಮ್ಮಗ ಬಲಿಚಕ್ರವರ್ತಿಯು ಮಹಾಕೀರ್ತಿಶಾಲಿಯಾಗಿ ರಾಜ್ಯಭಾರಮಾಡುತ್ತಿದ್ದನು ಅವನೂ ಕೂಡ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ, ಯುದ್ಧದಲ್ಲಿ ಸುರಾಸುರರಾರಿಂದಲೂ ಮರಣವಾಗಬಾರದೆಂದೂ, ಅವರಿಂದ ಸೋಲಬಾರದೆಂದೂ ವರವನ್ನು ಸಂಪಾದಿಸಿದನು.

ವರಲಬ್ಧಂ ಬಲಿಂ ಜ್ಞಾತ್ವಾ ಪುನಶ್ಚಕ್ರುರ್ದಿತೇಃ ಸುತಾಃ ।
ಪ್ರಹೃಷ್ಟಾ ದೈತ್ಯರಾಜಾನಂ ಪ್ರಹ್ಲಾದಾನುಮತೇರ್ಬಲಿಂ ॥ ೪ ॥

ಸಂಪ್ರಾಪ್ಯದೈತ್ಯರಾಜ್ಯಂ ತು ಬಲೇನ ಚತುರಂಗಿಣಾ ।
ಜಿತ್ವಾ ದೇವೇಶ್ವರಂ ಶಕ್ರಮಾಜಹಾರಾಽಮರಾವತೀಂ ॥ ೫ ॥

ಸ್ಥಾನಭ್ರಷ್ಟೋ ಮಹೇಂದ್ರೋಽಪಿ ಕಶ್ಯಪಂ ಶರಣಂ ಗತಃ ।
ಕಶ್ಯಪೇನ ತದಾ ಸಾರ್ಧಂ ಬ್ರಹ್ಮಾಣಂ ಶರಣಂ ಗತಃ ॥ ೬ ॥

ಬ್ರಹ್ಮಣಾಭಿಹಿತೋ ದೇವಂ ಜಗಾಮ ಶರಣಂ ಹರಿಂ ।
ಅಮೃತಾಧ್ಮಾತಮೇಘಾಭಂ ಶಂಖಚಕ್ರಗಧಾದರಂ ॥ ೭ ॥

ದೇವೋಽಪ್ಯಭಯದಾನೇನ ಸಂಯೋಜ್ಯ ಬಲಸೂದನಂ ।
ಉವಾಚ ವಚನಂ ಕಾಲೇ ಮೇಘಗಂಭೀರಯಾಗಿರಾ ॥ ೮ ॥

---

೪-೮. ಬಲಿಗೆ ವರವು ದೊರೆತ ವೃತ್ತಾಂತವು ತಿಳಿದಮೇಲೆ, ದೈತ್ಯರು ಸಂತುಷ್ಟಚಿತ್ತರಾಗಿ ಪ್ರಹ್ಲಾದನನುಮತಿಯಿಂದ ಬಲಿಯು ಬಳಿಗೆ ಹೋಗಿ ಸೈನ್ಯವನ್ನು ಕೂಡಿಸಿ ಸ್ವರ್ಗದ ಮೇಲೆ ದಂಡೆತ್ತಿ ಹೋಗಿ ಇಂದ್ರನನ್ನು ಸೋಲಿಸಿ ಅಮರಾವತಿಯನ್ನು ವಶಪಡಿಸಿಕೊಂಡರು. ಸ್ಥಾನಭ್ರಷ್ಟನಾದ ದೇವೇಂದ್ರನು ಕಶ್ಯಪರನ್ನು ಮರೆಹೊಕ್ಕನು. ಕಶ್ಯಪರು ಇಂದ್ರನನ್ನು ಕರೆದುಕೊಂಡು ಬ್ರಹ್ಮನ ಬಳಿಗೆ ಹೋದರು. ಆಗ ಬ್ರಹ್ಮನೂ ಅವರೆಲ್ಲರೊಡನೆ ವೈಕುಂಠಕ್ಕೆ ಪ್ರಯಾಣ ಬೆಳಿಯಿಸಿ ಶಂಖಚಕ್ರಗದಾಪದ್ಮಧರನಾದ ಶ್ರೀಹರಿಯನ್ನು ಮರೆಹೊಕ್ಕರು. ದೇವಾದಿದೇವನು ಅವರೆಲ್ಲರಿಗೂ ಅಭಯಪ್ರದಾನಮಾಡಿ ಮೇಘ ಗಂಭೀರ ಧ್ವನಿಯಿಂದ ಇಂತು ಹೇಳಿದನು.

॥ ಶ್ರೀ ಭಗವಾನುವಾಚ ॥

ಗಚ್ಛ ಶಕ್ರ ಭವಿಷ್ಯಾಮಿ ತ್ರಾತಾ ತೇ ಬಲಸೂದನ ।
ದೇವರೂಪಧರೋ ಭೂತ್ವಾ ವಂಚಯಿಷ್ಯಾಮಿ ತಂ ಬಲಿಂ ॥ ೯ ॥

॥ ಶಂಕರ ಉವಾಚ ॥

ಏವಮುಕ್ತಸ್ತದಾ ಶಕ್ರಃ ಪ್ರಯಯೌ ಕಶ್ಯಪಾಶ್ರಮಂ ।
ಆದಿದೇಶಾದಿತೇರ್ಗರ್ಭಂ ಚಾಂಶೇನಾಽಥ ಚ ಸರ್ವದಾ ॥ ೧೦ ॥

ಗರ್ಭಸ್ಥ ಏವ ತೇಜಾಂಸಿ ದಾನವೇಭ್ಯಃ ಸ ಆದದೇ ।
ತತಃ ಕಾಲೇನ ಸುಷುವೇ ಅದಿತಿರ್ವಾಮನಾಕೃತಿಂ ॥ ೧೧ ॥

ಯಸ್ಮಿನ್ಜಾತೇ ಸುರಗಣಾಃ ಪ್ರಹರ್ಷಮತುಲಂ ಗತಾಃ ।
ಋಷಯಶ್ಚ ಮಹಾಭಾಗಾಸ್ತ್ರೈಕಾಲ್ಯಾಮಲದರ್ಶಿನಃ ॥ ೧೨ ॥

ಏತಸ್ಮಿನ್ನೇವ ಕಾಲೇ ತು ಹಯಮೇಧಾಯ ದೀಕ್ಷಿತಃ ।
ಬಲಿರ್ದೈತ್ಯಪತಿಃ ಶ್ರೀಮಾನ್ಸಾಲಿಗ್ರಾಮಮುಪಾಶ್ರಿತಃ ॥ ೧೩ ॥

---

೯. ಮಹಾವಿಷ್ಣುವು ಹೇಳಿದನು :- " ಎಲೈ, ಇಂದ್ರನೆ ನೀನು ಊರಿಗೆ ಹೊರಡು. ನಿನಗೆ ನಾನು ಸಹಾಯಮಾಡುತ್ತೇನೆ. ದೇವತಾರೂಪವನ್ನು ಧರಿಸಿ ಆ ಬಲಿಯನ್ನು ವಂಚಿಸುತ್ತೇನೆ.

೧೦-೧೧. ಈಶ್ವರನು ಭಾರ್ಗವರಾಮನೊಡನೆ ಹೇಳುತ್ತಾನೆ -: ಈ ರೀತಿ ಹೇಳಲ್ಪಟ್ಟವನಾಗಿ ಇಂದ್ರನು ಕಶ್ಯಪಾಶ್ರಮಕ್ಕೆ ಹೋಗಿ ಅದಿತಿಯ ಗರ್ಭಕ್ಕೆ ಅಪ್ಪಣೆ ಮಾಡಿದನು. ನೀನು ಭಗವದಂಶದಿಂದ ಜನಿಸು. ಹೀಗೆಂದ ಬಳಿಕ ಆ ಮಗುವು ಗರ್ಭದಲ್ಲಿದ್ದಾಗಲೇ ದಾನವರ ತೇಜಸ್ಸನ್ನೆಲ್ಲಾ ಹೀರಿ ಕಾಲಕ್ರಮದಲ್ಲಿ ವಾಮನ ರೂಪವಾಗಿ ಹುಟ್ಟಿತು.

೧೨-೧೩. ಯಾವ ದಿನ ವಿಷ್ಣುವಿನ ಮೂರ್ತಿಯು ವಾಮನರೂಪದಿಂದ ಅವತರಿಸಿತೋ ಆಗಲೇ ದೇವಗಣವೂ ಬಹು ಸಂತೋಷವನ್ನು ಹೊಂದಿತು. ತ್ರಿಲೋಕದಲ್ಲೂ ಪರಿಶುದ್ಧರಾದ ಮಹಾತ್ಮರಾದ ಋಷಿಗಳೂ ಸಹ ಪರಮಾನಂದವನ್ನು ಹೊಂದಿ

ವಾಮಸ್ಕಂಧೇ ತಮಾದಾಯ ತಸ್ಯ ಯಜ್ಞೇ ಬೃಹಸ್ಪತಿಃ ।
ಅನಯದ್ಭೃಗುಶಾರ್ದೂಲ ನೂನಂ ತಸ್ಯೈವ ಮಾಯಯಾ ॥ ೧೪ ॥

ಯಜ್ಞವಾಟಂ ಸ ಸಂಪ್ರಾಪ್ಯ ಯಜ್ಞಂ ತುಷ್ಟಾವ ವಾಮನಃ ।
ಆತ್ಮಾನಮಾತ್ಮನಾ ಬ್ರಹ್ಮ ಭಸ್ಮಚ್ಛನ್ನ ಇವಾನಲಃ ॥ ೧೫ ॥

ಪ್ರವೇಶಯಾಮಾಸ ಚ ತಂ ಬಲಿರ್ಧರ್ಮಭೃತಾಂ ವರಃ ।
ದದರ್ಶ ಚ ಮಹಾಭಾಗಂ ವಾಮನಂ ಸುಮನೋಹರಂ ॥ ೧೬ ॥

ಸಂಯುಕ್ತಸರ್ವಾವಯವೈಃ ಪೀನೈಃ ಸಂಕ್ಷಿಪ್ತಪರ್ವಭಿಃ ।
ಕೃಷ್ಣಾಜಿನಜಟಾದಂಡಕಮಂಡಲುವಿರಾಜಿತಂ ॥ ೧೭ ॥

ವಿಕ್ರಮಿಷ್ಯನ್ಯಥಾ ವ್ಯಾಘ್ರೋಲೀಯತಿ ಸ್ವ ಸ್ವವಿಗ್ರಹೇ ।
ವಿಕ್ರಮಿಷ್ಯಂಸ್ತಥೈವೋರ್ವಿಂ ಲೀನಗಾತ್ರ ಸ್ವವಿಗ್ರಹೇ ॥ ೧೮ ॥

---

ಪರು. ಇದೇ ಸಮಯದಲ್ಲೇ ದೈತ್ಯರಾಜನಾದ ಬಲಿಚಕ್ರವರ್ತಿಯು ಅಶ್ವಮೇಧ ಯಾಗವನ್ನು ಮಾಡುವುದಕ್ಕೋಸ್ಕರ ಸಾಲಿಗ್ರಾಮವನ್ನು ಪ್ರವೇಶಿಸಿದನು. ಆ ಯಜ್ಞ ಸಮಯಕ್ಕೆ ಸರಿಯಾಗಿ ಸುರಗುರುವಾದ ಬೃಹಸ್ಪತ್ಯಾಚಾರ್ಯನು ವಾಮನಮೂರ್ತಿ ಯನ್ನು ಎಡದ ಹೆಗಲಿನ ಮೇಲೆ ಕೂರಿಸಿಕೊಂಡು, ಆ ಮಹಾತ್ಮನ ಮಹಿಮೆಯಿಂದಲೇ ಯಜ್ಞಶಾಲೆಗೆ ಪ್ರವೇಶಿಸಿದನು. ( ಸಾಲಿಗ್ರಾಮವೆಂಬುದು ಒಂದು ಊರು )

೧೫-೧೮. ಯಜ್ಞಶಾಲೆಗೆ ಪ್ರವೇಶಮಾಡಿದೊಡನೆಯೇ ವಾಮನನು ಆ ಯಜ್ಞ ವನ್ನು ವಿಶೇಷವಾಗಿ ಪ್ರಶಂಸಿದನು. ಎಲೈ, ಪರಶುರಾಮನೆ! ಕೇಳು, ಭಸ್ಮದಿಂದ ಮುಚ್ಚಿದ ಕೆಂಡವಂತಿದ್ದ ಆ ಪರಬ್ರಹ್ಮಮಯಮೂರ್ತಿಯನ್ನು, ಆ ಬಲಿಚಕ್ರವರ್ತಿಯು ಯಜ್ಞ ಮಂಟಪಕ್ಕೆ ಪ್ರವೇಶಮಾಡಿಸಿ ಆ ಮನೋಹರ ಮೂರ್ತಿಯನ್ನು ಚೆನ್ನಾಗಿ ನೋಡಿದನು. ಎಲ್ಲಾ ಅವಯವಗಳಿಂದಲೂ ಕೂಡಿದವನಾದಾಗ್ಯೂ ಎಲ್ಲ ಅಂಗಗಳನ್ನೂ ತನ್ನಲ್ಲೇ ಅಡಗಿಸಿಕೊಂಡು, ಜಟಾಧಾರಿಯಾಗಿ, ಕೃಷ್ಣಾಜಿನ ದಂಡಕಮಂಡಲಗಳಿಂದ ಪ್ರಕಾಶಿಸುತ್ತಿದ್ದ, ಹುಲಿಯು ಮಹದಾಕಾರವನ್ನು ತಳೆದಾಗ್ಯೂ ತನ್ನಲ್ಲಿ ತಾನೇ ಅಡಗು ವಂತೆ, ಎಲ್ಲ ಭೂಮಿಯನ್ನೂ ಆಕ್ರಮಿಸಿದವನಾದಾಗ್ಯೂ ಎಲ್ಲವನ್ನೂ ತನ್ನಲ್ಲಿಯೇ ಅಡ

**ಏತಸ್ಮಿನ್ನೇವ ಕಾಲೇ ತು ಹಯಮೇಧಾಯ ದೀಕ್ಷಿತಃ ।**
**ತಸ್ಮಾತ್ತು ಪ್ರಾರ್ಥಯದ್ರಾಜ್ಞಃ ದೇಹಿ ಮಹ್ಯಂ ಕ್ರಮತ್ರಯಂ ॥ ೧೯ ॥**

**ಏವಮುಕ್ತಸ್ತು ದೇವೇನ ಬಲಿರ್ದೈತ್ಯ ಗಣಾಧಿಪಃ ।**
**ಪ್ರದದಾವುದಕಂ ತಸ್ಯ ಪಾವಯಸ್ವೇತಿ ಚಾಬ್ರವೀತ್ ॥ ೨೦ ॥**

**ಅನ್ಯಚ್ಚ ಯದಭೀಷ್ಟಂತೇ ತದ್ಗೃಹಾಣ ದ್ವಿಜೋತ್ತಮ ।**
**ಪ್ರತಿಜಗ್ರಾಹ ಚ ಜಲಂ ಪ್ರವಾತ್ಯೇವ ತದಾ ಹರಿಃ ॥ ೨೧ ॥**

**ಉದಙ್ಮುಖೈರ್ದೈತ್ಯವರ್ಯೈರ್ವೀಕ್ಷ್ಯಮಾಣ ಇವಾಂಬುದಃ ।**
**ಆಕ್ರಮಂಸ್ತು ಹರಿರ್ಲೋಕಾನ್ದಾನವಾಃ ಶಸ್ತ್ರಪಾಣಯಃ ॥ ೨೨ ॥**

**ಅಭಿದ್ರವಂತಿ ವೇಗೇನ ನಾನಾವಕ್ತ್ರ ಶಿರೋಧರಾಃ ।**
**ಗರುಡಾನನಾಃ ಖಡ್ಗಮುಖಾ ಮಯೂರವದನಾಸ್ತಥಾ ॥ ೨೩ ॥**

---

ಗಿಸಿಕೊಂಡು ಸುಮ್ಮನೆ ಕುಳಿತಿದ್ದ ಆ ಮಹಾನುಭಾವನನ್ನು ಬಲಿಯು ನೋಡಿದನು. ಇದೇ ಸಮಯದಲ್ಲಿ ಅಶ್ವಮೇಧಯಾಗದಲ್ಲಿ ದೀಕ್ಷೆಯನ್ನು ವಹಿಸಿದ್ದ ಆ ಬಲಿಚಕ್ರವರ್ತಿಯನ್ನು ವಾಮನನು, ನನಗೆ ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಕೊಡಬೇಕೆಂದು ಪ್ರಾರ್ಥಿಸಿಕೊಂಡನು.

೨೦-೨೩. ಈರೀತಿ ವಾಮನನು ಕೇಳಿದೊಡನೆಯೇ ದೈತ್ಯೇಶ್ವರನಾದ ಬಲಿಯು ಉದಕವನ್ನು ತೆಗೆದು ಆವನ ಕೈಗೆ ಮೂರು ಹೆಜ್ಜೆಯನ್ನು ಧಾರೆಯೆರೆದುಕೊಟ್ಟು ನನ್ನನ್ನು ಉದ್ಧಾರಮಾಡೆಂದು ಪ್ರಾರ್ಥಿಸಿದನು. ಮತ್ತು ನಿನಗೆ ಏನೇನು ಅಪೇಕ್ಷೆಯಿದೆಯೋ ಅದನ್ನೆಲ್ಲಾ ತೆಗೆದುಕೋ ಎಂಬುದಾಗಿ ಹೇಳಿ ನೀರನ್ನು ಬಿಟ್ಟನು ಕೂಡಲೆ ಸ್ವಾಮಿಯು ಆ ದಾನದ ನೀರನ್ನು ಸಂಗ್ರಹಿಸಿ ಬೆಳೆಯಲಾರಂಭಿಸಿದನು. ಉತ್ತರಾಭಿಮುಖವಾಗಿ ನೋಡುತ್ತಿದ್ದ ರಾಕ್ಷಸರಿಗೆ ಆ ವಾಮನನು ಬೆಳೆಯುತ್ತಿದ್ದುದು ಮಹಾ

ಘೋರಾಮುಕರವಕ್ತ್ರಾಶ್ಚ ಕ್ರೋಷ್ಟುವಕ್ತ್ರಾಶ್ಚ ದಾನವಾಃ ।
ಆಖುದರ್ದುರವಕ್ತ್ರಾಶ್ಚ ಘೋರವೃಕಮುಖಾಸ್ತಥಾ ॥ ೨೪ ॥

ಮಾರ್ಜಾರಶಶವಕ್ತ್ರಾಶ್ಚ ಹಂಸಕಾಕಾನನಾಸ್ತಥಾ ।
ಗೋಧಾಶಲ್ಯಕವಕ್ತ್ರಾಶ್ಚ ಅಜಾವಿಮಹಿಷಾನನಾಃ ॥ ೨೫ ॥

ಸಿಂಹವ್ಯಾಘ್ರಸೃಗಾಲಾನಾಂ ದ್ವೀಪಿವಾನರಪಕ್ಷಿಣಾಂ ।
ಹಸ್ತ್ಯಶ್ವಗೋಖರೋಷ್ಟ್ರಾಣಾಂ ಭುಜಗಾನಾಂ ಸಮಾನನಾಃ ॥ ೨೬ ॥

ಪ್ರತಿಗೃಹ್ಯ ಜಲಂ ಪ್ರಾಪ್ಯ ವ್ಯವರ್ಧತ ತದಾ ಹರಿಃ ।
ಉದಙ್ಮುಖೈರ್ದೇವಗಣೈರೀಕ್ಷ್ಯಮಾಣ ಇವಾಂಬುದಃ ॥ ೨೭ ॥

ವಿಕ್ರಮಂತಂ ಹರಿಂ ಲೋಕಾನ್ದಾನವಾಃ ಶಸ್ತ್ರಪಾಣಯಃ ।
ಮತ್ಸ್ಯಕಚ್ಛಪವಕ್ತ್ರಾಣಾಂ ದರ್ದುರಾಣಾಂ ಸಮಾನನಾಃ ॥ ೨೮ ॥

---

ಮೇಘದಂತೆ ಕಾಣಿಸುತ್ತಿತ್ತು. ಈರೀತಿ ಹರಿಯು ಪ್ರಪಂಚವನ್ನಾಕ್ರಮಿಸಿ ಬೆಳೆಯು ತ್ತಿರಲಾಗಿ ರಾಕ್ಷಸರು ವೇಗದಿಂದ ಅವನ ಬಳಿಗೆ ಓಡಿಬರುತ್ತಿದ್ದರು. ಬಹುಮುಖರಾದ ಬಹು ಶಿರಸ್ಕರಾದ, ಗರುಡನಂತೆ, ಕತ್ತೆಯಂತೆ ನವಿಲಿನಂತೆ, ಮೊಸಳೆಯಂತೆ, ನರಿ ಯಂತೆ ಇದ್ದ ರಕ್ಕಸರು ಓಡಿಬಂದರು ಇಲಿಯಂತೆ, ಮುಂಗುಸಿಯಂತೆ, ಹಲ್ಲಿಯಂತೆ ಆಡಿನಂತೆ, ಕೋಣದಂತೆ, ಸಿಂಹ. ಹುಲಿ, ಆನೆ, ಕಪಿ, ಹಕ್ಕಿಗಳಂತೆ; ಆನೆ ಕುದುರೆ, ಹಸು, ಕತ್ತೆ, ಒಂಟೆ, ಹಾವುಗಳಂತೆ ಮುಖವುಳ್ಳ ರಾಕ್ಷಸರು ಆ ವಾಮನನನ್ನು ಅನು ಸರಿಸಿ ಓಡಿಬಂದರು. ಈರೀತಿ ವಾಮನನು ಭೂಮಿಯನ್ನು ಪರಿಗ್ರಹಿಸಿದ ಬಳಿಕ ಬೆಳೆ ಯುತ್ತಲೇ ಬಂದನು. ಆಗ ಆ ತ್ರಿವಿಕ್ರಮಮೂರ್ತಿಯನ್ನು ಉತ್ತರಾಭಿಮುಖರಾಗಿದ್ದ ದೇವತೆಗಳು, ಮಹಾಮೇಘವು ಬೆಳೆಯುತ್ತಿದೆಯೋ ಎಂಬಂತೆ ನೋಡಿದರು.

೨೮-೩೫. ಈರೀತಿ ಮಹತ್ತಾಗಿ ಬೆಳೆಯುತ್ತಿರುವ ಮೂರ್ತಿಯನ್ನು ಶಸ್ತ್ರಧಾರಿ ಗಳಾದ ದಾನವರು ಅಟ್ಟಿಸಿಕೊಂಡು ಬಂದು ಮೇಲೆಬೀಳಲುಪಕ್ರಮಿಸಿದರು. ಆ ರಾಕ್ಷ

ಸ್ಥೂಲದಂತಾ ವಿವೃತ್ತಾಕ್ಷಾ ಲಂಬೋಷ್ಠ ಜಠರಾಸ್ತಥಾ ।
ಪಿಂಗಲಾಕ್ಷಾ ವಿವೃತ್ತಾಸ್ಯಾ ನಾನಾಬಾಹುಶಿರೋಧರಾಃ ॥ ೨೯ ॥

ಸ್ಥೂಲಾಗ್ರನಾಸಾಶ್ಚಿಪಿಟಾ ಮಹಾಹನುಕಪಾಲಿನಃ ।
ಚೀನಾಂಶುಕೋತ್ತರಾಸಂಗಾಃ ಕೇಚಿತ್ಕೃಷ್ಣಾಜಿನಾಂಬರಾಃ ॥ ೩೦ ॥

ಭುಜಂಗಾಭರಣಾಶ್ಚಾನ್ಯೇ ಕೇಚಿನ್ಮುಕುಟಭೂಷಿತಾಃ ।
ಸಕುಂಡಲಾಃ ಸಕಟಕಾಃ ಸಶಿರಸ್ತ್ರಾಣಮಸ್ತಕಾಃ ॥ ೩೧ ॥

ಧನುರ್ಬಾಣಧರಾಶ್ಚಾಽನ್ಯೇ ತಥಾ ತೋಮರಪಾಣಯಃ ।
ಖಡ್ಗಧರ್ಮಧರಾಶ್ಚಾನ್ಯೇ ತಥಾ ಪರಿಘಪಾಣಯಃ ॥ ೩೨ ॥

ಶತಘ್ನಿಚಕ್ರಹಸ್ತಾಶ್ಚ ಗದಾಮುಸಲಪಾಣಯಃ ।
ಅಶ್ಮಯಂತ್ರಾಯುಧೋಪೇತಾ ಭಿಂಡಿಪಾಲಾಯುಧಾಸ್ತಥಾ ॥ ೩೩ ॥

---

ಸರ ಸ್ವರೂಪವನ್ನು ವಿವರಿಸಲಾಗುವುದು ;- ಮೀನು, ಆಮೆ, ಕಪ್ಪೆಗಳಂತೆ ಮುಖವುಳ್ಳವರು; ದಪ್ಪ ಹಲ್ಲು, ತಿರುಗುತ್ತಿರುವ ಕಣ್ಣು, ಜೋಲು ತುಟಿ, ಜೋಲುಹೊಟ್ಟೆ ಹಳದೀಕಣ್ಣು, ಮೆಳ್ಳಗಣ್ಣು, ಬಹಳ ತೋಳುಗಳು, ಬಹಳ ತಲೆಗಳು, ದಪ್ಪಮೂಗಿನ ತುದಿ, ದೊಡ್ಡದಾದ ಕೆನ್ನೆಗಳುಳ್ಳ ರಕ್ಕಸರು, ಚಿತ್ರವಸ್ತ್ರಗಳಂ ಧರಿಸಿದವರು. ಕೃಷ್ಣಾಜಿನವನ್ನು ಹೊದ್ದವರು, ಹಾವನ್ನು ಸುತ್ತಿಕೊಂಡವರು, ಕಿರೀಟವನ್ನು ಧರಿಸಿದವರು, ಪೇಟವನ್ನು ಸುತ್ತಿದವರು, ಕಡಕು ಕೈಬಳೆಗಳನ್ನು ಧರಿಸಿದವರು, ಧನುರ್ಬಾಣವನ್ನು ಧರಿಸಿದವರು, ಮರದಿಂದ ಮಾಡಿದ ಆಯುಧಗಳಂ ಹಿಡಿದಿರುವವರು, ಕತ್ತಿ ಗುರಾಣಿಗಳನ್ನು ಹಿಡಿದಿರುವವರು, ಫಿರಂಗಿ ಗದೆ ಒನಕೆ, ಹಾರೆ, ಕಲ್ಲುಗುಂಡುಗಳು, ಒರಳು, ಕೊಡಲಿ, ಗುದ್ದಲಿಗಳನ್ನು ಹಿಡಿದು, ದೊಡ್ಡ ದೊಡ್ಡಮರಗಳಂತೆಯೂ, ದೊಡ್ಡ ದೊಡ್ಡ ಬೆಟ್ಟಗಳಂತೆಯೂ,

ಶೂಲೋಲೂಖಲಹಸ್ತಾಶ್ಚ ಪರಶ್ವಥಧರಾಸ್ತಥಾ ।
ಮಹಾವೃಕ್ಷಪ್ರವಹಣಾ ಮಹಾಪರ್ವತಯೋಧಿನಃ ॥ ೩೪ ॥

ಕ್ರಮಮಾಣಂ ಹೃಷೀಕೇಶಮುಪಾವರ್ತಂತ ಸರ್ವಶಃ ।
ಸ ತಾನ್ಮರ್ದ ಸರ್ವಾತ್ಮಾ ತನ್ಮುಖ್ಯಾರ್ದೈತ್ಯದಾನವಾನ್ ॥ ೩೫ ॥

ಸರಸೀವ ಮಹಾಪದ್ಮಾನ್ಮಹಾಹಸ್ತೀವ ದಾನವಾನ್ ।
ಪ್ರಮಥ್ಯ ಸರ್ವಾನ್ದೈತೇಯಾನ್ಹಸ್ತಪಾದತಲೈಸ್ತತಃ ॥ ೩೬ ॥

ರೂಪಂಕೃತ್ವಾ ಮಹಾಭೀಮಮಾಜಹಾರಾಽಶು ಮೇದಿನೀಂ ।
ತಸ್ಯ ವಿಕ್ರಮತೋ ಭೂಮಿಂ ಚಂದ್ರಾದಿತ್ಯಾ ಸ್ತನಾಂತರೆ ॥ ೩೭ ॥

ಪರಂ ಪ್ರಕ್ರಮಮಾಣಸ್ಯ ನಾಭಿದೇಶೇ ವ್ಯವಸ್ಥಿತೌ ।
ತತಃ ಪ್ರಕ್ರಮಮಾಣಸ್ಯ ಜಾನುದೇಶೇ ವ್ಯವಸ್ಥಿತೌ ॥ ೩೮ ॥

---

ಇರುವ ರಾಕ್ಷಸವೀರರು ಭೂಮಿಯನ್ನು ಅಳೆಯುತ್ತ ಬೆಳೆಯುತ್ತಿರುವ ವಾಮನ ಮೂರ್ತಿಯನ್ನಟ್ಟಿಸಿಕೊಂಡು ಬಂದು ಆ ಮಹಾನುಭಾವನಿಂದ ಹತರಾದರು.

೩೬-೪೦. ಆ ತ್ರಿವಿಕ್ರಮಮೂರ್ತಿಯು ಮಹಾಗಜದಿಂದ ಹೊಸೆಯಲ್ಪಟ್ಟ ಚೂರು ಚೂರಾದ ಕೊಳದಲ್ಲಿನ ಕಮಲದಂತೆ ಸಕಲ ದೈತ್ಯವರ್ಗವನ್ನೂ ಕಾಲುಗಳಿಂದಲೂ, ಅಂಗೈಗಳಿಂದಲೂ ಅಪ್ಪಳಿಸಿಕೊಂಡು ಭಯಂಕರವಾದ ರೂಪವನ್ನು ಧರಿಸಿ ಭೂಲೋಕವನ್ನೆಲ್ಲಾ ಆಕ್ರಮಿಸಿದನು ಆರೀತಿ ಭೂಮಿಯನ್ನು ಆಕ್ರಮಿಸಿದ ಕಾಲದಲ್ಲಿ ಸೂರ್ಯಚಂದ್ರರು ಎದೆಯ ಹತ್ತಿರ ಬಂದರು. ಅಲ್ಲಿಂದ ಕೆಳಗೆ ಅಳೆದಾಗ ಹೊಕ್ಕಳೂ ಮೊಳಕಾಲೂ, ಕಾಲುಗಳೂ ಭೂಲೋಕವನ್ನೆಲ್ಲಾ ಆಕ್ರಮಿಸಿದವು. ಈರೀತಿ ಸಕಲ

ತತೋಽಪಿ ಕ್ರಮಮಾಣಸ್ಯ ಪದ್ಭ್ಯಾಂ ದೇವೌ ವ್ಯವಸ್ಥಿತೌ ।
ಜಿತ್ವಾ ಸ ಮೇದಿನೀಂ ಕೃತ್ಸ್ನಾಂ ಹತ್ವಾ ಚಾಸುರಪುಂಗವಾನ್ ॥ ೩೯ ॥

ದದೌ ಶಕ್ರಾಯ ವಸುಧಾಂ ವಿಷ್ಣುರ್ಬಲವತಾಂ ವರಃ ।
ಸ್ವಂ ರೂಪಂಚ ತಥಾಽಸಾದ್ಯ ದಾನವೇಂದ್ರಮಭಾಷತ ॥ ೪೦ ॥

॥ ಶ್ರೀ ಭಗವಾನುವಾಚ ॥

ಯಜ್ಞವಾಟೇ ತ್ವದೀಯೇಽಸ್ಮಿನ್ಸಾಲಿಗ್ರಾಮೇ ಮಹಾಸುರ ।
ಮಯಾ ನಿವಿಷ್ಟಪಾದೇನ ಮಾಪಿತೇಯಂ ವಸುಂಧರಾ ॥ ೪೧ ॥

ಪ್ರಥಮಂ ತು ಪದಂ ಜಾತಂ ಸೌರ್ಬಂಧಶಿಖರೇ ಮಮ ।
ದ್ವಿತೀಯಂ ಮೇರುಶಿಖರೇ ತೃತೀಯಂ ನಾಽಭವತ್ಕ್ವಚಿತ್ ॥ ೪೨ ॥

ತನ್ಮೇ ವರಯ ದೈತ್ಯೇಂದ್ರ ಯನ್ಮಯಾಽಪ್ತಂ ಪ್ರತಿಗ್ರಹಂ ।

॥ ಬಲಿರುವಾಚ ॥

ಯಾವತೀ ವಸುಧಾ ದೇವ ತ್ವಯ್ಯೈವ ಪರಿನಿರ್ಮಿತಾ ॥ ೪೩ ॥

---

ಭೂಮಿಯನ್ನೂ ಗೆದ್ದು, ರಾಕ್ಷಸರನ್ನೆಲ್ಲಾ ಒದ್ದು ಭೂಮಿಯನ್ನು ಇಂದ್ರನಿಗೆ ಕೊಟ್ಟು ತನ್ನ ವಿಶ್ವರೂಪವನ್ನು ಬಲಿಚಕ್ರವರ್ತಿಗೆ ತೋರಿಸಿ ವಾಮನನು ಇಂತು ಹೇಳಿದನು.

೪೧-೪೨. ಮಹಾ ವಿಷ್ಣುವು ಹೇಳುತ್ತಾನೆ :- "ಎಲೈ, ಬಲಿಚಕ್ರವರ್ತಿಯೇ! ನೀನು ಮೂರು ಹೆಜ್ಜೆ ಪ್ರದೇಶವನ್ನು ದಾನಕೊಟ್ಟೆಯಷ್ಟೆ! ಅದರಲ್ಲೊಂದು ಪಾದ ದಿಂದ ಭೂಲೋಕವೆಲ್ಲಾ ಆಕ್ರಮಿಸಿಹೋಯಿತು ಮತ್ತೊಂದು ಹೆಜ್ಜೆಯನ್ನು ಮೇರು ಪರ್ವತದ ಮೇಲೆ ಇಟ್ಟೆನು. ಮೂರನೆಯ ಮತ್ತೊಂದು ಹೆಜ್ಜೆಗೆ ಜಾಗವೇ ಇಲ್ಲ ವಲ್ಲಾ ? ನೀನು ಕೊಟ್ಟ ದಾನವೇನಾಯಿತು ? ನಾನು ತೆಗೆದುಕೊಂಡದ್ದೇನಾಯಿತು ? ಹೇಳಯ್ಯ! ದಾನವೇಂದ್ರ !!"

೪೩-೪೪. ಅದಕ್ಕೆ ಬಲಿಯು ಪ್ರತ್ಯುತ್ತರವನ್ನು ಹೇಳುತ್ತಾನೆ: (ಈ ವಿಚಿತ್ರವನ್ನು ನೋಡಿ ಬಲಿಯು ಇವನು ಸಾಕ್ಷಾದ್ಭಗವಂತನೇ ಎಂದು ತಿಳಿದವನಾಗಿ)

**ತಾವತೀ ತೇನ ಸಂಪೂರ್ಣಾ ದೇವದೇವ ಕ್ರಮತ್ರಯಂ ।**
**ನ ಕೃತಂ ಚ ತ್ವಯಾ ದೇವ ಕುತಸ್ತಸ್ಮೇ ಮಹೇಶ್ವರ ॥ ೪೪ ॥**

**ನ ಚ ತದ್ವಿದ್ಯತೇ ದೇವ ತಥೈವಾಽನ್ಯಸ್ಯ ಕಸ್ಯಚಿತ್ ।**

**॥ ಶ್ರೀ ಭಗವಾನುವಾಚ ॥**

**ನ ಮೇ ತ್ವಯಾಪೂರ್ಯತೇ ಮೇ ದಾನವೇಂದ್ರ ಯಥಾಶ್ರುತಂ ॥ ೪೫ ॥**

**ಸುತಲಂ ನಾಮ ಪಾತಾಲಂ ವಸತತ್ರ ಸುಸಂಯುತಃ ।**
**ಮಯೈವ ನಿರ್ಮಿತಾ ತತ್ರ ಮನಸಾ ಶೋಭನಾ ಪುರೀ ॥ ೪೬ ॥**

**ಜ್ಞಾತಿಭಿಃ ಸಹ ಧರ್ಮಿಷ್ಠೈರ್ವಸ ತತ್ರ ಯಥಾಸುಖಂ ।**
**ತತ್ರ ತ್ವಂ ಭೋಕ್ಷ್ಯಸೇ ಭೋಗಾನ್ವಿಶಿಷ್ಟಾನ್ಬಲಸೂದನಾತ್ ॥ ೪೭ ॥**

**ಅವಾಪ್ಸ್ಯಸಿ ತಥಾ ಭೋಗಾಂ ಲ್ಲೋಕಾದ್ವಿಧಿವಿವರ್ಜಿತಾನ್ ।**
**ಪ್ರಾಕಾಮ್ಯ ಯುಕ್ತಶ್ಚ ತಥಾ ಲೋಕೇಷು ವಿಹರಿಷ್ಯಸಿ ॥ ೪೮ ॥**

---

" ಸ್ವಾಮಿ ! ನಿನ್ನಿಂದಲೇ ನಿರ್ಮಿತವಾದ ಭೂಲೋಕವು ಎಷ್ಟಿದೆಯೋ ಅಷ್ಟಕ್ಕೂ ಮೂರು ಹೆಜ್ಜೆಯೇ ಸಾಲದೆ ಹೋದಮೇಲೆ ನಿನ್ನಿಂದ ಅಷ್ಟು ಭೂಮಿಯೇ ನಿರ್ಮಾಣ ಮಾಡಲ್ಪಟ್ಟಿಲ್ಲವೆಂದು ಗೊತ್ತಾಗುವುದಿಲ್ಲವೆ ! ನಾನು ಈಗ ಮಾಡುವುದೇನ್ನೈ ! ಪರಮೇಶ್ವರ !!

೪೫. ವಾಮನರೂಪೀ ಪರಮಾತ್ಮನು ಹೇಳುತ್ತಾನೆ :- ಹಾಗಾದರೆ ನನಗೆ ನೀನು ಧಾರಾಪೂರ್ವಕವಾಗಿ ಕೊಟ್ಟ ದಾನವು ಪೂರ್ಣವಾಗಲಿಲ್ಲವಲ್ಲ ?

೪೬-೪೮. ಎಲೈ ಬಲಿಯೆ ! ನೀನೀಗ ಸುತಲವೆಂಬ ಪಾತಾಳಲೋಕಕ್ಕೆ ಹೋಗಿ ಅಲ್ಲಿ ವಾಸಮಾಡು. ಅದು ನನ್ನಿಂದಲೇ ಮನಸ್ಸಿನಿಂದ ನಿರ್ಮಿತವಾದುದಾಗಿದೆ ಆ ಮಂಗಳಕರವಾದ ಪಟ್ಟಣದಲ್ಲಿ ನಿನ್ನ ಬಾಂಧವರೊಡನೆ ಸುಖವಾಗಿ ವಾಸಮಾಡು ಅಲ್ಲಿ ನೀನು ಇಂದ್ರನಿಗಿಂತಲೂ ಹೆಚ್ಚಾದ ಭೋಗಗಳನ್ನು ಅನುಭವಿಸಬಹುದು. ಅಷ್ಟಲ್ಲದೆ ವಿಧಿನಿಷೇಧವಿಲ್ಲದೆ ನೀನು ಮನಸ್ಸು ಬಂದಬಂದಂತೆ ಪ್ರಾಕಾಮ್ಯವೆಂಬ ವಿಭೂತಿ (ಐಶ್ವರ್ಯ) ಯನ್ನು ಪಡೆದವನಾಗಿ ಸುಖಪಡುತ್ತೀಯೆ.

ಮನ್ವಂತರೇ ದ್ವಿತೀಯೇ ಚ ಮಹೇಂದ್ರತ್ವಂ ಕರಿಷ್ಯಸಿ ।
ತೇಜಸಾ ಚ ಮದೀಯೇನ ಶಕ್ರತ್ವೇ ಯೋಕ್ಷ್ಯಸೇ ಬಲೇ ॥ ೪೯ ॥

ತವ ಶತ್ರುಗಣಾನ್ಸರ್ವಾನ್ಘಾತಯಿಷ್ಯಾಮ್ಯಹಂ ತದಾ ।
ಬ್ರಹ್ಮಣ್ಯಸ್ತ್ವಂ ಶರಣ್ಯಸ್ತ್ವಂ ಯಜ್ಞಶೀಲಃ ಪ್ರಿಯಂವದಃ ॥ ೫೦ ॥

ತಪಸ್ವೀ ದಾನಶೀಲಶ್ಚ ವೇದವೇದಾಂಗಪಾರಗಃ ।
ತಸ್ಮಾದ್ಯಶೋಭಿವೃದ್ಧ್ಯರ್ಥಂ ಮಯಾ ತ್ವಮಭಿಸಂಧಿತಃ ॥ ೫೧ ॥

ದೇವರಾಜಾಧಿಕಾನ್ಭೋಗಾನ್ಪಾತಾಲಸ್ಥೋಽಪಿ ಭೋಕ್ಷ್ಯಸೇ ।
ಸನ್ನಿಧಾನಶ್ಚ ತತ್ರಾಹಂ ಕರಿಷ್ಯಾಮ್ಯಸುರಾಧಿಪ ॥ ೫೨ ॥

ಮಯಾ ಚ ರಂಸ್ಯಸೇ ಸಾರ್ಧಂ ಸ್ಪೃಹಣೀಯಃ ಸುರೈರಪಿ ।
ಶಕ್ರತ್ವಂ ಚ ತಥಾ ಕೃತ್ವಾ ಭಾವ್ಯೇ ಸಾವರ್ಣಿಕೇಽಂತರೇ ॥ ೫೩ ॥

---

೪೯-೫೩. ಅಯ್ಯಾ! ಬಲಿರಾಜ! ನನಗೆ ಮಾಡಿದ ಈ ದಾನದ ಫಲವಾಗಿ ನೀನು ಮುಂದೆ ಬರುವ ಎರಡನೆಯ ಸಾವರ್ಣಿಕ ಮನ್ವಂತರದಲ್ಲಿ ಇಂದ್ರಪದವಿಯನ್ನು ಹೊಂದಿ ಸ್ವರ್ಗಾಧಿಪತಿಯಾಗುತ್ತೀಯೆ!! ನನ್ನ ಸಂಬಂಧಿಯಾದ (ವೈಷ್ಣವ) ತೇಜಸ್ಸಿನಿಂದೊಡಗೂಡಿ ನೀನು ಇಂದ್ರಪದವಿಯನ್ನು ಪಡೆದು ಸುಖಪಡುತ್ತೀ. ಆ ಕಾಲದಲ್ಲಿ ನಿನ್ನನ್ನು ದ್ವೇಷಿಸುವ ಶತ್ರುಗಣಗಳನ್ನು ನಾನು ಸಂಹರಿಸಿ ನಿನಗೆ ಸಹಾಯಮಾಡುತ್ತೇನೆ. ಅಯ್ಯಾ! ಭೂಪತಿಯೆ! ನೀನು ಬ್ರಹ್ಮಣ್ಯನೂ, ಶರಣ್ಯನೂ, ಯಜ್ಞಪ್ರೇಮಿಯೂ, ಪ್ರಿಯವಾದಿಯೂ, ತಪಸ್ವಿಯೂ, ದಾನಶೀಲನೂ, ವೇದ ವೇದಾಂಗ ಪಾರಂಗತನೂ ಆಗಿರುವೆ. ಇದರಿಂದಲೇ ನನಗೆ ನಿನ್ನಲ್ಲಿ ಪ್ರೀತಿಯುಂಟಾಗಿ ನನ್ನಿಂದ ಈರೀತಿ ಅಭಿಸಂಧಿತನಾಗಿ (ಸ್ನೇಹಿತನಾಗಿ) ವರವನ್ನು ಪಡೆದಿದ್ದೀಯೆ! ನೀನು ಪಾತಾಳಲೋಕದಲ್ಲಿ ವಾಸವಾಗಿದ್ದಾಗ್ಯೂ ದೇವೇಂದ್ರನಿಗಿಂತ ಹೆಚ್ಚಾದ ಭೋಗಭಾಗ್ಯಗಳನ್ನು ಅನುಭವಿಸುತ್ತೀಯೆ! ಮತ್ತು ನಾನೂ ಸಹ ಅಲ್ಲಿ ನಿನ್ನ ಹತ್ತಿರದಲ್ಲೇ ಇದ್ದು ನಿನ್ನೊಡನೆ ದೇವತೆಗಳೂ ಆಶೆಪಡುವಂತಹ ಭೋಗಗಳಿಂದ ನಿನ್ನನ್ನು ಸುಖಪಡಿಸುತ್ತೇನೆ.

ಸರ್ವಸಂಧಿವಿನಿರ್ಮುಕ್ತೋ ಮಯ್ಯೈವ ಸಹ ರಂಸ್ಯಸೇ　　॥ ೫೪ ॥

॥ ಶಂಕರ ಉವಾಚ ॥

ಇತ್ಯೇವಮುಕ್ತ್ವಾ ಸಜಲಾಂಬುನಾಭಃ
ಪ್ರತಪ್ತಚಾಮೀ ಕರಧೌತವಸ್ತ್ರಃ ।
ಅದರ್ಶನಂ ದೇವವರೋ ಜಗಾಮ
ಶಕ್ರಶ್ಚ ಲೇಭೆ ಸಕಲಾಂ ತ್ರಿಲೋಕೀಂ　　॥ ೫೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಂಕರಗೀತಾಸುವಾಮನಪ್ರಾದುರ್ಭಾವೋನಾಮ ಪಂಚಪಂಚಾಶತ್ತಮೋಽಧ್ಯಾಯಃ

---

ಇದೇ ರೀತಿ ನಿನಗೆ ಮುಂದಿನ ಮನ್ವಂತರದಲ್ಲೂ ಇಂದ್ರಪದವಿಯನ್ನು ಕೊಟ್ಟು, ಸಕಲ ದುಃಖಗಳಿಂದಲೂ ಬಿಡುಗಡೆಮಾಡಿ ನನ್ನೊಡನೆ ಸುಖವಾಗಿರುವಂತೆ ಮಾಡುತ್ತೇನೆ.

೫೫ ಪರಶುರಾಮನೊಡನೆ ಶಂಕರನು ಹೇಳುತ್ತಾನೆ :- ಕೇಳೈ, ಭಾರ್ಗವ ರಾಮನೇ ! ಈ ರೀತಿಯಾಗಿ ಬಲಿಚಕ್ರವರ್ತಿಯೊಡನೆ ಹೇಳಿದ ಬಳಿಕ ಕಮಲ ನಯನನೂ ಸುವರ್ಣವಸ್ತ್ರಾಲಂಕೃತನೂ ಆದ ಆ ಪರಮಾತ್ಮನು ಅಂತರ್ಧಾನನಾಗಿ ತನ್ನ ಸ್ವಸ್ಥಾನಕ್ಕೆ ತೆರಳಿದನು. ಇಂದ್ರನೂ ಸಹ ತ್ರಿಲೋಕಾಧಿಪತ್ಯವನ್ನು ಮರಳಿ ಪಡೆದವನಾಗಿ ಸ್ವರ್ಗಕ್ಕೆ ಪ್ರಯಾಣ ಬೆಳೆಸಿದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಶ್ರೀ ಭಾರ್ಗವರಾಮ ಪ್ರಶ್ನೆಯೆಂಬ ಶಂಕರಗೀತೆ ಯಲ್ಲಿ ವಾಮನಪ್ರಾದುರ್ಭಾವವೆಂಬ ಹೆಸರಿನ ಐವತ್ತೈದನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಷಟ್ಪಂಚಾಶತ್ತಮೋಽಧ್ಯಾಯಃ ॥

---

**॥ ರಾಮ ಉವಾಚ ॥**

**ತಸ್ಯ ದೇವಾತಿದೇವಸ್ಯ ವಿಷ್ಣೋರಮಿತ ತೇಜಸಃ ।**
**ತ್ವತ್ತೋಽಹಂಶ್ರೋತುಮಿಚ್ಛಾಮಿ ದಿವ್ಯಾ ಹ್ಯಾತ್ಮವಿಭೂತಯಃ ॥ ೧ ॥**

**॥ ಶಂಕರ ಉವಾಚ ॥**

**ನ ಶಕ್ಯಾ ವಿಸ್ತರಾದ್ವಕ್ತುಂ ದೇವದೇವಸ್ಯ ಭೂತಯಃ ।**
**ಪ್ರಾಧಾನ್ಯತಸ್ತೇ ವಕ್ಷ್ಯಾಮಿ ಶೃಣುಷ್ವೈಕಮನಾ ದ್ವಿಜ ॥ ೨ ॥**

**ಸರ್ಗೇ ಬ್ರಹ್ಮಾ ಸ್ಥಿತೌ ವಿಷ್ಣುಃ ಸಂಹಾರೇ ಚ ತಥಾ ಹರಃ ।**
**ವರುಣೋ ವಾಯುರಾಕಾಶೋ ಜ್ಯೋತಿಶ್ಚ ಪೃಥಿವೀ ತಥಾ ॥ ೩ ॥**

---

### ಐವತ್ತಾರನೆಯ ಅಧ್ಯಾಯವು

೧. ಪರಶುರಾಮನು ಈಶ್ವರನನ್ನು ಕೇಳುತ್ತಾನೆ :- ಸ್ವಾಮಿ, ಶಂಕರ ಭಗವರ್ನ ! ಆ ಮಹಾಪುರುಷನಾದ ಮಹಾವಿಷ್ಣುವಿನ ದಿವ್ಯವಾದ ಆತ್ಮಶಕ್ತಿಯ ಮಹಿಮೆ (ಐಶ್ವರ್ಯ) ಗಳನ್ನು ನಿನ್ನಯ ಮುಖದಿಂದ ಕೇಳಬೇಕೆಂದು ಆಶೆಪಡುತಲಿದೇನೆ.

೨. ಈಶ್ವರನು ಪ್ರತ್ಯುತ್ತರವನ್ನು ಹೇಳುತ್ತಾನೆ:- ಎಲೈ, ಬ್ರಾಹ್ಮಣಶ್ರೇಷ್ಠನೇ, ಕೇಳು. ಆ ಪರಮಾತ್ಮನ ಐಶ್ವರ್ಯಕ್ರಮಗಳನ್ನು ವಿಸ್ತಾರವಾಗಿ ಹೇಳುವುದಕ್ಕೆ ನನಗೆ ಶಕ್ತಿಯಿಲ್ಲವಾದರೂ ಮುಖ್ಯ ಮುಖ್ಯವಾದ ಕೆಲವು ವಿಭೂತಿಗಳನ್ನು ನಿನ್ನೊಡನೆ ತಿಳಿಸುತ್ತೇನೆ. ಒಂದೇ ಮನಸ್ಸಿನಿಂದ ಕೇಳು

೩-೧೨. ಸೃಷ್ಟಿಮಾಡುವ ಬ್ರಹ್ಮನೂ, ಪರಿಪಾಲಿಸುವ ವಿಷ್ಣುವೂ, ನಾಶಮಾಡುವ ರುದ್ರನೂ, ವರುಣ, ವಾಯು, ಆಕಾಶ, ಬೆಂಕಿ, ನೆಲ, ನಾಲ್ಕು ದಿಕ್ಕುಗಳು,

ದಿಶಶ್ಚ ವಿದಿಶಶ್ಚಾಽಪಿ ತಥಾ ಯೇ ಚ ದಿಗೀಶ್ವರಾಃ ।
ಆದಿತ್ಯಾ ವಸವೋ ರುದ್ರಾ ಭೃಗವೋಂಗಿರಸಸ್ತಥಾ ॥ ೪ ॥

ಸಾಧ್ಯಾಶ್ಚಮರುತೋ ದೇವಾ ವಿಶ್ವೇದೇವಾಸ್ತಥೈವ ಚ ।
ಅಶ್ವಿನೌಪುರುಹೂತಶ್ಚ ಗಂಧರ್ವಾಪ್ಸರಸಾಂ ಗಣಾಃ ॥ ೫ ॥

ಪರ್ವತೋದಧಿಪಾತಾಲಾ ಲೋಕಾ ದ್ವೀಪಾಶ್ಚ ಭಾರ್ಗವ ।
ತಿರ್ಯಗೂರ್ಧ್ವ ಮಧಶ್ಚೈವ ತ್ವಿಂಗಿತಂ ಯಶ್ಚ ನೇಂಗತೆ ॥ ೬ ॥

ಸಚ್ಚಾಽಸಚ್ಚ ಮಹಾಭಾಗ ಪ್ರಕೃತಿರ್ವಿಕೃತಿಶ್ಚ ಯಃ ।
ಕ್ರಿಮಿಕೀಟಪತಂಗಾನಾಂ ವಯಸಾಂ ಯೋನಯಸ್ತಥಾ ॥ ೭ ॥

ವಿದ್ಯಾಧರಾಸ್ತಥಾ ಯಕ್ಷಾ ನಾಗಾಃ ಸರ್ಪಾಃ ಸಕಿನ್ನರಾಃ ।
ರಾಕ್ಷಸಾಶ್ಚ ಪಿಶಾಚಾಶ್ಚ ಪಿತರಃ ಕಾಲಸಂಧಯಃ ॥ ೮ ॥

---

ಎಂಟು ವಿದಿಕ್ಕುಗಳೂ, ಆ ದಿಕ್ಕಿನ ಧೊರೆಗಳೂ, ದ್ವಾದಶಾದಿತ್ಯರೂ, ಅಷ್ಟ ವಸುಗಳೂ, ಏಕಾದಶ ರುದ್ರರೂ, ಭೃಗ್ವಾಂಗೀರಸಾದಿ ಋಷಿಗಳೂ, ಸಾಧ್ಯರೂ, ಮಾರುತರೂ, ದೇವತೆಗಳೂ ವಿಶ್ವದೇವತೆಗಳೂ, ಅಶ್ವಿನೀ ದೇವತೆಗಳೂ, ಇಂದ್ರನೇ ಮುಂತಾದ ದೇವತೆಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ, ಬೆಟ್ಟ, ಸಮುದ್ರ, ಪಾತಾಳಲೋಕ ದ್ವೀಪ, ಉದ್ದ, ಅಡ್ಡ, ಅಗಲ, ದಪ್ಪ, ಸಣ್ಣ, ಒಳ್ಳೇದು, ಕೆಟ್ಟದ್ದು, ಪ್ರಕೃತಿ ವಿಕೃತಿ, ಹುಳುಹುಪ್ಪಟೆಗಳು, ಹಕ್ಕಿಗಳು, ವಿದ್ಯಾಧರಾದಿಗಳು, ಯಕ್ಷನಾಗ ರಾಕ್ಷಸ ಪಿಶಾಚಾದಿಗಳು, ಪಿತೃಗಳೂ, ಕಾಲ ಸಂಧಿಗಳೂ, ಧರ್ಮದ್ವಾರಗಳೆನಿಸಿದ ಧರ್ಮಾರ್ಥ ಕಾಮ

ಧರ್ಮಾರ್ಥಕಾಮಮೋಕ್ಷಾಶ್ಚ ಧರ್ಮದ್ವಾರಾಣಿ ಯಾನಿ ಚ ।
ಯಜ್ಞಾಂಗಾನಿ ಚ ಸರ್ವಾಣಿ ಭೂತಗ್ರಾಮಂ ಚತುರ್ವಿಧಂ ॥ ೯ ॥

ಜರಾಯುಜಾಂಡಜಾಶ್ಚೈವ ಸಂಸ್ವೇದಜಮಥೋದ್ಭಿಜಂ ।
ಏಕಜ್ಯೋತಿಃ ಸ ಮರುತಾಂ ವಸೂನಾಂ ಸ ಚ ಪಾವಕಃ ॥ ೧೦ ॥

ಅಹಿರ್ಬುಧ್ನ್ಯಶ್ಚ ರುದ್ರಾಣಾಂ ನಾಸತ್ಯಾಶ್ವಿನಯೋಸ್ತಥಾ ।
ನಾರಾಯಣಶ್ಚ ಸಾಧ್ಯಾನಾಂ ಭೃಗೂಣಾಂಚ ತಥಾಕ್ರತುಃ ॥ ೧೧ ॥

ಆದಿತ್ಯಾನಾಂ ತಥಾ ವಿಷ್ಣುರಾಯುರಂಗಿರಸಾಂತಥಾ ।
ವಿಶ್ವೇಷಾಂಚೈವ ದೇವಾನಾಂ ರೋಚಮಾನಃ ಸ ಕೀರ್ತಿತಃ ॥ ೧೨ ॥

ವಾಸವಃ ಸರ್ವದೇವಾನಾಂ ಜ್ಯೋತಿಷಾಂಚ ಹುತಾಶನಃ ।
ಯಮಃ ಸಂಯಮಶೀಲಾನಾಂ ವಿರೂಪಾಕ್ಷಃ ಕ್ಷಮಾಭೃತಾಂ ॥ ೧೩ ॥

---

ಮೋಕ್ಷಗಳೂ, ಸಕಲ, ಯಜ್ಞಾಂಗಗಳೂ, ನಾಲ್ಕು ವಿಧವಾದ ಜರಾಯುಜ ಅಂಡಜ ಉದ್ಭಿಜ ಸ್ವೇದಜವೆಂಬ ಭೂತಗ್ರಾಮವೂ, ಮರುತ್ತುಗಳೊಳಗೆ ಏಕಜ್ಯೋತಿಯೂ, ವಸುಗಳೊಳಗೆ ಪಾವಕನೂ, ರುದ್ರರೊಳಗೆ ಅಹಿರ್ಬುಧ್ನ್ಯನೂ, ಆಶ್ವಿನೇಯರಲ್ಲಿ ನಾಸತ್ಯನೂ, ಸಾಧ್ಯರೊಳಗೆ ನಾರಾಯಣನೂ, ಭೃಗುಗಳೊಳಗೆ ಕ್ರತುವಾಗಿಯೂ, ಆದಿರೊಳಗೆ ವಿಷ್ಣುವಾಗಿಯೂ, ಅಂಗೀರಸಗಣಗಳಲ್ಲಿ ಆಯುವಾಗಿಯೂ, ವಿಶ್ವದೇವತೆತ್ಯಗಳೊಳಗೆ ರೋಚಮಾನವಾಗಿಯೂ, ಇರುವವನು ನಾನೇ.

೧೩-೨೦. ದೇವತೆಗಳಲ್ಲಿ ನಾನು ಇಂದ್ರನಾಗಿಯೂ, ಪ್ರಕಾಶಗಳೊಳಗೆ ಅಗ್ನಿಯಾಗಿಯೂ, ಇಂದ್ರಿಯನಿಗ್ರಹ ಮಾಡಿರುವವರೊಳಗೆ ಯಮನಾಗಿಯೂ, ಕ್ಷಮಾಶೀಲದಲ್ಲಿ ವಿರೂಪಾಕ್ಷನಾಗಿಯೂ, ನೀರಿನಲ್ಲಿ ನಾನು ವರುಣನಾಗಿಯೂ, ದಾಟುವವರಲ್ಲಿ

**ಯಾದಸಾಂ ವರುಣಶ್ಚೈವ ಪವನಃ ಪ್ಲವತಾಂ ತಥಾ ।**
**ಧನಾಧ್ಯಕ್ಷಶ್ಚ ಯಕ್ಷಾಣಾಂ ರುದ್ರೋರೌದ್ರಸ್ತಥಾಽಂತರಃ ॥ ೧೪ ॥**

**ಅನಂತಃ ಸರ್ವನಾಗಾನಾಂ ಸೂರ್ಯಸ್ತೇಜಸ್ವಿನಾಂ ತಥಾ ।**
**ಗ್ರಹಾಣಾಂಚ ತಥಾ ಚಂದ್ರೋ ನಕ್ಷತ್ರಾಣಾಂಚ ಕೃತ್ತಿಕಾ ॥ ೧೫ ॥**

**ಕಾಲಃ ಕಲಯತಾಂ ಶ್ರೇಷ್ಠೋ ಯುಗಾನಾಂ ಚ ಕೃತಂ ಯುಗಂ ।**
**ಕಲ್ಪಂ ಮನ್ವಂತರೇಶಾಶ್ಚ ಮನವಶ್ಚ ಚತುರ್ದಶ ॥ ೧೬ ॥**

**ಸ ಏವ ದೇವಃ ಸರ್ವಾತ್ಮಾ ಯೇ ಚ ದೇವೇಶ್ವರಾಸ್ತಥಾ ।**
**ಸಂವತ್ಸರಸ್ತು ವರ್ಷಾಣಾಂ ಚಾಯನಾನಾಂ ತಥೋತ್ತರಃ ॥ ೧೭ ॥**

**ಮಾರ್ಗಶೀರ್ಷಸ್ತು ಮಾಸಾನಾಂ ಋತೂನಾಂ ಕುಸುಮಾಕರಃ ।**
**ಶುಕ್ಲಪಕ್ಷಸ್ತು ಪಕ್ಷಾಣಾಂ ತಿಥೀನಾಂ ಪೂರ್ಣಿಮಾ ತಿಥಿಃ ॥ ೧೮ ॥**

---

ಪ್ಲವನಾಗಿಯೂ, ಯಕ್ಷರಲ್ಲಿ ಕುಬೇರನಾಗಿಯೂ, ರೌದ್ರರೊಳಗೆ ರುದ್ರನಾಗಿಯೂ, ಸಕಲಸಾಗರಗಳಲ್ಲಿ ಅನಂತನಾಗಿಯೂ, ತೇಜಸ್ವಿಗಳೊಳಗೆ ಸೂರ್ಯನಾಗಿಯೂ, ಗ್ರಹಗಳಲ್ಲಿ ಚಂದ್ರನಾಗಿಯೂ, ನಕ್ಷತ್ರಗಳಲ್ಲಿ ಕೃತ್ತಿಕೆಯಾಗಿಯೂ, ಕಾಲಭೇದಗಳಲ್ಲಿ ಕಾಲನಾಗಿಯೂ ಯುಗಗಳಲ್ಲಿ ಕೃತಯುಗವಾಗಿಯೂ, ಕಲ್ಪವಾಗಿಯೂ, ಮನ್ವಂತರಗಳ ನಾಯಕನಾಗಿಯೂ, ಚತುರ್ದಶಮನುಸ್ವರೂಪನಾಗಿಯೂ, ಇರುವವನು ನಾನೇ. ಸರ್ವಾತ್ಮಕನಾದ ದೇವನೂ ನಾನೇ ! ದೇವೇಶ್ವರರುಗಳೆನಿಸುವವರೆಲ್ಲರೂ ನಾನೇ. ವರ್ಷಗಳಲ್ಲಿ ನಾನೇ ಸಂವತ್ಸರವು. ಅಯನಗಳಲ್ಲಿ ಉತ್ತರಾಯಣವು ನಾನೇ. ಋತುಗಳೊಳಗೆ ವಸಂತಋತುವು ನಾನೇ. ಪಕ್ಷಗಳಲ್ಲಿ ಶುಕ್ಲಪಕ್ಷವಾಗಿಯೂ, ತಿಥಿಗಳೊಳಗೆ ಪೂರ್ಣಿ

ಕರಣಾನಾಂ ಬವಃ ಪ್ರೋಕ್ತೋ ಮುಹೂರ್ತಾನಾಂ ತಥಾऽಭಿಜಿತ್ ।
ಪಾತಾಲಾನಾಂ ಸೂತಲಶ್ಚ ಸಮುದ್ರಾಣಾಂ ಪಯೋದಧಿಃ ॥ ೧೯ ॥

ಜಂಬೂದ್ವೀಪಶ್ಚ ದ್ವೀಪಾನಾಂ ಲೋಕಾನಾಂ ಸತ್ಯ ಉಚ್ಯತೆ ।
ಮೇರುಃ ಶಿಲೋಚ್ಚಯಾನಾಂಚ ವರ್ಷೇಷ್ವಪಿ ಚ ಭಾರತಂ ॥ ೨೦ ॥

ಹಿಮಾಲಯಃ ಸ್ಥಾವರಾಣಾಂ ಜಾಹ್ನವೀ ಸರಿತಾಂ ತಥಾ ।
ಪುಷ್ಕರಃ ಸರ್ವತೀರ್ಥಾನಾಂ ಗರುಡಃ ಪಕ್ಷಿಣಾಂ ತಥಾ ॥ ೨೧ ॥

ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋಮುನಿಃ ।
ಋಷೀಣಾಂಚ ಭೃಗುರ್ದೇವೋ ದೇವರ್ಷೀಣಾಂ ಚ ನಾರದಃ ॥ ೨೨ ॥

ತಥಾ ಬ್ರಹ್ಮಋಷೀಣಾಂಚ ಅಂಗೀರಾಃ ಪರಿಕೀರ್ತಿತಃ ।
ವಿದ್ಯಾಧರಾಣಾಂ ಸರ್ವೇಷಾಂ ದೇವಶ್ಚಿತ್ರಾಂಗದಸ್ತಥಾ ॥ ೨೩ ॥

---

ಮೆಯಾಗಿಯೂ, ಕರಣಗಳೊಳಗೆ ಬವನಾಗಿಯೂ, ಮುಹೂರ್ತಗಳೊಳಗೆ ಅಭಿಜಿನ್ಮುಹೂರ್ತವಾಗಿಯೂ, ಪಾತಾಳಗಳಲ್ಲಿ ಸುತಲವಾಗಿಯೂ, ಸಮುದ್ರಗಳಲ್ಲಿ ಪಯೋನಿಧಿಯಾಗಿಯೂ, ದ್ವೀಪಗಳಲ್ಲಿ ಜಂಬೂದ್ವೀಪವಾಗಿಯೂ, ಲೋಕಗಳೊಳಗೆ ಸತ್ಯಲೋಕವಾಗಿಯೂ, ಬೆಟ್ಟಗಳೊಳಗೆ ಮೇರುಪರ್ವತವಾಗಿಯೂ, ವರ್ಷಗಳಲ್ಲಿ ಭಾರತವರ್ಷವಾಗಿಯೂ ನಾನೇ ಇರುತ್ತೇನೆ.

೨೧-೩೦ ಸ್ಥಾವರ ಪ್ರಾಣಿಗಳೊಳಗೆ ಹಿಮಾಲಯವಾಗಿಯೂ, ನದಿಗಳೊಳಗೆ ಗಂಗಾನದಿಯಾಗಿಯೂ, ಸರ್ವತೀರ್ಥಗಳೊಳಗೆ ಪುಷ್ಕರತೀರ್ಥವಾಗಿಯೂ, ಪಕ್ಷಿಗಳೊಳಗೆ ಗರುಡನಾಗಿಯೂ, ಗಂಧರ್ವರಲ್ಲಿ ಚಿತ್ರರಥನಾಗಿಯೂ, ಸಿದ್ಧರುಗಳಲ್ಲಿ ಕಪಿಲಮುನಿಯಾಗಿಯೂ, ಋಷಿಗಳಲ್ಲಿ ಭೃಗುವಾಗಿಯೂ, ದೇವರ್ಷಿಗಳಲ್ಲಿ ನಾರದನಾಗಿಯೂ, ಬ್ರಹ್ಮರ್ಷಿಗಳಲ್ಲಿ ಆಂಗೀರಸನಾಗಿಯೂ, ವಿದ್ಯಾಧರರುಗಳಲ್ಲಿ ಚಿತ್ರಾಂಗದನಾಗಿಯೂ,

**ತುಂಬರಃ ಕಿನ್ನರಾಣಾಂ ಚ ಸರ್ಪಾಣಾಮಥ ವಾಸುಕಿಃ ।**
**ಪ್ರಹ್ಲಾದಃ ಸರ್ವದೈತ್ಯಾನಾಂ ರಂಭಾ ಚಾಪ್ಸರಸಾಂ ತಥಾ　　॥ ೨೪ ॥**

**ಉಚ್ಚೈಃಶ್ರವಸಮಶ್ವಾನಾಂ ಧೇನೂನಾಂ ಚೈವ ಕಾಮಧುಕ್ ।**
**ಐರಾವತೋ ಗಜೇಂದ್ರಾಣಾಂ ಮೃಗಾಣಾಂಚ ಮೃಗಾಧಿಪಃ　　॥ ೨೫ ॥**

**ಆಯುಧಾನಾಂ ತಥಾ ವಜ್ರೋ ನರಾಣಾಂಚ ನರಾಧಿಪಃ ।**
**ಕ್ಷಮಾ ಕ್ಷಮಾವತಾಂ ದೇವೋ ಬುದ್ಧಿರ್ಬುದ್ಧಿಮತಾಮಪಿ　　॥ ೨೬ ॥**

**ಧರ್ಮಾವಿರುದ್ಧಃ ಕಾಮಶ್ಚ ತಥಾ ಧರ್ಮಭೃತಾಂ ನೃಣಾಂ ।**
**ಧರ್ಮೋಧರ್ಮಭೃತಾಂ ದೇವಸ್ತಪಶ್ಚೈವ ತಪಸ್ವಿನಾಂ　　॥ ೨೭ ॥**

**ಯಜ್ಞಾನಾಂ ಜಪಯಜ್ಞಶ್ಚ ಸತ್ಯಃ ಸತ್ಯವತಾಂ ತಥಾ ।**
**ವೇದಾನಾಂ ಸಾಮವೇದಶ್ಚ ಅಂಶೂನಾಂ ಜ್ಯೋತಿಷಾಂ ಪತಿಃ　　॥ ೨೮ ॥**

---

ಕಿನ್ನರರೊಳಗೆ ತುಂಬರನಾಗಿಯೂ, ಸರ್ಪಗಳಲ್ಲಿ ವಾಸುಕಿಯಾಗಿಯೂ, ದೈತ್ಯರೊಳಗೆ ಪ್ರಹ್ರಾದನಾಗಿಯೂ, ಅಪ್ಸರ ಸ್ತ್ರೀಯರೊಳಗೆ ರಂಭೆಯಾಗಿಯೂ, ಅಶ್ವಗಳೊಳಗೆ ಉಚ್ಚೈಃಶ್ರವಸ್ಸಾಗಿಯೂ, ಹಸುಗಳಲ್ಲಿ ಕಾಮಧೇನುವಾಗಿಯೂ, ಆನೆಗಳೊಳಗೆ ಐರಾವತವಾಗಿಯೂ, ಮೃಗಗಳೊಳಗೆ ಸಿಂಹವಾಗಿಯೂ, ಆಯುಧಗಳಲ್ಲಿ ವಜ್ರಾಯುಧವಾಗಿಯೂ, ಮನುಷ್ಯರೊಳಗೆ ರಾಜನಾಗಿಯೂ, ಕ್ಷಮಾಶೀಲರಲ್ಲಿ ಭೂದೇವಿಯಾಗಿಯೂ, ಬುದ್ಧಿವಂತರೊಳಗೆ ಬುದ್ಧಿಯಾಗಿಯೂ, ಧರ್ಮಾತ್ಮರಾದ ಜನರಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಕಾಮವಾಗಿಯೂ, ಧರ್ಮಾತ್ಮರಲ್ಲಿ ಧರ್ಮವೇ ಆಗಿಯೂ, ತಪಸ್ವಿಗಳಲ್ಲಿ ತಪಸ್ಸೇ ಆಗಿಯೂ, ಯಜ್ಞಗಳೊಳಗೆ ಜಪಯಜ್ಞವಾಗಿಯೂ, ಸತ್ಯವಂತರೊಳಗೆ ಸತ್ಯವಾಗಿಯೂ, ವೇದಗಳೊಳಗೆ ಸಾಮವೇದವಾಗಿಯೂ, ಕಿರಣಗಳೊಳಗೆ ಇಂದ್ರನಾ

**ಗಾಯತ್ರೀ ಸರ್ವಮಂತ್ರಾಣಾಂ ವಾಚಃ ಪ್ರವದತಾಂ ತಥಾ ।**
**ಗಿಕ್ಷರಾಣಾಮಕಾರಶ್ಚ ಯಂತ್ರಾಣಾಂಚ ಶಥಾ ಧನುಃ ॥ ೨೯ ॥**

**ಅಧ್ಯಾತ್ಮವಿದ್ಯಾ ವಿದ್ಯಾನಾಂ ಕವಿನಾಮುಶನಾ ಕವಿಃ ।**
**ಚೇತನಾ ಸರ್ವಭೂತಾನಾಮಿಂದ್ರಿಯಾಣಾಂ ಮನಸ್ತಥಾ ॥ ೩೦ ॥**

**ಬ್ರಹ್ಮಾ ಬ್ರಹ್ಮವಿದಾಂ ದೇವೋ ಜ್ಞಾನಂ ಜ್ಞಾನಾವತಾಂ ತಥಾ ।**
**ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ತಥಾ ಕ್ಷಮಾ॥ ೩೧ ॥**

**ಆಶ್ರಮಾಣಾಂ ಚತುರ್ಥಶ್ಚ ವರ್ಣಾನಾಂ ಬ್ರಾಹ್ಮಣಸ್ತಥಾ ।**
**ಸ್ಕಂದಃ ಸೇನಾಪ್ರಣೇತ್ರ್ಯಾಣಾಂ ಸದಯಶ್ಚ ದಯಾವತಾಂ ॥ ೩೨ ॥**

**ಜಯಶ್ಚ ವ್ಯವಸಾಯಶ್ಚ ತಥೋತ್ಸಾಹವತಾಂ ಪ್ರಭುಃ ।**
**ಅಶ್ವತ್ಥಃ ಸರ್ವವೃಕ್ಷಾಣಾಮೋಷಧೀನಾಂ ತಥಾ ಯವಃ ॥ ೩೩ ॥**

---

ಗಿಯೂ,ಸರ್ವಮಂತ್ರಗಳೊಳಗೆ ಗಾಯತ್ರೀ ಮಂತ್ರವಾಗಿಯೂ,ವಾಗ್ಮಿಗಳಲ್ಲಿ ವಾಗ್ರೂಪವಾಗಿಯೂ,ಅಕ್ಷರಗಳಲ್ಲಿ ಅಕಾರರೂಪನಾಗಿಯೂ, ಯಂತ್ರಗಳೊಳಗೆ ಧನುರ್ಯಂತ್ರವಾಗಿಯೂ, ವಿದ್ಯೆಗಳೊಳಗೆ ಅಧ್ಯಾತ್ಮ (ವೇದಾಂತ) ವಿದ್ಯೆಯಾಗಿಯೂ, ಕವಿಗಳೊಳಗೆ ಶುಕ್ರನಾಗಿಯೂ, ಸರ್ವಭೂತಗಳೊಳಗಿನ ಚೈತನ್ಯವಾಗಿಯೂ, ಇಂದ್ರಿಯಗಳೊಳಗೆ ಮನಸ್ಸಾಗಿಯೂ ಸಹ ನಾನು ಇದ್ದುಕೊಂಡಿದೇನೆ.

೩೧-೩೬. ಬ್ರಹ್ಮವಾದಿಗಳೊಳಗೆ ಬ್ರಹ್ಮನಾಗಿಯೂ, ಜ್ಞಾನಿಗಳೊಳಗೆ ಜ್ಞಾನಮಯನಾದ ಆತ್ಮನಾಗಿಯೂ, ನಾರಿಯರೊಳಗೆ ಕೀರ್ತಿ, ಶ್ರೀ, ವಾಗ್ರೂಪನಾಗಿಯೂ, ಸ್ಮರಣೆ, ಮೇಧೆ, ಕ್ಷಮೆಗಳರೂಪವಾಗಿಯೂ, ಆಶ್ರಮಗಳಲ್ಲಿ ಸನ್ಯಾಸಾಶ್ರಮವಾಗಿಯೂ ವರ್ಣಗಳೊಳಗೆ ಬಾಹ್ಮಣನಾಗಿಯೂ, ಸೇನಾನಿಗಳೊಳಗೆ ಕುಮಾರಸ್ವಾಮಿಯಾಗಿಯೂ, ದಯಾವಂತರೊಳಗೆ ದಯಾಸ್ವರೂಪನಾಗಿಯೂ, ಉತ್ಸಾಹಶಾಲಿಗಳಲ್ಲಿ ಜಯರೂಪನಾಗಿ ವ್ಯವಸಾಯರೂಪನಾಗಿಯೂ, ಸಕಲವೃಕ್ಷಗಳೊಳಗೆ ಅಶ್ವತ್ಥವೃಕ್ಷವಾಗಿಯೂ, ಓಷಧಿಗಳಲ್ಲಿ ಗೋಧಿಯಾಗಿಯೂ, ಸಾಯುವರಿಗೆ ಮೃತ್ಯುವಾಗಿಯೂ

ಮೃತ್ಯುಃ ಸ ಏವ ಮ್ರಿಯತಾಮುದ್ಭವಶ್ಚ ಭವಿಷ್ಯತಾಂ ।
ಝುಷಾಣಾಂ ಮಕರಶ್ಚೈವ ದ್ಯೂತಂ ಛಲಯತಾಂ ತಥಾ ॥ ೩೪ ॥

ಮಾನಶ್ಚ ಸರ್ವಗುಹ್ಯಾನಾಂ ರತ್ನಾನಾಂ ಕನಕಂ ತಥಾ ।
ಧೃತಿರ್ಭೂಮೌ ರಸಸ್ತೇಜಸ್ತೇಜಶ್ಚೈವ ಹುತಾಶನೆ ॥ ೩೫ ॥

ವಾಯುಃ ಸ್ಪರ್ಶಗುಣಾನಾಂ ಚ ಖಂಚ ಶಬ್ದಗುಣಸ್ತಥಾ ।
ಏವಂ ವಿಭೂತಿಭಿಃ ಸರ್ವಂ ವ್ಯಾಪ್ಯ ತಿಷ್ಠತಿಭಾರ್ಗವ ॥ ೩೬ ॥

ಏಕಾಂಶೇನ ಭೃಗುಶ್ರೇಷ್ಠ ತಸ್ಯಾಂಶತ್ರಿತಯಂ ದಿವಿ ।
ದೇವಾಶ್ಚ ಋಷಯಶ್ಚೈವ ಬ್ರಹ್ಮಾ ಚಾಽಹಂ ಚ ಭಾರ್ಗವ ॥ ೩೭ ॥

ಚಕ್ಷುಷಾ ಯನ್ನ ಪಶ್ಯಂತಿ ವಿನಾ ಜ್ಞಾನಗತಿಂ ದ್ವಿಜಾಃ ।
ಜ್ಞಾತಾ ಜ್ಞೇಯಸ್ತಥಾ ಧ್ಯಾತಾ ಧ್ಯೇಯಶ್ಚೈಕೋ ಜನಾರ್ದನಃ ॥ ೩೮ ॥

---

ಹುಟ್ಟುವವರಿಗೆ ಉದ್ಭವರೂಪನಾಗಿಯೂ, ಜಲಚರಗಳಲ್ಲಿ ಮೊಸಳೆಯಾಗಿಯೂ, ಜೂಜುಗಾರರಲ್ಲಿ ಜೂಜಾಗಿಯೂ ಸಕಲರಹಸ್ಯಗಳಲ್ಲಿ ಮಾನವಾಗಿಯೂ ರತ್ನಗಳೊಳಗೆ ಸುವರ್ಣವಾಗಿಯೂ, ಭೂಮಿಯಲ್ಲಿ ರಸರೂಪನಾಗಿಯೂ, ಧೃತಿರೂಪನಾಗಿಯೂ, ಯಜ್ಞೇಶ್ವರನಲ್ಲಿ ತೇಜೋರೂಪನಾಗಿಯೂ, ಸ್ಪರ್ಶಗುಣಗಳಲ್ಲಿ ವಾಯುವಾಗಿಯೂ, ಶಬ್ದಗುಣದಲ್ಲಿ ಆಕಾಶನಾಗಿಯೂ, ಇದ್ದುಕೊಂಡು ಈ ವಿಭೂತಿಯೋಗಗಳಿಂದ ಸಕಲ ಪ್ರಪಂಚವನ್ನೂ ವ್ಯಾಪಿಸಿಕೊಂಡಿದಾನೆ.

೩೭-೪೩ ಎಲೈ, ಪರಶುರಾಮನೇ, ಕೇಳು. ಆ ಭಗವಂತನ ಏಕಾಂಶದಲ್ಲಿ ಮೂರನೇ ಒಂದಂಶದಿಂದ ಸ್ವರ್ಗದಲ್ಲಿ ದೇವತೆಗಳೂ, ದೇವರ್ಷಿಗಳೂ, ಬ್ರಹ್ಮರ್ಷಿಗಳೂ ನಾನೂ ಸಹ ನಿಂತಿದ್ದೇವೆ. ಜ್ಞಾನಯೋಗವನ್ನು ತಿಳಿದ ಹೊರತು ಆ ಮಹಾನುಭಾವನನ್ನು ಈ ಕಣ್ಣುಗಳಿಂದ ನೋಡಲು ಸಾಧ್ಯವೇ ಇಲ್ಲ ತಿಳಿಯುವವನೂ, ತಿಳಿಯಲ್ಪಡುವವನೂ, ಧ್ಯಾನಿಸುವವನೂ, ಧ್ಯಾನಮಾಡಲ್ಪಡುವವನೂ ಸಹ ಆ ಜನಾರ್ದನನೊಬ್ಬನೇ ಎಂದು ತಿಳಿ. ಯಜ್ಞವೂ, ಯಜಮಾನನೂ, ಗೋವಿಂದನೂ,

ಯಜ್ಞೋ ಯಷ್ಟಾ ಚ ಗೋವಿಂದಃ ಕ್ಷೇತ್ರಂ ಕ್ಷೇತ್ರಜ್ಞ ಏವಚ ।
ಅನ್ನಮನ್ನಾದ ಏವೋಕ್ತಃ ಸ ಏವಚ ಗುಣತ್ರಯಂ ॥ ೩೯ ॥

ಗಾಮಾವಿಶ್ಯ ಚ ಭೂತಾನಿ ಧಾರಯತ್ಯೋಜಸಾ ವಿಭುಃ ।
ಪುಷ್ಣಾತಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥ ೪೦ ॥

ಪ್ರಾಣಿನಾಂ ಜಠರಸ್ಥೋಽಗ್ನಿರ್ಭುಕ್ತಪಾಚೀ ಸ ಭಾರ್ಗವ ।
ಚೇಷ್ಟಾಕೃತ್ಪ್ರಾಣಿನಾಂ ಬ್ರಹ್ಮನ್ಸ ಚ ವಾಯುಃ ಶರೀರಗಃ ॥ ೪೧ ॥

ಯಥಾಽದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜಸ್ತತ್ರ ಕೀರ್ತಿತಂ ॥ ೪೨ ॥

ಸರ್ವಸ್ಯ ಚಾಽಸೌ ಹೃದಿ ಸನ್ನಿವಿಷ್ಟ
ಸ್ತಸ್ಮಾತ್ಸ್ಮೃತಿಜ್ಞಾನಮಪೋಹನಂಚ ।

---

ದೇಹವೂ, ಆತ್ಮವೂ ಅನ್ನವೂ, ಅನ್ನವನ್ನು ತಿನ್ನುವವನೂ, ಗುಣತ್ರಯವೂ ಸಹ ಅವನೊಬ್ಬನೇ. ಈ ಭೂಮಿಯನ್ನೆಲ್ಲಾ ವ್ಯಾಪಿಸಿ ತನ್ನ ತೇಜಸ್ಸಿನಿಂದ ಆ ಪ್ರಭುವು ಪ್ರಾಣಿಗಳನ್ನು ಕಾಪಾಡುತಲಿದಾನೆ. ಮತ್ತು ಪೈರುಗಳನ್ನು ಬೆಳೆಯಿಸುತ್ತಲಿದಾನೆ. ಆ ಸಮಯದಲ್ಲಿ ಸೋಮನಾಗಿ ಅವನು ಪೋಷಿಸಿ ತೆನೆಗಳಲ್ಲಿ ಹಾಲು ತುಂಬುವನು ಪ್ರಾಣಿಗಳ ಹೊಟ್ಟೆಯಲ್ಲಿ ವೈಶ್ವಾನರವೆಂಬ ಅಗ್ನಿಯಾಗಿ ನಿಂತು, ಅವರು ಉಂಡ ಅನ್ನವನ್ನು ಪಚನಮಾಡಿಸುವನು. ಪ್ರಾಣಿಗಳ ಚಲನವಲನಗಳನ್ನು ಮಾಡಿಸುವವನೂ ಅವನೇ. ಸೂರ್ಯನ ತೇಜಸ್ಸಿನಿಂದ ಜಗತ್ತು ಬೆಳಗುವಂತೆ, ಚಂದ್ರನು ಬೆಳದಿಂಗಳನ್ನು ಚೆಲ್ಲುವಂತೆ ತೇಜೋಮಯವಾಗಿ ನಿಂತು ಪರಮಾತ್ಮನು ಲೋಕವನ್ನೂ ಚಂದ್ರ, ಸೂರ್ಯರನ್ನೂ ಬೆಳಗಿಸುತ್ತಿರುವನು. ಅವನು ಎಲ್ಲರ ಹೃದಯದಲ್ಲಿದ್ದುಕೊಂಡು ಇರುವನಾಗಿ, ಸ್ಮೃತಿ ಜ್ಞಾನಗಳನ್ನು ಕೊಡುವನು. ಸಕಲ ವೇದಗಳಿಂದ ತಿಳಿಯಲ್ಪ

ಸರ್ವೈಶ್ಚ ದೇವೈಶ್ಚ ಸ ಏವ ವಂದ್ಯೋ
ವೇದಾಂತಕೃದ್ವೇದಕೃದೇವ ಚಾsಸೌ ॥ ೪೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಶಂಕರಗೀತಾಸು ವಿಭೂತಿ
ವರ್ಣನಂ ನಾಮ ಷಟ್ಪಂಚಾಶತ್ತಮೋಽಧ್ಯಾಯಃ

---

ಡುವವನೂ ಆ ನಾನೇ. ವೇದಾಂತವನ್ನು ತಿಳಿದವನೂ ನಾನೇ ಎಂದು ತಿಳಿ,'' ಎಂಬು ದಾಗಿ ಪರಶುರಾಮನಿಗೆ ಈಶ್ವರನು ಹೇಳಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಶಂಕರಗೀತೆಯಲ್ಲಿ ವಿಭೂತಿ ವರ್ಣನೆಯೆಂಬ ಹೆಸರಿನ
ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತ ಪಂಚಾಶತ್ತಮೋಽಧ್ಯಾಯಃ ॥

---

॥ ರಾಮ ಉವಾಚ ॥

**ಆರಾಧ್ಯತೇ ಸ ಭಗವಾನ್ಕರ್ಮಣಾ ಯೇನ ಶಂಕರ ।**
**ತತ್ಸಮಾಚಕ್ಷ್ವ ಭಗವನ್ಸರ್ವಸತ್ವಸುಖಪ್ರದಂ ॥ ೧ ॥**

॥ ಶಂಕರ ಉವಾಚ ॥

**ಸಾಧು ರಾಮ ಮಹಾಭಾಗ ಸಾಧು ದಾನವನಾಶನ ।**
**ಯನ್ಮಾಂ ಪೃಚ್ಛಸಿ ಧರ್ಮಜ್ಞ ಕೇಶವಾರಾಧನಂ ಪ್ರತಿ ॥ ೨ ॥**

**ದಿವಸಂ ದಿವಸಾರ್ಧಂವಾ ಮೂಹೂರ್ತಂಏಕಮೇವ ವಾ ।**
**ನಾಶಶ್ಯಾಽಶೇಷಪಾಪಸ್ಯ ಭಕ್ತಿರ್ಭವತಿ ಕೇಶವೇ ॥ ೩ ॥**

---

### ಐವತ್ತೇಳನೆಯ ಅಧ್ಯಾಯವು.

೧. ಪರಶುರಾಮನು ಹೇಳುತ್ತಾನೆ- "ಆ ಮಹಾವಿಷ್ಣುವು ಯಾವ ವಿಧವಾದ ಕರ್ಮ ಮಾಡೋಣದರಿಂದ ತೃಪ್ತನಾಗುತ್ತಾನೋ ಆ ವಿಚಾರವನ್ನು ಸಕಲ ಪ್ರಾಣಿಗಳ ಹಿತಾರ್ಥವಾಗಿ ನನಗೆ ತಿಳಿಸಬೇಕು."

೨-೩. ಅದಕ್ಕೆ ಈಶ್ವರನು ಹೇಳುತ್ತಾನೆ- ಪರಶುರಾಮ ! ನೀನು ಬಹಳ ಚೆನ್ನಾಗಿ ಪ್ರಶ್ನೆ ಮಾಡಿದೆ. ಒಳ್ಳೆಯದಾಯಿತು, ಹೇಳುವೆನು, ಕೇಳು. ನೀನು ಕೇಶವನ ಆರಾಧನೆಯ ವಿಚಾರವಾಗಿ ಪ್ರಶ್ನೆ ಮಾಡಿರುತ್ತೀಯೆ ! ಎಲೈ, ಧರ್ಮಜ್ಞನೇ, ಕೇಳು. ಒಂದು ದಿವಸ ಅಥವಾ ಅರ್ಧದಿವಸ ಅಥವಾ ಒಂದು ಮುಹೂರ್ತಕಾಲ ಯಾರಿಗೆ ಭಗವಂತನಲ್ಲಿ ಭಕ್ತಿಯುಂಟಾಗುವುದೋ, ಅವರು ಮಾಡಿದ ಸಕಲ ಪಾಪಗಳೂ ನಾಶವಾಗುವುವು.

ಅನೇಕಜನ್ಮಸಾಹಸ್ರೈರ್ನಾನಾಯೋನ್ಯಂತರೇಷು ಚ ।
ಜಂತೋಃ ಕಲ್ಮಷಹೀನಸ್ಯ ಭಕ್ತಿರ್ಭವತಿ ಕೇಶವೇ ॥ ೪ ॥

ನಾಽಧನ್ಯಃ ಕೇಶವಂ ಸ್ತೌತಿ ನಾಽಧನ್ಯೋಽರ್ಚಯತಿ ಪ್ರಭುಂ ।
ನಮತ್ಯಧನ್ಯಶ್ಚ ಹರಿಂ ನಾಽಧನ್ಯೋ ವೇತ್ತಿಮಾಧವಂ ॥ ೫ ॥

ಮನಶ್ಚ ತದ್ಧಿ ಧರ್ಮಜ್ಞ ಕೇಶವೇ ಯತ್ಪ್ರವರ್ತತೇ ।
ಸಾ ಬುದ್ಧಿಸ್ತದ್ಧಿತಾಯೈವ ಸತತಂ ಪ್ರತಿತಿಷ್ಠತಿ ॥ ೬ ॥

ಸಾ ವಾಣೀ ಕೇಶವಂ ದೇವಂ ಯಾಸ್ತೌತಿಭೃಗುನಂದನ ।
ಶ್ರವಣೌ ತೌ ಶ್ರುತಾ ಯಾಭ್ಯಾಂ ಸತತಂ ತತ್ಕಥಾಃಶುಭಾಃ ॥ ೭ ॥

ಅವೇಹಿ ಧರ್ಮಜ್ಞ ತಥಾ ತತ್ಪೂಜಕರಣಾತ್ಕರೌ ।
ತದೇಕಂ ಸಫಲಂ ಕರ್ಮ ಕೇಶವಾರ್ಥಾಯ ಯತ್ಕೃತಂ ॥ ೮ ॥

---

೪-೫. ಪಾಪಿಯಾದವನು ಕೇಶವನನ್ನು ಸ್ತುತಿಸುವುದಿಲ್ಲ. ಮಹಾಪಾಪಿಯು ಮಹಾಪ್ರಭುವನ್ನು ಪೂಜಿಸುವುದಿಲ್ಲ ಪಾಪಿಷ್ಠನು ಶ್ರೀಹರಿಯನ್ನು ನಮಸ್ಕರಿಸುವುದಿಲ್ಲ. ಪಾಪಶೇಷವಿದ್ದವನು ಪರಮಾತ್ಮನನ್ನು ತಿಳಿದುಕೊಳ್ಳಲಾರನು. ನಾನಾಯೋನಿಗಳಲ್ಲಿ ಜನಿಸಿಜನಿಸಿ ಸಹಸ್ರಾರು ಜನ್ಮಗಳು ಕಳೆದ ಬಳಿಕ ಪಾಪವನ್ನು ಕಳೆದುಕೊಂಡು ಪರಿಶುದ್ಧನಾದವನಿಗೆ ಮಾತ್ರ ಕೇಶವನಲ್ಲಿ ಭಕ್ತಿಯುಂಟಾಗುತ್ತದೆ.

೬-೧೨. ಎಲೈ, ಧರ್ಮಜ್ಞನೇ! ಕೇಶವನಲ್ಲಿ ಯಾವನ ಮನಸ್ಸು ನಿಲ್ಲುವುದೋ, ಅವನ ಮನಸ್ಸೇ ಮನಸ್ಸು. ಆ ಬುದ್ಧಿಯು ಅವನ ಹಿತಾರ್ಥವಾಗಿಯೇ ಅವನಲ್ಲಿ ಹುಟ್ಟುತ್ತದೆ. ಕೇಶವನನ್ನು ಹೊಗಳುವ ವಾಣಿಯೇ ವಾಣಿ. ಅವನ ಕಥೆಯನ್ನು ಕೇಳುವ ಕಿವಿಗಳೇ ಕಿವಿಗಳು ಅವನ ಪೂಜೆಮಾಡುವ ಕೈಗಳೇ ನಿಜವಾದ ಕೈಗಳು ಕೇಶವನಿಗಾಗಿ ಮಾಡುವ ಕರ್ಮಗಳೇ ಸತ್ಕರ್ಮಗಳು. ಸಮಸ್ತವಾದ ಇಂದ್ರಿಯಗಳಿಂದಲೂ ಮುಖ್ಯ ಫಲಪ್ರಾಪ್ತಿಗೋಸ್ಕರ ಕೇಶವಾರಾಧನೆ ಮಾಡದೆ

ಯತೋ ಮುಖ್ಯಫಲಾ ವಾಪ್ತೌ ಕರಣಂ ಸಪ್ರಯೋಜನಂ ।
ಮನಸಾ ತೇನ ಕಿಂ ಕಾರ್ಯಂ ಯನ್ನ ತಿಷ್ಠತಿ ಕೇಶವೇ ॥ ೯ ॥

ಬುದ್ಧ್ಯಾ ವಾ ಭಾರ್ಗವಶ್ರೇಷ್ಠ ತದಾ ನಾಸ್ತಿ ಪ್ರಯೋಜನಂ ।
ರೋಗಃ ಸಾ ರಸನಾ ವಾಽಪಿ ಯಯಾ ನ ಸ್ತೂಯತೇ ಹರಿಃ ॥ ೧೦ ॥

ಗರ್ತೌ ಬ್ರಹ್ಮಂಸ್ತು ತೌ ಕರ್ಣೌ ಯಾಭ್ಯಾಂ ತತ್ಕರ್ಮ ನ ಶ್ರುತಂ ।
ಭಾರಭೂತೈಃ ಕರೈಃ ಕಾರ್ಯಂಕಿಂ ತಸ್ಯ ನೃಪಶೋರ್ದ್ವಿಜ ॥ ೧೧ ॥

ಯೈರ್ನ ಸಂಪೂಜಿತೋ ದೇವಃ ಶಂಖಚಕ್ರಗದಾಧರಃ ।
ಪಾದೌ ತೌ ಸಫಲೌ ರಾಮ ಕೇಶವಾಲಯಗಾಮಿನೌ ॥ ೧೨ ॥

ತೇ ಚ ನೇತ್ರೇ ಮಹಾಭಾಗ ಯಾಭ್ಯಾಂ ಸಂದೃಶ್ಯತೇಹರಿಃ ।
ಕಿಂ ತಸ್ಯ ಚರಣೈಃ ಕಾರ್ಯಂ ಕೃತಸ್ಯ ನಿಪುಣೈರ್ದ್ವಿಜ ॥ ೧೩ ॥

---

ಇದ್ದರೆ ಏನೂ ಪ್ರಯೋಜನವಿಲ್ಲ. ಯಾವ ನಾಲಿಗೆಯಿಂದ ಹರಿಯನ್ನು ಹೊಗಳುವುದಿಲ್ಲವೋ ಆ ನಾಲಿಗೆಯು ನಾಲಿಗೆಯೇ ಅಲ್ಲ; ಅದೊಂದು ರೋಗವು. ಯಾವ ಕಿವಿಗಳಿಂದ ಭಗವಂತನ ಕಥೆಗಳನ್ನು ಕೇಳುವುದಿಲ್ಲವೋ ಅವು ಕಿವಿಗಳಲ್ಲ; ಹಳ್ಳಗಳು. ಯಾವ ಕೈಗಳು ಕೇಶವನನ್ನರ್ಚಿಸುವುದಿಲ್ಲವೋ ಆ ಭಾರವಾದ ಕೈಗಳನ್ನು ಹೊತ್ತ ನರಪಶುವಿನಿಂದೇನು ಪ್ರಯೋಜನ ? ಯಾರ ಕಾಲುಗಳು ಕೇಶವದೇವಾಲಯಕ್ಕೆ ನಡೆದುಕೊಂಡು ಹೋಗುವುವೋ ಆ ಕೈಕಾಲುಗಳು ಹುಟ್ಟಿ ಸಫಲವಾಯಿತೆಂದು ತಿಳಿದುಕೋ.

೧೩-೧೪. ಎಲೈ, ಮಹಾತ್ಮನೇ ಕೇಳು. ಯಾವ ಕಣ್ಣುಗಳು ಭಗವಂತನನ್ನು ಸಂದರ್ಶಿಸುವುವೋ ಅವೇ ಕಣ್ಣುಗಳು. ಕೇಶವ ದೇವಸ್ಥಾನವನ್ನು ಕುರಿತು ದರ್ಶನಕ್ಕಾಗಿ ಹೋಗದೆ ಇದ್ದ ಕಾಲುಗಳಿದ್ದರೇನು ? ಇಲ್ಲದೆ ಇದ್ದರೇನು ? ಹಾಗೆ

**ಯಾಭ್ಯಾಂ ನ ವ್ರಜತೇ ಜಂತುಃ ಕೇಶವಾಲಯದರ್ಶನೇ ।**
**ಜಾತ್ಯಂಧತುಲ್ಯಂ ತಂ ಮನ್ಯೇ ಪುರುಷಂ ಪುರುಷೋತ್ತಮ ॥ ೧೪ ॥**

**ಯೋ ನ ಪಶ್ಯತಿ ಧರ್ಮಜ್ಞ ಕೇಶವಾರ್ಚಾಂ ಪುನಃ ಪುನಃ ।**
**ಕ್ಲೇಶಸಂಜನನಂ ಕರ್ಮ ವೃಥಾ ತದ್ಭೃಗುನಂದನ ॥ ೧೫ ॥**

**ಕೇಶವಂ ಪ್ರತಿ ಯದ್ರಾಮ ಕ್ರಿಯತೇಽಹನಿ ಸರ್ವದಾ ।**
**ಪಶ್ಯ ಕೇಶವಮಾರಾಧ್ಯ ಮೋದಮಾನಂ ಶಚೀಪತಿಂ ॥ ೧೬ ॥**

**ಯಮಂ ಚ ವರುಣಂಚೈವ ತಥಾ ವೈಶ್ರವಣಂ ಪ್ರಭುಂ ।**
**ದೇವೇಂದ್ರತ್ವಮತಿಸ್ಫೀತಂ ಸರ್ವಭೂತಸ್ಥಿತಂ ಪದಂ ॥ ೧೭ ॥**

**ಹರಿಭಕ್ತಿದ್ರುಮಾತ್ಪುಷ್ಪಂ ರಾಜಸಾತ್ಸಾತ್ವಿಕಂಫಲಂ ।**
**ಅಣಿಮಾ ಮಹಿಮಾ ಪ್ರಾಪ್ತಿಃ ಪ್ರಾಕಾಮ್ಯಂ ಲಘಿಮಾ ತಥಾ ॥ ೧೮ ॥**

---

ಹೋಗದೇ ನೋಡದೆ ಇದ್ದವನ ಕಣ್ಣನ್ನು ಜಾತಿ (ಹುಟ್ಟು) ಕುರುಡನ ಕಣ್ಣೆಂಧು ಹೇಳಬಲ್ಲೆ.

೧೫-೨೦. ಯಾರು ಕೇಶವನಾರಾಧನೆಯನ್ನು ಪದೇಪದೇ ನೋಡುವುದಿಲ್ಲವೋ ಅವರು ಮಾಡುವ ಕೆಲಸವೆಲ್ಲಾ ವ್ಯರ್ಥವೇ ಸರಿ. ಎಲೈ ಪರಶುರಾಮನೇ, ಕೇಶವನನ್ನು ಕುರಿತು ಪ್ರತಿದಿನವೂ ಅವನ ಪ್ರೀತಿಗಾಗಿಯೇ ಯಾರು ಕರ್ಮಗಳನ್ನು ಮಾಡುವರೋ ಅವರಿಗೆ ಉಂಟಾಗುವ ಫಲವನ್ನು ನೋಡಬೇಕಾದರೆ, ಸ್ವರ್ಗದಲ್ಲಿ ಧೊರೆಯಾದ ಇಂದ್ರನನ್ನು ನೋಡು. ಅವನ ಆ ಅಮರತ್ವವೊಂದೇ ಅದಕ್ಕೆ ಸಾಕ್ಷಿಯಲ್ಲವೆ ? ಯಮ, ವರುಣ, ಕುಬೇರ, ಇಂದ್ರ, ಇವರ ಪದವಿಯನ್ನು ಶ್ರೇಷ್ಠವೆಂದು ತಿಳಿದು ಆ ಪದವಿಗೆ ಸಕಲ ಪ್ರಾಣಿಗಳೂ ಹಾತೊರೆಯುತ್ತಿದ್ದಾರೆ. ಹರಿಭಕ್ತಿಯೆಂಬ ಮರದಿಂದ ಬಿಟ್ಟ ಹೂವು ರಾಜಸಗುಣದ್ದಾದರೂ ಅದರಿಂದ ಸಾತ್ವಿಕವಾದ ಅಣಿಮಾ,

ಈಶಿತ್ವಂ ಚ ವಶಿತ್ವಂ ಚ ಯತ್ರ ಕಾಮಾವಸಾಯಿತಾ ।
ಆರಾಧ್ಯ ಕೇಶವಂ ದೇವಂ ಪ್ರಾಪ್ಸ್ಯಂತೇ ನಾಽತ್ರ ಸಂಶಯಃ ॥ ೧೯ ॥

ಹತಪ್ರತ್ಯಂಗಮಾತಂಗೋ ರುಧಿರಾರುಣಭೂತಲೇ ।
ಸಂಗ್ರಾಮೇ ವಿಜಯಂ ರಾಮ ಪ್ರಾಪ್ಸ್ಯತಿ ತತ್ಪ್ರಸಾದತಃ ॥ ೨೦ ॥

ಮಹಾಕಟಿತಟಶ್ರೋಣ್ಯಃ ಪೀನೋನ್ನತಪಯೋಧರಾಃ ।
ಅಕಲಂಕಶಶಾಂಕಾಭವದನಾ ನೀಲಮೂರ್ಧಜಾಃ ॥ ೨೧ ॥

ರಮಯಂತಿ ನರಂ ಸ್ವರ್ಗೇ ದೇವರಾಮಾ ಮನೋಹರಾಃ ।
ಸಕೃದ್ಯೇನಾರ್ಚಿತೋ ದೇವೋ ಹೇಲಯಾ ವಾ ನಮಸ್ಕೃತಃ ॥ ೨೨ ॥

ವೇದವೇದಾಂಗವಪುಷಾಂ ಮುನೀನಾಂ ಭಾವಿತಾತ್ಮನಾಂ ।
ಋಷಿತ್ವಮಪಿ ಧರ್ಮಜ್ಞ ವಿಜ್ಞೇಯಂ ತತ್ಪ್ರಸಾದಜಂ ॥ ೨೩ ॥

---

ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವವೆಂಬ ಎಂಟು ಹಣ್ಣುಗಳು ಬಿಡುವುವು ಕೇಶವನನ್ನು ಪೂಜೆಮಾಡಿದರೆ ಈ ಎಂಟು ಹಣ್ಣುಗಳೂ ತಾವಾಗಿಯೇ ದೊರಿಯುವುವು. ರುಧಿರಾಕ್ತ ರಣರಂಗದಲ್ಲಿ ಹತಪ್ರತ್ಯಂಗವಾದ ಆನೆ ಯಾದರೂ ಕೇಶವಸ್ಮರಣೆಯಿಂದ ವಿಜಯವನ್ನು ಹೊಂದಲಡ್ಡಿಯಿಲ್ಲ.

೨೧-೨೨. ಯಾರು ಯಾವಾಗಲಾದರೂ ಒಂದು ಸಾರಿ ಆಟಕ್ಕಾದರೂ ಕೇಶವನನ್ನು ಪೂಜಿಸಿ ನಮಸ್ಕರಿಸುವರೋ ಅಂಥಾ ಮನುಷ್ಯನನ್ನು ಸ್ವರ್ಗದಲ್ಲಿ ದೇವತಾ ಸ್ತ್ರೀಯರು ಬಂದು ಆಲಂಗಿಸಿ ಸುಖಪಡಿಸುವರು.

೨೩. ಎಲೈ, ಧರ್ಮಾತ್ಮನಾದ ಪರಶುರಾಮನೇ, ವೇದವೇದಾಂಗಮೂರ್ತಿಗಳಾದ ಋಷಿಗಳ ಋಷಿತ್ವವೂ ಕೂಡ ಆ ಪರಮಾತ್ಮನ ಪ್ರಸಾದದಿಂದಲೇ ಉಂಟಾಯಿತೆಂದು ತಿಳಿದುಕೊಳ್ಳಬೇಕು.

ರಮಂತೇ ಸಹ ರಾಮಾಭಿಃ ಪ್ರಾಪ್ಯ ವೈದ್ಯಾಧರಂ ಪದಂ ।
ಅನ್ಯಭಾವನಯಾ ನಾಮ್ನಃ ಕೀರ್ತನಾದಪಿ ಭಾರ್ಗವ ॥ ೨೪ ॥

ರತ್ನಪರ್ಯಂಕಶಯಿತಾ ಮಹಾಭೋಗಾ ಶ್ಚ ಭೋಗಿನಃ ।
ವೀಜ್ಯಂತೇ ಸಹ ರಾಮಾಭಿಃ ಕೇಶವಸ್ಮರಣಾದಪಿ ॥ ೨೫ ॥

ಸೌಗಂಧಿಕೇ ವನೇ ರಮ್ಯೇ ಕೈಲಾಸೇಪರ್ವತೇ ದ್ವಿಜ ।
ಯಕ್ಷ್ಯಾ ವಿಹರಂತಿ ಸ್ಮ ತತ್ಪ್ರಾಹುಃ ಕುಸುಮಂ ನತೇಃ ॥ ೨೬ ॥

ರತ್ನಚಿತ್ರಾಸು ರಮ್ಯಾಸು ನಂದನೋದ್ಯಾನಭೂಮಿಷು ।
ಕ್ರೀಡಂತಿ ಚ ಸಹ ಸ್ತ್ರೀಭಿರ್ಗಂಧರ್ವೀಭಿಃ ಕಥಾಶ್ರುತೇಃ ॥ ೨೭ ॥

ಚತುಸ್ಸಮುದ್ರವೇಲಾಯಾಂ ಮೇರುವಿಂಧ್ಯಪಯೋಧರಾಂ ।
ಧರಾಂ ಯೇ ಭುಂಜತೇ ಭೂಪಾಃ ಪ್ರಣಿಪಾತಸ್ಯತತ್ಫಲಂ ॥ ೨೮ ॥

---

೨೪. ಬೇರೆಕಡೆ ಮನಸ್ಸಿದ್ದಾಗ್ಯೂ ಸ್ವಾಮಿಯ ನಾಮ ಕೀರ್ತನೆಯನ್ನು ಯಾವನು ಮಾಡುವನೋ ಅಂತಹ ಮನುಷ್ಯನು ವಿದ್ಯಾಧರ ಪದವಿಯನ್ನು ಹೊಂದಿ ಸುಂದರರಾದ ರಮಣಿಯರೊಡನೆ ಭೋಗಪಡುತ್ತಾನೆ.

೨೫. ಕೇಶವಸ್ಮರಣೆಯನ್ನು ಮಾಡಿದ ಮನುಷ್ಯನು ಸುಂದರಿಯರೊಡನೆ ಬೀಸಣಿಗೆಗಳಿಂದ ಬೀಸಿಸಿಕೊಳ್ಳುತ್ತಾ, ಮಹಾಭೋಗಿಯಾಗಿ ರತ್ನಖಚಿತವಾದ ಮಂಚದಮೇಲೆ ಮಲಗಿಕೊಳ್ಳುತ್ತಾನೆ.

೨೬. ಕೈಲಾಸಪರ್ವತದಲ್ಲಿ ಸುಂದರವಾದ ಸುಗಂಧೋದ್ಯಾನದಲ್ಲಿ ಯಕ್ಷರು ವಿಹಾರಮಾಡುತ್ತಾರಷ್ಟೆ? ಮಹಾವಿಷ್ಣುವನ್ನು ನಮಸ್ಕಾರದೊಡನೆ ಪುಷ್ಪದಿಂದ ಪೂಜೆ ಮಾಡುವವರು ಆ ಸುಖವನ್ನು ಹೊಂದಿರುವರೆಂದು ತಿಳಿ.

೨೭. ಹರಿಯ ಕಥೆಯನ್ನು ಕೇಳಿದವರು ನಂದನೋದ್ಯಾನವನದಲ್ಲಿ ರತ್ನಗಳಿಂದ ಚಿತ್ರಿತವಾದ ಮಂಚದಮೇಲೆ ಮಲಗಿಕೊಂಡು ಗಂಧರ್ವನಾರಿಯರೊಡನೆ ಭೋಗಿಸುತ್ತಾರೆ.

೨೮. ಚತುಸ್ಸಮುದ್ರ ವಿಸ್ತೃತವಾದ, ಮೇರುವಿಂಧ್ಯ ಪರ್ವತಗಳಿಂದ ಪರಿಶೋಭಿತವಾದ ಭೂಲೋಕಕ್ಕೆ ಸಮ್ರಾಟರಾಗಬೇಕಾದರೆ ಮಹಾವಿಷ್ಣುವಿನ ನಮಸ್ಕಾರ ಮಾಡಿರಬೇಕು. ಹಾಗೆ ಮಾಡಿದವರು ಆ ಫಲವಂ ಹೊಂದುವರು.

**ತಸ್ಮಾತ್ತ್ವಾಹಂ ವಕ್ಷ್ಯಾಮಿ ಯದ್ಯದಾಚರತಃ ಸದಾ ।**
**ಪುರುಷಸ್ಯೇಹ ಭಗವಾರ್ನಸುತೋಷಸ್ತುಷ್ಯತೇ ಹರಿಃ ॥ ೨೯ ॥**

**ಪೂಜ್ಯಃ ಸ ನಿತ್ಯಂ ವರದೋ ಮಹಾತ್ಮಾ**
**ಸ್ತವ್ಯಃ ಸನ್ನಿತ್ಯಂ ಜಗದೇಕವಂದ್ಯಃ ।**
**ಧ್ಯೇಯಃ ಸ ನಿತ್ಯಂ ಸಕಲಾಘಹರ್ತಾ**
**ಚೈತಾವದುಕ್ತಂ ತವ ರಾಮ ಗುಹ್ಯಂ ॥ ೩೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಶಂಕರ ಗೀತಾಸು ಭಕ್ತಿಫಲಪ್ರದರ್ಶನಂ ನಾಮ ಸಪ್ತಪಂಚಾಶತ್ತಮೋಧ್ಯಾಯಃ**

---

೨೯. ಆದ್ದರಿಂದ ಪರಶುರಾಮನೆ ! ನನ್ನ ಮಾತನ್ನು ಕೇಳು. ಮನುಷ್ಯನು ಯಾವ ಯಾವ ಒಳ್ಳೇ ಕೆಲಸವನ್ನು ಮಾಡುವನೋ ಆಯಾಯ ಕೆಲಸಗಳಿಗೆ ಭಗವಾರ್ನ ಶ್ರೀಹರಿಯು ಸಂತೋಷಪಡುತ್ತಾನೆ

೩೦. ಆ ವರದನೆನಿಸಿದ ಮಹಾವಿಷ್ಣುವೇ ನಿತ್ಯವೂ ಪೂಜಿಸಲ್ಪಡಬೇಕು. ಜಗದೇಕವಂದ್ಯನಾದ ಆ ಮಹಾತ್ಮನೇ ಪ್ರತಿದಿನವೂ ಧ್ಯೇಯನಾದವನು. ಆ ಸಕಲ ಪಾಪಹಾರಕನಾದ ಆ ಮಹಾತ್ಮನ ರಹಸ್ಯವನ್ನು ಇಷ್ಟುಮಟ್ಟಿಗೆ ನಿನಗೆ ತಿಳಿಸಿರುವೆನು. ಕೇಳಯ್ಯ, ಪರಶುರಾಮ!" ಎಂಬುದಾಗಿ ಈಶ್ವರನು ಹೇಳಿದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಶಂಕರಗೀತೆಯಲ್ಲಿ ಭಕ್ತಿಫಲಪ್ರದರ್ಶನವೆಂಬ ಐವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
## ಅಷ್ಟಪಂಚಾಶತ್ತಮೋಽಧ್ಯಾಯಃ

---

॥ ಶಂಕರ ಉವಾಚ ॥

ಅಹಿಂಸಾ ಸತ್ಯವಚನಂ ದಯಾ ಭೂತೇಷ್ವನುಗ್ರಹಂ ।
ಯಸ್ಯೈತಾನಿ ಸದಾ ರಾಮ ತಸ್ಯ ತುಷ್ಯತಿ ಕೇಶವಃ ॥ ೧ ॥

ಮಾತಾಪಿತೃಗುರೂಣಾಂಚ ಯಃ ಸಮ್ಯಗಿಹ ವರ್ತತೇ ।
ವರ್ಜಕೋ ಮಧುಮಾಂಸಸ್ಯ ತಸ್ಯ ತುಷ್ಯತಿ ಕೇಶವಃ ॥ ೨ ॥

ವರಾಹಮತ್ಸ್ಯಮಾಂಸಾನಿ ಯೋ ನಾತ್ತಿ ಭೃಗುನಂದನ ।
ವಿರತೋ ಮದ್ಯಪಾನಾಚ್ಚ ತಸ್ಯ ತುಷ್ಯತಿ ಕೇಶವಃ ॥ ೩ ॥

---

## ಐವತ್ತೆಂಟನೆಯ ಅಧ್ಯಾಯವು.

೧. ಈಶ್ವರನು ಪರಶುರಾಮನಿಗೆ ಹೇಳುತ್ತಾನೆ :- "ಯಾರು ಪ್ರಾಣಿಹಿಂಸೆಯನ್ನು ಮಾಡದೆ, ಸರ್ವದಾ ಸತ್ಯವನ್ನೇ ನುಡಿಯುವರೋ, ಪ್ರಾಣಿಗಳಲ್ಲಿ ದಯೆಯೂ ಅನುಗ್ರಹಬುದ್ಧಿಯೂ ಯಾರಿಗಿದೆಯೋ ಅಂಥವರ ವಿಷಯದಲ್ಲಿ ಪರಮಾತ್ಮನು ತೃಪ್ತನಾಗುತ್ತಾನೆ.

೨-೩. ತಾಯಿತಂದೆ ಗುರುಗಳ ವಿಚಾರದಲ್ಲಿ ಯಾರು ಭಕ್ತಿಯಿಂದ ನಡೆದುಕೊಳ್ಳುವರೋ, ಮದ್ಯಪಾನ ಮಾಂಸಾಹಾರಗಳನ್ನು ಯಾರು ತ್ಯಜಿಸುವರೋ ಅಂಥವರುಗಳಿಗೆ ಭಗವಂತನು ಪ್ರಸನ್ನನಾಗಿ ಇಷ್ಟಾರ್ಥವನ್ನು ಕೊಡುತ್ತಾನೆ. ಮತ್ತು ಮಾಂಸಾಹಾರಿಯಾಗಿದ್ದಾಗ್ಯೂ ಯಾವನು ಹಂದಿ ಮೀನುಗಳ ಮಾಂಸವನ್ನು ವರ್ಜ್ಯಮಾಡುವನೋ

ನ ಧಾರಯತಿ ನಿರ್ಮಾಲ್ಯಮನ್ಯದೇವೋದ್ಧೃತಂ ತು ಯಃ ।
ಭುಙ್ತೇನ ಚಾನ್ಯನೈವೇದ್ಯಂ ತಸ್ಯ ತುಷ್ಯತಿ ಕೇಶವಃ ॥ ೪ ॥

ಅನ್ವೈಷ್ಣವೇ ದೇವಧೃತಂ ನಿರ್ಮಾಲ್ಯಂ ಯಃ ಪ್ರಯಚ್ಛತಿ ।
ನೈವೇದ್ಯಂ ವಾ ಮಹಾಭಾಗ ತಸ್ಯತುಷ್ಯತಿ ಕೇಶವಃ ॥ ೫ ॥

ಬಿಭರ್ತಿ ಮೂರ್ಧ್ನಿ ನಿರ್ಮಾಲ್ಯಂ ಕೇಶವಾರ್ಚಾಧೃತಂ ತು ಯಃ ।
ಅನಿವೇದ್ಯ ನ ಚಾಶ್ನಾತಿ ತಸ್ಯ ತುಷ್ಯತಿ ಕೇಶವಃ ॥ ೬ ॥

ಪರಪೀಡಾಕರಂ ಕರ್ಮ ಯಸ್ಯ ನಾಽಸ್ತಿ ಮಹಾತ್ಮನಃ ।
ಸಂವಿಭಾಗೀ ಚ ಭೂತಾನಾಂ ತಸ್ಯ ತುಷ್ಯತಿ ಕೇಶವಃ ॥ ೭ ॥

ಶೃಣುತೇ ಸರ್ವಧರ್ಮಾಂಶ್ಚ ಸರ್ವಾನ್ದೇವಾನ್ನಮಸ್ಯತಿ ।
ಅನಸೂಯುರ್ಜಿತಕ್ರೋಧಸ್ತಸ್ಯ ತುಷ್ಯತಿ ಕೇಶವಃ ॥ ೮ ॥

---

ಅಂತಹವನಿಗೆ ಭಗವಂತನಾದ ಮಹಾವಿಷ್ಣುವು ಪ್ರಸನ್ನನಾಗುತ್ತಾನೆ. ಯಾರು ಸರ್ವದಾ ಮಹಾವಿಷ್ಣುವಿನ ಮಹಾಪ್ರಸಾದವನ್ನು ಸೇವಿಸುವರೋ, ದೇವರಿಗೆ ಧರಿಸಿದ ಹೂವನ್ನು ಧಾರಣಮಾಡುವರೋ, ಭಗವನ್ನಿವೇದನವಾದ ಪ್ರಸಾದವನ್ನು ಯಾರು ಭಕ್ಷಿಸುವರೋ, ಮತ್ತು ಮಹಾವಿಷ್ಣುವಿನ ಪ್ರಸಾದವನ್ನು ವಿಷ್ಣುದ್ವೇಷಿಗಳಿಗೆ (ನಾಸ್ತಿಕರಿಗೆ) ಕೊಡದೆ ಇರುವವರಾರೋ, ಅಂಥಾ ಮಹಾಭಾಗವತರ ವಿಷಯದಲ್ಲಿ ಮಹಾವಿಷ್ಣುವು ತೃಪ್ತನಾಗಿ ಪ್ರಸಾದವನ್ನು ಅನುಗ್ರಹಿಸುತ್ತಾನೆ.

೬–೧೩ ಕೇಶವನಿಗೆ ಅರ್ಚನೆಮಾಡಿದ ಹೂವನ್ನಾರು ತಲೆಯಲ್ಲಿ ಮುಡಿದುಕೊಳ್ಳುವರೋ, ಸ್ವಾಮಿಗೆ ನೈವೇದ್ಯಮಾಡಿದ ಅನ್ನವನ್ನಾರು ಊಟಮಾಡುವರೋ ಪರಪೀಡೆಯನ್ನುಂಟುಮಾಡುವ ಕೆಲಸವನ್ನಾರು ಮಾಡುವುದಿಲ್ಲವೋ, ಭೂತಗಳಲ್ಲಿ ಯಾರು ಭೇದಬುದ್ಧಿಯನ್ನು ಮಾಡುವುದಿಲ್ಲವೋ ಅವರಿಗೆ ಕೇಶವನು ಮೆಚ್ಚಿ ಅನುಗ್ರಹ ಮಾಡುತ್ತಾನೆ. ಯಾರು ಸಕಲಧರ್ಮಗಳನ್ನೂ ತಿಳಿದುಕೊಳ್ಳುವರೋ ಯಾರು ಸಕಲದೇವತೆಗಳನ್ನೂ ಭಕ್ತಿಯಿಂದ ನಮಸ್ಕರಿಸುವರೋ, ಯಾರು ಕೋಪ, ಹೊಟ್ಟೇ

ತೀರ್ಥೋಪವಾಸಸೇವೀ ಚ ದ್ವಿಜಾತಿಗಣಸೇವಕಃ ।
ಪೂಜಕೋ ವಿಷ್ಣುಭಕ್ತಾನಾಂ ತಸ್ಯ ತುಷ್ಯತಿ ಕೇಶವಃ ॥ ೯ ॥

ಪಂಚರಾತ್ರವಿದೋ ಮುಖ್ಯಾನ್ಯಸ್ತು ಸಂಪೂಜಯೇತ್ಸದಾ ।
ದೇವವದ್ಭೃಗುಶಾರ್ದೂಲ ತಸ್ಯ ತುಷ್ಯತಿ ಕೇಶವಃ ॥ ೧೦ ॥

ಪಿತೃದೇವಾರ್ಚನರತಃ ಸ್ವದಾರನಿರತಃ ಸದಾ ।
ಋತುಕಾಲಾಭಿಗಾಮೀ ಚ ತಸ್ಯ ತುಷ್ಯತಿ ಕೇಶವಃ ॥ ೧೧ ॥

ನಾಮ್ನಾಂ ಸಹಸ್ರೇಣ ತಥಾ ಯಶ್ಚ ಗಾಯತಿ ತನ್ಮನಾಃ ।
ಸತತಂ ಕಲ್ಯಮುತ್ಥಾಯ ತಸ್ಯ ತುಷ್ಯತಿ ಕೇಶವಃ ॥ ೧೨ ॥

ಪೌರುಷೇಣ ಚ ಸೂಕ್ತೇನ ಜಪ್ಯಹೋಮಾದಿಕಂ ಸದಾ ।
ಯಃ ಕರೋತ್ಯಮಿತಪ್ರಜ್ಞಸ್ತಸ್ಯ ತುಷ್ಯತಿ ಕೇಶವಃ ॥ ೧೩ ॥

---

ಕಿಚ್ಚುಗಳನ್ನು ತ್ಯಾಗಮಾಡಿರುವರೋ, ತೀರ್ಥಯಾತ್ರೆಗಳನ್ನು ಮಾಡುತ್ತಾ ಬ್ರಾಹ್ಮಣರನ್ನು ಯಾರು ಪೂಜಿಸುವರೋ, ಮತ್ತು ವಿಷ್ಣುಭಕ್ತರನ್ನು ಯಾರು ನಮಿಸುವರೋ ಅದರಲ್ಲೂ ಪಂಚರಾತ್ರಾಗಮವೇತ್ತರಾದ ವೈಷ್ಣವರನ್ನಾರು ಪೂಜಿಸುತ್ತಾರೋ, ಪಿತೃದೇವತೆಗಳನ್ನಾರು ಅರ್ಚಿಸುವರೋ ತನ್ನ ಹೆಂಡತಿಯಲ್ಲಿಯೇ ಪ್ರೀತಿಇಟ್ಟು ಯಾರು ಅವಳೊಡನೆ ಸುಖವಾಗಿ ಭೋಗಿಸುತ್ತಾ ಋತುಕಾಲದಲ್ಲಿ ಅವಳನ್ನು ತ್ಯಾಗಮಾಡದಿರುವರೋ, ವಿಷ್ಣುಸಹಸ್ರನಾಮದಿಂದ ಯಾರು ಸರ್ವದಾ ಸ್ವಾಮಿಯನ್ನು ಗಾನಮಾಡುತ್ತಾ, ಪ್ರತಿದಿನವೂ ಪ್ರಾತಃಕಾಲದಲ್ಲೆದ್ದು ಸ್ನಾನಮಾಡಿ ಪುರುಷಸೂಕ್ತವನ್ನು ಪಾರಾಯಣಮಾಡಿ, ಜಪಹೋಮಾದಿಗಳಿಂದ ಮಹಾವಿಷ್ಣುವನ್ನಾರಾಧಿಸುವರೋ ಅವರಿಗೆ ಕೇಶವನು ತೃಪ್ತನಾಗುತ್ತಾನೆ.

ಮಿತ್ರಸ್ವಾಮಿಗುರುದ್ರೋಹೋ ಯಸ್ಯ ನಾಽಸ್ತಿ ಮಹಾತ್ಮನಃ ।
ಪರದಾರಧನೇಚ್ಛಾ ನ ತಸ್ಯ ತುಷ್ಯತಿ ಕೇಶವಃ ॥ ೧೪ ॥

ರಾಜಾ ಶಾಸ್ತ್ರೋಪದೇಶೇನ ರಾಜ್ಯಂ ಯಶ್ಚ ಪ್ರಶಾಸತಿ ।
ರಾಜಧರ್ಮರತಿರ್ನಿತ್ಯಂ ತಸ್ಯ ತುಷ್ಯತಿ ಕೇಶವಃ ॥ ೧೫ ॥

ಯಾ ತು ನಾರೀ ಪತಿಪ್ರಾಣಾ ಪತಿಭಕ್ತಾ ಪತಿವ್ರತಾ ।
ತಸ್ಯಾಃ ಸುತೋಷೋ ಭಗವಾಂಸ್ತೋಷಮಾಯಾತಿ ಕೇಶವಃ ॥ ೧೬ ॥

ಅಗ್ನಿಹೋತ್ರಪರೋ ವಿದ್ವಾನ್ಯಜ್ಞೈರ್ನಿತ್ಯಮತಂದ್ರಿತಃ ।
ಯಸ್ತು ತರ್ಪಯತೇ ದೇವಾಂಸ್ತಸ್ಯ ತುಷ್ಯತಿ ಕೇಶವಃ ॥ ೧೭ ॥

ಸ್ವವರ್ಣಾಶ್ರಮಧರ್ಮಸ್ಥಃ ಪೂಜಯನ್ಮಧುಸೂದನಂ ।
ಕಾಲಂ ನಯತಿ ಯೋ ಬ್ರಹ್ಮಂಸ್ತಸ್ಯ ತುಷ್ಯತಿ ಕೇಶವಃ ॥ ೧೮ ॥

---

೧೪-೨೦. ಈ ಕೆಳಗೆ ವಿವರಿಸಿರುವಂತಹ ಪುಣ್ಯಾತ್ಮರಿಗೆ ಮಹಾವಿಷ್ಣುವು ಪ್ರಸನ್ನನಾಗುತ್ತಾನೆ :- ಯಾರು ಮಿತ್ರನಿಗೂ ಸ್ವಾಮಿಗೂ ದ್ರೋಹಮಾಡುವುದಿಲ್ಲವೋ, ಯಾರು ಪರಸ್ತ್ರೀ ಪರಧನಗಳಿಗೆ ಆಶೆಪಡುವುದಿಲ್ಲವೋ, ಶಾಸ್ತ್ರೋಪದೇಶದಿಂದ ಯಾವ ರಾಜನು ಧರ್ಮವನ್ನು ತಿಳಿದು ರಾಜ್ಯಪರಿಪಾಲನೆಮಾಡುವನೋ, ಯಾವ ಹೆಂಗಸು ಪತಿಭಕ್ತಳಾಗಿ ಪತಿವ್ರತೆಯಾಗಿ ಪತಿಯನ್ನೇ ತನ್ನ ಪ್ರಾಣವೆಂದು ನಂಬಿರುವಳೋ, ವಿದ್ವಾಂಸನಾಗಿ ಯಜ್ಞ ಯಾಗಾದಿಗಳನ್ನಾವ ಬ್ರಾಹ್ಮಣನು ಮಾಡುವನೋ, ಯಾರು ಪ್ರತಿದಿನವೂ ದೇವತಾರ್ಚನೆ ಮಾಡುವರೋ, ಮತ್ತಾವ ಮನುಷ್ಯನು ತನ್ನ ಸ್ವವರ್ಣಾಶ್ರಮವನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆಯೇ ಆಚರಿಸುವನೋ, ಯಾರು ಹರಿಪೂಜೆಯಲ್ಲಿಯೇ ನಿತ್ಯವೂ ಕಾಲಕಳೆಯುತ್ತಿರುವರೋ, ಯಾರು ಏಕಾದಶೀ ದಿನ ಉಪವಾಸವನ್ನು ಮಾಡಿ ದ್ವಾದಶೀ ದಿವಸ ಪಾರಣೆ ಮಾಡುವರೋ, ಮತ್ತು ಹರಿಪ್ರ

ಸೋಪವಾಸಸ್ತು ಪಕ್ಷಾಂತೇ ದ್ವಾದಶ್ಯಾಂ ವಾ ಭೃಗೂತ್ತಮ ।
ಬೌಧೇಽಹ್ನಿ ಶ್ರವಣರ್ಕ್ಷೇ ವಾ ತೃತೀಯಾಯಾಂತು ವಾ ಪುನಃ ।
ಸೋಪವಾಸೋಽರ್ಚಯತಿ ಯಸ್ತಸ್ಯ ತುಷ್ಯತಿ ಕೇಶವಃ ॥ ೧೯ ॥

ಪುಷ್ಪಂ ವಿನಾ ಹರಿಂ ಪ್ರಾಪ್ಯ ಫಲೀ ರತ್ನಂ ಕ್ಷಮಾಂ ಪಿ ವಾ ।
ನಿವೇದಯತಿ ಯಃ ಕೃಷ್ಣೇ ತಸ್ಯ ತುಷ್ಯತಿ ಕೇಶವಃ ॥ ೨೦ ॥

ಕೃಷ್ಣೇ ಪಶ್ಯತಿ ಯತ್ಸರ್ವಂ ಕೃಷ್ಣಂ ಸರ್ವತ್ರ ಪಶ್ಯತಿ ।
ಮಹಾತ್ಮಾ ಬುದ್ಧಿಸಂಪನ್ನಸ್ತಸ್ಯ ತುಷ್ಯತಿ ಕೇಶವಃ ॥ ೨೧ ॥

ತತ್ಕಥಾಯಾಂಚ ರಮತೇ ತತ್ಕಥಾಂ ಯಃ ಕರೋತಿ ಚ ।
ತನ್ಮನಾಸ್ತದ್ಗತಪ್ರಾಣಸ್ತಸ್ಯ ತುಷ್ಯತಿ ಕೇಶವಃ ॥ ೨೨ ॥

ಸರ್ವಭೂತಹಿತೇ ಯುಕ್ತಃ ಸರ್ವಭೂತಹಿತೇ ರತಃ ।
ಸರ್ವಭೂತಾನುಕಂಪೀ ಚ ತಸ್ಯ ತುಷ್ಯತಿ ಕೇಶವಃ ॥ ೨೩ ॥

---

ಬೋಧನದ ದಿನ (ಶ್ರವಣದ್ವಾದಶೀ ದಿನ) ಮತ್ತು ಶ್ರಾವಣಶುದ್ಧ ತೃತೀಯಾದಿನ ಉಪವಾಸದಿಂದ ಮಹಾವಿಷ್ಣುವನ್ನಾರು ಪೂಜಿಸುವರೋ, ಹೂವಿಲ್ಲವಿದ್ದಾಗ್ಯೂ ಭಕ್ತಿಯನ್ನೇ ಪುಷ್ಪರೂಪದಿಂದಲೂ ಫಲರೂಪದಿಂದಲೂ, ರತ್ನಗರ್ಭೆಯೆನಿಸಿದ ಭೂಮಿಯ ರೂಪದಿಂದಲೂ ಅರ್ಚಿಸುವರೋ ಅಂಥವರಿಗೆ ಕೇಶವನು ಪ್ರಸನ್ನನಾಗುವನು.

೨೧-೨೨. ಯಾವನು ಸ್ವರ್ಗವನ್ನು ಕೃಷ್ಣನಲ್ಲಿರುವಂತೆ ನೋಡುವನೋ, ಮತ್ತು ಎಲ್ಲ ಕಡೆಯಲ್ಲೂ ಕೃಷ್ಣನನ್ನು ನೋಡುವನೋ, ಅವನೇ ಮಹಾತ್ಮನೂ ಬುದ್ಧಿಶಾಲಿಯಾದವನೂ ಆಗಿ ಕೇಶವನ ಪ್ರೀತಿಗೆ ಪಾತ್ರನಾಗುತ್ತಾನೆ. ಯಾವನು ಹರಿಕಥೆಯನ್ನು ಕೇಳಿ ಸಂತೋಷಪಡುವನೋ, ಹರಿಕಥೆಯನ್ನು ಯಾವನು ಮಾಡುವನೋ, ಯಾವನು ಸ್ವಾಮಿಯಲ್ಲಿಯೇ ಮನಸ್ಸಿಟ್ಟು ಆತನಲ್ಲಿಯೇ ಪ್ರಾಣವನ್ನಿಟ್ಟಿರುತ್ತಾನೆಯೋ ಅಂತಹವನಿಗೆ ಕೇಶವನು ತೃಪ್ತನಾಗುತ್ತಾನೆ

೨೩-೩೧. ಪರಬ್ರಹ್ಮಸ್ವರೂಪನಾದ ಮಹಾವಿಷ್ಣುವು ಎಂತಹ ಪುಣ್ಯಾತ್ಮರಿಗೆ ಒಲಿಯುವನೆಂಬುದನ್ನು ಇಲ್ಲಿ ವಿವರಿಸುತ್ತೇನೆ :- ಸಕಲ ಪ್ರಾಣಿಗಳ ಹಿತದಲ್ಲಿ ಆಸಕ್ತರಾದವರು, ಸಕಲ ಪ್ರಾಣಿಗಳಲ್ಲಿ ದಯೆಯುಳ್ಳವರು, ಸ್ವಾಮಿಯನ್ನೇ ಧ್ಯಾನಿಸಿ ಸತ್ಕ

ಅಪ್ರಣಮ್ಯ ಕ್ರಿಯಾಂ ಕಾಂಚಿದ್ಯಸ್ತು ನಾಽಽರಭತೇ ಹರಿಂ ।
ಅಸಂಭಿನ್ನಾರ್ಥಮರ್ಯಾದಸ್ತಸ್ಯ ತುಷ್ಯತಿ ಕೇಶವಃ ॥ ೨೪ ॥

ನಾಮಸಂಕೀರ್ತನಂ ನಿತ್ಯಂ ಕ್ಷುತಪ್ರಸ್ಖಲನಾದಿಷು ।
ಯಃ ಕರೋತಿ ಮಹಾಭಾಗಸ್ತಸ್ಯ ತುಷ್ಯತಿ ಕೇಶವಃ ॥ ೨೫ ॥

ನವಂ ಪತ್ರಂ ಫಲಂ ಪುಷ್ಪಂ ನಿವೇದ್ಯ ಮಧುಸೂದನೆ ।
ಪಶ್ಚಾದ್ಭುಂಕ್ತೇ ಸ್ವಯಂ ಯಶ್ಚ ತಸ್ಯ ತುಷ್ಯತಿ ಕೇಶವಃ ॥ ೨೬ ॥

ಆಪದ್ಯಪಿ ಚ ಕಷ್ಟಾಯಾಂ ದೇವೇಶಶಪಥಂ ನರಃ ।
ನ ಕರೋತಿ ಹಿ ಯೋ ಬ್ರಹ್ಮಂಸ್ತಸ್ಯ ತುಷ್ಯತಿ ಕೇಶವಃ ॥ ೨೭ ॥

ದೇವಾದುದ್ಧೃತ್ಯ ನಿರ್ಮಾಲ್ಯಂ ಭೂಮಾಯಾಂ ನಾಕ್ರಮತೇ ಚ ಯಃ ।
ಧೂಪಾಗ್ನಿಭಸ್ಮ ಚ ತಥಾ ತಸ್ಯ ತುಷ್ಯತಿ ಕೇಶವಃ ॥ ೨೮ ॥

---

ಮಾರಂಭಮಾಡುವವರು, ಮರ್ಯಾದೆಯನ್ನು ಮೀರದೆ ಇರುವವರು, ಊಟಮಾಡುವಾಗ, ನಡೆಯುವಾಗ ಯಾವ ಕೆಲಸಮಾಡುವಾಗಲೂ ಹರಿನಾಮಕೀರ್ತನೆಯನ್ನು ಮಾಡುವವರು, ಹೊಸ ಹೊಸ ಹೂವುಗಳಿಂದ ಪೂಜಿಸುವವರೂ, ಮೀಸಲಾದ ಹಣ್ಣುಗಳನ್ನು ನಿವೇದಿಸುವವರೂ, ದೇವರ ನೈವೇದ್ಯವಾದ ಮೇಲೆ ಊಟಮಾಡುವವರೂ, ಸಂಕಟಬಂದಾಗಲೂ ದೇವರ ಮೇಲೆ ಆಣೆ ಇಡದವನೂ, ದೇವರ ಪೂಜೆ ಮಾಡಿದ ನಿರ್ಮಾಲ್ಯಪುಷ್ಪವನ್ನು ತುಳಿಯದೆ ಇರುವವನು, ಧೂಪದ ಕೆಂಡದಿಂದ ಉತ್ಪತ್ತಿಯಾದ ಬೂದಿಯನ್ನು ತುಳಿಯದವನು, ದೇವರ ಪೂಜೆಯಾಗುವಾಗ ಆ

ದೃಷ್ಟ್ವಾ ಸಂಪೂಜಿತಾಮರ್ಚಾಂ ಯಶ್ಚ ಭಕ್ತ್ಯಾಽಭಿನಂದತಿ ।
ಸ್ವಯಂ ಸಂಪೂಜಯೇದ್ಯಸ್ತು ತಸ್ಯ ತುಷ್ಯತಿ ಕೇಶವಃ ॥ ೨೯ ॥

ನಿತ್ಯಂ ಸಂಪೂಜಯೇದ್ಯಸ್ತು ದೇವದೇವಸ್ಯ ಭಕ್ತಿತಃ ।
ಯಥಾಶಕ್ತ್ಯಾ ಮಹಾಭಾಗ ತಸ್ಯ ತುಷ್ಯತಿ ಕೇಶವಃ ॥ ೩೦ ॥

ನ ರಾಮ ವಿವಿಧೈರ್ದಾನೈರ್ನ ರತ್ನಧನಸಂಚಯೈಃ ।
ತೋಷಮಾಯಾತಿ ದೇವೇಶೋ ಭಕ್ತ್ಯಾ ತುಷ್ಯತಿ ಕೇಶವಃ ॥ ೩೧ ॥

ನಾನ್ಯೈರ್ಭೃಗುಶ್ರೇಷ್ಠ ಬಹುಪ್ರಕಾರೈ
ಸ್ತೀರ್ಥೋಪವಾಸವ್ರತದರ್ಶನೈಶ್ಚ ।
ತಥಾ ನ ತೋಷಂ ಭಗವಾನ್ ಪ್ರಯಾತಿ
ಭಕ್ತ್ಯಾ ಯಥಾ ತದ್ಗತ ಮಾನಸಾನಾಂ ॥ ೩೨ ॥

ಏತಾವದುಕ್ತಂ ತವ ರಾಮ ಗುಹ್ಯಂ
ನ ದೇಯಮೇತದ್ಭುವಿ ಮತ್ಸರಾಣಾಂ ।

---

ಪೂಜೆಯನ್ನು ನೋಡುವವನು, ತಾನೂ ಸ್ವಂತವಾಗಿ ಪೂಜೆಮಾಡುವವನು, ಪ್ರತಿ ದಿನವೂ ದೇವತಾರ್ಚನೆ ಮಾಡುವವನು, ಪರಶುರಾಮ! ಇನ್ನೂ ಹೇಳುವೆನು ಕೇಳು. ದೇವರ ಹೆಸರಿನಿಂದ ನಾನಾವಿಧ ದಾನಗಳನ್ನು ಮಾಡುವವನು, ರತ್ನಗಳಿಂದಲೂ ದ್ರವ್ಯಗಳಿಂದಲೂ ಭಗವದರ್ಪಿತವಾಗಿ ದಾನಮಾಡುವವರು ಭಗವಂತನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

೩೨-೩೩. ರಾಮ! ಕೇಳು, ಮಹಾವಿಷ್ಣುವಿನಲ್ಲಿ ಮನಸ್ಸೊಂದಿದ್ದರೆ ಸಾಕು. ಆ ಭಕ್ತಿಯಿಂದ ಇರುವ ಯಾವ ಮಾನವನು ಯಾವ ದಾನವನ್ನೂ, ಯಾವ ತೀರ್ಥ ಯಾತ್ರೆಯನ್ನೂ, ಯಾವ ವ್ರತೋಪವಾಸವನ್ನೂ ಮಾಡಬೇಕಾದುದಿಲ್ಲ ಇವುಗಳನ್ನು ಮಾಡದೆ ಇದ್ದರೂ ತನ್ನಲ್ಲಿ ಮನಸ್ಸಿದ್ದವನನ್ನು ದೇವರು ಕಾಪಾಡುತ್ತಾನೆ ಇಷ್ಟು ವಿಚಾರವನ್ನು ನಿನಗೆ ನಾನು ಹೇಳಿದೇನೆ. ಈ ಸಂಗತಿಯನ್ನು ಹೊಟ್ಟೇ ಕಿಚ್ಚಿರುವವ

ನ ತರ್ಕಶಾಸ್ತ್ರಾಕುಲಮಾನಸಾನಾಂ
ನಾಽವೈಷ್ಣವಾನಾಂ ನ ಚ ನಾಸ್ತಿಕಾನಾಂ ॥ ೩೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಂಕರಗೀತಾಯಾಂಭಕ್ತಲಕ್ಷಣೋ
ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

ನಿಗೂ, ದುರಹಂಕಾರದಿಂದ ತರ್ಕಮಾಡುತ್ತಾ ತನ್ನ ಸಮಾನವಿಲ್ಲನೆಂದು ಮೆರೆಯುವ ವನೂ, ನಾಸ್ತಿಕನಿಗೂ ಭಕ್ತಿಯಿಲ್ಲದವನಿಗೂ ಹೇಳಕೂಡದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಭಕ್ತಿಲಕ್ಷಣವೆಂಬ ಹೆಸರಿನ
ಐವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ॥ ಏಕೋನಷಷ್ಟಿತಮೋಽಧ್ಯಾಯಃ ॥

—

॥ ಶ್ರೀ ರಾಮ ಉವಾಚ ॥

ಉಪೋಷಿತೇನ ಯೇನೇಹ ಯಂಯಂ ಕಾಮಂ ಪ್ರಯಚ್ಛತಿ ।
ತದಹಂ ಶ್ರೋತುಮಿಚ್ಛಾಮಿ ಗದತಸ್ತೇ ವೃಷಧ್ವಜ ॥ ೧ ॥

॥ ಶಂಕರ ಉವಾಚ ॥

ಪೂಜಿತಃ ಪ್ರಯತೈಃ ಸ್ನಾತೈಃ ಸೋಪವಾಸೈರ್ದಿನೇ ರವೇಃ ।
ಸಂವತ್ಸರಂ ಮಹಾಭಾಗ ದೀರ್ಘಮಾಯುಃ ಪ್ರಯಚ್ಛತಿ ॥ ೨ ॥

ಸೋಮವಾರೇ ಮಹಾಭಾಗ ಚಾರೋಗ್ಯಂ ಸಂಪ್ರಯಚ್ಛತಿ ।
ತಥಾ ಭೌಮದಿನೇ ರಾಮ ಚೈಶ್ವರ್ಯಂ ಸಂಪ್ರಯಚ್ಛತಿ ॥ ೩ ॥

---

### ಐವತ್ತೊಂಭತ್ತನೆಯ ಅಧ್ಯಾಯವು.

೧. ಪರಶುರಾಮನು ಶಂಕರನನ್ನು ಕುರಿತು ಹೇಳುತ್ತಾನೆ :- ಎಲೈ, ಪರಮೇಶ್ವರನೇ ! ಯಾವ ವಿಧವಾಗಿ ಉಪವಾಸಮಾಡೋಣದರಿಂದ ಎಂತೆಂತಹ ಫಲವನ್ನು ಪರಮಾತ್ಮನು ಕೊಡುವನೆಂಬ ವೃತ್ತಾಂತವನ್ನು ನಿನ್ನ ಮುಖದಿಂದ ಕೇಳಲಪೇಕ್ಷಿಸುತ್ತೇನೆ. ದಯಮಾಡಿ ನನಗೆ ತಿಳಿಸು.

೨. ಈಶ್ವರನು ಹೇಳುತ್ತಾನೆ :- ಭಾನುವಾರದ ದಿವಸ ಸ್ನಾನಮಾಡಿ ಪರಿಶುದ್ಧನಾಗಿ ಭಗವಂತನನ್ನು ಭಕ್ತಿಯಿಂದ ಪೂಜೆಮಾಡಿ ಯಾವನು ಉಪವಾಸವಿರುವನೋ, ಅವನಿಗೆ ಭಗವಂತನು ನೂರು ವರ್ಷ ಆಯುಸ್ಸನ್ನು ಕೊಡುತ್ತಾನೆ.

೩-೫. ಎಲೈ ಪುಣ್ಯಶಾಲಿಯೇ ಕೇಳು, ಸೋಮವಾರದ ದಿನ ಉಪವಾಸಮಾಡಿದರೆ ಆರೋಗ್ಯವನ್ನೂ, ಮಂಗಳವಾರ ಐಶ್ವರ್ಯವನ್ನೂ, ಬುಧವಾರ ಸಕಲ ಇಷ್ಟಾ

ವಾಸರೇ ಸೋಮಪುತ್ರಸ್ಯ ಸರ್ವಾನ್ಕಾಮಾನ್ಪ್ರಯಚ್ಛತಿ ।
ಅಭೀಷ್ಟಾಂಚ ತಥಾ ವಿದ್ಯಾಮಾಖಂಡಲಗುರೋರ್ದಿನೇ ॥ ೪ ॥

ಸೌಭಾಗ್ಯಮತುಲಂ ಲೋಕೇ ಭಾರ್ಗವಃಹಿ ಪ್ರಯಚ್ಛತಿ ।
ತಥಾ ಶನೈಶ್ಚರಸ್ಯಾಹ್ನಿ ರಿಪೂಃಸರ್ವಾನ್ವ್ಯಪೋಹತಿ ॥ ೫ ॥

ಕೃತ್ತಿಕಾಸು ತಥಾಽಭ್ಯರ್ಚ್ಯ ಯಜ್ಞಾನ್ ಪ್ರಾಪ್ನೋತ್ಯನುತ್ತಮಾನ್ ।
ಪ್ರಾಜಾಪತ್ಯೇ ತಥಾಽಭ್ಯರ್ಚ್ಯ ಪ್ರಜಾಂ ಪ್ರಾಪ್ನೋತಿ ಶೋಭನಾಂ ॥ ೬ ॥

ವಿಂದತೇ ಬ್ರಹ್ಮವರ್ಚಸ್ಯಂ ಮೃಗಶೀರ್ಷೇರ್ಚಯನ್ಹರಿಂ ।
ರೌದ್ರಕರ್ಮತ್ವಮಾಪ್ನೋತಿ ಸಿದ್ಧಿಂ ರೌದ್ರೇ ಸಮರ್ಚಯನ್ ॥ ೭ ॥

ಚ್ಯುತಃ ಸ್ಥಾನಮವಾಪ್ನೋತಿ ಪೂಜಯಾನಃ ಪುನರ್ವಸೌ ।
ಪುಷ್ಯೇ ಸಂಪೂಜಿತೋ ದೇವಃ ಪುಷ್ಟಿಮಗ್ರ್ಯಾಂ ಪ್ರಯಚ್ಛತಿ ॥ ೮ ॥

---

ರ್ಥಗಳನ್ನೂ, ಗುರುವಾರ ಮನಸ್ಸಿನ ಕೋರಿಕೆಗಳನ್ನೂ, ಶುಕ್ರವಾರ ಸಕಲ ಸೌಭಾಗ್ಯವನ್ನೂ, ಶನಿವಾರ ಶತ್ರುಸಂಹಾರಪೂರ್ವಕವಾಗಿ ಜಯವನ್ನೂ ಕೊಡುವನು.

೬-೮. ಕೃತ್ತಿಕಾನಕ್ಷತ್ರದಲ್ಲಿ ಪೂಜೆಮಾಡಿದರೆ ಯಜ್ಞವೈಭವವನ್ನೂ ಪುತ್ರಸಂತತಿಯನ್ನೂ, ಮೃಗಶಿರಾ ನಕ್ಷತ್ರದಲ್ಲಿ ಪೂಜೆಮಾಡಿದರೆ ಬ್ರಹ್ಮತೇಜಸ್ಸನ್ನೂ, ಆರ್ದ್ರಾನಕ್ಷತ್ರದ ಪೂಜೆಯಿಂದ ಭಯಂಕರ ಕರ್ಮಗಳನ್ನೂ, ಪುನರ್ವಸು ಪೂಜೆಯಿಂದ ಸ್ಥಾನಭ್ರಷ್ಟನಾದವನು ಸ್ವಸ್ಥಾನವನ್ನೂ, ಪುಷ್ಯನಕ್ಷತ್ರ ಪೂಜೆಯಿಂದ ಅತ್ಯುತ್ತಮವಾದ ಪುಷ್ಟಿಯನ್ನೂ ಹೊಂದುತ್ತಾನೆ.

ಆಶ್ಲೇಷಾಯಾಂ ತಥಾಽಭ್ಯರ್ಚ್ಯ ಶ್ರಿಯಂ ವಿಂದತಿ ಮಾನವಃ ।
ಪಿತೃಪ್ರಸಾದಮಾಪ್ನೋತಿ ಪಿತ್ರ್ಯೇ ಸಂಪೂಜಯನ್ ಹರಿಂ ॥ ೯ ॥

ಸೌಭಾಗ್ಯಂ ಮಹದಾಪ್ನೋತಿ ಫಲ್ಗುನೀಷ್ವರ್ಚಯಂಸ್ತಥಾ ।
ತಥೈವ ಚೋತ್ತರಾಯೋಗೇ ಗತಿಂ ವಿಂದತಿ ಶೋಭನಾಂ ॥ ೧೦ ॥

ಹಸ್ತೇ ಸಂಪೂಜ್ಯಯಂದೇವಂ ಗಜಾನ್ಪ್ರಾಪ್ನೋತ್ಯನುತ್ತಮಾನ್ ।
ಚಿತ್ರಾಸು ಚ ತಥಾಽಭ್ಯರ್ಚ್ಯ ವಸ್ತ್ರಾಣ್ಯಾಪ್ನೋತಿ ಮಾನವಃ ॥ ೧೧ ॥

ಆಪ್ಯೇ ಸಮರ್ಚಯನ್ದೇವಂ ರತ್ನಭಾಗೀ ಭವೇನ್ನರಃ ।
ತಥೋತ್ತರಾಸ್ವಾಷಾಢಾಸು ಕೀರ್ತಿಂ ಪ್ರಾಪ್ನೋತಿ ಶಾಶ್ವತೀಂ ॥ ೧೨ ॥

ಸರ್ವಾನ್ಕಾಮಾ ನವಾಪ್ನೋತಿ ಶ್ರವಣೇಽಭ್ಯರ್ಚಯನ್ಹರಿಂ ।
ಧನಿಷ್ಠಾಸು ತಥಾ ವಿತ್ತಮಾರೋಗ್ಯಂ ವಾರುಣೇ ತಥಾ ॥ ೧೩ ॥

---

೯-೨೦. ಆಶ್ಲೇಷಾ ನಕ್ಷತ್ರ ಪೂಜೆಯಿಂದ ಐಶ್ವರ್ಯ, ಮಘಾ ನಕ್ಷತ್ರದ ಪೂಜೆಯಿಂದ ಪಿತೃಗಳ ಪ್ರಸಾದ, ಪುಬ್ಬ (ಪೂರ್ವಫಲ್ಗುನೀ) ನಕ್ಷತ್ರ ಪೂಜೆಯಿಂದ ಮಹತ್ಸೌಭಾಗ್ಯ, ಉತ್ತರಾ ನಕ್ಷತ್ರ ಪೂಜೆಯಿಂದ ಮಂಗಳಪ್ರಯಾಣಲಾಭ, ಹಸ್ತಾ ನಕ್ಷತ್ರಾರ್ಚನೆಯಿಂದ ಗಜಾದಿ ಐಶ್ವರ್ಯ, ಚಿತ್ರಾ ನಕ್ಷತ್ರಾರ್ಚನೆಯಿಂದ ಚಿತ್ರವಸ್ತ್ರಲಾಭ, ಸ್ವಾತೀ ನಕ್ಷತ್ರ ಪೂಜೆಯಿಂದ ರತ್ನಪ್ರಾಪ್ತಿ ಸಹ ಉಂಟಾಗುತ್ತದೆ. ಅಲ್ಲಿಂದ ಮುಂದೆ ಬರುವ ವಿಶಾಖೆ, ಅನೂರಾಧೆ, ಜ್ಯೇಷ್ಠ, ಮೂಲ, ಪೂರ್ವಾಷಾಢ ಎಂಬ ಐದು ನಕ್ಷತ್ರಗಳಲ್ಲಿ ಪೂಜೆಮಾಡಿದರೆ, ಶಾಶ್ವತವಾದ ಕೀರ್ತಿಯು ಲಭ್ಯವಾಗುತ್ತದೆ. ಶ್ರವಣ ನಕ್ಷತ್ರ ಪೂಜೆಯಿಂದ ಸಕಲ ಇಷ್ಟಾರ್ಥಗಳೂ, ಧನಿಷ್ಠಾ ನಕ್ಷತ್ರ ಪೂಜೆಯಿಂದ ಐಶ್ವರ್ಯಾರೋಗ್ಯಾದಿಗಳೂ, ವಾರುಣ (ಶತಭಿಷ) ಪೂಜೆಯಿಂದ ಕ್ಷೇಮವೂ, ಪೂರ್ವಾ

ಆಜೇ ಪಶೂನವಾಪ್ನೋತಿ ಗಾವಶ್ಚ ತದನಂತರಂ ।
ಪೌಷ್ಣೇ ಶೀಲಮವಾಪ್ನೋತಿ ಚಾಶ್ವಾನ್ಪ್ರಾಪ್ನೋತಿ ಚಾಶ್ವಿನೇ ॥ ೧೪ ॥

ದೀರ್ಘಂ ಜೀವಿತಮಾಪ್ನೋತಿ ಭರಣೀಷು ಮಹಾಭುಜ ।
ಪ್ರತಿಪದ್ಯರ್ಥಮಾಪ್ನೋತಿ ಕಲ್ಯಂ ಪ್ರಾಪ್ನೋತ್ಯನುತ್ತಮಂ ॥ ೧೫ ॥

ಸರ್ವಾನ್ ಕಾಮಾನವಾಪ್ನೋತಿ ತೃತೀಯಾಯಾಂ ಸಮರ್ಚಯನ್ ।
ಪಶೂನ್ ಚತುರ್ಥ್ಯಾಮಾಪ್ನೋತಿ ಪಂಚಮ್ಯಾಂ ಶ್ರಿಯಮುತ್ತಮಾಂ ॥ ೧೬ ॥

ಷಷ್ಠ್ಯಾಂ ಪ್ರಾಪ್ನೋತ್ಯಥಾರೋಗ್ಯಂ ಸಪ್ತಮ್ಯಾಂ ಸುಹೃದಸ್ತಥಾ ।
ಅಷ್ಟಮ್ಯಾಂ ಚ ತಥಾ ಭೃತ್ಯಾನ್ನವಮ್ಯಾಂ ಚ ತಥಾ ಯಶಃ ॥ ೧೭ ॥

ಸರ್ವಸಿದ್ಧಿಮವಾಪ್ನೋತಿ ದಶಮ್ಯಾಂ ಪೂಜಯನ್ ಹರಿಂ ।
ಏಕಾದಶ್ಯಾಂ ಪೂಜಯಾನಃ ಶ್ರೀಭಾಗೀ ಚ ಸದಾ ಭವೇತ್ ॥ ೧೮ ॥

ಅಭೀಷ್ಟಾಂ ಗತಿಮಾಪ್ನೋತಿ ದ್ವಾದಶ್ಯಾಂ ಪೂಜಯನ್ ಹರಿಂ ।
ತ್ರಯೋದಶ್ಯಾಂ ಪೂಜಯಾನೋ ರೂಪಂ ಪ್ರಾಪ್ನೋತ್ಯನುತ್ತಮಂ ॥ ೧೯ ॥

---

ಭಾದ್ರ (ಆಜ) ನಕ್ಷತ್ರದಿಂದ ಪಶು ಸಮೃದ್ಧಿಯೂ, ಉತರಾಭಾದ್ರ ನಕ್ಷತ್ರ ಪೂಜೆಯಿಂದ ಗೋಸಮೃದ್ಧಿಯೂ, ರೇವತೀ (ಪೌಷ್ಣ) ನಕ್ಷತ್ರದಲ್ಲಿ ಮಾಡಿದ ಪೂಜೆಯಿಂದ ಒಳ್ಳೆಯ ಶೀಲಸ್ವಭಾವವೂ, ಅಶ್ವಿನೀ (ಆಶ್ವಿನ) ನಕ್ಷತ್ರ ಪೂಜೆಯಿಂದ ಅಶ್ವಗಳನ್ನೂ ಹೊಂದುತ್ತಾನೆ. ಭರಣೀ ನಕ್ಷತ್ರದಲ್ಲಿ ಪೂಜೆಮಾಡಿದರೆ ದೀರ್ಘಾಯುಸ್ಸೂ ಉಂಟಾಗುವುದು

ಇದೇ ಮೇರೆ ಪಾಡ್ಯಮೀ ಮೊದಲ್ಗೊಂಡು ಅಮಾವಾಸ್ಯೆವರೆಗಿನ ತಿಥಿಗಳಲ್ಲಿ ಪೂಜೆಮಾಡಿದುದರ ಫಲವನ್ನು ಹೇಳುತ್ತಾರೆ :- ಪಾಡ್ಯದಲ್ಲಿ ದ್ರವ್ಯಲಾಭ, ಬಿದಿಗೆಯಲ್ಲಿ ಸರ್ವಲಾಭ, ತದಿಗೆ ಇಷ್ಟಾರ್ಥಸಿದ್ಧಿ, ಚೌತಿ ಪಶುಸಮೃದ್ಧಿ, ಪಂಚಮಿ ಐಶ್ವರ್ಯ, ಷಷ್ಠಿ ಆರೋಗ್ಯ. ಸಪ್ತಮಿ ಮಿತ್ರಲಾಭ, ಅಷ್ಟಮಿ ಭೃತ್ಯಾಧಿಕ್ಯ, ನವಮಿ ಕೀರ್ತಿ, ದಶಮಿ ಕರ್ಮಸಿದ್ಧಿ, ಏಕಾದಶಿ ಲಕ್ಷ್ಮೀಲಾಭ, ದ್ವಾದಶೀ ಅಭೀಷ್ಟಪ್ರಾಪ್ತಿ, ತ್ರಯೋ

**ಇತ್ಯೇತದುಕ್ತಂ ತವ ಮಾನವಾನಾಂ**
**ಕಾಮ್ಯಂ ಫಲಂ ಸಮ್ಯಗುಪೋಷಿತಾನಾಂ ।**
**ದೇವೇಶ್ವರಂ ಪೂಜಯತಾಂ**
**ಯಥಾವತ್ಪರಂ ಪುರಾಣಂ ಪುರುಷಂ ವರೇಣ್ಯಂ ॥ ೨೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಂಕರಗೀತಾಸೂಪವಾಸಫಲೋ ನಾಮೈಕೋನಷಷ್ಟಿತಮೋಧ್ಯಾಯಃ**

---

ದಶಿ ಸೌಂದರ್ಯ, ಚತುರ್ದಶೀ ಸದ್ಗತಿಪ್ರಾಪ್ತಿ, ಪೂರ್ಣಿಮೆ ಮತ್ತು ಅಮಾವಾಸ್ಯೆಯಲ್ಲಿ ಸಕಲ ಕಾಮ (ಆಸೆ) ಗಳೂ ಸಿದ್ಧಿಯಾಗುತ್ತವೆ.

೨೧. ಎಲೈ ಪರಶುರಾಮನೆ! ಈ ರೀತಿಯಾಗಿ ನಿನಗೆ ಪುರಾಣ ಪುರುಷನಾದ ಮಹಾವಿಷ್ಣುವನ್ನು ಉಪಾಸನೆಮಾಡುವ ಕಾಮ್ಯಫಲಾಭಿಲಾಷಿಗಳಾದ ಜನರಿಗೆ ಪ್ರಾಪ್ತವಾಗುವ ಫಲಗಳನ್ನು ನಿನಗೆ ಹೇಳಿರುವೆನೆಂದು ಶಂಕರನು ಪರಶುರಾಮನಿಗೆ ಹೇಳಿದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಶಂಕರಗೀತೆಯಲ್ಲಿ ಉಪವಾಸಫಲವೆಂಬ ಹೆಸರಿನ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಷಷ್ಟಿತಮೋಽಧ್ಯಾಯಃ

---

॥ ರಾಮ ಉವಾಚ ॥

ಉಪವಾಸಾಸಮರ್ಥಾನಾಂ ಕಿಂ ಸ್ಯಾದೇಕಮುಪೋಷಿತಂ ।
ಮಹಾಫಲಂ ಮಹಾದೇವ ತತ್ಸಮಾಕ್ಷ್ವಪೃಚ್ಛತಃ ॥ ೧ ॥

॥ ಶಂಕರ ಉವಾಚ ॥

ದಯಾ ರಾಮ ಶ್ರವಣೋಪೇತಾ ದ್ವಾದಶೀ ಮಹತೀ ಚ ಸಾ ।
ತಸ್ಯಾಮುಪೋಷಿತಃ ಸ್ನಾತಃ ಪೂಜಯಿತ್ವಾ ಜನಾರ್ದನಂ ॥ ೨ ॥

ಪ್ರಾಪ್ನೋತ್ಯಯತ್ನಾದ್ಧರ್ಮಜ್ಞ ದ್ವಾದಶದ್ವಾದಶೀಫಲಂ ।
ದಧ್ಯೋದನಯುತಂತಸ್ಯಾಂ ಜಲಪೂರ್ಣಂ-ಘಟಂ ದ್ವಿಜೇ ॥ ೩ ॥

---

## ಅರವತ್ತನೆಯ ಅಧ್ಯಾಯ

೧. ಪರಶುರಾಮನು ಶಂಕರನನ್ನು ಪ್ರಶ್ನೆಮಾಡುತ್ತಾನೆ—ಎಲೈ, ಮಹಾದೇವನೆ! ನೀನು ಮೇಲೆ ಹೇಳಿದಂತೆ ಎಲ್ಲಾ ಉಪವಾಸಗಳನ್ನೂ ಮಾಡಲು ಶಕ್ತಿ ಇಲ್ಲದವರು ಯಾವುದಾದರೂ ಒಂದೇ ಒಂದು ಉಪವಾಸವನ್ನು ಮಾಡಿದರೆ ಮೇಲೆ ಹೇಳಿದ ಸಕಲ ಫಲಗಳೂ ಉಂಟಾಗುವಂತೆ ಇರುವ ಚಮತ್ಕಾರವನ್ನು ಹೇಳಬೇಕೆಂದು ಪ್ರಾರ್ಥಿಸುತ್ತೇನೆ.

೨-೮. ಪರಮೇಶ್ವರನು ಹೇಳುತ್ತಾನೆ—ಎಲೈ, ಪರಶುರಾಮನೆ, ಕೇಳು. ಶ್ರವಣನಕ್ಷತ್ರದಿಂದ ಕೂಡಿದ ದ್ವಾದಶಿಯು ಮಹಾಶ್ರೇಷ್ಠವಾದುದು. ಆ ಶ್ರವಣ ದ್ವಾದಶೀ ದಿವಸ ಯಾರು ಪ್ರಾತಃಕಾಲ ಸ್ನಾನಮಾಡಿ ಜನಾರ್ದನನನ್ನು ಪೂಜಿಸಿ ಉಪವಾಸವಿರುವರೋ ಆ ಮಹಾತ್ಮರು ಹನ್ನೆರಡು ದ್ವಾದಶೀವ್ರತ ಮಾಡಿದ ಫಲವನ್ನು

ವಸ್ತ್ರಸಂವೇಷ್ಟಿತಂ ದತ್ವಾಛತ್ರೋಪಾನಹಮೇವ ಚ ।
ನದುರ್ಗತಿಮವಾಪ್ನೋತಿ ಗತಿಮನ್ಯಾಂಚವಿಂದತಿ ॥ ೪ ॥

ಅಕ್ಷಯ್ಯಂ ಸ್ಥಾನಮಾಪ್ನೋತೀ ನಾತ್ರ ಕಾರ್ಯಾ ವಿಚಾರಣಾ ।
ಶ್ರವಣದ್ವಾದಶೀಯೋಗೇ ಬುಧವಾರೋ ಭವೇದ್ಯದಿ ॥ ೪ ॥

ಅತ್ಯಂತಂ ಮಹತೀ ನಾಮ ದ್ವಾದಶೀ ಸಾ ಪ್ರಕೀರ್ತಿತಾ ।
ಸ್ನಾನಂ ಜಪ್ಯಂ ತಥಾ ದಾನಂ ಹೋಮಂಶ್ರಾದ್ಧಂ ಸುರಾರ್ಚನಂ ॥ ೬ ॥

ಸರ್ವಮಕ್ಷಯ್ಯಮಾಪ್ನೋತಿ ತಸ್ಯ ಭೃಗುಕುಲೋದ್ವಹ ।
ತಸ್ಮಿಂದಿನೇ ತಥಾ ಸ್ನಾತೋ ಯತ್ರ ಕ್ವಚನ ಸಂಗಮೇ ॥ ೭ ॥

ಸ ಕ್ರತುಸ್ನಾನಜಂ ಪುಣ್ಯಂ ಫಲಮಾಪ್ನೋತ್ಯಸಂಶಯಂ ।
ಶ್ರವಣೇಸಂಗಮಾಃ ಸರ್ವೇ ಫಲಪುಷ್ಟಿಪ್ರದಾಃ ಸದಾ ॥ ೮ ॥

---

ಹೊಂದುವರು. ಆದಿನ ಮೊಸರನ್ನವನ್ನು ವಸ್ತ್ರದಿಂದ ಸುತ್ತಿ ಸೀನೀರು ತುಂಬಿದ ಕುಂಭವನ್ನೂ ಛತ್ರಿ ಜೋಡುಗಳನ್ನೂ ಯಾರುದಾನಮಾಡುವರೋ ಅವರು ಸಕಲಪಾಪವನ್ನು ಕಳೆದುಕೊಂಡು ಸದ್ಗತಿಯನ್ನು ಹೊಂದುತ್ತಾರೆ. ಅಕ್ಷಯ್ಯ ಪುಣ್ಯಲೋಕವೂ ಸಹ ಅವರಿಗೆ ಪ್ರಾಪ್ತಿಯಾಗುತ್ತದೆ ಮತ್ತು ಶ್ರವಣದ್ವಾದಶೀ ದಿನ ಬುಧವಾರವೂ ಸಹ ಪ್ರಾಪ್ತವಾಗುವುದಾದರೆ ಅದಕ್ಕೆ ಮಹತೀದ್ವಾದಶಿಯೆಂದು ಹೆಸರು. ಆ ದಿನ ಸ್ನಾನ, ಜಪ, ದಾನ ಹೋಮ, ಶ್ರಾದ್ಧ, ದೇವಾರ್ಚನಾದಿಗಳಲ್ಲಿ, ಯಾವುದನ್ನು ಮಾಡಿದರೂ ಅವೆಲ್ಲವೂ ಅಕ್ಷಯವಾಗುತ್ತವೆ. ಆ ದಿನ ಯಾವುದಾದರೂ ಸಂಗಮದಲ್ಲಿ ಸ್ನಾನ ಮಾಡಿದರೆ ಯಜ್ಞಸ್ನಾನಫಲವು ಉಂಟಾಗುತ್ತದೆ. ಶ್ರವಣ ಸಂಗಮವು ಫಲಪುಷ್ಟಿಪ್ರದವೆಂದು ತಿಳಿ.

**ವಿಶೇಷಾದ್ದ್ವಾದಶೀಯುಕ್ತೇ ಬುಧಯುಕ್ತೇವಿಶೇಷತಃ ।**
**ಯಥೈವ ದ್ವಾದಶೀ ಪ್ರೋಕ್ತಾ ಬುಧಶ್ರವಣಸಂಯುತಾ ॥ ೯ ॥**

**ತೃತೀಯಾ ಚ ತಥಾಜ್ಞೇಯಾ ಸರ್ವಕಾಮಸಮನ್ವಿತಾ ।**
**ಯಥಾ ತೃತೀಯಾ ಧರ್ಮಜ್ಞ ತಥಾ ಪಂಚದಶೀಶುಭಾ ॥ ೧೦ ॥**

**ತ್ರ್ಯಹಃಸ್ಪೃಶೇಪಿ ದಿವಸೇ ಚೋಪವಾಸೇ ಮಹಾಫಲಃ ।**
**ಕೇಶವಾಭ್ಯರ್ಚನೇ ರಾಮ ದಾನಜಪ್ಯಾದಿಕೇಷು ಚ ॥ ೧೧ ॥**

**॥ ರಾಮ ಉವಾಚ ॥**

**ತ್ರ್ಯಹಃಸ್ಪೃಗ್ದಿವಸಃಕೀದೃಕ್ಕದಾ ಭವತಿವಾಪ್ರಭೋ ।**
**ತಸ್ಯ ಮೇ ಸಂಶಯಂಬ್ರೂಹಿ ದೇವದೇವ ವೃಷಧ್ವಜ ॥ ೧೨ ॥**

---

೯-೧೧. ಶ್ರವಣನಕ್ಷತ್ರವು ದ್ವಾದಶೀ ತಿಥಿಯಿಂದ ಕೂಡಿದ್ದರೆ ವಿಶೇಷ. ಅದರಲ್ಲೂ ಬುಧವಾರ ಸೇರಿದರೆ ಮತ್ತೂ ವಿಶೇಷ. ಬುಧಶ್ರವಣಸಂಯುತವಾದ ದ್ವಾದಶಿಯಂತೆಯೇ, ತದಿಗೆ ಮತ್ತು ಪೂರ್ಣಿಮೆಗಳನ್ನು ಶುಭಕರವೆಂದು ತಿಳಿದುಕೋ. ತ್ರ್ಯಹಸ್ಪೃಶ (3 ದಿನದ ಸಂಗಮ) ವೆಂಬ ದಿವಸದಲ್ಲಿ (ಪಂಚಾಂಗದಲ್ಲಿ ತ್ರ್ಯಹಸ್ಪೃಕ್ ಎಂದು ಆಗಿಂದಾಗ್ಯೆ ಬರೆದಿರುತ್ತಾರೆ) ಉಪವಾಸಮಾಡಿ, ಕೇಶವನನ್ನು ಪೂಜಿಸುವುದೂ ದಾನ ಜಪಾದಿಗಳನ್ನು ಆ ದಿವಸ ಮಾಡುವುದೂ ಸಹ ಮಹಾಫಲವನ್ನು ಕೊಡತಕ್ಕುದೆಂದು ತಿಳಿದುಕೊಳ್ಳಯ್ಯ, ಭಾರ್ಗವರಾಮ.''

೧೨. ಮಧ್ಯದಲ್ಲಿ ಪರಶುರಾಮನು ಪ್ರಶ್ನೆಮಾಡುತ್ತಾನೆ.—'' ಸ್ವಾಮಿ, ವೃಷಭವಾಹನನೇ! ತ್ರ್ಯಹಸ್ಪೃಗ್ದಿವಸವೆಂದರೇನು? ಅದು ಯಾವಾಗ ಬರುವುದೆಂದು ನನಗೆ ಸಂಶಯ ಬಂದಿದೆ. ಅದನ್ನು ನನಗೆ ದಯವಿಟ್ಟು ವಿವರವಾಗಿ ತಿಳಿಸು.

॥ ಶಂಕರ ಉವಾಚ ॥

ದಿವಾ ವಿನಿರ್ಗತಾ ಯತ್ರ ವ್ಯತೀತಾ ಸ್ಯಾತ್ತಿಥಿರ್ದ್ವಿಜ ।
ರಾತ್ರಿಶೇಷೇ ತಥಾಽವೇಶ್ಯ ಭವಿಷ್ಯಾ ಸ್ಪೃಶತೀ ತಿಥಿಃ ॥ ೧೩ ॥

ತಿಥಿತ್ರಯಸ್ಯಸಂಸ್ಪರ್ಶಾದಹೋರಾತ್ರೇ ಭೃಗೂತ್ತಮ ।
ತ್ರ್ಯಹಸ್ಪೃಕ್ಸ ವಿನಿರ್ದಿಷ್ಟಃ ಪುಣ್ಯಃ ಪರಮಪಾವನಃ ॥ ೧೪ ॥

---

೧೩-೧೪. ಅದಕ್ಕೆ ಈಶ್ವರನು ಪ್ರತ್ಯುತ್ತರ ಹೇಳುತ್ತಾನೆ.—" ಎಲೈ, ಪರಶುರಾಮನೇ, ಕೇಳು. ಪ್ರಾತಃಕಾಲಕ್ಕೆ ಸರಿಯಾಗಿ ಹಿಂದಿನ ದಿವಸದ ತಿಥಿ ಕಳೆದು ಹೋಗಿ ಮೂರನೆಯ ದಿನವು ಹುಟ್ಟುವುದಕ್ಕೆ ಮುಂಚೆ ಹಗಲಿನ ತಿಥಿಯು ಕಳೆದು ಮುಂದಿನ ತಿಥಿಯು (ನಿನ್ನೆ-ಇಂದು-ನಾಳೆ) ಸರಿಯಾಗಿ ಸಿಲ್ಲುವುದೊ, ಆಗ ಪ್ರಾತಃಕಾಲ ಹಿಂದಿನ ತಿಥಿ ವ್ಯಾಪನೆಯೂ, ಮೂರನೆಯ ದಿನ ಮುಂದಿನ ತಿಥಿ ಆವೇಶವೂ ಇರುವುದರಿಂದ ಆ ದಿವಸಕ್ಕೆ ತ್ರಿದಿನಸ್ಪೃಕ್ ಅಥವಾ ತ್ರ್ಯಹಸ್ಪೃಗ್ದಿವಸವೆಂದು ಜ್ಯೋತಿಷ್ಕರು ಹೇಳುತ್ತಾರೆ. [ಇದಕ್ಕೆ ಇಲ್ಲಿ ಒಂದು ಉದಾಹರಣೆಯನ್ನು ಕೊಡುತ್ತೇವೆ. ಆಸ್ಥಾನ ವಿದ್ವಾಂಸರುಗಳು ಗುಣಿಸಿರುವ ಅರಮನೆಯ ತಾರಣ ಸಂವತ್ಸರದ ಪಂಚಾಂಗದಲ್ಲಿ (1) ಆಷಾಡ ಶು॥ ೭ ಮಂಗಳವಾರ (27-6-44), (2) ಆಶ್ವೀಜ ಕೃ॥ ೧೪ ಭಾನುವಾರ, (15-10-44), (3) ಮಾರ್ಗಶಿರ ಕೃ॥ ೭ ಬುಧವಾರ (6-12-44), (4) ಪುಷ್ಯ ಕೃ॥ ೯ ಭಾನುವಾರ (7-1-1945), (5) ಫಾಲ್ಗುಣ ಕೃ॥ ೨ ಬುಧವಾರ (28-2-1945), ಈ ಐದು ದಿವಸಗಳೂ ಸಹ ಪಾತಃಕಾಲದಿಂದ ಸಂಧ್ಯಾಕಾಲದವರಿಗೆ ಸರಿಯಾಗಿ ಆ ದಿವಸ ಪೂರ್ತಾ 60 ಘಳಿಗೆಗಳು ಇವೆ. ಅಂದರೆ ಪ್ರಾತಃಕಾಲದ ಹಿಂದಿನತಿಥಿಯ ಅವಶಿಷ್ಟಭಾಗ ಆದಿನ ಪೂರ್ತಾ ಮುಂದಿನ ದಿನದ ವ್ಯಾಪ್ತಿಸೇರಿ ಮೂರುದಿನ ಸೇರಿದಂತಾಯಿತು. ಅಂದರೆ ತ್ರ್ಯಹಸ್ಪೃಗ್ದಿನಗಳಲ್ಲಿ ಯಾವ ಶೇಷವೂ ಇಲ್ಲದೆ ಪೂರ್ಣವಾಗಿ ಅರುವತ್ತು ಘಳಿಗೆಗಳು ಇರುವುವೆಂದು ತಿಳಿದುಕೊಳ್ಳಬೇಕು. ನಿರ್ಣಯವಾಗಿ ಪಂಚಾಂಗವನ್ನು ಗುಣಿಸತಕ್ಕ ದೈವಜ್ಞರು ಆ ದಿನದ ಕಡೆಯಲ್ಲಿ ಈ ಸಂಗತಿಯನ್ನು ಕುರಿತು ತ್ರಿದಿನಸ್ಪೃಕ್ ಅಥವಾ ತ್ರ್ಯಹಸ್ಪೃಕ್ ಎಂದು ಸೂಚಿಸಿರುತ್ತಾರೆ. ಇಂತಹ ತಿಥಿಗಳು ವರ್ಷಕ್ಕೆ ಐದಾರು ದಿವಸ ಮಾತ್ರ ಸಿಕ್ಕುವುದು.] ತ್ರಿದಿನಸ್ಪೃಕ್ ಎಂಬ ಪದದ ಅರ್ಥವನ್ನು, ಒಂದೇ ತಿಥಿಯು ಮೂರು ವಾರಗಳಿಗೂ, ಅವಮಾಹಃ ಎಂದರೆ ಒಂದೇ ವಾರದ ದಿವಸ ಮೂರು ತಿಥಿಗಳೂ ಸಂಬಂಧಿಸಿರುವುವೆಂದು ತಿಳಿದಿದ್ದರೆ ಸಾಕು.

**ತತ್ರೋಪೋಷ್ಯ ಶಿರಸ್ನಾತೈಃ ಕರ್ತವ್ಯಂ ದೇವತಾರ್ಚನಂ ।**
**ಜಪಂ ಹೋಮಂ ತಥಾ ದಾನಂ ಕಾಮಯದ್ಭಿರ್ಮಹತ್ಫಲಂ ॥ ೧೫ ॥**

**ಕರ್ಮಣಾಂ ಪರಿಶೇಷಾಣಾಮಕರ್ಮಣ್ಯಂ ಹಿ ತದ್ದಿನಂ ।**
**ಭೋಜ್ಯಂ ತ್ರಿಮಧುರಂ ರಾಮ ಬ್ರಾಹ್ಮಣಾಂಸ್ತತ್ರ ಭೋಜಯೇತ್ ॥ ೧೬ ॥**

**ಮಹತ್ಪೂರ್ಣಾ ಭವತ್ಯೇಕಾ ಪೌರ್ಣಮಾಸೀ ದ್ವಿಜೋತ್ತಮ ।**
**ಪ್ರತಿಸಂವತ್ಸರಂ ತಸ್ಯಾಂ ಸೋಪವಾಸೋ ಜನಾರ್ದನಂ ॥ ೧೭ ॥**

**ಯಃ ಪೂಜಯತಿ ಧರ್ಮಜ್ಞ ತೇನ ಸಂವತ್ಸರಂ ಹರಿಃ ।**
**ಪೂಜಿತಃಪೌರ್ಣಮಾಸೀಷು ಭವತೀತಿ ಹ ನಿಶ್ಚಯಃ ॥ ೧೮ ॥**

**ತಸ್ಯಾಂ ದಾನಂ ಸ್ವಲ್ಪಮಪಿ ಮಹದ್ಭವತಿ ಭಾರ್ಗವ ।**
**ದಾನಂ ಜಪ್ಯಂ ತತೋ ಹೋಮೋ ಯಶ್ಚಾನ್ಯತ್ಸುಕೃತಂಭವೇತ್ ॥ ೧೯ ॥**

---

೧೫-೧೬. ಈ ರೀತಿ ಒದಗಿದ ತ್ರಿದಿನಸ್ಪೃಶವೆಂಬ ದಿವಸದಲ್ಲಿ ಯಾರು ತಲೆಗೆ ಸ್ನಾನಮಾಡಿ ದೇವತಾರ್ಚನೆಮಾಡಿ ಉಪವಾಸದಿಂದಿದ್ದು ಜಪ ಹೋಮ ದಾನಾದಿಗಳನ್ನು ಮಾಡುವರೋ ಅವರು ಎಂತೆಂತಹ ಮಹತ್ಫಲವನ್ನು ಕೋರಿಕೊಂಡರೂ ಆ ಫಲವು ಸಿಕ್ಕಿಯೇ ಸಿಕ್ಕುತ್ತದೆ. ಯಾವುದಾದರೂ ಕೆಲಸಗಳು ಅರ್ಧರ್ಧವಾಗಿ ನಿಂತಿದ್ದರೆ ಆ ಕೆಲಸವನ್ನು ಆ ಪೂರ್ಣ (ತ್ರಿದಿನಸ್ಪೃಕ್) ತಿಥಿಯಲ್ಲಿ ಪೂರ್ತಿಯಾಗಿ ಮಾಡಿ ಮೂರು ವಿಧ ಸಿಹಿ ಪದಾರ್ಥ (ಭಕ್ಷ್ಯ) ಗಳನ್ನು ಮಾಡಿಸಿ ಬ್ರಾಹ್ಮಣರನ್ನು ಕರೆದು ಸಮಾರಾಧನೆಮಾಡಿ ತಾನೂ ಸಭಕ್ಷ್ಯವಾದ ಆ ಮಧುರಭೋಜನವನ್ನು ಮಾಡಬೇಕು.

೧೭-೧೯. ಭಾರ್ಗವರಾಮನೇ ಕೇಳು, ಪ್ರತಿವರ್ಷವೂ ಮಹತ್ಪೂರ್ಣಿಮೆಯೆಂಬೊಂದು ಪುಣ್ಯ ದಿವಸ ಬರುವುದುಂಟು. ಆ ಮಹಾಪೂರ್ಣಿಮೆಯ ದಿವಸ ಯಾರು ಉಪವಾಸ ಮಾಡಿ ಭಗವಂತನನ್ನು ಪೂಜಿಸುವರೋ ಅಂಥವರು ವರ್ಷದ ಹನ್ನೆರಡು ಪೂರ್ಣಿಮೆಗಳಲ್ಲೂ ಕೇಶವನನ್ನು ಪೂಜೆಮಾಡಿದ ಫಲವನ್ನು ಹೊಂದುತ್ತಾರೆ

॥ ರಾಮ ಉವಾಚ ॥

ಸಂವತ್ಸರೇ ಪೌರ್ಣಮಾಸೀ ಮಹತ್ಪೂರ್ವಾ ವೃಷಧ್ವಜ ।
ಕಥಂ ಜ್ಞೇಯಾ ಜಗನ್ನಾಥ ತನ್ಮಮಾಚಕ್ಷ್ವಪೃಚ್ಛತಃ ॥ ೨೦ ॥

॥ ಶಂಕರ ಉವಾಚ ॥

ಯಸ್ಯಾಂ ಪೂರ್ಣೇಂದುನಾ ಯೋಗಂ ಯಾಯಾಜ್ಜೀವೋ ಮಹಾಬಲ ।
ಪೌರ್ಣಮಾಸೀ ತು ಸಾ ಜ್ಞೇಯಾ ಮಹತ್ಪೂರ್ವಾದ್ವಿಜೋತ್ತಮ ॥ ೨೧ ॥

ಆದಿತ್ಯಗ್ರಹಣೇ ರಾಮ ಗ್ರಹಣೇ ವಾ ನಿಶಾಭೃತಃ ।
ಉಪವಾಸಾದವಾಪ್ನೋತಿ ಸರ್ವಕಿಲ್ಬಿಷನಾಶನಂ ॥ ೨೨ ॥

---

೨೦. ಪರಶುರಾಮನು ಮಧ್ಯೆ ಕೇಳಿದನೇನೆಂದರೆ– ಸ್ವಾಮಿಾ, ಜಗನ್ನಾಯಕ ಪರಮೇಶ್ವರನೇ, ಒಂದು ವರ್ಷದಲ್ಲಿ ಮಹತ್ಪೂರ್ಣಮೆಯೆಂಬುದು ಯಾವದಿನ ಬರುವುದೆಂಬುದನ್ನು ನಾವು ತಿಳಿದುಕೊಳ್ಳುವ ಬಗೆ ಹೇಗೆ ? ಅದನ್ನು ದಯಮಾಡಿ ತಿಳಿಸೈ!

೨೧, ಅದಕ್ಕೆ ಶಂಕರನು ಉತ್ತರ ಹೇಳುತ್ತಾನೆ, ಗುರುವು ಯಾವ ದಿವಸ ಪೂರ್ಣ ಚಂದ್ರನೊಡನೆ ಸಂಬಂಧ ಹೊಂದುವನೋ ಆ ದಿವಸಕ್ಕೆ ಮಹತ್ಪೂರ್ಣಮೆ ಯೆಂದು ಹೆಸರು [ಇದಕ್ಕೆ ಉದಾಹರಣೆ, ಈ ತಾರಣ ಸಂವತ್ಸರದಲ್ಲಿ ಗುರುವು ಚೈತ್ರ ಶುದ್ಧ ೧ ಶನಿವಾರದದಿವಸದ ಲಾಗಾಯ್ತು ಜ್ಯೇಷ್ಠ ಕೃಷ್ಣ ೧೩ರವರಿಸಿಗೆ ಕಟಕ ರಾಶಿಯಲ್ಲಿರುವನಾದ್ದರಿಂದಲೂ ಇದೇ ವೈಶಾಖ ಶುದ್ಧ ೧೪ ಭಾನುವಾರ ಪೂರ್ಣಿಮಾ ತಿಥಿಯಾದ್ದರಿಂದ ಆ ದಿನವನ್ನು ಮಹತ್ಪೂರ್ಣಿಮೆಯೆಂದೂ ಕರೆಯಬಹುದು. ಆದರೆ ನಾನು ನೋಡಿದ ಯಾವ ಪಂಚಾಂಗಗಳಲ್ಲೂ ಆ ರೀತಿ ಬರೆದಿರುವುದಿಲ್ಲ. ಮತ್ತು ಆ ದಿವಸದ ಕಡೆಯಲ್ಲಿ ಮಹತ್ಪೂರ್ಣಿಮೆಯೆಂದು ಬರೆಯಬಹುದಾಗಿತ್ತು. ಶಾಸ್ತ್ರೋಕ್ತ ವಾಗಿ ಬರೆದಿರುವ ಈ ಪುರಾಣದ ರಹಸ್ಯವು ಈ ರೀತಿ ಇರುವುದರಿಂದ ಇಲ್ಲಿ ನಿರ್ಭಯ ವಾಗಿ ಬರೆಯಲಾಗಿದೆ. ಇದು ಜ್ಯೋತಿಶ್ಶಾಸ್ತ್ರ ಮರ್ಯಾದೆಗೆ ಸರಿಯಾಗಿದೆಯೇ ಎಂಬು ದು ನಮಗೆ ತಿಳಿದಿಲ್ಲವಾದ್ದರಿಂದ ಶಾಸ್ತ್ರಕಾರರು ವಿಮರ್ಶೆಮಾಡಿ ತಿಳಿಸಬೇಕು. ಚತು ರ್ದಶೀ ಆದಿನ ೧೪ ಘಳಿಗೆ ಉಳಿದ ೧೬ ಹಗಲು ಘಳಿಗೆಗಳು ಕಳೆದರೆ, ಆ ದಿನದ ರಾತ್ರಿಯ 30 ಘಳಿಗೆ ಪೂರ್ತಾ ಪೂರ್ಣಿಮಾ ಚಂದ್ರನು ವಿರಾಜಿಸುವುದರಿಂದ ಇದನ್ನು ಮಹತ್ಪೂರ್ಣಿಮೆಯೆನ್ನಬಹುದು. ದಯಮಾಡಿ ಪಂಚಾಂಗವನ್ನು ನೋಡಿ ]

೨೨-೨೩. ಎಲೈ, ಪರಶುರಾಮನೆ ! ಇನ್ನೂ ಕೇಳು ಹೇಳುತ್ತೇನೆ. ಸೂರ್ಯ ಗ್ರಹಣ ಚಂದ್ರಗ್ರಹಣಗಳ ದಿವಸ ಉಪವಾಸಮಾಡಿದರೆ ಸಕಲ ಪಾಪಗಳೂ ನಾಶವಾ

**ಸ್ನಾನಂ ದಾನಂ ತಥಾ ಜಪ್ಯಂ ಚಾಕ್ಷಯ್ಯಂ ಪರಿಕೀರ್ತಿತಂ ।**
**ಶ್ರಾದ್ಧಂಚ ಭಾರ್ಗವಶ್ರೇಷ್ಠ ವಹ್ನಿಸಂಪೂಜನಂ ತಥಾ ॥ ೨೩ ॥**

**॥ ರಾಮ ಉವಾಚ ॥**

**ನಕ್ಷತ್ರಂ ದೇವದೇವೇಶ ತಿಥಿಂಚಾತ್ರ ವಿನಿರ್ಗತಾಂ ।**
**ದೃಷ್ಟ್ವಾ ಯಥಾವತ್ಕರ್ತವ್ಯಂ ತಿಥಿಂ ಶಂಕರ ಜಾನತಾ ॥ ೨೪ ॥**

**॥ ಶಂಕರ ಉವಾಚ ॥**

**ಸಾ ತಿಥಿಸ್ತದಹೋರಾತ್ರಂ ಯಸ್ಯಾಮೇವೋದಿತೋ ರವಿಃ ।**
**ತಥಾ ಕರ್ಮಾಣಿ ಕುರ್ವೀತ ಹ್ರಾಸವೃದ್ಧಿರ್ನಕಾರಣಂ ॥ ೨೫ ॥**

---

ಗುತ್ತವೆ. ಮತ್ತು ಆದಿನ ಸ್ನಾನ ದಾನ ಜಪಶ್ರಾದ್ಧಹೋಮಾದಿಗಳನ್ನು ಮಾಡಿದರೆ ಅಕ್ಷಯ ಪುಣ್ಯಲೋಕವು ಪ್ರಾಪ್ತಿಯಾಗುತ್ತದೆ.

೨೪. ಪರಶುರಾಮನು ಪುನಃ ಪ್ರಶ್ನೆಮಾಡುತ್ತಾನೆ :- " ಸ್ವಾಮಿ ಈ ಗ್ರಹಣ ಸಮಯವನ್ನು ನಾವು ನಕ್ಷತ್ರ, ದಿವಸ (ತಿಥಿ) ಗಳಿಂದ ತಿಳಿದು ಆ ಗ್ರಹಣ ಸಮಯದ ನಕ್ಷತ್ರ ತಿಥಿಗಳು ಕಳೆದ ಮೇಲೆಯೇ ತಾನೇ ಜಪಾದಿಗಳನ್ನು ಮಾಡಬೇಕು ?"

೨೫. ಈಶ್ವರನು ಪ್ರತ್ಯುತ್ತರವನ್ನು ಹೇಳುತ್ತಾನೆ :- ಯಾವಾಗ ಸೂರ್ಯನು ಹುಟ್ಟಿದ ಮೇಲೆ ಅಹೋ ರಾತ್ರಿ ಕಳೆದು 60 ಘಳಿಗೆ ಪೂರೈಸುವುದೋ, ಮರುದಿನ ಯಾವಾಗ ಪ್ರಾರಂಭಿಸುವುದೋ ಅದಕ್ಕೇ ತಿಥಿಯೆಂದು ಹೆಸರು. ಹ್ರಾಸವೃದ್ಧಿ (ಕಡಿಮೆ ಹೆಚ್ಚು) ಗಳು ಇದಕ್ಕೆ ಕಾರಣವಲ್ಲ. ಆ ತಿಥಿಗಳಲ್ಲಿ ಕರ್ಮಗಳನ್ನು ಮಾಡಬೇಕು.

**ಶುಕ್ಲಪಕ್ಷೇ ತಿಥಿರ್ಜ್ಞೇಯಾ ಯಸ್ಯಾಮಭ್ಯುದಿತೋ ರವಿಃ ।**
**ಉಪೋಷಿತವ್ಯಂ ನಕ್ಷತ್ರಂ ಯೇ ನಾಸ್ತಂ ಯಾತಿ ಭಾಸ್ಕರಃ　　॥ ೨೬ ॥**

**ಯಶ್ಚ ವಾ ಯುಜ್ಯತೇ ರಾಮ ನಿಶೀಥೇ ಶಶಿನಾ ಸಹ　　॥ ೨೭ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಂಕರಗೀತಾ ಸೂಪವಾಸವಿಧಿರ್ನಾಮ ಷಷ್ಟಿತಮೋಽಧ್ಯಾಯಃ**

---

೨೬-೨೭. ಶುಕ್ಲಪಕ್ಷದಲ್ಲಿ ಯಾವಾಗ ಸೂರ್ಯನು ಉದಯಿಸುವನೋ ಆಗ ತಿಥಿಯೆಂದು ತಿಳಿಯಬೇಕು. ಸೂರ್ಯಾಸ್ತವಾದ ಮೇಲೆ ರಾತ್ರಿಯ ಹೊತ್ತು ಚಂದ್ರನೊಡನೆ ಯಾವ ನಕ್ಷತ್ರವು ಸಮಾಗಮವಾಗುವುದೋ ಆಗ ಆ ನಕ್ಷತ್ರ ಉದಯವಾಯಿತೆಂದು ತಿಳಿಯಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಶಂಕರಗೀತೆಯಲ್ಲಿ ಉಪವಾಸವಿಧಿಯೆಂಬ ಹೆಸರಿನ ಅರವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
### ಏಕಷಷ್ಟಿತಮೋಽಧ್ಯಾಯಃ

---

॥ ರಾಮ ಉವಾಚ ॥

**ತಸ್ಯ ಮಾಯಾಶರೀರಸ್ಯ ವಿಷ್ಣೋರಮಿತತೇಜಸಃ ।**
**ಪ್ರಾಪ್ನುವರ್ಹಿ ಕಥಂ ಸ್ಥಾನಂ ನಿತ್ಯಮಕ್ಷಯ್ಯಮವ್ಯಯಮ್ ॥ ೧ ॥**

॥ ಶಂಕರ ಉವಾಚ ॥

**ಅಖಂಡಕಾರಿಣೋ ರಾಮ ವಿಷ್ಣೋರಮಿತತೇಜಸಃ ।**
**ಪ್ರಾಪ್ನುವರ್ಹಿ ಪರಂ ಸ್ಥಾನಂ ನಿತ್ಯಮಕ್ಷಯ್ಯಮವ್ಯಯಮ್ ॥ ೨ ॥**

॥ ರಾಮ ಉವಾಚ ॥

**ಅಖಂಡಕಾರೀ ಭಗವನ್ಕಥಂ ಭವತಿ ಶಂಕರ ।**
**ಏತನ್ಮೇಸಂಶಯಂ ಬ್ರೂಹಿ ದೇವದೇವ ವೃಷಧ್ವಜ ॥ ೩ ॥**

---

### ಅರವತ್ತೊಂದನೆಯ ಅಧ್ಯಾಯವು.

೧. ಪರಶುರಾಮನು ಪ್ರಶ್ನಿಸುತ್ತಾನೆ :- ಅತ್ಯಂತ ತೇಜಸ್ವಿಯಾದ, ಮಾಯಾ ಶರೀರಿಯಾದ ಮಹಾವಿಷ್ಣುವಿನ, ನಿತ್ಯವೂ ಅಕ್ಷಯವೂಆದ ಶಾಶ್ವತಸ್ಥಾನವನ್ನು ಭಕ್ತರು ಹೇಗೆ ಹೊಂದುವರೋ ತಿಳಿಸಬೇಕು,''

೨. ಈಶ್ವರನು ಉತ್ತರ ಹೇಳುತ್ತಾನೆ :- '' ಮಹಾ ತೇಜಸ್ವಿಯಾದ, ಅಖಂಡಬ್ರಹ್ಮಾಂಡವ್ಯಾಪ್ತನಾದ ಮಹಾವಿಷ್ಣುವಿನ ಅಕ್ಷಯವೂ, ನಾಶರಹಿತವೂ ಆದ ಸ್ಥಾನವನ್ನು ಅಖಂಡಕಾರಿಗಳು (ಪರಮ ವಿಷ್ಣುಭಕ್ತರು) ಹೊಂದುತ್ತಾರೆ.

೩. ಪರಶುರಾಮನು ಕೇಳುತ್ತಾನೆ :- '' ಎಲೈ, ಪರಮೇಶ್ವರನೇ, ಭಗವಂತನ ಪೂಜಕನಾದ ಅಖಂಡಕಾರಿಯು ಎಂತಿರುವನೆಂಬ ವಿಚಾರದಲ್ಲಿ ಸಂದೇಹವಾಗಿದೆ, ದಯವಿಟ್ಟು ತಿಳಿಸು.''

॥ ಶಂಕರ ಉವಾಚ ॥

ಪಂಚಕಾಲವಿಧಾನಜ್ಞಸ್ತತ್ಕರ್ಮಕರಣೇ ರತಃ ।
ಅಖಂಡಕಾರೀ ಭವತಿ ರಾಮ ದಾನವನಾಶನ　　॥ ೪ ॥

॥ ರಾಮ ಉವಾಚ ॥

ಭಗವನ್ಪಂಚ ಕೇ ಕಾಲಾಃ ಕಥಂ ತೇಷಾಂ ತಥಾ ವಿಧಿಃ ।
ಏತನ್ಮೇ ದೇವದೇವೇಶ ಕೌತೂಹಲಮಪಾನುದ　　॥ ೫ ॥

॥ ಶಂಕರ ಉವಾಚ ॥

ರಾಮಾಭಿಗಮನಂಪೂರ್ವಮುಪಾದಾನಮತಃ ಪರಂ ।
ಇಜ್ಯಾಸ್ವಾಧ್ಯಾಯಕಾಲೌ ಚ ಯೋಗಕಾಲಸ್ತಥೈವ ಚ　　॥ ೬ ॥

ತೇಷಾಂ ಪ್ರತ್ಯೇಕಶೋ ವಕ್ಷ್ಯೇ ವಿಧಿಂ ತೇ ಭೃಗುನಂದನ ।
ತಾನ್ನಿಬೋಧ ಮಹಾಭಾಗ ಪ್ರಯತೇನಾಂತರಾತ್ಮನಾ　　॥ ೭ ॥

---

೪, ಪರಮೇಶ್ವರನು ಹೇಳುತ್ತಾನೆ :- "ಎಲೈ, ದಾನವಾಂತಕನಾದ ಭಾರ್ಗವರಾಮನೇ ಕೇಳು. ಪಂಚಕಾಲ ಪೂಜಾವಿಧಾನವನ್ನು ತಿಳಿದು ಅದರಂತೆ ಆ ಕರ್ಮವನ್ನು ಮಾಡುವವನು ಅಖಂಡಕಾರಿಯೆಂದೆನ್ನಿಸುತ್ತಾನೆ."

೫. ಪರಶುರಾಮನು ಹೇಳುತ್ತಾನೆ :- "ಸ್ವಾಮಿ, ಪಂಚಕಾಲಗಳು ಯಾವುವು ? ಅದರ ಪೂಜಾವಿಧಿ ಹೇಗೆ ? ದಯವಿಟ್ಟು ಈ ವಿಚಾರದಲ್ಲಿರುವ ನನ್ನ ಕುತೂಹಲವನ್ನು ತಿಳಿದು ಉತ್ತರಹೇಳು.

೬-೭. ಈಶ್ವರನು ಅದಕ್ಕೆ ಸಮಾಧಾನ ಹೇಳುತ್ತಾನೆ :- ಮೊದಲು ಅಭಿಗನಕಾಲ. ಆಮೇಲೆ ಉಪಾದಾನ ಕಾಲ. ಬಳಿಕ ಇಜ್ಯಾಕಾಲ. ಅನಂತರ ಸ್ವಾಧ್ಯಾಯಕಾಲ. ತದನಂತರ ಯೋಗಕಾಲವೆಂದು ಪಂಚಕಾಲಗಳು ಉಕ್ತವಾಗಿರುವುವು. ಅವುಗಳ ವಿಧಿಯನ್ನು ನಿನ್ನೊಡನೆ ವಿವರಿಸಿ ಹೇಳುತ್ತೇನೆ. ಶುದ್ಧವಾದ ಹೃದಯದಿಂದ ಕೇಳು.

ರಾಮ ಕಲ್ಯೇ ಸಮುತ್ಥಾಯ ದಂತಧಾವನಪೂರ್ವಕಂ ।
ಸ್ನಾನಂ ಕೃತ್ವಾ ಯಥಾಶಾಸ್ತ್ರಂ ಸ್ವಾಚಾಂತಃ ಸುಸಮಾಹಿತಃ ॥ ೮ ॥

ಯಶ್ಚೇಹ ಭಗವನ್ಮಂತ್ರಂ ಪಠನ್ದೇವಗೃಹಂ ವಿಶೇತ್ ।
ಪ್ರವಿಶ್ಯಾದ್ಯ ದ್ರಾಮ ಜಾನುಭ್ಯಾಂ ಪಾಣಿಭ್ಯಾಂ ಶಿರಸಾ ತಥಾ ॥ ೯ ॥

ಓಂಕಾರಂ ಸನಮಸ್ಕಾರಂ ಪ್ರಯುಜ್ಯ ಸುಸಮಾಹಿತಃ ।
ಯೋಗಕಾಲಂ ತು ಸಂದಧ್ಯಾದುಪಾದಧ್ಯಾದನಂತರಂ ॥ ೧೦ ॥

ರಾಮಾಭಿಗಮಕಾಲಂ ತು ತತ್ರ ಮಂತ್ರಂ ತಥಾಽರ್ಪಯೇತ್ ।
ಭಗವತೋ ಬಲೇನೇತಿ ವೀರ್ಯೇಣೈತೇನ ತೇಜಸಾ ॥ ೧೧ ॥

ಸಂಪ್ರಕೀರ್ತಿತತೋಯೇನ ವೇದಿಂ ಪ್ರಕ್ಷಾಳಯೇದ್ಬುಧಃ ।
ಸೌವರ್ಣೀಂ ರಾಜತೀಂ ತಾಮ್ರೀಂ ಮೃಣ್ಮಯೀಮಾಯಸೀಂ ತಥಾ ॥ ೧೨ ॥

ಶಿಲಾಂ ಚಂದನಜಾಂ ವಾಪಿ ದೇವದಾರುಭವಾಮಥ ।
ಶಿಂಶಪಾಕ್ಷೋಟಸರಲ ಕದಂಬಾರ್ಜುನಜಾಮಥ ॥ ೧೩ ॥

ಸಾಲ್ವಾಶ್ವಕರ್ಣಜಾಂ ರಾಮ ತ್ವಾಯಾಮೇನ ತಥೈವ ಚ ।
ವಾಮಪ್ರವಾಹಾಂ ಪ್ರಕ್ಷಾಲ್ಯ ಪೂರ್ಣಕುಂಭಾನ್ನವಾಂಸ್ತತಃ ॥ ೧೪ ॥

---

೮-೧೦. ಎಲೈ, ಪರಶುರಾಮನೇ ಕೇಳು. ಪ್ರಾತಃಕಾಲ ಹೊತ್ತು ಹುಟ್ಟುವ ಮುಂಚೆಯೇ ಎದ್ದು ಹಲ್ಲುಜ್ಜಿ ಮುಖ ತೊಳೆದುಕೊಂಡು ಸ್ನಾನಮಾಡಿ, ಶಾಸ್ತ್ರೀಯವಾಗಿ ಆಚಮನಮಾಡಿ ಸಮಾಧಾನಚಿತ್ತದಿಂದ "ಯಶ್ಚೇಹ ಭಗವಾನ್" ಎಂಬ ವೇದ ಮಂತ್ರದಿಂದ ದೇವಾಲಯವನ್ನು ಪ್ರವೇಶಮಾಡಿ ಮೊಳಕಾಲು, ಮೊಳಕೈ, ತಲೆಗಳು ನೆಲ ಸೋಕುವಂತೆ ದೀರ್ಘದಂಡಪ್ರಣಾಮ ಮಾಡಿ ಓಂಕಾರದಿಂದ ನಮಸ್ಕರಿಸಿ ಬಳಿಕ ಯೋಗಕಾಲವನ್ನು ಅನುಸಂಧಾನಮಾಡಬೇಕು.

೧೧-೧೯. ಎಲೈ, ಪರಶುರಾಮನೆ ಕೇಳು. ಅಭಿಗಮನಕಾಲದ ಪೂಜಾಕ್ರಮವನ್ನು ತಿಳಿಸುತ್ತೇನೆ. 'ಭಗವತೋ ಬಲೇನವೀರ್ಯೇಣ ತೇಜಸಾ' ಎಂಬ ಮಂತ್ರದಿಂದ

**ಕಲ್ಪನೀಯಾಸ್ತು ಕಲಶಾಶ್ಚತ್ವಾರೋ ಭೃಗುನಂದನ ।**
**ಸೌವರ್ಣಾ ರಾಜತಾಸ್ತಾಮ್ರಾ ಅಥವಾಽಪಿ ಹಿ ರೀತಿಜಾಃ ॥ ೧೫ ॥**

**ಪಾದ್ಯಮಾಚಮನೀಯಂ ಚ ತ್ವರ್ಘ್ಯಂ ಸ್ನಾನೀಯಮೇವ ಚ ।**
**ಪಾದ್ಯಾತ್ಪಾದ್ಯಂ ತು ದಾತವ್ಯಂ ಸ್ನಾನೀಯಾತ್ಸ್ನಾನಮೇವ ಚ ॥ ೧೬ ॥**

**ತಥಾಽಽಚಮನೀಯಾಖ್ಯಾದ್ದೇಯಮಾಚಮನಂ ಭವೇತ್ ।**
**ದಾನಂ ಪ್ರಣಯನಂ ಪ್ರೀತಿರ್ವಿಸರ್ಗಂ ವಿಸ್ತರಂ ತಥಾ ॥ ೧೭ ॥**

**ತರ್ಪಣಂ ಚಾರ್ಹಣಂ ಚೈವ ತ್ವರ್ಘ್ಯಾದೇತಾನಿ ಕಾರಯೇತ್ ।**
**ದ್ವಾದಶಾಕ್ಷರಕಂ ಮಂತ್ರಂ ತತೋ ಜಪ್ತ್ವಾ ಸಮಾಹಿತಃ ॥ ೧೮ ॥**

**ತತಃ ಪವಿತ್ರಮಂತ್ರೇಣ ವೇದಿಮಭ್ಯುಕ್ಷಯೇದ್ದ್ವಿಜ ।**
**ಆತ್ಮಾನಂ ಚ ತಥಾ ಭೋಗಾನ್ಕುರ್ಯಾನ್ಮಾರ್ಗತ್ರಯಂ ತತಃ ॥ ೧೯ ॥**

---

ಮೊದಲು ದೇವರ ಜಗುಲಿಯನ್ನು ಸಾರಿಸಬೇಕು. ಜಗುಲಿಯೆಂದರೆ ದೇವರ ಮಂದಾಸನವೆಂದಾದರೂ ಅರ್ಥವಾಗುವುದು. ಈ ಮಂದಾಸನದಲ್ಲಿ ಒಂಭತ್ತು ವಿಧವುಂಟು. ಚಿನ್ನ, ಬೆಳ್ಳಿ, ತಾಮ್ರ, ಮಣ್ಣು, ಕಬ್ಬಿಣ ಕಲ್ಲು, ಗಂಧದಮರ, ದೇವದಾರು ವೃಕ್ಷ ಶಿಂಶುಪಾವೃಕ್ಷಾದಿಗಳಲ್ಲಾವುದಾದರೂ ಒಂದು ಅಂತೂ ಒಂಭತ್ತು ವಿಧದ ಮರಗಳಲ್ಲಿ ಮಂದಪಾಸವನ್ನು ಮಾಡಿಸಬಹುದು. ಈರೀತಿ ವೇದಿಕಾಶುದ್ಧಿಯಾದ ಬಳಿಕ ಅದರ ಮೇಲೆ ಒಂಭತ್ತು ಪೂರ್ಣಕಲಶಗಳನ್ನಿಡಬೇಕು. ಅನಂತರ ಪಾದ್ಯ ಅರ್ಘ್ಯ ಆಚಮನೀಯಸ್ನಾನಾದಿಗಳಿಗೋಸ್ಕರ ನಾಲ್ಕು ಬೇರೆ ಕಲಶಗಳನ್ನಿಡಬೇಕು. ಇವು ಚಿನ್ನ, ಬೆಳ್ಳಿ, ತಾಮ್ರ, ಪಾದರಸಗಳಲ್ಲಾವುದಾದರೂ ಒಂದಾಗಿರಬಹುದು. ಪಾದ್ಯಕ್ಕಾಗಿ ಸ್ಥಾಪಿಸಲ್ಪಟ್ಟ ಪಾತ್ರೆಯಿಂದಲೇ ಪಾದ್ಯ ಜಲಗಳನ್ನೂ, ಅರ್ಘ್ಯಪಾತ್ರೆಯಿಂದ ಅರ್ಘ್ಯೋದಕವನ್ನೂ. ಸ್ನಾನಕಲಶದಿಂದ ಸ್ನಾನ ಜಲವನ್ನು ' ತೆಗೆದುಕೊಳ್ಳಬೇಕು. ಅನಂತರ ದಾನ,ಪ್ರಣಯನಾದಿಗಳಿಗೆ ಬೇಕಾಗುವ ನೀರನ್ನು ಅರ್ಘ್ಯ ಕಲಶದಿಂದ ಸ್ವೀಕರಿಸಬೇಕು. ಬಳಿಕ ದ್ವಾದಶಾಕ್ಷರಮಂತ್ರ (ಓಂ ನಮೋ ಭಗವತೇ ವಾಸುದೇವಾಯ)ದಿಂದ ಯಥಾಶಕ್ತಿ ಜಪಮಾಡಿದ ಬಳಿಕ 'ಪವಿತ್ರಮಂತಃ, ಪ್ರವಿತ್ರಂತೇ, ಎಂಬ ಮಂತ್ರದಿಂದ ಜಗಲಿ (ದೇವರ ಮುಂದೆ) ಯನ್ನಲಂಕರಿಸಬೇಕು. ಬಳಿಕ ಪರಮಾತ್ಮನನ್ನು ವಸ್ತ್ರಾದಿ ಪೂಜಾಭೋಗದಿಂದಲೂ ಮಾರ್ಗತ್ರಯ ಪೂಜೆಯಿಂದಲೂ ತೃಪ್ತಿಪಡಿಸಬೇಕು.

ವಿದ್ಯಾ ಜ್ಞಾನಂ ತತಃ ಕರ್ಮ ಬ್ರಹ್ಮಚಕ್ರಂ ತಥೈವ ಚ ।
ಮಾರ್ಗತ್ರಯಂಚ ಕರ್ತವ್ಯಂ ನಾಮಾರ್ಘ್ಯ ಕಲಶಾನ್ಸದಾ ॥ ೨೦ ॥

ಪ್ರಾಣಿಮಾರ್ಗಂ ಕೂರ್ಚಮಾರ್ಗಂ ಮಧುಮಾರ್ಗಂ ತಥೈವ ಚ ।
ಉಶೀರಮೂಲಜಂ ಕೂರ್ಚಂ ಜೀವನ್ಯೋಽಪಾಲಸಂಭವಂ ॥ ೨೧ ॥

ಜೀವಶ್ಚಕ್ರಮಣಂಚಾಪಿ ಕರ್ತವ್ಯಂ ಭೃಗುನಂದನ ।
ಪ್ರತಿಸ್ನಾನಂ ತತಃ ಕಾರ್ಯಂ ಸಮಾನಾನಾಂ ಕ್ರಮಾದ್ಭವೇತ್ ॥ ೨೨ ॥

ತಥೈವ ಪಾದಪೀಠಾನಾಂ ಪ್ರಭವೇನ ಮಹಾಭುಜ ।
ಆಸನಾನ್ಯಥ ಕಾರ್ಯಾಣಿ ರತ್ನಚಿತ್ರಾಣಿ ಭಾರ್ಗವ ॥ ೨೩ ॥

ಸೌವರ್ಣಾನ್ಯಥ ರೌಪ್ಯಾಣಿ ತಾಮ್ರಶೈಲಮಯಾನಿಚ ।
ತತಸ್ತ್ವಾವಾಹನಂ ಕಾರ್ಯಂ ತತೋ ಭಿಗಮನಂ ತತಃ ॥ ೨೪ ॥

ನಮಸ್ಕಾರಸ್ತತಃ ಕಾರ್ಯಃ ಪ್ರಣೀತೇನ ತತಃ ಪುನಃ ।
ಬ್ರಹ್ಮಶ್ಚಕ್ರಾಮನೌ ಮಂತ್ರಂ ಪ್ರಭವೇನಾಪಿ ಯೇನ ಚ ॥ ೨೫ ॥

ತತೋ ಜಪ್ತ್ವಾ ಮಹಾಭಾಗ ಪ್ರಣವೇನ ನಿವೇದಯೇತ್ ।
ಆಸನೈರರ್ಚಯೇದ್ದೇವಂ ತತಃ ಪ್ರಯತಮಾನಸಃ ॥ ೨೬ ॥

ಅರ್ಘ್ಯೈರದ್ಭಿಶ್ಚ ತತೋ ಭೋಗ್ಯೈಃ ಸರ್ವೈರನಂತರಂ ।
ಪಾದ್ಯಪ್ರತಿಗ್ರಹೇಣಾಥ ಪಾದ್ಯಾಭಿಶ್ಚಾಪ್ಯನಂತರಂ ॥ ೨೭ ॥

---

೨೦-೩೪. ವಿದ್ಯಾ, ಜ್ಞಾನ, ಬ್ರಹ್ಮಚಕ್ರ ಎಂಬ ಮೂರು ಮಾರ್ಗಗಳುಳ್ಳ ಅರ್ಘ್ಯಕಲಶಗಳನ್ನಿಡಬೇಕು. ಇದಕ್ಕೆ ಪ್ರಾಣಿಮಾರ್ಗ, ಕೂರ್ಚಮಾರ್ಗ, ಮಧು ಮಾರ್ಗವೆಂದು ಹೇಳುವರು ಈ ಕೂರ್ಚವು ಲಾಮಂಚದಿಂದ ಮಾಡಲ್ಪಟ್ಟಿರಬೇಕು. ಭಗವದಾವಾಹನೆಯಿಂದ ಉದ್ವಾಸನೆಯ ಪರ್ಯಂತರವೂ ಪ್ರತಿಸ್ನಾನ ಕರ್ಮವನ್ನು ಸಮಾನ ತಂತ್ರದಿಂದ ಕೂರ್ಚದಿಂದಲೇ ಮಾಡಬೇಕು. ಬಳಿಕ ಪಾದಪೀಠ, ಆಸನ

**ಪಾದುಕಾಭಿಸ್ತತೋ ರಾಮ ದೇವದೇವಂ ಸಮರ್ಚಯೇತ್ ।**
**ತತಸ್ತ್ವಾಚಮನೀಯಾರ್ಥಂ ದೇವದೇವಪ್ರತಿಗ್ರಹಂ ॥ ೨೮ ॥**

**ದೇವಮಾಚಮನೀಯಂಚ ಪಾದಪೀಠಾಂಸ್ತಥೈವಚ ।**
**ದಂತಕಾಷ್ಠಂ ತತೋ ದದ್ಯಾಜ್ಜಿಹ್ವಾನಿರ್ಲೇಖನಂ ತತಃ ॥ ೨೯ ॥**

**ಗಂಡೂಷಣಂ ತತೋ ದದ್ಯಾನ್ಮುಖಪ್ರಕ್ಷಾಳನಂ ತಥಾ ।**
**ಭೂಯಸ್ತ್ವಾಚಮನಂ ದೇಯಂ ತರ್ಪಣಂ ಚಾಪ್ಯನಂತರಂ ॥ ೩೦ ॥**

**ಪುಷ್ಪಂದೀಪಮಲಂಕಾರಂ ಧೂಪಪ್ರಕರಮೇವ ಚ ।**
**ನಿವೇದ್ಯ ವಿಧಿವತ್ಸರ್ವಂ ತತಃ ಪಶ್ಚಾನ್ನಿವೇದಯೇತ್ ॥ ೩೧ ॥**

**ಸೇವ್ಯಾನಿ ರಾಮ ಬೀಜಾನಿ ತ್ವರ್ಹಣೀಯಂ ತತಃ ಪುನಃ ।**
**ಮಧುಪರ್ಕಂ ತತೋ ದದ್ಯಾದ್ದಧಿ ಸರ್ಪಿಸ್ತಥಾ ಮಧು ॥ ೩೨ ॥**

**ದಧ್ಯಲಾಭೇ ಪಯಃ ಕಾರ್ಯಂ ಮಧ್ವಲಾಭೇ ತಥಾ ಗುಡಂ ।**
**ಘೃತಪ್ರತಿನಿಧಿರ್ನಾಸ್ತಿ ತತ್ರ ಯತ್ನಾತ್ಸಮರ್ಚಯೇತ್ ॥ ೩೩ ॥**

---

ಗಳನ್ನು ಕಲ್ಪಿಸಬೇಕು. ಅನಂತರ ಭಗವದಾವಾಹನ, ಅಭಿಗಮನ ನಮಸ್ಕಾರಗಳನ್ನು 'ಬ್ರಹ್ಮಶ್ಚಕ್ರಾಮತಾ' ಎಂಬ ಮಂತ್ರದಿಂದ ನಮಸ್ಕರಿಸಬೇಕು. ಅನಂತರ ಪ್ರಣವ ಜಪವನ್ನು ಮಾಡಿಕೊಂಡು ನಿವೇದನಮಾಡಬೇಕು. ಆ ಬಳಿಕ ಆಸನ, ಅರ್ಘ್ಯ, ಪಾದ್ಯಗಳನ್ನು ಸಮರ್ಪಿಸಬೇಕು. ಬಳಿಕ ಆಚಮನೀಯವನ್ನು ಸಮರ್ಪಿಸಿ ಪಾದ ಪೀಠಗಳನ್ನೂ ದಂತಕಾಷ್ಠ (ಹಲ್ಲುಜ್ಜುವ ಉತ್ತರಣೀ ಕಡ್ಡಿ)ಗಳನ್ನೂ, ಜಿಹ್ವಾನಿರ್ಲೇಖ ನವನ್ನು (ನಾಲಿಗೆ ಉಜ್ಜುವ ಕಡ್ಡಿ) ಗಂಡೂಷಣ (ಬಾಯಿಮುಕ್ಕಳಿಸಿ ಉಗುಳುವ ನೀರು) ವನ್ನೂ, ಮುಖ ಪ್ರಕ್ಷಾಳನ ಸೇವೆಯನ್ನೂ ಸಮರ್ಪಿಸಿ, ಪುನಃ ಆಚಮನೀ ಯೋದಕವನ್ನೂ, ತರ್ಪಣವನ್ನೂ ಸಮರ್ಪಿಸಿ, ಪುಷ್ಪ, ದೀಪ, ಅಲಂಕಾರ, ಧೂಪ ಗಳನ್ನು ಸಲ್ಲಿಸಿ ವಿಧಿವತ್ತಾಗಿ ನೈವೇದ್ಯಮಾಡಿ ಈರೀತಿ ಪೂಜೆ ಬೆಳೆದ ಬಳಿಕ, ಮಧು ಪರ್ಕ, ಮೊಸರು ತುಪ್ಪಗಳನ್ನು ನಿವೇದಿಸಬೇಕು. ಮೊಸರಿಲ್ಲದಿದ್ದರೆ ಹಾಲನ್ನೂ, ಜೇನುತುಪ್ಪ ಇಲ್ಲದಿದ್ದರೆ ಬೆಲ್ಲವನ್ನು ನೈವೇದ್ಯಮಾಡಬಹುದು. ತುಪ್ಪದ ಬದಲು ಇನ್ನಾವ ಪದಾರ್ಥವನ್ನೂ, ನಿವೇದಿಸಕೂಡದು. ಆದ್ದರಿಂದ ತುಪ್ಪವನ್ನು ತರಲೇ

ಏಕಾಂಗೋ ವಾ ಸಮಸ್ತೋವಾ ಮಧುಪರ್ಕೋ ವಿಧೀಯತೆ ।
ವ್ಯಂಗಂ ವರ್ಜ್ಯಂ ಪ್ರಯತ್ನೇನ ನಿತ್ಯಮೇವ ವಿಜಾನತಾ ॥ ೩೪ ॥

ದರ್ಪಣಂ ತು ತತೋ ದದ್ಯಾತ್ತತೋ ನಿರ್ಭರ್ತ್ಸನಂ ಬುಧಃ ।
ತತಸ್ತ್ವಾಚಮನೀಯಂ ಚ ವಿಧಿವತ್ಸುಸಮಾಹಿತಃ ॥ ೩೫ ॥

ಹಸ್ತನಿಷ್ಪಂಸನಾರ್ಥಾಯ ತತೋ ದದ್ಯಾತ್ತು ಗಂಧಕಂ ।
ತತಃ ಪಶುಂ ಬುಧಃ ಕುರ್ಯಾದ್ಯಥಾವಿನ್ಮಾಧುಪಾರ್ಕಿಕಂ ॥ ೩೬ ॥

ಮಾಧುಪಾರ್ಕಿಕಮಶ್ವತ್ಥಪತ್ರಂ ವಾ ನಿವೇದಯೇತ್ ।
ಘೃತಾವದ್ಯಂ ತತೋ ದದ್ಯಾತ್ತಾಂಬೂಲಂಚಾಪ್ಯನಂತರಂ ॥ ೩೭ ॥

ಮಾತ್ರಾಂಚ ದಕ್ಷಿಣಾರ್ಥಾಯ ಬ್ರಾಹ್ಮಣಾಯ ನಿವೇದಯೇತ್ ।
ಮಂಗಲಾನಿಯಥಾಶಕ್ತ್ಯಾ ತತೋ ದೇವೇ ನಿವೇದಯೇತ್ ॥ ೩೮ ॥

ತತೋಽಭಿಗಮಕಾಲಂತು ಸಂದಧದ್ಯಾತ್ಪುರುಷೋತ್ತಮೆ ।
ಉಪಾದಾನಮಥೋ ದದ್ಯಾತ್ಕುರ್ಯಾಚ್ಚೈವ ವಿಸರ್ಜನಂ ॥ ೩೯ ॥

ತತೋಽಗ್ನಿಶರಣಂ ಗತ್ವಾ ವಹ್ನಿಂ ಸಂತರ್ಪದೇದ್ಬುಧಃ ।
ಬ್ರಾಹ್ಮಣಾನಾಂ ಯಥಾಶಕ್ತಿ ದಾನಂ ದದ್ಯಾರನಂತರಂ ॥ ೪೦ ॥

---

ಬೇಕು. ಈರೀತಿ ಮಧುಪರ್ಕ ಪೂಜೆಯನ್ನು ಏಕಾಂಗ (ಒಂದೇರೀತಿ) ರೂಪವಾಗಲೀ, ಸಮಸ್ತ (ತುಪ್ಪ, ಜೇನು ಮೊಸರು ಈ ಮೂರು) ರೂಪವಾಗಲೀ ಮಾಡಬೇಕು. ಬುದ್ಧಿಶಾಲಿಯಾದವನು ಪ್ರಯತ್ನಪಟ್ಟು ಈರೀತಿ ಪೂಜಿಸಬೇಕು.

೩೫ ೪೧. ಬಳಿಕ ಕನ್ನಡಿಯನ್ನು ತೋರಿಸಿ ಆಚಮನೀಯನ್ನು ವಿಧಿವತ್ತಾಗಿ ಸಮರ್ಪಿಸಬೇಕು. ಹಸ್ತ ಶುದ್ಧಿಗಾಗಿ ಗಂಧವನ್ನೂ, ಬಳಿಕ ಮಧುಪರ್ಕವನ್ನೂ ಸಲ್ಲಿಸಬೇಕು. ಮಧುಪರ್ಕದ ಬದಲು ಅರಳಿಎಲೆಯನ್ನು ಸಲ್ಲಿಸಿದರೂ ಸಾಕು. ಬಳಿಕ ತಾಂಬೂಲ ಸಮರ್ಪಣೆಮಾಡಿ ಬ್ರಾಹ್ಮಣರಿಗೆ ದಕ್ಷಿಣೆಕೊಡಬೇಕು. ಬಳಿಕ, ಮಂಗಳ ನೀರಾಜನವನ್ನು ಮಾಡಬೇಕು. ಈ ರೀತಿಯಾಗಿ ಅಭಿಗಮಕಾಲದ ಪೂಜೆಯನ್ನು

ಏತನ್ಮಯಾ ತೇ ಕಥಿತಂ ಸಮಗ್ರಂ
ಯಥಾನುಪೂರ್ವ್ಯಾऽಭಿಗಮಸ್ಯ ಕಾಲಂ ।
ಗಚ್ಛೇದುಪಾದಾನಕೃತ ಪ್ರಯತ್ನಸ್ತತೋ
ಯಥಾವದ್ಭೃಗುವಂಶಚಂದ್ರ　　　　॥ ೪೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಶಂಕರಗೀತಾಸ್ವಭಿಗಮಕಾಲೋ
ನಾಮೈಕಷಷ್ಟಿತಮೋऽಧ್ಯಾಯಃ



---

ಸ್ವಾಮಿಗೆ ಸಮರ್ಪಿಸಬೇಕು. ಬಳಿಕ ಉಪಾದಾನದ ಪೂಜೆಯನ್ನು ಮಾಡಿ ವಿಸರ್ಜನ ಮಾಡಿದ ಬಳಿಕ, ಅಗ್ನಿಪೂಜೆ (ಅಗ್ನಿಮುಖ) ಯನ್ನು ನೆರವೇರಿಸಿ, ಬ್ರಾಹ್ಮಣರಿಗೆ ಯಥಾಶಕ್ತಿಯಾಗಿ ದಾನವನ್ನು ಕೊಡಬೇಕು. ಎಲೈ, ಭಾರ್ಗವರಾಮನೇ! ಈರೀತಿ ಅಭಿಗಮಕಾಲ ಪೂಜಾವಿಧಿಯನ್ನು ಅನುಪೂರ್ವಿಯಾಗಿ ಸಮಗ್ರವಾಗಿ ನಿನ್ನೊಡನೆ ಹೇಳಿದ್ದೇನೆ. ಈರೀತಿ ಈ ವಿಧವಾದ ಪೂಜೆಯಾದ ಬಳಿಕ ಉಪಾದಾನದ ಕಾಲ ಪೂಜಾಪ್ರಯತ್ನಮಾಡಿ, ಅದನ್ನು ಯಥಾವಿಧಿಯಾಗಿ ನೆರವೇರಿಸಬೇಕೆಂದು ಈಶ್ವರನು ಪರಶುರಾಮನಿಗೆ ಹೇಳಿದನು

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಶಂಕರಗೀತೆಯಲ್ಲಿ ಅಭಿಗಮಕಾಲವೆಂಬ
ಹೆಸರಿನ ಅರವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ದ್ವಿಷಷ್ಟಿತಮೋಽಧ್ಯಾಯಃ ॥

॥ ಶಂಕರ ಉವಾಚ ॥

ಭೋಗಾನಾಮರ್ಜನಂ ಕಾರ್ಯಂ ತತೋ ರಾಮ ಸ್ವಕರ್ಮಣಾ ।
ಸ್ಥಿರಾಣಾಮಸ್ಥಿರಾಣಾಂ ಚ ಯಥಾವದ್ಭೃಗುನಂದನ ॥ ೧ ॥

ಆಸನಾದ್ಯಾಸ್ತು ಯೇ ಭೋಗಾಃ ಕಾಲೇನಾಪ್ಯವಿನಾಶಿನಃ ।
ಸ್ಥಿರಾಸ್ತೇ ರಾಮನಿರ್ದಿಷ್ಟಾ ಪರಿಶಿಷ್ಟಾಸ್ತಥಾ ಚರಾಃ ॥ ೨ ॥

ಪುಷ್ಪಂ ಪತ್ರಂ ಫಲಂ ಮೂಲಂ ತಥಾ ಹರಿತಕಂ ಶುಭಂ ।
ಉದಕಂ ಚಾರ್ಚನೀಯಂ ಸ್ಯಾತ್ತಸ್ಮಿನ್ನಹನಿ ಭಾರ್ಗವ ॥ ೩ ॥

---

## ಅರವತ್ತೆರಡನೆಯ ಅಧ್ಯಾಯವು.

೧-೩. ಪರಮೇಶ್ವರನು ಹೇಳುತ್ತಾನೆ:- "ಎಲೈ, ಭಾರ್ಗವರಾಮನೆ, ಕೇಳು. ತಾನು ಮಾಡುವ ಕರ್ಮವಿಶೇಷದಿಂದಲೇ, ಸ್ಥಿರಭೋಗ, ಅಸ್ಥಿರಭೋಗಗಳನ್ನು ಸಂಪಾದಿಸುವ ಪ್ರಯತ್ನಮಾಡಬೇಕು. ಆಸನ ಮೊದಲಾದ ಭೋಗಗಳಾವುವೋ, ಅವು ಯಾವಾಗಲೂ ನಾಶವಾಗತಕ್ಕವುಗಳಲ್ಲದ್ದರಿಂದ ಅವುಗಳಿಗೆ ಸ್ಥಿರಭೋಗಗಳೆಂದೂ ಉಳಿದವುಗಳಿಗೆ ಚರಭೋಗಗಳೆಂದೂ ಹೆಸರು. ಉಪಾದಾನಕಾಲದ ಪೂಜೆಯಲ್ಲಿ ಹೂವು, ಪತ್ರೆ, ಗೆಡ್ಡೆ ಗೆಣಸು, ಉದಕಗಳಿಂದ ಭಗವತ್ಪೂಜೆ ಮಾಡಬೇಕು.

ಉಪಾದಾನಾಯ ನಿಷ್ಕ್ರಾಂತೇ ಕುಟುಂಬಿನ್ಯಥ ಸತ್ವರಂ ।
ಕುಟುಂಬಿನೀ ಸುಪ್ರಯಾತಾ ಧೌತೋಪಸ್ಕರಭಾಜನಾ ॥ ೪ ॥

ಸಾಧ್ಯಾನಾಂ ರಾಮ ಬೀಜಾನಾಂ ಪಕೋಶ್ಚ ಸುಕೃತಸ್ಯ ಚ ।
ಶಾಕಾನಾಂ ವ್ಯಂಜನಾನಾಂ ಚ ಸ್ವಾರ್ಜಿತಾನಾಂ ಗತೇಽಹನಿ ॥ ೫ ॥

ಶಕ್ತಿಂ ಕುರ್ಯಾತ್ತದಾ ತಸ್ಯ ವಹ್ನಿನೋಪಧನೇನ ಚ ।
ದೇಶೇ ಶುಚೌ ಸುಪ್ರಯಾತಾ ಸುಸಹಾಯಗುಣಾನ್ವಿತಾ ॥ ೬ ॥

ಸರ್ವಂ ಪ್ರಕ್ಷಾಲಿತಂ ಕಾರ್ಯಂ ಕೇಶಕೀಟಾದಿವರ್ಜಿತಂ ।
ಭೂಮಾವನುಪಲಿಪ್ತಾಯಾಂ ಸ್ಥಾಪ್ಯಂ ರಾಮ ನ ಕಿಂಚನ ॥ ೭ ॥

ಸರ್ವಂ ಸಾಧ್ಯಮಥಾನ್ನಾದ್ಯಂ ಗಂಧವರ್ಣರಸಾನ್ವಿತಂ ।
ನಿತ್ಯಂ ಪರಿಪಚೇದ್ರಾಮ ನಾಸ್ವಾದ್ಯಂ ಕೇನಚಿತ್ ಕ್ವಚಿತ್ ॥ ೮ ॥

ಉಪಾದಾನಮಥಾದಾಯ ಪ್ರವಿಶ್ಯ ಚ ಗೃಹೀ ಗೃಹಂ ।
ಶುಚೌ ಪ್ರಕ್ಷಾಲಿತಂ ಸರ್ವಂ ಚೋಪಾದಾನಮುಪನ್ಯಸೇತ್ ॥ ೯ ॥

---

೪-೯. ಗೃಹಸ್ಥನಾದವನು ಉಪಾದಾನ (ದೇವರ ನಿವೇದನಕ್ಕಾಗಿ ಮಾಡುವ ಪಾಕ) ಪೂಜೆಗೋಸ್ಕರ ದೇವರ ಮನೆಗೆ ಹೊರಟ ಬಳಿಕ ಆತನ ಗೃಹಿಣಿಯು ಪರಿಶುದ್ಧಳಾಗಿ ಸ್ನಾನಮಾಡಿದವಳಾಗಿ ಶುಭ್ರವಾದ ಮಡೀಬಟ್ಟೆಯನ್ನುಟ್ಟುಕೊಂಡು, ತರಕಾರಿ ಅಕ್ಕಿ, ಬೇಳೆ ಮುಂತಾದ ಸಾಮಾನುಗಳನ್ನು ಒಲೆಯ ಮೇಲಿಟ್ಟು ಚೆನ್ನಾಗಿ ಬೇಯಿಸಬೇಕು. ಕೂದಲು, ಹುಳು ಹುಪ್ಪಟೆಗಳಿಲ್ಲದಂತೆ ಪದಾರ್ಥಗಳನ್ನು ತೊಳೆದು ಸಾರಿಸಿದ ಜಾಗದಲ್ಲಿಟ್ಟುಕೊಳ್ಳಬೇಕು ಅನ್ನವೇ ಮುಂತಾದುವುಗಳು ಹೊಂಬಣ್ಣವಾಗಿ ಘಮ ಘಮಿಸುತ್ತಿರಬೇಕು ನಿವೇದನಕ್ಕಾಗಿ ಸಿದ್ಧವಾದ ಅನ್ನ ವ್ಯಂಜನಾದಿಗಳನ್ನು ಯಾರೂ ಯಾವ ಕಾರಣದಿಂದಲೂ ಮೂಸಿನೋಡಬಾರದು. ಈರೀತಿ ಶುದ್ಧವಾದ ಪವಿತ್ರಪಾಕವನ್ನು ಗೃಹಸ್ಥನು ಮಂಡಲಮಾಡಿದ ಜಾಗದಲ್ಲಿ ದೇವರ ಮುಂದಿಟ್ಟು ಈ ಉಪಾದಾನ ಪದಾರ್ಥಗಳ ಮೇಲೆ ಪ್ರೋಕ್ಷಿಸಿ ಸ್ವಾಮಿಗೆ ನಿವೇದಿಸಬೇಕು. ಈರೀತಿ ನಿವೇದನ ಮಾಡಿದ ಅನ್ನ ಭಕ್ಷ್ಯಾದಿಗಳನ್ನು ತೆಗೆದುಕೊಂಡು ಹೋಗಿ ಅಡಿಗೆಯ

ಸುಪ್ರಕ್ಷಾಲ್ಯಂ ತಥಾ ಭಾಗಂ ಪವಿತ್ರೇಣ ಸಮುತ್ಕ್ಷಿಪೇತ್ ।
ಏವಂ ಕೃತ್ವಾ ಹ್ಯುಪಾದಾನಂ ಸ್ನಾಯಾತ್ತು ವಿಧಿನಾ ತತಃ ॥ ೧೦ ॥

ಧೌತವಾಸಾಃ ಸುಪ್ರಯತಃ ಸ್ವಾಚಾಂತಃ ಸುಸಮಾಹಿತಃ ।
ಪ್ರವಿಶ್ಯ ದೇವತಾವೇಶ್ಮ ಪ್ರಾಗ್ವದ್ಭೃಗುಕುಲೋದ್ವಹ ॥ ೧೧ ॥

ನಮಸ್ಕಾರಾದಿಕಂ ಸರ್ವಂ ಪ್ರಯುಂಜೀತ ಸಮಾಹಿತಃ ।
ಉಪಾದಾನಾನುಸಂಧಾನಂ ತ್ವಾದಾನಂ ಚಾಪ್ಯನಂತರಂ ॥ ೧೨ ॥

ಇಜ್ಯಾಕಾಲಸ್ಯ ಧರ್ಮಜ್ಞ ಕುರ್ಯಾತ್ಪ್ರಯತಮಾನಸಃ ॥ ॥ ೧೩ ॥

ಆಸನ್ನಭೋಗಃ ಪ್ರಯತಾಂತರಾತ್ಮಾ
ಕುರ್ಯಾದಥೇಜ್ಯಾಂ,ರಣಚಂಡವೇಗ ।
ಕ್ರೋಧಂ,ನಿಯಮ್ಯಾತ್ಮಹಿತೇ ನಿವಿಷ್ಟಃ
ತದ್ಭಾವಭಾವೋಪಹಿತಶ್ಚ ಸತ್ಯಂ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಶಂಕರಗೀತಾಸೂಪಾದಾನ ಕರಣೋನಾಮ ದ್ವಿಷಷ್ಟಿತಮೋಧ್ಯಾಯಃ

---

ಮನೆಯಲ್ಲಿಟ್ಟು ಬಂದು ಈ ರೀತಿ ಉಪಾದಾನಪೂಜೆಯಾದ ಬಳಿಕ ವಿಧಿವತ್ತಾಗಿ ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ಆಚಮನವಂ ಮಾಡಿ ಪೂರ್ವದಂತೆ ದೇವರಮನೆಗೆ ಪ್ರವೇಶಿಸಿ ಸಮಾಧಾನ ಚಿತ್ತದಿಂದ ನಮಸ್ಕಾರಗಳನ್ನು ಮಾಡಿ ಉಪಾದಾನಕಾಲವನ್ನೀ ರೀತಿ ಅನುಸಂಧಾನ ಮಾಡಿದವನಾಗಿ ಬಳಿಕ ಇಜ್ಯಾಕಾಲ ಪೂಜೆಯನ್ನು ಆರಂಭಿಸಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಶಂಕರಗೀತೆಯಲ್ಲಿ ಉಪಾದಾನಕರಣ (ಪಾಕಮಾಡಿ ನಿವೇದಿಸುವಕ್ರಮ) ವೆಂಬ ಹೆಸರಿನ ಅರವತ್ತೆರಡನೇ ಅಧ್ಯಾಯ ಮುಗಿದುದು.

॥ ಶ್ರೀಃ ॥

---

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ತ್ರಿಷಷ್ಟಿತಮೋಽಧ್ಯಾಯಃ

---

॥ ಶಂಕರ ಉವಾಚ ॥

ಪಾದಪೀಠಾನ್ತಕಂ ಕರ್ಮ ಕೃತ್ವಾ ಪ್ರಾಗುಕ್ತಮಂಜಸಾ ।
ನಿವೇದ್ಯ ದರ್ಪಣಂ ದೇವೇ ತತೋ ಮಾತ್ರಾಂ ನಿವೇದಯೇತ್ ॥ ೧ ॥

ಬೀಜೈಸ್ತು ಪರಿಧಾನಾರ್ಥಂ ಪ್ರಯತಃ ಸುಸಮಾಹಿತಃ ।
ತೈಲಮುದ್ವರ್ತನಂ ಚೈವ ಚಮಸೀಂ ಚಾಪ್ಯನಂತರಂ ॥ ೨ ॥

ತತೋ ನಿಷ್ಪಂಸನಂ ಕೃತ್ವಾ ದೇಯಾನ್ಯಾಚಮನಾನಿ ಚ ।
ರೋಪ್ರಂ ಕಾಲೀಯಕಂಚೈವ ತಥಾ,ನ್ಯೈ,ಬೀಜಪೂರಕಂ ॥ ೩ ॥

ಸರ್ವೌಷಧೀರ್ವೃಕ್ಷಬೀಜಂ ಸರ್ವಗಂಧಾಂಶ್ಚ ಭಾರ್ಗವ ॥ ೪ ॥

---

### ಅರವತ್ತಮೂರನೇ ಅಧ್ಯಾಯ

೧-೧೪. ಈಶ್ವರನು ಪರಶುರಾಮನೊಡನೆ ಹೇಳುತ್ತಾನೆ. ಹಿಂದಿನ ಅಧ್ಯಾಯದಲ್ಲಿ ಹೇಳಿದ ಮೇರೆ ಪಾದ ಪೀಠಾಂತಕವಾದ ಕರ್ಮಗಳೆಲ್ಲವನ್ನೂ ಜಾಗ್ರತೆಯಾಗಿ ಮಾಡಿ, ಸ್ವಾಮಿಗೆ ದರ್ಪಣವನ್ನು (ಕನ್ನಡಿ) ತೋರಿಸಿ ಬಳಿಕ ಹಣ್ಣುಕಾಯಿಗಳನ್ನು ನೈವೇದ್ಯ ಮಾಡಬೇಕು. ನಿಂಬೇಹಣ್ಣಿನ ರಸದಿಂದ ವಿಗ್ರಹವನ್ನು ಚೆನ್ನಾಗಿ ಉಜ್ಜಿ ಪರಿಶುದ್ಧವಾಗಿ ತೈಲಸ್ನಾನವನ್ನು ಮಾಡಿಸಬೇಕು. ಬಳಿಕ ಶುದ್ಧೋದಕ ಸ್ನಾನ

ರತ್ನೋದಕಂ ಚ ವಿವಿಧಂ ಸ್ನಾನೀಯಮುದಕಂ ತಥಾ ।
ಸ್ನಾನೀಯಂ ಚ ತತೋ ರಾಮ ಸುಸುಗಂಧಂ ಚ ದಾಪಯೇತ್ ॥ ೫ ॥

ತತಃ ಸುಘರ್ಮಣಾರ್ಥೀಯಾಃ ಕಲಶಾಃ ಸುಮನೋಹರಾಃ ।
ಸ್ವಲಂಕೃತಾಃ ಪ್ರದಾತವ್ಯಾಃ ಫಲಪಲ್ಲವಪೂರಿತಾಃ ॥ ೬ ॥

ಪುಷ್ಪಗಂಧಯುತಾ ರಾಮ ಪವಿತ್ರೇಣ ಪವಿತ್ರಿತಾಃ ।
ಶುಭಾನಾಂ ತೀರ್ಥಸರಿತಾಂ ರಾಮ ಪುಣ್ಯಜಲೈಃ ಶುಭೈಃ ॥ ೭ ॥

ಯಥಾವಿಭವತಸ್ತೇಷಾಂ ಬಹುತ್ವಮಪಿ ಕಾರಯೇತ್ ।
ತಸ್ಮಿನ್ಕಾಲೇ ತಥಾಕಾರ್ಯಂ ಕ್ಷ್ವೇಡಿತೋತ್ಕೃಷ್ಟನಿಃಸ್ವನಂ ॥ ೮ ॥

ಜಯಶಬ್ದಂಚ ವಿಪುಲಂ ಶಂಖಭೇರೀವಿಮಿಶ್ರಿತಂ ।
ಉದಕಗ್ರಹಣಾರ್ಥೀಯಂ ತತೋ ದದ್ಯಾಚ್ಚ ಶಾಟಕಂ ॥ ೯ ॥

ತತೋ ರಾಮ ಪ್ರದಾತವ್ಯಂ ಧೌತವಾಸೋಯುಗಂ ಶುಭಂ ।
ತತಸ್ತು ಪೂರ್ಣಕಲಶಮಾಸನಾನಾಂ ಪ್ರದಕ್ಷಿಣಂ ॥ ೧೦ ॥

---

ಮಾಡಿಸಿ ಆಚಮನೀಯಾದಿಗಳನ್ನು ಸಲ್ಲಿಸಬೇಕು. ಪಂಚಾಮೃತಸ್ನಾನ, ಅಷ್ಟಗಂಧೋದಕ, (ಏಲಕ್ಕಿ, ಕಸ್ತೂರಿ, ಕೇಸರಿ, ಪಚ್ಚಕರ್ಪೂರಾದಿಗಳಿಂದ ಕೂಡಿದ್ದು) ಸ್ನಾನಗಳನ್ನು ಮಾಡಿಸಬೇಕು ಸರ್ವೌಷಧರಸ ಸ್ನಾನ, ರತ್ನೋದಕ ಸ್ನಾನ, ಉಷ್ಣೋದಕ ಸ್ನಾನ, ಸುವಾಸನಾ ಪುಷ್ಪ ಸ್ನಾನ, ಪವಿತ್ರ ಪರಿಮಳೋದಕ ಸ್ನಾನ, ಸಕಲ ತೀರ್ಥೋದಕ ಸಕಲ ಪುಣ್ಯಜಲಾದಿಗಳಿಂದ ವೈಭವದಿಂದ ಸ್ನಾನಮಾಡಿಸಿ ಬಳಿಕ ವಸ್ತ್ರಯುಗ್ಮ ಗಂಧಪುಷ್ಪ ಧೂಪದೀಪ ನೈವೇದ್ಯ ತಾಂಬೂಲಾಚಮನ ಮಂಗಳನೀರಾಜನಾದಿಗಳನ್ನು ನೆರವೇರಿಸಿ ರತ್ನಾಸನದಲ್ಲಿ ಕುಳಿತಿರುವ ಪರಮಾತ್ಮನನ್ನು ಪೂಜಿಸುತ್ತೇ

ಕೃತ್ವಾ ರಾಮ ಕ್ಷಿಪೇದ್ವೇದ್ಯಾಂಪುಷ್ಪಪಲ್ಲವಶೋಭಿತಂ ।
ತತಸ್ತ್ವಾಚಮನೀಯಂ ಚ ಪೂರ್ವವದ್ವಿನಿವೇದಯೇತ್ ॥ ೧೧ ॥

ಮಂಗಲಾನಿ ಚ ಮುಖ್ಯಾನಿ ತತೋ ದದ್ಯಾ ದ್ವಿಚಕ್ಷಣಃ ।
ಸತ್ಯಾಸನಸ್ಥಂ ದೇವೇಶಮರ್ಚಯಿಷ್ಯಾಮ್ಯತಃ ಪರಂ ॥ ೧೨ ॥

ಸ್ನಾನಾಸನಾನಿ ತ್ಯಜ್ಯಂತಾಮಿ ತ್ಯೇವಂ ಪರಿಕೀರ್ತಯೇತ್ ।
ಮಾರ್ಗತ್ರಯಾದಥಾರಭ್ಯ ಪಾದಪೀಠಾನ್ತಕಂ ಪುನಃ ॥ ೧೩ ॥

ಕರ್ತವ್ಯಂ ಸಕಲಂ ಕರ್ಮ ತ್ವಾವಾಹನವಿಸರ್ಜನಂ!
ತತೋನುಲೇಪನಂ ದದ್ಯಾ ದ್ವ್ಯಜನೇನ ಚ ವೀಜಯೇತ್ ॥ ೧೪ ॥

ತತಶ್ಚವೀಟಕಂ ದದ್ಯಾತ್ತಥಾ ಕೂರ್ಚಪ್ರಸಾದನಂ ।
ವಸ್ತ್ರಂ ವಿಭೂಷಣಂ ಚೈವ ಪುಷ್ಪಾಣಿ ವಿವಿಧಾನಿ ಚ ॥ ೧೫ ॥

ವೇಷ್ಟನಂ ಚ ಸ್ರಜಂ ಚೈವ ಕಂಕಣಂ ಚ ಮನೋಹರಂ ।
ತಥಾ ರಮ್ಯಂ ಪ್ರತಿಸರಂ ಸುಪಿಷ್ಟಂ ಚ ತಥಾಽಂಜನಂ ॥ ೧೬ ॥

ದರ್ಪಣಂ ಚೋಪಚಾರಂ ಚ ಪ್ರದೀಪಂ ಧೂಪಮೇವಚ ।
ತಥೈವಾಚಮನೀಯಂ ಚ ಗೀತವಾದ್ಯಸ್ವರಂ ತಥಾ ॥ ೧೭ ॥

---

ನೆಂದು ಹೇಳಿ ಸ್ವಾಮಿಾ, ಸ್ನಾನ ಆಸನಗಳನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿ ಮಾರ್ಗತ್ರಯ ಪೂಜೆಯಿಂದ ಹಿಡಿದು ಪಾದ ಪೀಠಾಂತ್ಯವಾಗಿ ಸಕಲ ಕರ್ಮಗಳನ್ನೂ ಮಾಡಿ ಆವಾಹನ ವಿಸರ್ಜನಾದಿಗಳು ಮುಗಿದಬಳಿಕ ಗಂಧಾನುಲೇಪನ ವ್ಯಜನ (ಬೀಸಣಿಗೆ) ಗಳ ಸೇವೆಯಿಂ ಮಾಡಬೇಕು.

೧೫-೨೦· ವಸ್ತ್ರಭೂಷಣಗಳನ್ನೂ, ವಿವಿಧ ಪುಷ್ಪಗಳನ್ನೂ, ಹೂವಿನ ಹಾರಗಳನ್ನೂ, ಕಂಕಣವನ್ನೂ, ಅಂಜನವನ್ನೂ, ದರ್ಪಣ, ದೀಪ, ಧೂಪ, ಆಚಮನ,

ಪುಣ್ಯಾಹಜಯಶಬ್ದಂ ಚ ಸ್ತೋತ್ರೋದೀರಣಮೇವ ಚ ।
ತಥೈವೋಪಾನಹೌದೇಯೇ ಛತ್ರಂ ಚಾಮರಮೇವ ಚ ॥ ೧೮ ॥

ಯಾನಂ ಚ ವಾಹನಂಚೈವ ಪತಾಕಾಶ್ಚ ಧ್ವಜಾನಿ ಚ ।
ಭೋಗಾನಾಂ ಪೂರಣಾರ್ಥಾಯಾಂತತೋ ಮಾತ್ರಾಂನಿವೇದಯೇತ್ ॥೧೯॥

ಭೋಗಾನಾಂ ಸರ್ಜನಂ ಕೃತ್ವಾ ಯಥಾಶಕ್ತ್ಯಾ ದ್ವಿಜೋತ್ತಮ ।
ಅವಿದ್ಯಮಾನಾ ಯೇ ಭೋಗಾ ಮಾತ್ರಾಸ್ವೇವ ಪ್ರಕಲ್ಪಯೇತ್ ॥ ೨೦ ॥

ಏವಮಭ್ಯರ್ಚ್ಯ ದೇವೇಶಂ ಸರ್ವಭೋಗೈಸ್ಸಮಾಹಿತಃ ।
ಅರ್ಚಯೇನ್ಮಧುಪರ್ಕೇಣ ಪಶುಯಾಗೋ ನ ಚೇದ್ಭವೇತ್ ॥ ೨೧ ॥

ಪಶುಯಾಗಾಭಿಗಮನೇ ಮಧುಪರ್ಕೋ ವಿಧೀಯತೇ ।
ಅಭ್ಯರ್ಚ್ಯ ಮಧುಪರ್ಕೇಣ ತತಸ್ತ್ವನ್ಯೇನ ಪೂಜಯೇತ್ ॥ ೨೨ ॥

ಅತ್ರಾಸನಾನ್ಯಪೀಚ್ಛಂತಿ ಕೇಚಿದಪ್ಯಪರಾಣಿತು ।
ಆದೌ ಸ್ಥಾಲೀಂ ಚ ತೇನಾಥ ಪ್ರದದ್ಯಾದರ್ಹಣೀಂ ತತಃ ॥ ೨೩ ॥

---

ಗೀತ, ವಾದ್ಯ, ಸ್ವರ, ಸೇವೆಯನ್ನೂ ಸ್ತೋತ್ರಪಾಠಗಳನ್ನೂ ಸಲ್ಲಿಸಿ ಪಾದರಕ್ಷೆಯನ್ನು ಕಾಲುಗಳಲ್ಲಿ ಸಮರ್ಪಿಸಿ ಛತ್ರಿ, ಚಾಮರ, ಪಲ್ಲಕ್ಕಿ, ವಾಹನ, ಬಾವುಟ ಮುಂತಾದ ಸಕಲ ಭೋಗ ಸಾಮುಗ್ರಿಗಳನ್ನೂ ಸಮರ್ಪಿಸಿ ಬಳಿಕ ನೈವೇದ್ಯಮಾಡಬೇಕು ಇನ್ನಾವ ಭೋಗಗಳನ್ನೂ ಸಮರ್ಪಿಸದೆ ಹೋದಾಗ್ಯೂ ಅವುಗಳನ್ನೆಲ್ಲಾ ಮಂತ್ರಗಳಿಂದಲೇ ಕಲ್ಪಿಸಬೇಕು.

೨೧-೨೨. ಈ ರೀತಿ ಪರಮಾತ್ಮನನ್ನು ಸಕಲ ಭೋಗಗಳಿಂದಲೂ ಉಪಚಾರ ಮಾಡಿ ಬೇರೆ ಮತ್ತೊಂದು ಮಧುಪರ್ಕ ಪೂಜೆಯನ್ನು ಕೈಗೊಳ್ಳಬೇಕು. ಕೆಲವರು ಇಲ್ಲವೆನ್ನುವರು. ಪಶುಯಾಗಾಭಿಗಮನ ಕಾಲದಲ್ಲಿ ಮಾತ್ರ ಮಧುಪರ್ಕ ಪೂಜೆ

ಅನ್ನಂ ಹರಿತಕೋಪೇತಂ ಭಕ್ಷ್ಯಂ ವ್ಯಂಜನಸಂಯುತಂ ।
ನಿವೇದ್ಯ ದರ್ಪಣಂ ದದ್ಯಾತ್ತಥಾ ನಿಷ್ಪುಂಸನಂ ತತಃ ॥ ೨೪ ॥

ಕೃತ್ವಾ ಹ್ಯಾಚಮನೀಯಂ ತು ಮಾತ್ರಾಂಚ ತದನಂತರಂ ।
ತತಸ್ತು ಸಂವಿಭಾಗಾರ್ಥಂ ದಾತವ್ಯಂ ತ್ವರ್ಹಣಂ ತತಃ ॥ ೨೫ ॥

ಭೂಯೋ ನಿವೇದಯೇದನ್ನಂ ಪೂರ್ವವತ್ಸುಸಮಾಹಿತಃ ।
ದರ್ಪಣಂ ಚ ತತೋದದ್ಯಾತ್ಪಾದ್ಯಂ ನಿಷ್ಪುಂಸನಂ ತತಃ ॥ ೨೬ ॥

ದತ್ವಾ ಚಾಚಮನೀಯಂ ಚ ಶಾಟಕಂ ಚ ನಿವೇದಯೇತ್ ।
ಹಸ್ತನಿಷ್ಪುಂಸನಾರ್ಥಾಯ ಮಾತ್ರಾಂ ಚ ತದನಂತರಂ ॥ ೨೭ ॥

ನಿವೇದ್ಯ ಪಶ್ಚಾತ್ತಾಂಬೂಲಂ ದೇವಂ ವಹ್ನೌ ಸಮರ್ಚಯೇತ್ ।
ವಹ್ನಿಸಂಪೂಜನಂ ಕೃತ್ವಾ ಕಾರ್ಯಕಾರಿಸಮರ್ಪಣಂ ॥ ೨೮ ॥

---

ಮಾಡಬೇಕೆಂದು ಹೇಳುತ್ತಾರೆ. ಈ ರೀತಿ ಮಧುಪರ್ಕ ಪೂಜಾನಂತರ ಆಸನ ಆವಾಹನಾದಿ ಪೂಜೆಗಳನ್ನು ಮಾಡಿ ಪೊಂಗಲನ್ನವನ್ನೂ ಭಕ್ಷ್ಯಗಳನ್ನೂ ನಿವೇದನೆ ಮಾಡಬೇಕು. ಬಳಿಕ ದರ್ಪಣ ವ್ಯಜನಾದಿ ಉಪಚಾರಗಳನ್ನು ಮಾಡಿ ಆಚಮನೀಯುವನ್ನು ಮಾಡಬೇಕು. ಬಳಿಕ ದರ್ಪಣೋಪಚಾರ, ಶುದ್ಧಾಚಮನೀಯುವನ್ನು ಸಮರ್ಪಿಸಿ ತಾಂಬೂಲ ನಿವೇದನ ಮಾಡಿ ಆ ಬಳಿಕ ಹೋಮ ಮಾಡಬೇಕು. ಈ ರೀತಿ ಅಗ್ನಿಪೂಜೆ ಮಾಡಿದ ಬಳಿಕ ಕಾರ್ಯಕಾರಿ ಸಮರ್ಪಣವಂ ಮಾಡಿ ಅತಿಥಿಗಳಿಗೂ ತನ್ನ ಆಶ್ರಯ ಪೋಷಣೆಗಳಲ್ಲಿರುವವರಿಗೂ ಭೋಜನ ಮಾಡಿಸಬೇಕು.

ಅತಿಥೀನಾಂ ತತಃ ಕಾರ್ಯಂ ಭರ್ತವ್ಯಾನಾಂ ಚ ಭಾರ್ಗವ ।
ತತೋಽನುಯಾಗಕಾಲೇ ತು ಪವಿತ್ರೇಣ ಸಮುತ್ ಕ್ಷಿಪೇತ್ ॥ ೨೯ ॥

ಆಸನಂ ಭಾಜನಂ ಚೈವ ಸಾನ್ನಂ ಪ್ರಯತಮಾನಸಃ ।
ಉಪವಿಶ್ಯ ತತಃ ಪಶ್ಚಾತ್ಪ್ರಭವೇನಾಪ್ಯಯೇನಚ ॥ ೩೦ ॥

ಇದಮಗ್ನೇತಿ ಮಂತ್ರೇಣ ಪ್ರಾಚ್ಯಾಂ ಗ್ರಾಸಾಷ್ಟಕಂ ಭವೇತ್ ।
ತತಸ್ತು ಪ್ರಯತೋ ಭೂತ್ವಾ ವಿಶೇದ್ದೇವಗೃಹಂ ತತಃ ॥ ೩೧ ॥

ಇಜ್ಯಾಕಾಲಾನುಸಂಧಾನಂ ತತಃ ಕುರ್ಯಾತ್ಸಮಾಹಿತಃ ।
ಕುರ್ಯಾತ್ಸ್ವನ್ಯಾಯಕಾಲಸ್ಯ ಚೋಪಾದಾನಮನಂತರಂ ॥ ೩೨ ॥

ವಿಸರ್ಜನಂ ತತಃ ಕುರ್ಯಾತ್ಪ್ರಯತೇನಾನ್ತರಾತ್ಮನಾ ।
ಇಜ್ಯಾಕಾಲವಿಧಿಸ್ತ್ವೇಷ ಮ ಯಾ ತೇ ರಾಮ ಕೀರ್ತಿತಃ ॥ ೩೩ ॥

---

ಇದಾದ ಬಳಿಕ ಅನುಯಾಗಕಾಲ ಪೂಜೆಗಾರಂಭಿಸಬೇಕು. ಇದರಲ್ಲೂ ಆಸನ ಭಾಜನಾದಿಗಳನ್ನು ಸಮರ್ಪಿಸಿ ಅನ್ನವನ್ನು ನಿವೇದಿಸಿ ಬಳಿಕ ಅಷ್ಟದಿಕ್ಕುಗಳಲ್ಲೂ ಇದಮಗ್ನೇ ಎಂಬ ಮಂತ್ರದಿಂದ ಎಂಟು ಅಗ್ನಿಬಲಿಗಳನ್ನು ಹಾಕಬೇಕು. ಬಳಿಕ ಪರಿಶುದ್ಧಾಂತಃಕರಣನಾಗಿ ದೇವಸ್ಥಾನದೊಳಕ್ಕೆ ಪ್ರವೇಶಿಸಬೇಕು ಬಳಿಕ ಇಜ್ಯಾಕಾಲಾನುಸಂಧಾನವನ್ನೂ ಬಳಿಕ ಉಪಾದಾನಕಾಲಾನುಸಂಧಾನವನ್ನೂ ಮಾಡಬೇಕು.

ಟಿಪ್ಪಣಿ: — ಈ ಪಂಚರಾತ್ರಾಗಮ ಪೂಜಾಕ್ರಮವನ್ನು ವಿಸ್ತಾರವಾಗಿ ಆಯಾ ಆಗಮಾಭಿಜ್ಞರಿಂದ ತಿಳಿಯಬೇಕು. ಇಲ್ಲಿ ಸೂಕ್ಷ್ಮವಾಗಿ ಮೂಲವನ್ನನುಸರಿಸಿ ವಿವರಿಸಲಾಗಿದೆ.

೩೩-೪೫ ಉಪಾದಾನಕಾಲಪೂಜಾ ವಿಸರ್ಜನಾಂತರದಲ್ಲಿ ಶುದ್ಧಮನಸ್ಸಿನಿಂದ ಮಾಡಬೇಕಾದ ಇಜ್ಯಾಕಾಲವಿಧಿಯನ್ನು ನಿನ್ನೊಡನೆ ಹೇಳಿದ್ದೇನೆ. ಕೇಳಯ್ಯ, ಪರಶು

ಭಗವಾನ್ವಾಸುದೇವಸ್ತು ದೇವಸ್ಸಂಕರ್ಷಣಸ್ತತಃ ।
ಪ್ರದ್ಯುಮ್ನಶ್ಚಾನಿರುದ್ಧಶ್ಚ ಪ್ರಭಾವೋಽಯಮುದಾಹೃತಃ　　॥ ೩೪ ॥

ಸಂಕರ್ಷಣಸ್ತಥಾಽವ್ಯಕ್ತ ಆತ್ಮಾ ಪ್ರದ್ಯುಮ್ನ ಉಚ್ಯತೇ ।
ದೇವಸ್ತತ್ವಗತಸ್ಸರ್ವ ಅನಿರುದ್ಧೋ ಮಹಾಯಶಾಃ　　॥ ೩೫ ॥

ಸ ನಾಥಸ್ಸರ್ವಲೋಕಾನಾಂ ಸೃಷ್ಟಿಸಂಹಾರಕಾರಕಃ ।
ಪುರುಷೋಽಪಿ ತಥಾ ಸತ್ಯ ಅಚ್ಯುತಶ್ಚ ದ್ವಿಜೋತ್ತಮ　　॥ ೩೬ ॥

ಭಗವಾನ್ವಾಸುದೇವಶ್ಚ ತ್ವವ್ಯಯೋಽಯಮುದಾಹೃತಃ ।
ಚತ್ವಾರ ಏತೇ ಧರ್ಮಜ್ಞ ವಾಸುದೇವಾಃ ಪ್ರಕೀರ್ತಿತಾಃ　　॥ ೩೭ ॥

ಭಗವಚ್ಛಬ್ದವಾಚ್ಯಾಶ್ಚ ಸರ್ವಭೂತಭವೋದ್ಭವಾಃ ।
ಯಃ ಪರಃ ಪುರುಷೋ ರಾಮ ವಾಸುದೇವಃ ಪ್ರಕೀರ್ತಿತಃ　　॥ ೩೮ ॥

---

ರಾಮ, ಭಗವಂತನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೆಂಬ ನಾಲ್ಕು ಹೆಸರಿನಿಂದ ಪ್ರಸಿದ್ಧನಾಗಿಹನು. ಸಂಕರ್ಷಣನು ಅವ್ಯಕ್ತನೆಂದೂ ಪ್ರದ್ಯುಮ್ನನು ಆತ್ಮನೆಂದೂ, ವಾಸುದೇವನು ತತ್ವಗತನೆಂದೂ, ಅನಿರುದ್ಧನು ಸರ್ವಗತನೆಂದೂ ತಿಳಿಯಬೇಕು. ಇದೇ ವಾಸುದೇವನೇ ಸಕಲಲೋಕನಾಥನೆಂದೂ, ಸೃಷ್ಟಿಸಂಹಾರ ಕಾರಣನೆಂದೂ, ಹೇಳಿಸಿಕೊಳ್ಳುವನು. ಅಲ್ಲದೆ ಇದರ ಕೆಳಗೆ ಹೇಳಿದ ನಾಲ್ಕು ಹೆಸರುಗಳು ಪುರುಷ, ಸತ್ಯ, ಅಚ್ಯುತ, ಅವ್ಯಯಗಳೆಂದು ಪ್ರಸಿದ್ಧಿಯನ್ನು ಹೊಂದಿವೆ ಈ ನಾಲ್ಕು ಭಗವಚ್ಛಬ್ದ ವಾಚ್ಯಗಳೂ ಸಹ ಸಕಲ ಪ್ರಾಣಿಗಳ ಜನ್ಮ ಮರಣ ಕಾರಣಗಳು. ವಾಸುದೇವನಿಗೆ ಪರಮಪುರುಷನೆಂದೂ, ಸರ್ವಭೂತ ಭವೋದ್ಭವನೆಂದೂ ಹೆಸರಿದೆ.

ಭಗವಚ್ಛಬ್ದವಾಚ್ಯಶ್ಚ ಸರ್ವಭೂತಭವೋದ್ಭವಃ ।
ಶೇಷತತ್ತ್ವಂ ಗತಃ ಸರ್ವಮನಿರುದ್ಧೋ ಮಹಾಯಶಾಃ ॥ ೩೯ ॥

ಸನಾಥಃ ಸರ್ವಲೋಕಾನಾಂ ಸೃಷ್ಟಿಸಂಹಾರಕಾರಣಃ ।
ತದೇತತ್ಪಠ್ಯತೇ ಸೂಕ್ತೇ ಪೌರುಷೇ ದ್ವಿಜಸತ್ತಮ ॥ ೪೦ ॥

ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ ।
ಭುಜಿಃ ಪ್ರೀತಿಸ್ತಥೈವಾರ್ಚಿಃ ಪ್ರಾಣಸ್ತರ್ಪಣಮರ್ಹಣಂ ॥ ೪೧ ॥

ನಿವೇದನಂ ಚಾಚಮನಮಷ್ಟಧಾ ಮಂತ್ರನಿರ್ಣಯಃ ।
ಮಂತ್ರೇಣ ಚಾರ್ಹಣಾಂತೇನ ಪ್ರದದ್ಯಾದರ್ಹಣಂ ಪುನಃ ॥ ೪೨ ॥

ತಥೈವಾಚಮನಾಂತೇನ ದೇಯಮಾಚಮನಂ ಭವೇತ್ ।
ಪ್ರಾಶನಾಂತೇನ ಮನ್ತ್ರೇಣ ತರ್ಪಣಂ ವಿನಿವೇದಯೇತ್ ॥ ೪೩ ॥

---

೩೯-೪೦. ಅನಿರುದ್ಧನು ಸಕಲ ಲೋಕನಾಥನಾಗಿ ಶೇಷತತ್ತ್ವವನ್ನನುಸರಿಸಿ ಸೃಷ್ಟಿಸಂಹಾರ ಕಾರಣನಾಗಿ ವಿರಾಜಿಸುತಲಿದಾನೆ. ಈ ವಿಚಾರವು ಪುರುಷಸೂಕ್ತದಲ್ಲೂ ಸಹ ಹೀಗೆ ಹೇಳಲ್ಪಟ್ಟಿದೆ: —"ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂದಿವಿ"

(ಪುರುಷಸೂಕ್ತ)

ಟಿಪ್ಪಣಿ :— ೩೪ನೇ ಶ್ಲೋಕದ ಚತುರಾತ್ಮನ ವಿಚಾರವಾಗಿ ಇದೇ ಪ್ರಥಮ ಖಂಡದ ೨೧೨ನೇ ಅಧ್ಯಾಯದ ೨೦-೨೧-೨೨ನೇ ಶ್ಲೋಕಗಳಲ್ಲಿ ವಿವರಿಸಿರುವ ಭರತನ ಚರಿತ್ರೆಯನ್ನು ದಯಮಾಡಿ ಓದಿನೋಡಿರಿ

೪೧. ಭುಜಿ, ಪ್ರೀತಿ, ಅರ್ಚಿ, ಪ್ರಾಣ, ತರ್ಪಣ, ಅರ್ಹಣ, ನಿವೇದನ, ಆಚಮನಗಳೆಂದು ಎಂಟುವಿಧ ಮಂತ್ರ ನಿರ್ಣಯವು. ಅರ್ಹಣಾಂತವಾದ ಮಂತ್ರ ದಿಂದ ಪೂಜೆಮಾಡಿ ಬಳಿಕ ಆಚಮನ ಪುನರಾಚಮನಗಳನ್ನು ಪ್ರಾಶನಾಂತವಾದ

ಪ್ರತಿಗ್ರಹೇಷು ಮಾತ್ರಾಸು ಪಾದುಕಾಸು ಚ ದರ್ಪಣೇ
ಛತ್ರೇ ಚ ವಾಲವ್ಯಜನೇ ತಾಲವೃಂತೇ ತಥೈವ ಚ ॥ ೪೪ ॥

ಉಪಾನತ್ಸು ತಥಾ ಯಾನೇ ವಾಹನೇಷು ಭೃಗೂತ್ತಮ ।
ಅಬ್ಧಿಧ್ವಜೇಷು ಚ ತಥಾ ಪಾತಕಾಸು ಚ ಕೀರ್ತಿತಾಃ ॥ ೪೫ ॥

ಶೇಷಾಣಾಂ ಕಾಮಭೋಗಾನಾಂ ನಿತ್ಯಂ ಸಂಕೀರ್ತಯೇತ್ತುವೈ ।
ಸರ್ವತ್ರ ಪ್ರೀಣನಂ ಕಾರ್ಯಮೇತಾವನ್ಮಂತ್ರನಿರ್ಣಯಃ ॥ ೪೬ ॥

ದೇವಾನಾಂ ಪಾದಪೀಠಾನಾಂ ಕಲಶಾನಾಂ ತಥೈವ ಚ ।
ವಹ್ನೇಸ್ತಥಾಽಸನಾನಾಂ ಚ ಚತುಷ್ಟ್ವಂ ವಿನಿವರ್ತತೇ ॥ ೪೭ ॥

ಕಲಶಾಸನವಹ್ನೀನಾಂ ಸಂಕರಂ ತು ನ ಕಾರಯೇತ್ ।
ತಥೈವ ಪಾದಪೀಠಾನಾಂ ತೇಷಾಂ ಚಿಹ್ನಂ ಚ ಕಾರಯೇತ್ ॥ ೪೮ ॥

---

ಮಂತ್ರದಿಂದ ಮಾಡಿ ತರ್ಪಣವನ್ನು ಸಹ ಸಮರ್ಪಿಸಬೇಕು. ಮಂತ್ರ, ಪಾದುಕಾ, ದರ್ಪಣಾದಿಗಳ ಸಮರ್ಪಣಾನಂತರದಲ್ಲಿ ಛತ್ರ, ಚಾಮರ, ವ್ಯಜನ, ಉಪಾನಹ, ಯಾನವಾಹನ, ಪತಾಕಾದಿಗಳನ್ನು ಸಮರ್ಪಿಸಬೇಕು.

೪೬-೫೩. ಉಳಿದ ಕಾಮಭೋಗಗಳನ್ನು ಸಂಕೀರ್ತನ ರೂಪವಾಗಿ ಮಾಡಬೇಕು ಈ ರೀತಿ ಭಗವತ್ಪ್ರೀತಿಯಾಗಿ ಕರ್ಮ ಮಾಡಬೇಕೆಂಬುದೇ ಮುಖ್ಯವಾದ ಮಂತ್ರಾರ್ಥ ನಿರ್ಣಯವು. ದೇವರ ಪಾದಪೀಠ, ಕಲಶ, ಅಗ್ನಿ, ಆಸನ, ಇವುಗಳು ಬೇರೆ ಬೇರೆಯಾಗಿಯೇ ಇರಬೇಕಲ್ಲದೆ ಇವುಗಳನ್ನು ಬೆರಸಬಾರದು. ಹಾಗೂ ಪಾದ

ಪ್ರಾಪಣೇ ಮಧುಪರ್ಕೇ ಚ ಮಾತ್ರಾಸು ಚ ಭೃಗೂತ್ತಮ ।
ಸುಮನಸ್ಸು ಸದಾ ರಾಮ ಯತ್ನಃ ಕಾರ್ಯಃ ಸಮರ್ಚನೇ ॥ ೪೯ ॥

ಸೌಮನಸ್ಯಂ ಪರಂ ರಾಮ ದೇವದೇವೇ ನಿವೇದಿತಂ ।
ಯಸ್ಮಾತ್ತು ವರ್ತತೇತಸ್ಮಾತ್ಪ್ರೋಕ್ತಾಃ ಸುಮನಸಃ ಸದಾ ॥ ೫೦ ॥

ಮಾಂ ತ್ರಾಯಸ್ವ ಭಯಾದ್ಘೋರಾತ್ತಸ್ಮಾನ್ಮಾತ್ರಾ ಪ್ರಕೀರ್ತಿತಾ ।
ಪ್ರಾಪಯಿಷ್ಯತಿ ಚ ಸ್ಥಾನೇ ನಿತ್ಯಂ ದುಃಖವಿವರ್ಜಿತೇ ॥ ೫೧ ॥

ಯಸ್ಮಾತ್ತಸ್ಮಾದ್ದ್ವಿಜಶ್ರೇಷ್ಠ ಪ್ರೋಕ್ತಂ ಪ್ರಾಪಣಕಂ ಸದಾ ।
ಪರಮಂ ಯತ್ಪರಂ ರಾಮ ಮಧುಸಂಜ್ಞಂ ತದುಚ್ಯತೇ ॥ ೫೨ ॥

ತದಾಪ್ಯತೇ ಯದಾ ತೇನ ಮಧುಪರ್ಕಸ್ತದಾ ಸ್ಮೃತಃ ॥ ೫೩ ॥

ಇಜ್ಯಾವಿಧಾನೋಽಯಮುದೀರತಸ್ತೇ
ಸಮಾಸತೋ ಭಾರ್ಗವವಂಶಚಂದ್ರ ।

---

ಪೀಠಗಳಿಗೆ ಗುರುತನ್ನು ಮಾಡಬಾರದು. ಮಧುಪರ್ಕ, ಮಾತ್ರಾ ಸಮರ್ಪಣೆಗಳನ್ನು ಒಳ್ಳೇ ಮನಸ್ಸಿನಿಂದಲೇ ಮಾಡಬೇಕು. ದೇವರಿಗೆ ನಿವೇದಿಸುವ ಸಮಯದಲ್ಲೆಲ್ಲಾ ಸೌಮಾನಸ್ಯದಿಂದಲೇ ಇರಬೇಕಾದ್ದು ಮುಖ್ಯವಾದುದರಿಂದ ಸುಮನಸರೆಂದು ಹೇಳಲಾಗಿದೆ. ನನ್ನನ್ನು ಘೋರಭಯದಿಂದ (ಮಾಂ-ತ್ರಾಯಸ್ವ) ಕಾಪಾಡೆಂದು ಬೇಡಿಕೊಳ್ಳುವುದರಿಂದ 'ಮಾತ್ರಾ' ಎಂದು ಹೇಳಲಾಗಿದೆ. ದುಃಖಪವರ್ಜಿತವಾದ ಸ್ಥಾನಕ್ಕೆ ಸೇರಿಸೆಂದು ಬೇಡಿಕೊಳ್ಳುವುದು 'ಪ್ರಾಪಣಕವೆನಿಸುವುದು. ಮಧುವಿಗಿಂತ ಶ್ರೇಷ್ಠವೆನಿಸಿರುವುದರಿಂದ ಮಧುಪರ್ಕವೆನಿಸಿಕೊಳ್ಳುವುದು. ಎಲೈ, ಭಾರ್ಗವರಾಮನೆ, ಕೇಳು: ಈಗ ನಾನು ಹೇಳಿದ್ದು ಇಜ್ಯಾಕಾಲಪೂಜೆಯೆನಿಸಿಕೊಂಡಿತು. ಮುಂದೆ ಸ್ವಾಧ್ಯಾಯ

ಅತಃ ಪರಂ ರಾಮ ನಿಬೋಧ ಪುಣ್ಯಂ
ಸ್ವಾಧ್ಯಾಯಕಾಲಂ ಗದತೋ ಮಮಾದ್ಯ　　　　॥ ೫೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಂಕರಗೀತಾ ಸುಇಜ್ಯಾಕಾಲವಿಧಿರ್ನಾಮ
ತ್ರಿಷಷ್ಟಿತಮೋಽಧ್ಯಾಯಃ

---

ಕಾಲದ ಪೂಜಾಕ್ರಮವನ್ನು ನಿನಗೆ ತಿಳಿಸುತ್ತೇನೆ, ಕೇಳೆಂದು ಶಂಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಶಂಕರ ಗೀತೆಯಲ್ಲಿ ಇಜ್ಯಾಕಾಲವಿಧಿಯೆಂಬ ಹೆಸರಿನ
ಅರವತ್ತಮೂರನೇ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಚತುಷ್ಷಷ್ಟಿತಮೋಽಧ್ಯಾಯಃ

---

॥ ಶಂಕರ ಉವಾಚ ॥

ಆದೌ ದೇಶೇ ತಥಾ ರಾಮ ಪ್ರಯತಃ ಸುಸಮಾಹಿತಃ ।
ಸ್ವಾಧ್ಯಾಯೇನಾರ್ಚಯೇದ್ದೇವಂ ಪ್ರಯತೇನಾಂತರಾತ್ಮನಾ ॥ ೧ ॥

ತಾವತ್ಕಾರ್ಯಂ ದ್ವಿಜಶ್ರೇಷ್ಠ ಸ್ವಾಧ್ಯಾಯಂ ವಿಧಿವತ್ಸದಾ ।
ಯಾವದಸ್ತಂ ಗತೋ ರಾಮ ಸವಿತಾ ದೀಪ್ತದೀಧಿತಿಃ ॥ ೨ ॥

ತತಸ್ತ್ವಸ್ತಂಗತೇ ಸೂರ್ಯೇ ಸ್ವಾಚಾನ್ತಃ ಸುಸಮಾಹಿತಃ ।
ಪ್ರವಿಶ್ಯ ದೇವತಾವೇಶ್ಮ ನೈರಾಜ್ಯಂ ಕರ್ಮಕಾರಯೇತ್ ॥ ೩ ॥

---

## ಅರವತ್ತನಾಲ್ಕನೆಯ ಅಧ್ಯಾಯವು

೧-೬. ಶಂಕರನು ಹೇಳುತ್ತಾನೆ. ಪರಿಶುದ್ಧವಾದ ಜಾಗದಲ್ಲಿ ಕುಳಿತು ಪರಿಶುದ್ಧವಾದ ಮನಸ್ಸಿನಿಂದ ಸ್ವಾಧ್ಯಾಯಕಾಲ ಪೂಜೆಯನ್ನು ಬೆಳೆಸಬೇಕು. ಸೂರ್ಯಾಸ್ತವಾದಮೇಲೆ ಮಾಡಬೇಕಾದ ಪೂಜೆಗೆ ಸ್ವಾಧ್ಯಾಯಕಾಲ ಪೂಜೆ ಎಂದು ಹೆಸರು. ಅರ್ಚಕನು ದೇವಸ್ಥಾನಕ್ಕೆ ಹೋಗಿ ಮೊದಲು ದೇವರಿಗೆ ನೀರಾಜನ ಮಾಡಬೇಕು.

ಪಾದಪೀಠಾನ್ತಕಂ ಕರ್ಮ ಕೃತ್ವಾ ಪ್ರಾಗುಕ್ತಮುಂಜಸಾ ।
ಅರ್ಘ್ಯಮಾಚಮನೀಯಂ ಚ ದತ್ವಾ ಪಾದ್ಯಂ ಚ ಭಾರ್ಗವ ॥ ೪ ॥

ಸ್ಥಾಲೀಮುಕ್ಲಿನ್ನನೈವೇದ್ಯಾದಾರಭ್ಯಾಭಿಹಿತಂ ತತಃ ।
ಕರ್ತವ್ಯಮನುಯಾಗಾನ್ತಂ ಪ್ರಯತಃ ಸುಸಮಾಹಿತಃ ॥ ೫ ॥

ಕೃತ್ವಾಽನುಯಾಗಂ ವಿಧಿವತ್ಪ್ರವಿಶ್ಯ ಸುರಮಂದಿರಂ ।
ಸ್ವಾಧ್ಯಾಯಸ್ಯಾನುಸಂಧಾನಂ ತತಃ ಕುರ್ಯಾತ್ಸಮಾಹಿತಃ ॥ ೬ ॥

ಯೋಗಕಾಲಮುಪಾದಾಯ ಪಶ್ಚಾತ್ಕುರ್ಯಾದ್ವಿಸರ್ಜನಂ ।
ಕೃತ್ವಾ ವಿಸರ್ಜನಂ ಯುಕ್ತಸ್ತಿಷ್ಠೇದ್ಯಾಮಮತಂದ್ರಿತಃ ॥ ೭ ॥

ಯೋಗಾದನಂತರಂ ಸ್ವಪ್ಯಾದೇವಂ ಯುಕ್ತಸ್ಯ ಭಾರ್ಗವ ।
ಸ್ವಯಂ ಕಾಲೋಽಪಿ ಸತತಂ ಯೋಗಮಧ್ಯೇಽಭಿಧೀಯತೆ ॥ ೮ ॥

---

ಬಳಿಕ ಪಾದಪೀಠಾಂತಕವಾಗಿ ಕರ್ಮವನ್ನು ಮಾಡಿ ಅರ್ಘ್ಯ ಆಚಮನೀಯ ಪಾದ್ಯಗಳನ್ನು ಅನುಯಾಗಾನ್ತವಾದ ಕರ್ಮಗಳನ್ನು ಮಾಡಿ ಪರಿಶುದ್ಧವಾದ ಮನಸ್ಸಿನಿಂದ ವಿಧಿವತ್ತಾಗಿ ದೇವರ ಮುಂದೆ ನಿಂತುಕೊಂಡು ಸ್ವಾಧ್ಯಾಯ ಕಾಲಾನುಸಂಧಾನ (ಸಂಕಲ್ಪ) ವನ್ನು ಮಾಡಬೇಕು.

೭-೮. ಯೋಗಕಾಲವನ್ನು ಮೊದಲು ಆವಾಹನ ವಿಸರ್ಜನಾದಿಗಳಿಂದ ಮುಗಿಸಿ ಒಂದು ಯಾಮದವರೆಗೆ ಏನೂ ಮಾಡದೆ ಸುಮ್ಮನಿರಬೇಕು. ಯೋಗ ಕಾಲಾನಂತರ ಸ್ವಾಮಿಯನ್ನು ಮಲಗಿಸಬೇಕು. ಈ ಯೋಗಮಧ್ಯಕಾಲಕ್ಕೆ ಸ್ವಯಂ

ಸ್ನಾನಾರ್ಹಕತ್ವಂ ಯದಿ ನಾಸ್ತಿತಸ್ಯ
ಯಾಮೇ ವಿಬುದ್ಧಸ್ತು ತಥಾ ಚತುರ್ಥೇ ।
ಯುಂಜೀತ ಯೋಗಂ ರಿಪುಕಾಲಭೂತಂ
ಯೋಗೇನ ಬುದ್ಧಿಂ ಸಮುಪೈತಿಸರ್ಗಂ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಂಕರಗೀತಾ ಸುಸ್ವಾಧ್ಯಾಯಕಾಲ ಕಥನಂ ನಾಮ ಚತುಃಷಷ್ಟಿತಮೋಽಧ್ಯಾಯಃ

---

ಕಾಲವೆನ್ನುವರು. ಮುಂದೆ ಅಪರರಾತ್ರಿ ಬರುವುದರಿಂದ ಸ್ನಾನಾರ್ಹತೆ ಇಲ್ಲ. ನಾಲ್ಕನೇ ಝಾಮದಲ್ಲಿ ಎದ್ದವನಾಗಿ ಯೋಗದಿಂದ ಬುದ್ಧಿಯನ್ನು ಸೇರಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಶಂಕರಗೀತೆಯಲ್ಲಿ ಸ್ವಾಧ್ಯಾಯಕಾಲಕಥನವೆಂಬ ಹೆಸರಿನ ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಪಂಚಷಷ್ಟಿತಮೋಽಧ್ಯಾಯಃ

---

॥ ಶಂಕರ ಉವಾಚ ॥

ಜಾನುತುಲ್ಯಂ ಮೃದುಶುಭಂ ಚೈಲಾಜಿನಕುಶೋತ್ತರಂ ।
ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ॥ ೧ ॥

ಚತುರ್ಣಾಮಾಸನಾನಾಂಚ ಬದ್ಧ್ವಾತತ್ರೈಕಮಾಸನಂ ।
ಯೋಗಂ ಯುಂಜೀತ ವಿಧಿವದ್ಯಥಾವದನುಪೂರ್ವಶಃ ॥ ೨ ॥

॥ ರಾಮ ಉವಾಚ ॥

ಯೋಗಾಸನಾನಿ ಚತ್ವಾರಿ ಭಗವನ್ಕಾನಿ ಬ್ರೂಹಿಮೇ ।
ಯೇಷಾಮೇಕಮಥಾಸ್ಥಾಯ ಯೋಗಂ ಯುಂಜೀತಮಾನವಃ ॥ ೩ ॥

---

## ಅರವತ್ತೈದನೆಯ ಅಧ್ಯಾಯವು.

೧-೨. ಈಶ್ವರನು ಹೇಳುತ್ತಾನೆ.— “ಮೊಳಕಾಲಿಗೆ ಸರಿಯಾಗಿರುವಂತೆ ಮೃದುವಾಗಿಯೂ ಮಂಗಳಕರವಾಗಿಯೂ ಇರುವ ಕೃಷ್ಣಾಜಿನ, ದರ್ಭಾಸನಗಳನ್ನು ಹಾಸಿ ಅದರಮೇಲೆ ಶುಚಿಯಾದ ಜಾಗದಲ್ಲಿ ಕುಳಿತು ಸ್ಥಿರವಾದ ನಾಲ್ಕಾಸನಗಳಲ್ಲಿ ಒಂದಾಸನವನ್ನು ಕಲ್ಪಿಸಿ ಕುಳಿತುಕೊಂಡು ವಿಧಿಸಹಿತವಾಗಿಯೂ, ಪೂರ್ವದಲ್ಲಿ ತಿಳಿಸಿದಂತೆಯೂ ಯೋಗವನ್ನಾರಂಭಿಸಬೇಕು.

೩. ಪರಶುರಾಮನು ಪ್ರಶ್ನೆಮಾಡುವನು.— ಪರಮೇಶ್ವರನೇ! ಯೋಗಾಸನಗಳು ನಾಲ್ಕೆಂದು ಹೇಳಿದೆಯಲ್ಲವೆ? ಆ ನಾಲ್ಕು ಯಾವುವು? ಅವುಗಳಲ್ಲಿ ಯಾವುದೊಂದನ್ನು ಸ್ವೀಕರಿಸಿ ಯೋಗಾರಂಭ ಮಾಡಬೇಕೆಂಬುದನ್ನು ದಯಮಾಡಿ ತಿಳಿಸು.

॥ ಶಂಕರ ಉವಾಚ ॥

ಸ್ವಸ್ತಿಕಂ ಸರ್ವತೋಭದ್ರಂ ಪರ್ಯಂತಂ ಕಮಲಾಸನಂ ।
ಯೋಗಾಸನಾನಿ ಚತ್ವಾರಿ ತೇಷಾಂ ವಕ್ಷ್ಯಾಮಿ ಲಕ್ಷಣಂ ॥ ೪ ॥

ಆಸನ್ನೇ ಜಾನುನೀ ಕೃತ್ವಾ ಯಥಾವತ್ಸುಸಮಾಹಿತಃ ।
ವಾಮಂ ಕೃತ್ವೇತರೇ ಪಾದೇ ವಾಮಜಂಘೋರುಪೀಡಿತಂ ॥ ೫ ॥

ಸ್ವಸ್ತಿಕಂ ನಾಮ ತತ್ಪ್ರೋಕ್ತಮಾಸನಂ ಪ್ರಥಮಂ ಶುಭಂ ।
ಊರೂ ಚ ಜಾನುನೀ ಜಂಘೇ ಯತ್ರಾಸನಗತಃ ಸಮಂ ॥ ೬ ॥

ಆಸನಂ ಸರ್ವತೋ ಭದ್ರಂ ತದ್ವಿದ್ಧಿ ಮನುಜೋತ್ತಮ ।
ಪರ್ಯಂಕೇ ಯೋಗಪಟ್ಟೇನ ಬಧ್ನೀಯಾತ್ಪೃಷ್ಠಯೋಗತಃ ॥ ೭ ॥

ಆಕುಂಚ್ಯ ಜಾನುನೀ ಸಮ್ಯಕ್ಪಾದಂ ಕೃತ್ವಾ ಚ ಬಾಹ್ಯತಃ ।
ದಕ್ಷಿಣಂ ವಾಮಜಂಘಾಯಾಂ ಪರ್ಯಂಕಾಸನಕಾರಣಂ ॥ ೮ ॥

ಆಸನೇ ಸರ್ವತೋ ಭದ್ರೇ ಯದಾ ಭವತಿ ಮಾನವಃ ।
ಊರುಸ್ಥೋತ್ತಾನಚರಣಸ್ತದಾ ಸ್ಯಾತ್ಕಮಲಾಸನಂ ॥ ೯ ॥

---

೪-೯. ಅದಕ್ಕೆ ಪರಮೇಶ್ವರನು ಉತ್ತರ ಹೇಳುತ್ತಾನೆ.— ಯೋಗಾಸನಗಳು ನಾಲ್ಕು. ಸ್ವಸ್ತಿಕ, ಸರ್ವತೋಭದ್ರ, ಪರ್ಯಂಕ, ಕಮಲಾಸನಗಳೆಂದು ಅವುಗಳಿಗೆ ಹೆಸರು. ಅವುಗಳ ಲಕ್ಷಣಗಳನ್ನು ಹೇಳುತ್ತೇನೆ, ಕೇಳು. ಎರಡು ತೊಡೆಗಳನ್ನು ಮಡಿಸಿಕೊಂಡು ಸುಖವಾಗಿ ಕುಳಿತು, ಎಡ ಮೊಳಕಾಲನ್ನು ಬಲಗಾಲಮೇಲೆ ಬರುವಂತೆಯೂ, ಎಡತೊಡೆಯ ಮೇಲೆ ಬಲಗಾಲು ಬರುವಂತೆಯೂ ಆಸನಹಾಕಿ ಕುಳಿತರೆ ಅದು ಮೊದಲನೇ 'ಸ್ವಸ್ತಿಕಾಸನ' ವೆನ್ನಿಸುವುದು. ತೊಡೆ, ಮೊಳಕಾಲು, ಕಾಲುಗಳನ್ನು ಸರಿಯಾಗಿ ಮಡಿಸಿ ಸುಖವಾಗಿ ಕುಳಿತಿರುವುದು 'ಸರ್ವತೋಭದ್ರ" ವೆನಿಸುವುದು. ಪೃಷ್ಠಗಳನ್ನು ಮಣೆ (ಪರ್ಯಂಕ) ಯಮೇಲೆ ಬಲವಾಗೂರಿ ಮೊಳಕಾಲುಗಳನ್ನು ಎರಡು ಕೈಗಳಿಂದಲೂ ಕಟ್ಟಿಕೊಂಡು ಮುಂದಕ್ಕೆ ಕಾಲುಗಳೆರಡನ್ನೂ ಚಾಚಿಕೊಂಡು ಕೂತರೆ 'ಪರ್ಯಂಕಾಸನ'. ಸುಖಾವಹವಾದ ಸರ್ವತೋಭದ್ರಾಸನದಲ್ಲಿ ಕುಳಿತುಕೊಂಡು ಎಡಗಾಲನ್ನು ಬಲತೊಡೆಯಮೇಲೂ, ಬಲಗಾಲನ್ನು ಎಡತೊಡೆಯ ಮೇಲೂ ಹಾಕಿಕೊಂಡು ಕುಳಿತರೆ 'ಕಮಲಾಸನ' ವಾಗುವುದು

ಆಸನಸ್ಥಸ್ಯ ಕರಣಂ ನಿಬೋಧ ಗದತೋ ಮಮ ।
ಸಮಾನೀಯೋರುಮೂಲೇನ ಹಸ್ತೌ ಭಾರ್ಗವ ತಿರ್ಯಗೌ ॥ ೧೦ ॥

ಕೃತ್ವೋತ್ತಾನೌ ಸಮೌ ವಿದ್ವಾನ್ವಾಮಸ್ಯೋಪರಿದಕ್ಷಿಣಂ ।
ಅಂಗುಲೀಚ್ಛಾದಕಂ ವಿದ್ವಾನಂಗುಲೀನಾಂತು ವಿನ್ಯಸೇತ್ ॥ ೧೧ ॥

ಕಿಂಚಿದಾಕುಂಚಿತಾಂಗುಷ್ಠೌ ಕರ್ತವ್ಯೌ ಚ ತಥಾ ಕರೌ ।
ಉರಶ್ಚೋತ್ಥಾಪ್ಯ ವಿತತಂ ಕೃತ್ವಾ ರಾಮ ಪರಿಶ್ಲಥಂ ॥ ೧೨ ॥

ಪೃಷ್ಠಮಾಕುಂಚಯೇತ್ಸ್ಕಂಧೇ ದೇಹಮುನ್ನಾಮಯೇತ್ಸುಧೀಃ ।
ನಿಷ್ಕಂಪಾಂ ಸುದೃಢಾಂ ಋಜ್ವೀಂ ನಾತಿಸ್ತಬ್ಧಾಂ ನಕುಂಚಿತಾಂ ॥ ೧೩ ॥

ಗ್ರೀವಾಂ ವಿಧಾರಯೇದ್ಯತ್ನಾಚ್ಛಿರಃ ಕಾರ್ಯಂ ಸಮಂ ಸದಾ ।
ಸಂಪಶ್ಯನ್ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೪ ॥

ಕಿಂಚಿನ್ನಿಮೀಲಿತೇ ನೇತ್ರೇ ದಂತೈರ್ದಂತಾನ್ನ ಸಂಸ್ಪೃಶೇತ್ ।
ತಾಲುಮಧ್ಯಗತೇನೈವ ಜಿಹ್ವಾಗ್ರೇಣ ಸಮಾಹಿತಃ ॥ ೧೫ ॥

---

೧೧-೧೬. ಈರೀತಿ ಆಸನವನ್ನು ಸಿದ್ಧಪಡಿಸಿದೊಡನೆ ಕರಣ (ಇಂದ್ರಿಯ ನಿಗ್ರಹ)ವನ್ನು ಮಾಡುವ ಕ್ರಮವನ್ನು ಹೇಳುತ್ತೇನೆ. ಕೇಳು, ಭಾರ್ಗವರಾಮ! ಎರಡು ತೊಡೆಯ ಮೂಲೆಗಳಿಂದ ಎರಡು ಕೈಗಳನ್ನು ಅಡ್ಡಡ್ಡಲಾಗಿ ಹಾಕಿ, ಅಂಗತ್ತನಾಗಿ ಮಲಗಿ, ಎಡ ಅಂಗುಲಿಗಳನ್ನು ಮುಚ್ಚಿ, ಬಲಗೈ ಅಂಗುಲಿಗಳನ್ನು ಹೊರಗೆ ಕಾಣಿಸಿ, ಅಂಗುಷ್ಠ (ಬೆರಳು)ಗಳನ್ನು ಕೊಂಚ ಬಗ್ಗಿಸಿ, ಕೈಗಳು ಎದೆಯಮೇಲೆ ಬರುವಂತೆ ವಿಸ್ತರಿಸಿ ಪೃಷ್ಠಭಾಗವನ್ನು ಸಂಕೋಚಮಾಡಿಕೊಂಡು, ಹೆಗಲಮೇಲೆ ದೇಹವನ್ನೆತ್ತಿ ನಿಲ್ಲಿಸಬೇಕು. ಬಳಿಕ ನಡುಗದೆ, ಅಲ್ಲಾಡದೆ, ದೃಢವಾಗಿ, ಋಜುವಾಗಿರುವಂತೆ ಕತ್ತನ್ನು ಸಮನಾಗಿ ನಿಲ್ಲಿಸಿ ಅದರ ಮೇಲೆ ಶಿರಸ್ಸು ಸಮನಾಗಿರುವಂತೆ ಮಾಡಬೇಕು. ಹೀಗೆ ನಿಲ್ಲಿಸಿ ಕಣ್ಣುಗಳಿಂದ ಮೂಗಿನ ತುದಿಯನ್ನೇ ನೋಡುತ್ತಾ, ಅತ್ತಿತ್ತ ಚಲಿಸದೆ ಕಣ್ಣುಗಳನ್ನು ಅರ್ಧಮುಚ್ಚಿ, ಹಲ್ಲಿಗೆ ಹಲ್ಲನ್ನು ಸೋಕಿಸದೆ, ಅಂಗಳಿನ ಮಧ್ಯೆ ನಾಲಿಗೆಯನ್ನು ಚಲಿಸದೆ ನಿಲ್ಲಿಸಿ, ಈರೀತಿ ಬದ್ಧಕರಣನಾದ ಬಳಿಕ ಆ ಮಹಾಯೋಗಿಯು ಅಭ್ಯಾಸಬಲದಿಂದ ವಾಯುವನ್ನು ಜಯಿಸ (ಪ್ರಾಣಾಯಾಮವನ್ನು

ಸಬದ್ಧಕರಣೋವಿದ್ವಾನಭ್ಯಾಸಾತ್ಪವನಂ ಜಯೇತ್ ।
ಜಿತ್ವಾ ವಾಯುಂ ಯಥಾಶಕ್ತಿ ಯೋಗಂ ಯುಂಜೀತಬುದ್ಧಿಮಾನ್ ॥ ೧೭ ॥

ಆದೌತು ಚಿಂತಯೇತ್ಸ್ಥೂಲಾಂ ಭೂಮಿಂ ಪಂಚಗುಣಾನ್ವಿತಾಂ ।
ಲಬ್ಧಲಕ್ಷೋ ಮಹಾಯೋಗೀ ಭೂಮಿಯೋಗಂ ಸಮುತ್ಸೃಜೇತ್ ॥ ೧೭ ॥

ತತಶ್ಚತುರ್ಗುಣಂ ಧ್ಯಾನಂ ಕರ್ತವ್ಯಮುದಕೇ ದ್ವಿಜ ।
ಲಬ್ಧಲಕ್ಷ ಅಪಾಂ ಯೋಗೀ ಜಲಯೋಗಂ ಸಮುತ್ಸೃಜೇತ್ ॥ ೧೮ ॥

ತತಸ್ತು ಯೋಗಂ ಯುಂಜೀತ ತ್ರಿಗುಣಂ ದ್ವಿಜ ತೇಜಸಿ ।
ಲಬ್ಧಲಕ್ಷಶ್ಚ ತತ್ರಾಪಿ ವಹ್ನಿಯೋಗಂ ಸಮುತ್ಸೃಜೇತ್ ॥ ೧೯ ॥

ತತಸ್ತು ಯೋಗಂ ಯುಂಜೀತ ಪವನೇ ದ್ವಿಗುಣಂ ದ್ವಿಜ ।
ಲಬ್ಧಲಕ್ಷಶ್ಚ ತತ್ರಾಪಿ ವಾಯುಯೋಗಂ ಸಮುತ್ಸೃಜೇತ್ ॥ ೨೦ ॥

---

ಮಾಡ) ಬೇಕು. ಈರೀತಿ ಯಥಾಶಕ್ತಿ ಶ್ವಾಸಧಾರಣೆ ಮಾಡಿ ಯೋಗಾಭ್ಯಾಸಕ್ಕೆ ಆರಂಭಿಸಬೇಕು.

೧೭–೨೭. ಈ ಧ್ಯಾನಕ್ರಮವನ್ನು ಹೇಳುತ್ತಾರೆ—ಮೊದಲು ಈ ಭೂಮಿಯನ್ನು ಐದುಗುಣ (ಭೂಮಿ, ನೀರು, ಬೆಂಕಿ, ವಾಯು, ಆಕಾಶ ಗುಣ)ದಿಂದ ಕೂಡಿದೆಯೆಂದು ಲಕ್ಷ್ಯದಲ್ಲಿಟ್ಟವನಾಗಿ ಮಹಾಯೋಗಿಯು ಚೆನ್ನಾಗಿ ಭಾವಿಸಿ ಬಳಿಕ ಭೂಮಿಯೋಗ (ಗುಣ)ವನ್ನು ಬಿಟ್ಟುಬಿಡಬೇಕು. ಬಳಿಕ ನೀರು ನಾಲ್ಕು (ನೀರು, ಬೆಂಕಿ, ಗಾಳಿ, ಆಕಾಶ) ಗುಣಗಳಿಂದ ಕೂಡಿದುದೆಂದು ಮನಸ್ಸಿನೊಳ್ ಚೆನ್ನಾಗಿ ಚಿಂತಿಸಿ ಈ ಲಕ್ಷ್ಯಾನುಸಂಧಾನದಲ್ಲಿ ಇದ್ದಾಗಲೇ ಜಲಯೋಗವನ್ನು ತ್ಯಾಗಮಾಡಿಬಿಡಬೇಕು. ಸಮನಂತರದೊಳ್ ಯೋಗಿಪ್ರವರನು ಅಗ್ನಿಗುಣವು (ಅಗ್ನಿ, ವಾಯು, ಆಕಾಶ) ಮೂರು ತತ್ವದಿಂದೊಡಗೂಡಿದುದೆಂದು ಮನಸ್ಸಿಗೆ ದೃಢಮಾಡಿಕೊಂಡು ಧ್ಯಾನಮಾಡಿಯಾದ ಬಳಿಕ ಈ ಲಕ್ಷ್ಯಾನುಸಂಧಾನಸಮಯದಲ್ಲಿಯೇ ಅಗ್ನಿಯೋಗವನ್ನು ಬಿಟ್ಟುಬಿಡಬೇಕು. ಆ ಬಳಿಕ ವಾಯುಯೋಗವನ್ನು ವಾಯ್ವಾಕಾಶಗಳೆರಡರಿಂದೊಡಗೂಡಿದುದೆಂದು ಲಕ್ಷ್ಯದಲ್ಲಿಟ್ಟವನಾಗಿ ವಾಯುಯೋಗವನ್ನು ಬಿಟ್ಟುಬಿಡಬೇಕು. ಆ ಬಳಿಕ ಆಕಾಶ

ತತಸ್ತ್ವೇಕಗುಣಂ ಯೋಗಂ ಯುಂಜೀತ ಗಗನೇ ಬುಧಃ ।
ಲಬ್ಧಲಕ್ಷಶ್ಚ ತತ್ರಾಪಿ ಮನೋಯೋಗಗತಿರ್ಭವೇತ್ ॥ ೨೧ ॥

ಮನಸಶ್ಚಂದ್ರಮಾಃಪ್ರೋಕ್ತಃ ಪ್ರಥಮಂ ಚಂದ್ರಮಂಡಲೇ ।
ಊರ್ಧ್ವಲಕ್ಷಂ ಬುಧಃಕೃತ್ವಾ ಚಂದ್ರಮಂಡಲಮಧ್ಯಗೇ ॥ ೨೨ ॥

ಅಂಗುಷ್ಠಮಾತ್ರೇ ಪುರುಷೇ ಲಕ್ಷ್ಯಬಂಧಂ ತು ಕಾರಯೇತ್ ।
ಶಶಾಂಕಶತಸಂಕಾಶೇ ಸರ್ವಾಲಂಕಾರಭೂಷಿತೇ ॥ ೨೩ ॥

ಲಬ್ಧಲಕ್ಷ್ಯಶ್ಚ ತತ್ರಾಪಿ ಬುದ್ಧಿಯೋಗಗತಿರ್ಭವೇತ್ ।
ಬುದ್ಧಿಶ್ಚ ಭಗವಾನ್ಸೂರ್ಯಃ ಪ್ರಥಮಂ ಸೂರ್ಯಮಂಡಲೇ ॥ ೨೪ ॥

ಸಮಗ್ರಮೇವ ಸಂಪಶ್ಯೇತ್‌ಧ್ಯಾನಯೋಗೇನ ಬುದ್ಧಿಮಾನ್ ।
ಸೂರ್ಯಮಂಡಲಮಧ್ಯಸ್ಥಂ ಶತಸೂರ್ಯಸಮಪ್ರಭಂ ॥ ೨೫ ॥

ಅಂಗುಷ್ಠಮಾತ್ರಂ ಪುರುಷಂ ಸರ್ವಾಭರಣಭೂಷಿತಂ ।
ಚಿಂತಯೇತ್ಪ್ರಯತೋ ನಾಮ ತತ್ಪರಃ ಸುಸಮಾಹಿತಃ ॥ ೨೬ ॥

---

ಗುಣಯೋಗಾನುಸಂಧಾನಮಾಡಿ ಗಗನದೊಳ್ ನೆಟ್ಟ ದೃಷ್ಟಿಯುಳ್ಳವನಾಗಿ ಅದನ್ನು ಲಕ್ಷ್ಯದಲ್ಲಿಟ್ಟು ಥಟ್ಟನೆ ಅದನ್ನು ಬಿಟ್ಟವನಾಗಿ ಅವನ್ನು ಲಕ್ಷ್ಯದಲ್ಲಿಟ್ಟು ಥಟ್ಟನೆ ಅವನ್ನೂ ಬಿಟ್ಟವನಾಗಿ ಮನೋಯೋಗ ಗತಿಗೆ ತೆರಳಬೇಕು. "ಚಂದ್ರಮಾಮನಸೋಜಾತಃ" ಎಂದು ಪುರುಷಸೂಕ್ತದಲ್ಲಿ ಹೇಳಿರುವುದರಿಂದ ಧ್ಯಾನವನ್ನು ಚಂದ್ರಮಂಡಲದಲ್ಲಿಟ್ಟು ತನ್ನ ಲಕ್ಷ್ಯವನ್ನು ಊರ್ಧ್ವಮುಖವಾಗಿ ಮಾಡಿ ಚಂದ್ರಮಂಡಲ ಮಧ್ಯದಲ್ಲಿ ಸಿಲ್ಲಿಸಬೇಕು. ಆ ಮಂಡಲದಲ್ಲಿ ಪರಮಾತ್ಮನು ಅಂಗುಷ್ಠಮಾತ್ರ ಪುರುಷರೂಪನಾಗಿ ವಿರಾಜಮಾನನಾಗಿರುವನೆಂದು ಲಕ್ಷ್ಯಬಂಧವನ್ನು ಮಾಡಬೇಕು. ಆ ಪುರುಷನು ನೂರು ಚಂದ್ರರಂತೆ ತೇಜೋಮಯನಾಗಿಯೂ, ಸರ್ವಾಲಂಕಾರಭೂಷಿತನಾಗಿಯೂ, ಇರುವನೆಂದು ಲಕ್ಷ್ಯದಲ್ಲಿಟ್ಟು ಬುದ್ಧಿಯೋಗಗತಿಯಿಂದ ಧ್ಯಾನಿಸಬೇಕು ಬುದ್ಧಿಗೆ ಭಗವಾನ್ ಸೂರ್ಯನೇ ಅಧಿದೇವತೆಯಾದ್ದರಿಂದ ಧ್ಯಾನಯೋಗಗತಿಯನ್ನು ಚಂದ್ರಮಂಡಲದಿಂದ ಸೂರ್ಯಮಂಡಲದ ಕಡೆಗೆ ತಿರುಗಿಸಬೇಕು ಬುದ್ಧಿವಂತನಾದ ಮಹಾಯೋಗಿಯು ಧ್ಯಾನಯೋಗದಿಂದ ಸೂರ್ಯಮಂಡಲ ಮಧ್ಯಸ್ಥನಾದ ನೂರು ಸೂರ್ಯರಂತೆ ವಿರಾಜಮಾನನಾದ ಅಂಗುಷ್ಠಮಾತ್ರ ಪರಿಮಾಣವುಳ್ಳ ಸರ್ವಾಭರಣಭೂಷಿತನಾದ ಪರಮಾತ್ಮನನ್ನು ತದೇಕಧ್ಯಾನ ತತ್ಪರನಾಗಿ ಶುದ್ಧನಾಗಿ ಸಮಾಹಿತನಾಗಿ ಧ್ಯಾನಿಸಬೇಕು ಇವೇ

ಲಬ್ಧಲಕ್ಷಶ್ಚ ತತ್ರಾಪಿ ನಿತ್ಯಮಾತ್ಮಾನಮಾತ್ಮನಾ ।
ಆತ್ಮಸ್ಥಮೇವ ಸಂಪಶ್ಯೇದ್ಧ್ಯಾನಯೋಗೇನ ಭಾರ್ಗವ ॥ ೨೭ ॥

ಅಂಗುಷ್ಠಮಾತ್ರಂ ಪುರುಷಂ ಸೂರ್ಯಬಿಂಬಗತಂ ಯಥಾ ।
ಧ್ಯಾನಯೋಗೇನ ಸಂಪಶ್ಯೇತ್ತಥಾ ಪಶ್ಯೇತ್ತಥಾತ್ಮನಿ ॥ ೨೮ ॥

ಅಧೋಮುಖೇ ಹೃತ್ಕಮಲೇ ಕರ್ಣಿಕಾಯಾಂ ಭೃಗೂತ್ತಮ ।
ಲಬ್ಧಲಕ್ಷಶ್ಚ ತತ್ರಾಪಿ ಅವ್ಯಕ್ತಂ ಚಿಂತಯೇತ್ಪದಂ ॥ ೨೯ ॥

ಬಹಿರಂತಶ್ಚ ಸರ್ವತ್ರ ತೇಜಸಾ ತತ್ರ ಚಿಂತಯೇತ್ ।
ನೈವಾರ್ಕೇಣ ನ ಚಂದ್ರೇಣ ಸರ್ವಂ ವ್ಯಾಪ್ತಮಶೇಷತಃ ॥ ೩೦ ॥

ಲಬ್ಧಲಕ್ಷಂಚ ತತ್ರಾಪಿ ಪುರುಷಂ ಚಿಂತಯೇತ್ಪರಂ ।
ಶೂನ್ಯಂ ತು ಪುರುಷಂ ಧ್ಯಾನಂ ಪ್ರವದಂತಿ ಮನೀಷಿಣಃ ॥ ೩೧ ॥

---

ಆತ್ಮಧ್ಯಾನವು. ಈ ರೀತಿ ಧ್ಯಾನಯೋಗದಿಂದ ಪ್ರತಿದಿನವೂ, ತನ್ನನ್ನು ತಾನೇ ಧ್ಯಾನಿಸುತ್ತಾ ಲಬ್ಧಲಕ್ಷ್ಯನಾಗಿ ಆತ್ಮಸ್ಥ ಪರಮಾತ್ಮನನ್ನು ನೋಡುತ್ತ ಲಿರಬೇಕೈ? ಭಾರ್ಗವರಾಮ.

೨೮-೩೧. ಸೂರ್ಯಬಿಂಬಾಂತರ್ವರ್ತಿಯಾಗಿರುವ ಅಂಗುಷ್ಠಮಾತ್ರ ಪರಿಮಾಣದ ಪರಮಪುರುಷನನ್ನು ಹೇಗೆ ಧ್ಯಾನಯೋಗದಿಂದ ನೋಡಬಲ್ಲೆವೋ, ಅದರಂತೆಯೇ ತನ್ನ ಹೃದಯಾಕಾಶದಲ್ಲಿರುವ ಪರಮಾತ್ಮನನ್ನು ಧ್ಯಾನಯೋಗದಿಂದ ಕಂಡು ಅಧೋಮುಖವಾದ ಹೃತ್ಕಮಲದಲ್ಲಿ ಕರ್ಣಿಕೆಗಳೊಳಗೆ ಲಬ್ಧಲಕ್ಷ್ಯನಾಗಿ ಅಲ್ಲಿರುವ ಅವ್ಯಕ್ತ ಪರಮಾತ್ಮನನ್ನು ಚಿಂತಿಸಬೇಕು ಆ ಭಗವಂತನು ಒಳಗೆ ಹೊರಗೆ ಸರ್ವತ್ರ ತೇಜಸ್ಸಿನಿಂದ ತುಂಬಿರುವನೆಂದು ಭಾವನೆ ಮಾಡಬೇಕು. ಈ ತೇಜಸ್ಸು ಸೂರ್ಯನಿಂದಾಗಲೀ ಚಂದ್ರನಿಂದಾಗಲೀ ವ್ಯಾಪ್ತವಾದುದಲ್ಲ. ಸೂರ್ಯಚಂದ್ರರನ್ನೂ ಸಹ ತನ್ನ ಬೆಳಕಿನಿಂದ ಬೆಳಗಿಸುವ ಈ ತೇಜಸ್ಸೇ ಆತ್ಮತೇಜಸ್ಸೆಂದು ತಿಳಿಯಬೇಕು. ಈ ಆತ್ಮತೇಜಸ್ಸಿನಲ್ಲಿ ಲಕ್ಷ್ಯವನ್ನಿಟ್ಟು ನಿರಾಕಾರನಾದ ಪರಮಪುರುಷನನ್ನು ಧ್ಯಾನಕ್ಕೆ ತಂದುಕೊಳ್ಳಬೇಕು. ಈ ಪುರುಷಧ್ಯಾನವನ್ನು ಶೂನ್ಯ (ನಿರಾಕಾರ) ಧ್ಯಾನವೆಂದು ತಿಳಿದವರು ಹೇಳುತ್ತಾರೆ. ಯಾವನು ಸಾಕಾರ (ಮೂರ್ತಿಧ್ಯಾನ) ದಲ್ಲಿ ನೆಟ್ಟ

**ಸಾಕಾರೇ ಬದ್ಧಲಕ್ಷಸ್ತು ಶೂನ್ಯಂ ಶಕ್ನೋತಿ ಚಿಂತಿತುಂ ।**
**ಅನ್ಯಥಾ ತು ಸುಕಷ್ಟಂ ಸ್ಯಾನ್ನಿರಾಲಂಬಸ್ಯ ಚಿಂತನಂ ॥ ೩೨ ॥**

**ಚಿತ್ತವೃತ್ತಿನಿರೋಧೋ ಹಿ ದುಷ್ಕರಃ ಪ್ರತಿಭಾತಿ ಮೇ ।**
**ತತ್ರ ಯತ್ನಃ ಸದಾ ಕಾರ್ಯೋ ವಿಜಯೇ ಪವನಸ್ಯ ಚ ॥ ೩೩ ॥**

**ಚಿತ್ತವೃತ್ತಿನಿರೋಧೇನ ಪವನಸ್ಯ ಜಯೇನ ಚ ।**
**ಉಪಾಸನಾಯಾ ಶೂನ್ಯಸ್ಯ ನಿಷ್ಫಲತ್ವಂ ವಿಧೀಯತೇ ॥ ೩೪ ॥**

**ಅರೂಪಗಂಧಮನಸಂ ಶಬ್ದಸ್ಪರ್ಶವಿವರ್ಜಿತಂ ।**
**ಸರ್ವೇಂದ್ರಿಯಗುಣಾಂ ರಾಮ ಸರ್ವಸ್ಥಂ ಸರ್ವಗಂ ಚ ಯತ್ ॥ ೩೫ ॥**

**(ತಂ ಧ್ಯಾಯನ್ಪುರುಷಂ ತಸ್ಯ ಧ್ಯಾನಂ ಶೂನ್ಯಂ ಪ್ರಕೀರ್ತಿತಂ ।)**
**ತಸ್ಯ ಸ್ವರೂಪಂ ವಿಜ್ಞಾಯ ರಾಮ ಶೂನ್ಯಮುಪಾಸತಃ ॥ ೩೬ ॥**

---

ದೃಷ್ಟಿಯುಳ್ಳವನಾಗಿ ಧ್ಯಾನಮಾಡಬಲ್ಲನೋ ಆ ಮಹಾಯೋಗಿಯೇ ಶೂನ್ಯ (ನಿರಾಕಾರ) ವನ್ನು ಧ್ಯಾನಿಸಬಲ್ಲನು. ಹಾಗಲ್ಲದೆ ಮೂರ್ತಿಧ್ಯಾನ (ಸಾಕಾರಚಿಂತನೆ) ವನ್ನು ತಿಳಿಯದವನು ನಿರಾಲಂಬ (ನಿರಾಕಾರ) ಚಿಂತನೆಯನ್ನು ಸುತರಾಂ ಮಾಡಲರಿಯನು. ಇದಕ್ಕೆ ಚಿತ್ತವೃತ್ತಿನಿರೋಧವೇ ಮುಖ್ಯ ಕಾರಣ ಯೋಗಕ್ಕೆ ಚಿತ್ತವೃತ್ತಿನಿರೋಧವೇ ಮುಖ್ಯ ಗುರಿ. ಯೋಗಕ್ಕೆ ಚಿತ್ತವೃತ್ತಿನಿರೋಧವೆಂದೂ ಹೆಸರುಂಟು. ಇದು ಬಹು ದುಷ್ಕರವಾದುದು ಆದ್ದರಿಂದ ಚಿತ್ತವೃತ್ತಿಯನ್ನು ನಿರೋಧಿಸಿ ಆ ಮೂಲಕ ವಾಯುವನ್ನು ಜಯಿಸಲು (ಪ್ರಾಣಾಯಾಮವನ್ನು) ಪ್ರಯತ್ನಮಾಡಬೇಕು ಈ ರೀತಿ ವಾಯುನಿರೋಧದಿಂದ ಶೂನ್ಯೋಪಾಸನೆಯ ನಿಷ್ಫಲತ್ವವು ವಿಧಾಯಕಮಾಡಲ್ಪಟ್ಟಿದೆ

ಶೂನ್ಯೋಪಾಸನೆಯು ಎಂತಿರುವುದೆಂದರೆ—ರೂಪವಿಲ್ಲದ, ಗಂಧವಿಲ್ಲದ, ಮನಸ್ಸಿಲ್ಲದ, ಶಬ್ದ ಸ್ಪರ್ಶ ವಿವರ್ಜಿತವಾದರೂ ಸರ್ವೇಂದ್ರಿಯ ಗುಣವುಳ್ಳ, ಸರ್ವದರಲ್ಲಿ ತುಂಬಿರುವ ಸರ್ವವ್ಯಾಪಿಯಾದ ಒಂದು ನಿರಾಕಾರ ಪುರುಷಧ್ಯಾನಕ್ಕೆ ಶೂನ್ಯವೆಂದು ಹೇಳಲ್ಪಟ್ಟಿವೆ. ಇದರ ಸ್ವರೂಪವನ್ನು ತಿಳಿದು ಶೂನ್ಯೋಪಾಸನೆ ಮಾಡುವವನಿಗೆ ಸಕಲಬಂಧನವೂ (ಸಂಸಾರಕ್ಲೇಶ) ಮುಕ್ತಿಯಾಗಿ ಸಕಲ ಪ್ರಪಂಚದ ನಿಷ್ಫಲತ್ವವೂ

ಸರ್ವಬಂಧನಮುಕ್ತಸ್ಯ ನಿಷ್ಫಲತ್ವಂ ವಿಧೀಯತೇ ।
ಅಖಂಡಕಾರಿಣಸ್ತ್ವೇವಂ ನಿತ್ಯಂ ಭೃಗುಕುಲೋದ್ವಹ ॥ ೩೭ ॥

ಸಂವತ್ಸರಶತೇ ಪೂರ್ಣೇ ಸತ್ರಿಭಾಗೇ ಮಹಾಭುಜ ।
ನಿಷ್ಫಲತ್ವಂ ಪರಂ ಸ್ಥಾನಂ ಧ್ರುವಂ ಭವತಿ ಭಾರ್ಗವ ॥ ೩೮ ॥

॥ ರಾಮ ಉವಾಚ ॥

ಸಂವತ್ಸರಶತಂ ಪೂರ್ಣಂ ತ್ರಿಭಾಗಸಹಿತಂ ವಿಭೋ ।
ಅಜೀವತೋ ನಿಷ್ಫಲತ್ವಂ ಕಥಂ ಭವತಿ ಶಂಕರ ॥ ೩೯ ॥

॥ ಶಂಕರ ಉವಾಚ ॥

ಅಖಂಡಕಾರೀ ಭವತಿ ಯದ್ಯೇಕಮಪಿ ಜನ್ಮನಿ ।
ಜನ್ಮಕ್ರಮಾದವಶ್ಯಂ ಹಿ ರಾಮ ಜನ್ಮನಿಜನ್ಮನಿ ॥ ೪೦ ॥

ಪೂರಣೀಯಂ ಸತ್ರಿಭಾಗಂ ಧ್ರುವಂ ತೇನ ಸಮಾಃ ಶತಂ ।
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಂ ॥ ೪೧ ॥

---

ಸಿದ್ಧಿಸುತ್ತದೆ ಎಲೈ, ಭಾರ್ಗವರಾಮನೆ! ಈ ರೀತಿ ಅಖಂಡಕಾರಿಯೆನಿಸಿದ ಮಹಾತ್ಮನಿಗೆ ನೂರು ವರ್ಷ ತುಂಬಿದ ಮೇಲೆ ನಿಷ್ಫಲತ್ವವೆಂದು ತೋರಿಬಂದ ಪರಮಪದವಿಯೂ ಸಹ ನಿಜವಾಗಿ ಹಸ್ತಗತವಾಗುತ್ತದೆ.''

೩೯. ಪರಶುರಾಮನು ಪ್ರಶ್ನೆ ಮಾಡುತ್ತಾನೆ—'' ಮೂರುಭಾಗದಿಂದ ಕೂಡಿದ ನೂರುವರ್ಷಗಳ ಕಾಲ ಮನುಷ್ಯನು ಬದುಕದೆ ಇದ್ದರೆ ಈ ಯೋಗಾಭ್ಯಾಸವು ಎಂತು ನಿಷ್ಫಲವಾದೀತು ? ''

೪೦ ೪೧. ಪರಮೇಶ್ವರನು ಹೇಳುತ್ತಾನೆ—'' ಕೇಳೈ, ಪರಶುರಾಮನೆ ! ಒಂದೇ ಜನ್ಮದಲ್ಲಿ ಅಖಂಡಕಾರಿಯು ಮೇಲ್ಕಂಡಂತೆ ಸಿದ್ಧಿ ಹೊಂದದೆ ಹೋದರೆ ಜನ್ಮಕ್ರಮದಿಂದ ಅವಶ್ಯವಾಗಿ ಯೋಗಾಭ್ಯಾಸ ಮಾಡುತ್ತಲೇ ಇದ್ದು ; ಹೀಗೇ ಜನ್ಮಜನ್ಮಗಳಲ್ಲೂ ಸ್ವಲ್ಪಸ್ವಲ್ಪವಾಗಿ ಮೂರುಭಾಗ ಸಹಿತವಾದ ಶತಸಂವತ್ಸರಗಳನ್ನು ಮುಗಿಯಿಸಿ, ಅನೇಕ ಜನ್ಮಗಳು ಈ ರೀತಿ ಸಂಸಿದ್ಧನಾಗಿ ಆ ಬಳಿಕ ಪರಮಗತಿಯನ್ನು ಹೊಂದುವನು.

ಅಖಂಡಕಾರಿಣೋ ರಾಮ ಪ್ರವೃತ್ತಸ್ಯ ದ್ವಿಜನ್ಮನಃ ।
ಅವಶ್ಯಮೇವ ತತ್ಸ್ಥಾನಂ ಯದ್ವಿಷ್ಣೋಃ ಪರಮಂಪದಂ ॥ ೪೨ ॥

॥ ರಾಮ ಉವಾಚ ॥

ಅಖಂಡಕಾರಿತಾ ಪ್ರೋಕ್ತಾ ತ್ವಯಾ ದೇವ ದ್ವಿಜನ್ಮನಾಂ ।
ಶೂದ್ರೋ ವಾ ಯದಿವಾ ನಾರೀ ಕಥಂ ಸ್ಥಾನಮವಾಪ್ನುಯಾತ್ ॥ ೪೩ ॥

॥ ಶಂಕರ ಉವಾಚ ॥

ಅಖಂಡಕಾರಿಣಃ ಪತ್ನೀ ಪ್ರಾಪ್ನೋತಿ ಪರಮಂ ಪದಂ ।
ಶೂದ್ರಃ ಸ್ವಕರ್ಮನಿರತಃ ಕೇಶವಾರ್ಪಿತಮಾನಸಃ ॥ ೪೪ ॥

ಜಾತ್ಯಂತರಮಥಾಸಾದ್ಯ ಭಕ್ತಿಯೋಗೇನ ಭಾವಿತಃ ।
ಅಖಂಡಕಾರೀ ಭವತಿ ತತಃ ಪ್ರಾಪ್ನೋತಿ ತತ್ಪದಂ ॥ ೪೫ ॥

---

೪೨. ಎಲೈ, ಭಾರ್ಗವರಾಮನೆ, ಕೇಳು. ವಿಷ್ಣುವಿನ ಪರಮಪವಿತ್ರವಾದ ಆವ ಪದವಿಯುಂಟೋ ಅದನ್ನು ಅಖಂಡಕಾರೀ ಕರಣದಲ್ಲಿ ಪ್ರವೃತ್ತನಾದ ಬ್ರಾಹ್ಮಣನು ಅವಶ್ಯವಾಗಿ ಹೊಂದಿಯೇ ಹೊಂದುವನು.

೪೩. ಪರಶುರಾಮನು ಹೇಳುತ್ತಾನೆ.— ಸ್ವಾಮಿ, ಪರಮೇಶ್ವರನೆ, ಬ್ರಾಹ್ಮಣನಿಂದ ಹೊಂದಲ್ಪಡುವ ಅಖಂಡಕಾರಿತ್ವವು ನಿನ್ನಿಂದ ಹೇಳಲ್ಪಟ್ಟಿತಷ್ಟೆ? ಶೂದ್ರನಾಗಲಿ, ಹೆಂಗಸಾಗಲಿ ಈ ಮಹಾಪದವಿಯನ್ನು ಹೊಂದಲು ಏನು ಮಾಡಬೇಕು?

೪೪–೪೫. ಪರಮೇಶ್ವರನು ಹೇಳುತ್ತಾನೆ, — ಎಲೈ, ರಾಮನೇ, ಕೇಳು. ಅಖಂಡಕಾರೀ ಮಹಾನುಭಾವನ ಪತ್ನಿಯು ತನ್ನ ಗಂಡನ ಜತೆಯಲ್ಲಿ ತಾನೂ ಪರಮಪದವಿಯನ್ನು ಪಡೆಯುತ್ತಾಳೆ ಕೇಶವನಲ್ಲಿ ಭಕ್ತಿಯಿಂದಿದ್ದ ಶೂದ್ರನು ತನ್ನ ಸ್ವಕರ್ಮನಿರತನಾಗಿದ್ದು ಸ್ವಧರ್ಮವನ್ನು ಕಾಪಾಡಿಕೊಂಡಿದ್ದರೆ ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಭಕ್ತಿಯೋಗದಿಂದ ಭಾವಿತನಾಗಿ ಅಖಂಡಕಾರಿತ್ವವನ್ನು ಹೊಂದಿ ವಿಷ್ಣುಪದವನ್ನು ಪಡೆಯುವನು.

॥ ಮಾರ್ಕಂಡೇಯ ಉವಾಚ ॥

ಏತಾವದುಕ್ತಂ ದೇವೇನ ತ್ರ್ಯಂಬಕೇನ ಮಹಾತ್ಮನಾ ।
ತದಾ ತುಷ್ಟೇನ ರಾಮಾಯ ರಹಸ್ಯ ಮೃಷಿಪೂಜಿತಂ ॥ ೪೬ ॥

ಏತದ್ಭಕ್ತಿವಿಹೀನಾಯ ನ ತುವಾಚ್ಯಂಯದೂತ್ತಮ ।
ನನಾಸ್ತಿಕಾಯ ಮೂರ್ಖಾಯ ತರ್ಕದುಷ್ಟಾಯ ವಾ ತಥಾ ॥ ೪೭ ॥

ಏತತ್ತು ಶೃಣ್ವತೇ ವಾಚ್ಯಂ ಶಿಷ್ಯಾಯ ಚ ಸುತಾಯಚ ।
ಯೋ ವಾ ದದ್ಯಾನ್ಮಹೀಂ ಕೃತ್ಸ್ನಾಂ ಸಶೈಲವನಕಾನನಾಂ ॥ ೪೮ ॥

ಏತದ್ಗುಹ್ಯಂ ಪರಂ ಪುಣ್ಯಂ ಪವಿತ್ರಂ ಪಾಪನಾಶನಂ ।
ಆಯುಷ್ಯಂ ಚ ಯಶಸ್ಯಂ ಚ ಕಲಿದುಃಸ್ವಪ್ನನಾಶನಂ ॥ ೪೯ ॥

ಅಧ್ಯೇತವ್ಯಮಿದಂ ಸಮ್ಯಗ್ವಚನಂ ಶಂಕರಸ್ಯ ಚ ।
ಸರ್ವಬಂಧವಿನಿರ್ಮುಕ್ತಃ ಪ್ರಾಪ್ನೋತಿ ಪರಮಂ ಪದಂ ॥ ೫೦ ॥

---

೪೬. ಮಾರ್ಕಂಡೇಯನು ಹೇಳುತ್ತಾನೆ.- ಪರಶುರಾಮನ ವಿಷಯದಲ್ಲಿ ಸಂತುಷ್ಟನಾದ ಮಹಾಮಹಿಮೆಯುಳ್ಳ ಪರಮೇಶ್ವರನಿಂದ ರಹಸ್ಯವಾದ ಋಷಿ ಪೂಜಾಕ್ರಮವು ಇಷ್ಟರಮಟ್ಟಿಗೆ ಹೇಳಲ್ಪಟ್ಟಿತು.

೪೭-೫೧. ಎಲೈ, ವಜ್ರನರಪತಿಯೆ! ಈ ಪೂರ್ವೋಕ್ತವಾದ ಪೂಜಾಕ್ರಮವನ್ನು ವಿಷ್ಣುಭಕ್ತನಲ್ಲದವನಿಗೂ, ನಾಸ್ತಿಕನಿಗೂ, ಮೂರ್ಖನಿಗೂ, ದುಷ್ಟತರ್ಕ ಮಾಡುವವನಿಗೂ ಹೇಳಬಾರದು. ಮತ್ತು ಅದಾರು ಭಕ್ತಿಯಿಂದ ಕೇಳುವರೋ ಅವರಿಗೂ, ಮಗನಿಗೂ, ಶಿಷ್ಯನಿಗೂ ಅಗತ್ಯವಾಗಿ ಹೇಳಬೇಕು ಈ ಚರಿತ್ರೆಯನ್ನು ಕೇಳಿದವನು ಶೈಲಗಿರಿ ನದಿಗಳಿಂದ ವ್ಯಾಪ್ತವಾದ ಅಖಂಡ ಭೂಮಂಡಲವನ್ನು ದಾನ ಮಾಡಿದ ಫಲವನ್ನು ಹೊಂದುವನು ಇದು ಬಹು ರಹಸ್ಯವಾದುದು. ಪರಮಪುಣ್ಯಪ್ರದವಾದುದು, ಪರಿಶುದ್ಧವಾದುದು, ಪಾಪಪರಿಹಾರಕವಾದುದು, ಆಯುಸ್ಸನ್ನೂ ಯಶಸ್ಸನ್ನೂ ಉಂಟುಮಾಡತಕ್ಕದು. ಸಕಲ ದುಃಖವನ್ನೂ ಪರಿಹಾರ ಮಾಡತಕ್ಕದ್ದು ಈರೀತಿ ಶಂಕರನಿಂದ ಹೇಳಲ್ಪಟ್ಟು ಪ್ರಸಿದ್ಧವಾಗಿರುವ ಶಂಕರಗೀತೆಯನ್ನು ಯಾರು ಚೆನ್ನಾಗಿ ಅಧ್ಯಯನ (ಪಾರಾಯಣ) ಮಾಡುವರೋ ಅವರು ಸಕಲ ಬಂಧನಗಳನ್ನೂ

ಏತಾವದುಕ್ತಂ ತ್ರಿಪುರಾಂತಕೇನ
ತುಷ್ಟೇನ ರಾಮಸ್ಯ ಮಹಾಬಲಸ್ಯ ।
ಮಯಾ ತಥಾ ತೇಽಭಿಹಿತಂ ನರೇಂದ್ರ
ಧಾರ್ಯಂ ತ್ವಯೇದಂ ಸತತಂ ಯಥಾವತ್ ॥ ೫೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಂಕರಗೀತಾಸಮಾಪ್ತಿರ್ನಾಮ
ಪಂಚಷಷ್ಟಿತಮೋಽಧ್ಯಾಯಃ

---

ಕಳೆದುಕೊಂಡು ಪರಮಪದವಿಯನ್ನು ಹೊಂದುವರು. ಎಲೈ, ವಜ್ರರಾಜನೆ, ಪರಮೇಶ್ವರನಿಂದ ಪರಶುರಾಮನಿಗೆ ಉಪದೇಶಿಸಲ್ಪಟ್ಟ ಈ ಶಂಕರಗೀತೆಯನ್ನು ಯಥಾವತ್ತಾಗಿ ನಿನಗೆ ಹೇಳಿದ್ದೇನೆ. ಇದನ್ನು ನೀನು ಸರ್ವದಾ ಮನಸ್ಸಿನಲ್ಲಿ ಧ್ಯಾನಿಸು (ಧರಿಸು) ತ್ತಿರೆಂದು ಮಾರ್ಕಂಡೇಯನು ವಜ್ರರಾಜನಿಗೆ ಹೇಳಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಶಂಕರಗೀತೆಯು ಮುಗಿಯಿತೆಂಬ ಹೆಸರಿನ
ಅರವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಷಟ್ಷಷ್ಟಿತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಕೈಲಾಸಶಿಖರೇ ರಮ್ಯೇ ರಾಮಸ್ಯ ರಮತಸ್ತದಾ ।
ಆಜಗಾಮ ಹರಿಂ ದ್ರಷ್ಟುಂ ದೇವದೇವಃ ಪುರಂದರಃ ॥ ೧ ॥
ಸ ಸಮಾಸಾದ್ಯ ದೇವೇಶಂ ಪ್ರಣಮ್ಯ ವೃಷಭಧ್ವಜಂ ।
ಉವಾಚ ವಚನಂ ಸಮ್ಯಙ್ಮುದಾ ರಾಮಸ್ಯಸನ್ನಿಧೌ ॥ ೨ ॥

॥ ಶಕ್ರ ಉವಾಚ ॥

ತ್ವತ್ಪ್ರಸಾದೇನ ದೇವೇಶ ಮಯಾ ಪ್ರಾಪ್ತಂ ತ್ರಿವಿಷ್ಟಪಂ ।
ರಾಮೇಣ ಘಾತಿತಾಃ ಸರ್ವೇ ಯಥಾ ಮೇ ದೇವಶತ್ರವಃ ॥ ೩ ॥

---

### ಅರವತ್ತಾರನೇ ಅಧ್ಯಾಯವು

೧-೨. ಮಾರ್ಕಂಡೇಯ ಋಷಿಗಳು ಹೇಳುತ್ತಾರೆ.— ಕೈಲಾಸ ಪರ್ವತದ ಮನೋಹರವಾದ ಶಿಖರದಲ್ಲಿ ಸಂತೋಷದಿಂದ ಕಾಲಯಾಪನೆಮಾಡುತ್ತಾ ಪರಶುರಾಮನು ಸುಖದಿಂದಿದ್ದ ಸಮಯದಲ್ಲಿ ದೇವತೆಗಳಿಗೊಡೆಯನಾದ ಇಂದ್ರನು ಪರಮೇಶ್ವರನನ್ನು ನೋಡುವುದಕ್ಕಾಗಿ ಬಂದನು. ಆ ಇಂದ್ರನು ವೃಷಭ ಧ್ವಜನಾದ ಈಶ್ವರನನ್ನು ನಮಸ್ಕರಿಸಿ ಆತನ ಬಳಿಯಲ್ಲಿ ಕುಳಿತಿದ್ದ ಪರಶುರಾಮನ ಮುಖವನ್ನು ನೋಡುತ್ತಾ ಸಂತೋಷಭರಿತನಾಗಿ ಈ ಮಾತನ್ನಾಡುತ್ತಾನೆ.

೩. ದೇವೇಂದ್ರನು ಹೇಳುತ್ತಾನೆ.— ಎಲೈ, ಮಹೇಶ್ವರನೇ ನಿನ್ನ ಪರಮಾನುಗ್ರಹದಿಂದ ನಾನು ಸ್ವರ್ಗವನ್ನು ಪುನಃ ಬಂದು ಸೇರಿಕೊಂಡಿದ್ದಾಯಿತು. ನನ್ನ ಶತ್ರುಗಳಾದ ರಾಕ್ಷಸರೆಲ್ಲರೂ ಈ ಪರಶುರಾಮನಿಂದ ಸಂಹರಿಸಲ್ಪಟ್ಟುದರಿಂದ ನಾನು ಕೃತಾರ್ಥನಾದೆನು.

**ಅವಧ್ಯಾಸ್ತ್ರಿದಶಾನಾಂ ಯೇ ವರದಾನಬಲೋದ್ಧತಾಃ ।**
**ನರವಧ್ಯಾಃ ಕೃತಾಸ್ತೇ ಹಿ ಬ್ರಹ್ಮಣಾ ಸುಮಹಾತ್ಮನಾ ॥ ೪ ॥**

**ಪಾತಾಲನಿಲಯಾ ದೇವ ಅವಧ್ಯಾ ದೇವತಾಗಣೈಃ ।**
**ಬಾಧಂತೇ ನರವಧ್ಯಾ ಮೇ ಲೋಕಾನಾಂ ಚ ಜಗತ್ಪತೇ ॥ ೫ ॥**

**ತಾಂಶ್ಚ ಘಾತಯ ದೇವೇಶ ರಾಮೇಣಾಕ್ಲಿಷ್ಟಕರ್ಮಣಾ ।**

**॥ ಮಾರ್ಕಂಡೇಯ ಉವಾಚ ॥**

**ಏವಂ ಕರಿಷ್ಯತೀ ತ್ಯುಕ್ತ್ವಾ ವಿಸೃಜ್ಯ ತ್ರಿದಶೇಶ್ವರಂ ॥ ೬ ॥**
**ಉವಾಚ ವಚನಂ ರಾಮಂ ಭಾರ್ಗವಂ ಪುರತಃ ಸ್ಥಿತಂ ।**

**॥ ಶಂಕರ ಉವಾಚ ॥**

**ಗಚ್ಛ ಭಾರ್ಗವ ಪಾತಾಲಂ ಪಾತಾಲನಿಲಯಾನ್ ಜಹಿ ॥ ೭ ॥**

---

೪-೫. ಯಾವ ರಾಕ್ಷಸರು ವರದಾನಬಲದಿಂದ ಉದ್ಧವರಾಗಿದ್ದರೋ ದೇವತೆಗಳಿಂದ ಅವಧ್ಯರಾಗಿ ಲೋಕಹಿಂಸಕರಾಗಿದ್ದರೋ ಅಂತಹ ಶೂರ ರಕ್ಕಸರು ನರರಿಂದ ಸಂಹೃತರಾದರು. ಇದು ಮಹಾತ್ಮನಾದ ಬ್ರಹ್ಮನ ಮಹಿಮೆ. ಪರಮೇಶ್ವರನೇ, ಕೇಳು, ಇನ್ನೂ ಹಲವು ರಕ್ಕಸರು ಪಾತಾಳಲೋಕದಲ್ಲಿದ್ದುಕೊಂಡು ದೇವತೆಗಳನ್ನು ಬಾಧಿಸುತ್ತಿದ್ದಾರೆ. ಎಲೈ, ಜಗತ್ಪತಿಯಾದ ಶಂಕರನೇ, ಆ ಘಾತುಕ ರಕ್ಕಸರನ್ನು ಈ ಪರಶುರಾಮನಿಂದ ಸಂಹಾರಮಾಡಿಸಿ ಲೋಕೋದ್ಧಾರಮಾಡು.

೬. ಮಾರ್ಕಂಡೇಯನು ಹೇಳುತ್ತಾನೆ.— ಎಲೈ, ವಜ್ರನೇ, ಕೇಳು ಪುರಂದರನು ಹೇಳದ ಮಾತಿಗೆ ಪರಮೇಶ್ವರನು ಅಯ್ಯ, ಇಂದ್ರ ! ಹಾಗೆಯೇ ಆಗಲಿ ಇದೇ ಮೇರೆ ಈ ಪರಶುರಾಮನು ನಿಮ್ಮ ಶತ್ರುಗಳನ್ನು ಸಂಹಾರಮಾಡುತ್ತಾನೆ. ನೀನು ನಿರ್ಭಯನಾಗಿ ಹೊರಡೆಂದು ಹೇಳಿ ಇಂದ್ರನನ್ನು ಬೀಳ್ಕೊಟ್ಟು ಅವನು ಹೊರಟು ಹೋದ ಬಳಿಕ ತನ್ನ ಮುಂದೆ ಕುಳಿತಿದ್ದ ಪರಶುರಾಮನನ್ನು ಕುರಿತು ಈ ಮಾತನ್ನು ಹೇಳಿದನು.

೭-೯. ಪರಮೇಶ್ವರನು ಹೇಳುತ್ತಾನೆ.— ಎಲೈ, ಭಾರ್ಗವರಾಮನೆ, ನೀನು ಈಗಲೇ ಪಾತಾಳಲೋಕಕ್ಕೆ ಪ್ರಯಾಣಮಾಡು. ಅಲ್ಲಿರತಕ್ಕ ದುರಾಚಾರಿಗಳಾದ ನರ

**ಶಕ್ರಶತ್ರೂನ್ನುದ್ರಾಚಾರಾನ್ನರವಧ್ಯಾನ್ಮಹಾಸುರಾನ್ ।**
**ವೈಷ್ಣವಂ ಚಾಪರತ್ನಂ ತೇ ಮಯಾ ನ್ಯಸ್ತಂ ಪಿತುಃ ಕರೇ ॥ ೮ ॥**

**ತದಾದಾಯ ಶರೈಸ್ತೀಕ್ಷ್ಣೈರ್ಜಹಿ ತಾನ್ರಾಮ ದಾನವಾನ್ ।**
**ಅಕ್ಷಯಂ ತೂಣಮಾದಾಯ ಶರಪೂರ್ಣಮಿದಂ ತಥಾ ॥ ೯ ॥**

**॥ ಮಾರ್ಕಂಡೇಯ ಉವಾಚ ॥**

**ಏವಮುಕ್ತ್ವಾ ದದೌ ಚಾಸ್ಯ ತೂಣಮಕ್ಷಯಸಾಯಕಂ ।**
**ದತ್ವಾ ಚ ಭಗವಾನಾಹ ರಾಮಂ ಪರಬಲಾರ್ದನಂ ॥ ೧೦ ॥**

**॥ ಶಂಕರ ಉವಾಚ ॥**

**ತೂಣಮೇತತ್ಪ್ರದಾತವ್ಯಂ ತ್ವಯಾಽಗಸ್ತ್ಯಾಯ ಭಾರ್ಗವ ।**
**ಚಾಪರತ್ನಂ ಚ ರಾಮಾಯ ಕೃತೇ ಕರ್ಮಣಿ ಸುವ್ರತ ॥ ೧೧ ॥**

---

ಭಕ್ಷಕರಾದ ಇಂದ್ರನ ಶತ್ರುಗಳನ್ನು ಸಂಹರಿಸಿ ಬಾ. ನಿನ್ನ ವೈಷ್ಣವ ಧನುಸ್ಸು ನಿನ್ನ ತಂದೆಯ ಬಳಿಯಲ್ಲಿ ನನ್ನಿಂದ ಇಡಲ್ಪಟ್ಟಿದೆ. ಅದನ್ನು ತೆಗೆದುಕೊಂಡು ಹೋಗಿ ಆ ರಾಕ್ಷಸರನ್ನೆಲ್ಲಾ ಬಾಣದಿಂದ ಸಂಹರಿಸಿ ಹಿಂತಿರುಗಿ ಬಾ ಮತ್ತು ಈಗ ನಾನು ನಿನ್ನ ವಶಕ್ಕೆ ಕೊಡುವ ಅಕ್ಷಯವಾದ ಬಾಣಗಳಿಂದ ತುಂಬಿರುವ ಧನುಸ್ಸನ್ನು ತೆಗೆದುಕೋ!

೧೦. ಮಾರ್ಕಂಡೇಯನು ಹೇಳುತ್ತಾನೆ.— ಕೇಳು ವಜ್ರರಾಜ! ಈಶ್ವರನು ಈ ರೀತಿಯಾಗಿ ಹೇಳಿ ಪರಶುರಾಮನಿಗೆ ಅಕ್ಷಯವಾದ ಬಾಣಗಳಿಂದ ಪರಿಪೂರ್ಣವಾಗಿದ್ದ ಧನುಸ್ಸನ್ನೂ ಬತ್ತಳಿಕೆಯನ್ನೂ ಸಹ ಕೊಟ್ಟು ಆ ಪರಬಲ ಸಂಹಾರಿಯಾದ ಪರಶುರಾಮನನ್ನು ಕುರಿತು ಮತ್ತೂ ಹೇಳುತ್ತಾನೆ.

೧೧ ಈಶ್ವರನು ಹೇಳುತ್ತಾನೆ.,—- ಏನೆಂದರೆ, ಪರಶುರಾಮ! ನೀನು ಶತ್ರುಸಂಹಾರಮಾಡಿದ ಬಳಿಕ ನಿನ್ನ ಕೆಲಸವೆಲ್ಲಾ ಆದಮೇಲೆ ಈ ಬತ್ತಳಿಕೆಯನ್ನು ಅಗಸ್ತ್ಯರ ವಶಕ್ಕೆ ಕೊಡಬೇಕು. ಈ ಧನುಸ್ಸು (ಬಿಲ್ಲು)ನ್ನು ದಶರಥರಾಮನಿಗೆ ಕೊಡಬೇಕು, ಕಂಡೆಯಾ?

ಅಗಸ್ತ್ಯೋಽಪಿ ಮಹಾತೇಜಾಸ್ತೂಣಮಕ್ಷಯಸಾಯಕಂ ।
ರಾಘವಾಯಾತಿಯಶಸೇ ರಾಮಾಯೈವ ಪ್ರದಾಸ್ಯತಿ ॥ ೧೨ ॥

ರಾಮಸಂದರ್ಶನಾದೂರ್ಧ್ವಂ ಮಾ ಕೃಥಾಃ ಶಸ್ತ್ರಧಾರಣಂ ।
ರಾಮಸಂದರ್ಶನೇ ರಾಮ ತವ ತೇಜೋ ಹಿ ವೈಷ್ಣವಂ ॥ ೧೩ ॥

ರಾಮಂ ಪ್ರವೇಕ್ಷ್ಯತಿ ತದಾ ಸುರಕಾರ್ಯಾರ್ಥಮೂರ್ಜಿತಂ ।
ಯಾವತ್ತ್ವಂ ತೇಜಸಾ ಯುಕ್ತೋ ವೈಷ್ಣವೇನ ಪರಂತಪ ॥ ೧೪ ॥

ತಾವಚ್ಛತ್ರುಗಣಾನ್ಸರ್ವಾನ್ಸಮರೇಷು ವಿಜೇಷ್ಯಸಿ ।

ಸ್ಥಾತುಂ ನ ಶಕ್ತಾಸ್ತವ ದೈತ್ಯಸೇನಾ
ಅಸ್ತ್ರಾಯುಧಸ್ಯ ಪ್ರಮುಖೇ ದ್ವಿಜೇಂದ್ರ ।
ಆದಾಯ ಚಾಪಂ ಯುಧಿ ವೈಷ್ಣವಂ
ತತ್ತೂಣಂ ತಥೇಮಂ ಜಹಿ ದೇವಶತ್ರುಂ ॥ ೧೫ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಶಂಕರಾನುಶಾಸನೇ
ಷಟ್ಷಷ್ಟಿತಮೋಽಧ್ಯಾಯಃ

---

೧೨. ಹಾಗೆ ನೀನು ಅಗಸ್ತ್ಯರಿಗೆ ಕೊಟ್ಟ ಅಕ್ಷಯ ಬಾಣಗಳಿಂದೊಡಗೂಡಿದ ಬತ್ತಳಿಕೆಯನ್ನೂ ಸಹ ಅವರು ರಘುವಂಶೋದ್ಧಾರಕನಾದ ಶ್ರೀರಾಮನಿಗೆ ಕೊಡುತ್ತಾರೆ.

೧೩. ಎಲೈ ಪರಶುರಾಮನೇ ಶ್ರೀದಶರಥರಾಮನ ಸಂದರ್ಶನಾನಂತರ ನೀನು ಶಸ್ತ್ರಗ್ರಹಣ ಮಾಡಕೂಡದು, ಶ್ರೀರಾಮನ ಸಂದರ್ಶನವಾದೊಡನೆ ನಿನ್ನ ಸಂಬಂಧವಾದ ವೈಷ್ಣವ ತೇಜಸ್ಸು ದೇವಕಾರ್ಯಾರ್ಥವಾಗಿಯೇ ಶ್ರೀರಾಮನಲ್ಲಿ ಹೋಗಿ ಸೇರಿಕೊಳ್ಳುತ್ತದೆ. ನಿನ್ನಲ್ಲಿ ವೈಷ್ಣವ ತೇಜಸ್ಸು ಎಲ್ಲಿಯತನಕ ಇರುವುದೋ ಅಲ್ಲಿಯತನಕ ನೀನು ಯುದ್ಧದಲ್ಲಿ ಶತ್ರುಗಳನ್ನು ಜಯಿಸುತ್ತೀಯೆ. ಎಲೈ. ಪರಶುರಾಮನೇ ಈ ಧನುಸ್ಸನ್ನು ತೆಗೆದುಕೋ, ಇದನ್ನು ಹಿಡಿದು ನೀನು ಯುದ್ಧದಲ್ಲಿ ನಿಂತರೆ ನಿನ್ನ ಮುಂದೆ ಯಾರೂ ನಿಲ್ಲಲಾರರು. ರಾಕ್ಷಸರು ತೃಣದಂತೆ ನಿನ್ನಿಂದ ಜಯಿಸಲ್ಪಡುತ್ತಾರೆ.

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಪರಶುರಾಮನನ್ನು ಕುರಿತ ಶಂಕರಾನುಶಾಸನವೆಂಬ
ಹೆಸರಿನ ಅರವತ್ತಾರನೇ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಸಪ್ತಷಷ್ಟಿತಮೋಽಧ್ಯಾಯಃ

---

॥ ರಾಮ ಉವಾಚ ॥

ವೈಷ್ಣವಂ ಚಾಪರತ್ನಂ ತತ್ಕಿಮರ್ಥಂ ಭವತಾ ಕರೇ ।
ನ್ಯಸ್ತಂ ಚ ತನ್ಮೇ ಭಗವಾಂಶ್ಚಾಪರತ್ನಂ ಚ ಕೀದೃಶಂ ॥ ೧ ॥

॥ ಶಂಕರ ಉವಾಚ ॥

ಮಾಯಾ ಹಿ ವೈಷ್ಣವೀ ರಾಮ ಯಯಾ ಸಂಮೋಹಿತಾಃ ಪುರಾ ।
ದೇವಾಶ್ಚ ಋಷಯಶ್ಚೈವ ಗತ್ವಾಽನ್ತಃ ಪ್ರಣತಾಃ ಸ್ಥಿತಾಃ ॥ ೨ ॥

---

## ಅರವತ್ತೇಳನೇ ಅಧ್ಯಾಯ

೧. ಪರಶುರಾಮನು ಹೇಳುತ್ತಾನೆ.— ವೈಷ್ಣವ ಸಂಬಂಧವಾದ ಚಾಪವೆನ್ನುವುದಾವುದು ? ಅದೇತಕ್ಕಾಗಿ ನಿನ್ನ ಕೈಯಲ್ಲಿ ಧರಿಸಲ್ಪಟ್ಟಿತು ? ಅದನ್ನೂ ಮತ್ತೊಂದು ಚಾಪರತ್ನವೆನ್ನುವುದನ್ನೂ ದಯಮಾಡಿ ನನಗೆ ತಿಳಿಸೆಂದು ಈಶ್ವರನನ್ನು ಕೇಳಿದನು

೨-೩. ಈಶ್ವರನು ಹೇಳುತ್ತಾನೆ.— ಎಲೈ, ಪರಶುರಾಮನೇ ಕೇಳು, ವಿಷ್ಣು ಸಂಬಂಧವಾದ ಮಾಯೆಯೊಂದುಂಟು. ಆ ಮಾಯೆಯಿಂದ ಪೂರ್ವದಲ್ಲಿ ದೇವತೆಗಳೂ ಋಷಿಗಳೂ ಸಹ ಮೋಹಿತರಾಗಿ ಏನೂ ತೋರದೆ ದೇವರಮುಂದೆ ನಮಸ್ಕರಿಸಿ ನಿಂತುಕೊಂಡರು. ಆ ದೇವನಾರೆಂದರೆ, ಯಜ್ಞಕ್ಕೆ ಆಧಾರಭೂತನಾಗಿ ವಿಷ್ಣುವಿಗೆ

ಯಜತಾಂ ಪರಮಾಧಾರಂ ದೇವಂ ಕಮಲಸಂಭವಂ ।
ಭೂತಭವ್ಯಭವಿಷ್ಯಸ್ಯ ಪ್ರಭುಂ ಲೋಕನಮಸ್ಕೃತಂ　　　॥ ೩ ॥

॥ ದೇವಾ ಊಚುಃ ॥

ವಾಸುದೇವಸ್ಯ ದೇವಸ್ಯ ಮಹಾದೇವಸ್ಯ ಚಾಪ್ಯಥ ।
ಅಂತರಂ ಜ್ಞಾತುಮಿಚ್ಛಾಮಃ ಕಃ ಕಸ್ಮಾದತಿರಿಚ್ಯತೇ ॥　　　॥ ೪ ॥

॥ ಶಂಕರ ಉವಾಚ ॥

ಏವಮುಕ್ತಸ್ಸುರಸ್ಸರ್ವೈ ಋಷಿಭಿಶ್ಚ ಪಿತಾಮಹಃ ।
ವಿಹಸ್ಯೋವಾಚ ತಾನ್ಸರ್ವಾಂಸ್ತಯೋರ್ಗತ್ವಾಪರಸ್ಪರಂ　　　॥ ೫ ॥

॥ ಬ್ರಹ್ಮೋವಾಚ ॥

ಜನಯಧ್ವಂ ಸುರಾಃ ಸರ್ವೇ ವಿರೋಧಮೃಷಿಭಿಸ್ಸಹ ।
ವಿರೋಧೇ ತು ಸಮುತ್ಪನ್ನೇ ತಯೋರ್ಯುದ್ಧ ಉಪಸ್ಥಿತೇ　　　॥ ೬ ॥

ಜ್ಞಾಸ್ಯಧ್ವಮನ್ತರಂ ದೇವಾಸ್ತಯೋರ್ನಾಸ್ತ್ಯತ್ರ ಸಂಶಯಃ ।

---

ನಾಭಿಕಮಲದಿಂದ ಹುಟ್ಟಿದವನಾಗಿ ಭೂತ ಭವಿಷ್ಯ ಭವ್ಯಗಳಿಗೆ ಪ್ರಭುವಾಗಿ ಲೋಕನಮಸ್ಕೃತನಾದ ಬ್ರಹ್ಮದೇವನೆಂದು ತಿಳಿದುಕೋ

೪. ದೇವತೆಗಳು ಹೇಳುತ್ತಾರೆ.— ಬ್ರಹ್ಮನನ್ನು ದೇವತೆಗಳು, ಸ್ವಾಮಿ ! ವಾಸುದೇವ ಮಹಾದೇವ, ಇವರುಗಳೊಳಗೆ ಏನು ವ್ಯತ್ಯಾಸ ? ಯಾರಿಗಿಂತ ಯಾರು ದೊಡ್ಡವರೆಂಬುದನ್ನು ದಯಮಾಡಿ ತಿಳಿಸಬೇಕೆಂದು ಪ್ರಾರ್ಥಿಸುತ್ತೇವೆ.

೫. ಪರಮೇಶ್ವರನು ಹೇಳುತ್ತಾನೆ.— ಈ ರೀತಿ ದೇವತೆಗಳಿಂದಲೂ ಋಷಿಗಗಳಿಂದಲೂ ಕೇಳಲ್ಪಟ್ಟವನಾಗಿ ಬ್ರಹ್ಮನು ಹಾಸ್ಯದ ನಗುವನ್ನು ನಕ್ಕು ಅವರಿಬ್ಬರ ಮನೋಭಿಪ್ರಾಯವನ್ನೂ ತಿಳಿದವನಾಗಿ ಈ ರೀತಿ ಹೇಳುತ್ತಾನೆ.

೬. ಬ್ರಹ್ಮನು ಹೇಳುವ ಮಾತು:- ಎಲೈ ದೇವತೆಗಳಿರಾ, ನೀವೂ ಋಷಿಗಳೂ ಸೇರಿ ಇದೇ ವಿಚಾರವಾಗಿ ವಾಸುದೇವ ಮಹಾದೇವರಿಗೆ ವಿರೋಧವನ್ನು ತಂದಿಟ್ಟು ಬಿಡಿ. ಆಗ ಒಬ್ಬರಿಗೊಬ್ಬರು ವಿರೋಧಿಗಳಾಗಿ ನಿಂತು ಯುದ್ಧಮಾಡುತ್ತಾರೆ. ಆಗಲೀಗ ಇಬ್ಬರಲ್ಲಾರು ದೊಡ್ಡವರೆಂದು ತಿಳಿದುಹೋಗುವುದು ಈ ವಿಷಯದಲ್ಲಿ ಸಂಶಯವಿಲ್ಲ

॥ ಶಂಕರ ಉವಾಚ ॥

ಏವಮುಕ್ತಾಃ ಸುರಾಸ್ಸರ್ವೇ ಸಾರ್ಧಮೃಷಿಗಣೈಸ್ತದಾ ॥ ೭ ॥

ಆವಯೋರ್ಜನಯಾಮಾಸುರ್ವಿರೋಧಂ ಭೃಗುನಂದನ ।
ವಿಷ್ಣೋರಾಧಿಕ್ಯಮನ್ವಿಚ್ಛಂಸ್ತಸ್ಯ ಮಾಯಾವಿಮೋಹಿತಾಃ ॥ ೮ ॥

ಕೃತವಾನಸ್ಮಿ ದೇವೇನ ದೇವವಾಕ್ಯೇನ ವಿಗ್ರಹಂ ।
ಪ್ರಭಾವದರ್ಶನಾರ್ಥಾಯ ತ್ವಾವಯೋರ್ವಿಗ್ರಹೇ ತದಾ ॥ ೯ ॥

ಆಸನ್ನಮಭವದ್ಯುದ್ಧಂ ಸರ್ವಸತ್ವಭಯಂಕರಂ ।
ಆವಯೋರ್ಭೃಗುಶಾರ್ದೂಲ ತದಾ ಯುದ್ಧೇ ಉಪಸ್ಥಿತೇ ॥ ೧೦ ॥

ಆಜಗಾಮಾಥತಂ ದೇಶಂ ಬ್ರಹ್ಮಾಶುಭಚತುರ್ಮುಖಃ ।
ದೇವಾ ಬ್ರಹ್ಮರ್ಷಯಶ್ಚೈವ ತಥಾ ರಾಜರ್ಷಯೋಽಮಲಾಃ ॥ ೧೧ ॥

---

೭-೯ ಪರಮೇಶ್ವರನು ಹೇಳುತ್ತಾನೆ.—ಈ ರೀತಿ ಹೇಳಲ್ಪಟ್ಟ ಮೇಲೆ ಸಕಲ ದೇವತೆಗಳೂ ಸಹ ಋಷಿಗಳೊಡನೆ ಸೇರಿ ಯೋಚಿಸಿ ನನಗೂ ಮಹಾವಿಷ್ಣುವಿಗೂ ವಿರೋಧವನ್ನು ತಂದೊಡ್ಡಿದರು ನಾನೂ ಸಹ ವಿಷ್ಣುವಿನ ಹೆಚ್ಚಿಗೆಯೇನಿದೆಯೋ ನೋಡೋಣವೆಂದು ಯೋಚಿಸಿಕೊಂಡು ವಿಷ್ಣುಮಾಯೆಯಿಂದ ಮೋಹಿತನಾಗಿ ದೇವತೆಗಳ ಮಾತನ್ನು ನಂಬಿಕೊಂಡು ವಿಷ್ಣುಪ್ರಭಾವದ ದರ್ಶನಕ್ಕಾಗಿ ಯುದ್ಧಕ್ಕೆ ಆರಂಭಮಾಡಿಯೇ ಬಿಟ್ಟೆನು. ಕೇಳಯ್ಯ ಪರಶುರಾಮ, ಈ ರೀತಿ ನಮ್ಮಿಬ್ಬರಿಗೂ (ಹರಿ ಹರರಿಗೆ) ಯುದ್ಧಾರಂಭವಾಯಿತು.

೧೦-೧೧. ಈ ಯುದ್ಧವು ಸಕಲ ಪ್ರಾಣಿಗಳೂ ಭಯಪಡುವ ರೀತಿಯಲ್ಲಿ ಆರಂಭವಾಯಿತು. ಕೇಳಯ್ಯ, ಪರಶುರಾಮ, ನಮ್ಮಿಬ್ಬರಿಗೂ (ಹರಿಹರರಿಗೆ) ಯುದ್ಧವು ಉಪಕ್ರಮವಾದೊಡನೆಯೇ ಆ ಸ್ಥಳಕ್ಕೆ ಚತುರ್ಮುಖ ಬ್ರಹ್ಮನು ಬಲು ಬೇಗ ಓಡಿಬಂದನು. ಬ್ರಹ್ಮನು ಬಂದೊಡನೆ ದೇವತೆಗಳೂ ಬ್ರಹ್ಮರ್ಷಿಗಳೂ ಪರಿಶುದ್ಧರಾದ ರಾಜರ್ಷಿಗಳೂ ಸಹ ಆ ಸ್ಥಳಕ್ಕೆ ಬಂದರು

ಸರ್ವೇಷಾಂ ಸಮವೇತಾನಾಮಾವಯೋರ್ಯುದ್ಧಸಂಗರೇ ।
ಉವಾಚ ವಚನಂ ಬ್ರಹ್ಮಾ ಸರ್ವಲೋಕನಮಸ್ಕೃತಃ ॥ ೧೨ ॥

॥ ಬ್ರಹ್ಮೋವಾಚ ॥

ನಕರ್ತವ್ಯಂ ಜಗನ್ನಾಥೌ ಯುದ್ಧಂ ಪರಮದಾರುಣಂ ।
ಯುಷ್ಮದ್ಯುದ್ಧೇನಸಕಲಂ ನಶ್ಯತೀದಂ ಜಗತ್ತ್ರಯಂ ॥ ೧೩ ॥

ಗೃಹೀತಂ ಚಾಪರತ್ನಂ ಯತ್ಸ್ವಯಂ ದೇವೇನಚಕ್ರಿಣಾ ।
ತದಾರೋಪಯತಾಂಶೂಲೀ ಶೂಲಿಚಾಪಂ ಜನಾರ್ದನಃ ॥ ೧೪ ॥

ಜ್ಞಾಸ್ಯಾಮಿ ಚಾಂತರಂ ದೇವೌ ಚಾಪಾರೋಪಣಕರ್ಮಣಾ ।

॥ ಶಂಕರ ಉವಾಚ ॥

ಏವಮುಕ್ತೇ ಮಮಕರಾದ್ಧನುರ್ಜಗ್ರಾಹ ಕೇಶವಃ ।
ಆರೋಪಿತುಂ ನ ಮೇ ಶಕ್ತಿಃ ಸರ್ವಯತ್ನೇನ ಚಾಭವತ್ ॥ ೧೫ ॥

---

೧೨. ಹೀಗೆ ನಮ್ಮಿಬ್ಬರ ಯುದ್ಧವನ್ನು ನೋಡುವುದಕ್ಕೆ ಸಕಲರೂ ಬಂದು ಸೇರಿದೊಡನೆ ಸರ್ವಲೋಕ ಪೂಜಿತನಾದ ಬ್ರಹ್ಮನು ಇಂತು ಹೇಳಿದನು.

೧೩-೧೪. ಬ್ರಹ್ಮನು ಹೇಳುತ್ತಾನೆ. ಸ್ವಾಮಿ! ನೀವಿಬ್ಬರೂ ಲೋಕದೊಡೆಯರು. ನೀವಿಬ್ಬರೂ ಈ ರೀತಿ ಭಯಂಕರ ಯುದ್ಧಕ್ಕಾರಂಭಿಸಿದರೆ ಈ ಮೂರು ಲೋಕವೂ ನಾಶವಾಗಿ ಹೋಗುತ್ತದೆ. ಆದ್ದರಿಂದ ಈಗ ಒಂದು ಸುಲಭೋಪಾಯದಿಂದ ನಿಮ್ಮಿಬ್ಬರಲ್ಲಿ ವ್ಯತ್ಯಾಸವನ್ನು ಕಂಡು ಹಿಡಿಯೋಣ. ಪರಮೇಶ್ವರನು ವಿಷ್ಣು ಚಾಪವನ್ನು ಧರಿಸಿ ಅದನ್ನು ಬಗ್ಗಿಸಿ ಕಟ್ಟಲಿ. ಮಹಾವಿಷ್ಣುವು ಶೈವಚಾಪವನ್ನು ಧರಿಸಿ ಹೆದೆಯನ್ನೇರಿಸಲಿ. ಆಕ್ಷಣ ಇಬ್ಬರ ಸಾರವೂ ಸ್ಪಷ್ಟವಾಗಿ ತಿಳಿದುಹೋಗುತ್ತದೆ.

೧೫. ಈಶ್ವರನು ಹೇಳುತ್ತಾನೆ—ಈ ರೀತಿ ಹೇಳಿದೊಡನೆ ಕೇಶವನು ನನ್ನ ಕೈಯ್ಯಲ್ಲಿದ್ದ ಧನುಸ್ಸನ್ನು ಬಹು ಸುಲಭವಾಗಿ ತೆಗೆದುಕೊಂಡು ಬಿಲ್ಲು ಬಗ್ಗಿಸಿಬಿಟ್ಟನು. ನಾನೂ ಅದರಂತೆ ಮಾಡಲು ನನ್ನ ಸರ್ವಶಕ್ತಿಯನ್ನೂ ಉಪಯೋಗಿಸಿದಾಗ್ಯೂ ಹೆದೆಯನ್ನೇರಿಸಲಾಗಲಿಲ್ಲ.

**ತತಶ್ಚ ಗತಮೋಹೇನ ಮಯಾ ಜ್ಞಾತೋ ಮಹೇಶ್ವರಃ ।**
**ಜ್ಞಾತ್ವಾ ವಿಸೃಷ್ಟಚಾಪೇನ ಸ್ತುತಶ್ಚ ಭಗವಾಂಸ್ತದಾ ॥ ೧೬ ॥**

**ನಮೋಽಸ್ತು ತೇದೇವವರಾಪ್ರಮೇಯ**
**ನಮೋಽಸ್ತು ತೇ ಸರ್ವಗುಣಾನ್ತರಾಯ ।**
**ನಮೋಽಸ್ತು ತೇ ದೇವಗಣಾರ್ಚಿತಾಯ**
**ನಮೋಽಸ್ತು ತೇ ಸರ್ವಗುಣೋತ್ತರಾಯ ॥ ೧೭ ॥**

**ಉನ್ಮೇಷಮಾತ್ರೇಣ ತವಾಪ್ರಮೇಯ**
**ದಿನಂಸಮಗ್ರಂ ಪ್ರಥಿತಾಮಹಸ್ಯ ।**
**ನಿಮೇಷಮಾತ್ರೇಣ ನಿಶಾಪ್ರದಿಷ್ಟಾ**
**ಯಸ್ಯಾಂ ಸಮಾದಾಯ ಜಗತ್ಸ ಶೇತೇ ॥ ೧೮ ॥**

**ನ ಕಾರಣಂ ವೇದ್ಮಿ ತವೇಶಸೃಷ್ಟೌ**
**ಸಂಹಾರಕಾರ್ಯಂ ಚ ತಥಾ ನ ವೇದ್ಮಿ ।**

---

೧೬. ಆಗಲೀಗ ನನಗೆ ಪ್ರಾಪ್ತವಾಗಿದ್ದ ಅಜ್ಞಾನವು ಪರಿಹಾರವಾಗಿ ಪರಮೇಶ್ವರನ (ಮಹಾವಿಷ್ಣುವಿನ) ಸ್ವರೂಪವು ಗೊತ್ತಾಯಿತು. ಆ ಕೂಡಲೆ ನಾನು ವಿಷ್ಣುಚಾಪವನ್ನು ಕೆಳಗಿಟ್ಟು ಪರಮಾತ್ಮನನ್ನು ಇಂತು ಸ್ತೋತ್ರಮಾಡಿದೆನು.

೧೭-೨೪. ಈಶ್ವರನು ಮಾಡಿದ ವಿಷ್ಣುಸ್ತೋತ್ರ—ದೇವದೇವೋತ್ತಮನೇ! ಅಪ್ರಮೇಯನೇ! ನಿನಗೆ ನಮಸ್ಕಾರ. ಸಕಲ ಗುಣಗಳಲ್ಲೂ ತುಂಬಿರುವ, ದೇವಗಣಾರ್ಚಿತನಾದ ಸರ್ವಗುಣಾತ್ಮಕನಾದ ಪರಮಾತ್ಮನೇ! ನಿನಗೆ ನಮಸ್ಕಾರ. ಸ್ವಾಮಿ! ನೀನು ಕಣ್ಣುರೆಪ್ಪೆ ತೆಗೆದೊಡನೆ ಬ್ರಹ್ಮನ (ಸೃಷ್ಟಿಯು) ಹಗಲು ಪೂರ್ತಾ ನಡೆದು ನೀನು ರೆಪ್ಪೆ ಮುಚ್ಚಿದೊಡನೆ ಬ್ರಹ್ಮನ ರಾತ್ರಿ (ಪ್ರಳಯು) ಆರಂಭಿಸುವುದು. ಆಗ ಸಕಲ ಪ್ರಪಂಚಗಳನ್ನೂ ನಾಶಗೊಳಿಸಿ ಬ್ರಹ್ಮನು ತನ್ನಲ್ಲಡಗಿಸಿ ಮಲಗಿಕೊಳ್ಳುವನು. ಈ ಕಾರಣ ನನಗೆ ಇನ್ನೂ ಚೆನ್ನಾಗಿ ತಿಳಿದಿಲ್ಲ ಪ್ರಪಂಚ ಸೃಷ್ಟಿ ಏಕಾಗುವುದೋ? ಸಂಹಾರಕಾರ್ಯವದೇತಕ್ಕೆ ನಡೆಯುವುದೋ? ನಾನು ಬೇರೆ ಕಾಣೆನು. ನಿನ್ನ ಆದಿ,

ಆದ್ಯಂ ನ ಮಧ್ಯಂ ನ ತಥೈವ ಚಾನ್ತಂ
ತ್ವನ್ಮೇಕ ಈಶಃ ಪುರುಷಃ ಪುರಾಣಃ ॥ ೧೯ ॥

ಸರ್ವೇಷು ಭೂತೇಷು ತಥಾ ಸ್ಥಿತಸ್ತ್ವಂ
ಸರ್ವಾಣಿ ಭೂತಾನಿ ತಥಾ ತವೇಶ ।
ಭೂತಾಂತರಸ್ಥೋಽಪಿ ನ ಭೂತಸಂಸ್ಥ
ಆಶ್ಚರ್ಯಮೇತನ್ಮಮ ದೇವದೇವ ॥ ೨೦ ॥

ಭೂತಾಂತರಸ್ಥೋಽಪಿ ನ ಭೂತನಾಥಃ
ಭೂತಾರ್ಜಿತೈಃ ಕರ್ಮಭಿರಾಪ್ಯಸೇ ತ್ವಂ ।
ಕರ್ಮಾಣಿ ಸರ್ವಾಣಿ ಜಗತ್ತ್ರಯಸ್ಯ
ಧರ್ಮೇ ಸದಾ ಯನ್ಮಹದದ್ಭುತಂ ತತ್ ॥ ೨೧ ॥

ಗಂಧಃ ಪೃಥಿವ್ಯಾಂ ಚ ರಸೋಽಪ್ಸು ದೇವ
ವಾಯೌ ಯಥಾ ಸ್ಪರ್ಶಗುಣಸ್ತ್ವದೀಯಃ ।
ರೂಪಂ ತಥಾಽಗ್ನೌ ಗಗನೇ ಚ ಶಬ್ದೋ
ಗುಣಾಃ ಸಮಗ್ರಾಸ್ತವ ಭೂತಸಂಘೇ ॥ ೨೨ ॥

---

ಮಧ್ಯ, ಅಂತಗಳು ಯಾವುವೆಂಬುದೂ ಸಹ ನನಗೆ ಗೊತ್ತಿಲ್ಲ. ಪುರಾಣಪುರುಷನಾದ ನೀನೊಬ್ಬನೇ ಸಕಲ ಭೂತಗಳಲ್ಲಿ ಇದ್ದುಕೊಂಡಿದ್ದೀಯೆ! ಹಾಗೆಯೇ ಸಕಲ ಭೂತಗಳೂ ನಿನ್ನಾಶ್ರಯದಲ್ಲೇ ಇವೆ. ಹೀಗೆ ನೀನು ಸಕಲ ಭೂತಗಳೊಳಗೆ ಇದ್ದಾಗ್ಯೂ, ಭೂತಗಳಿಗೆ ಗೋಚರನಾಗದೆ ಇದೀಯೆ ಇದು ನನಗೆ ಆಶ್ಚರ್ಯವಾಗಿ ತೋರುತಲಿದೆ. ಎಲ್ಲ ಭೂತಗಳೊಳಗೆ ನೀನಿದ್ದಾಗ್ಯೂ, ಸಕಲ ಭೂತಗಳಿಂದ ಸಂಪಾದಿಸಲ್ಪಡುವ ಕರ್ಮಗಳಿಂದಲೂ ನೀನು ಗೋಚರನಾಗದೆ ಇದ್ದೀಯೆ! ಲೋಕದ ಸಮಸ್ತ ಕರ್ಮಗಳೂ ಧರ್ಮದಲ್ಲಿ ಸದಾ ನಿಂತಿರುತ್ತವೆ. ಇದು ಪರಮಾದ್ಭುತವಾದ ವಿಚಾರ. ಭೂಮಿಯೊಳಗೆ ನೀನು ಗಂಧರೂಪನಾಗಿ, ನೀರಿನಲ್ಲಿ ರಸರೂಪನಾಗಿ, ವಾಯುವಿನಲ್ಲಿ ಸ್ಪರ್ಶರೂಪನಾಗಿ, ಅಗ್ನಿಯಲ್ಲಿ ರೂಪಗುಣಯುಕ್ತನಾಗಿ. ಆಕಾಶದಲ್ಲಿ ಸ್ಪರ್ಶರೂಪಗುಣಗಳಿಂದಿದ್ದು, ಸಕಲಭೂತ ಸಂಘದೊಳಗೂ ಅಡಕನಾಗಿ ಎಲ್ಲರ ಮನಸ್ಸಿನೊಳಗೂ

ಮನೋಗತಸ್ತ್ವಂ ಚ ತಥಾ ವಿತರ್ಕೋ
ಬುದ್ಧ್ಯಾ ಗತಸ್ತ್ವಂ ಚ ವಿನಿಶ್ಚಯೋಽತ್ರ ।
ಚಿದ್ರೂಪಮಾತ್ಮನ್ಯಥ ದೇವದೇವ
ಅವ್ಯಕ್ತಸಂಸ್ಥಸ್ಯ ಗುಣತ್ರಯಸ್ತ್ವಂ ॥ ೨೩ ॥

ತ್ವಮೇವ ಭೂತಾನಿ ಚ ತದ್ಗುಣಾಶ್ಚ
ಮೂರ್ತೇರ್ವಿಭಿನ್ನೋಽಪಿ ನ ಭೂತಭಿನ್ನಃ ।
ತತ್ತ್ವಾನಿ ಸರ್ವಾಣಿ ಚ ತದ್ವ್ಯತೀತಃ
ತ್ವಮೇವ ದೇವಃ ಪುರುಷಃ ಪ್ರದಿಷ್ಟಃ ॥ ೨೪ ॥

ತವೇಚ್ಛಯಾ ಸ್ಯಾತ್ಸಕಲಾ ತ್ರಿಲೋಕೀ
ತವೇಚ್ಛಯಾ ದೇವ ತಥಾ ವಿನಶ್ಯೇತ್ ।
ಇತ್ಥಂವಿಧಸ್ಯಾನಘ ಕರ್ಮಣಸ್ತೇ
ಸ್ತುತಿಃ ಕಥಂ ಸ್ಯಾತ್ಪರಮಸ್ಯ ಧಾಮ್ನಃ ॥ ೨೫ ॥

---

ನಿಂತು ವಿತರ್ಕಮಾಡುತ್ತಾ ಬುದ್ಧಿಗತನಾಗಿ ನಿಶ್ಚಯಮಾಡಿಕೊಳ್ಳುತ್ತಾ ಪರಮಾತ್ಮನಲ್ಲಿ ಚಿದ್ರೂಪನಾಗಿದ್ದು ಅವ್ಯಕ್ತಪ್ರಾಣಿಗಳೊಳಗೆ ಗುಣತ್ರಯಗಳಿಂದ ಕೂಡಿರುವಿ! ನೀನೇ ಸಕಲಭೂತರೂಪನಾಗಿಯೂ, ತದ್ಗುಣಸ್ವರೂಪನಾಗಿಯೂ,

ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।
ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಙ್ಕ್ತೇ ವಿಶ್ವಭುಗವ್ಯಯಃ ॥

ಎಂದು ಹೇಳಿರುವ ಮೇರೆ ಬೇರೆ ಬೇರೆ ಭಿನ್ನಮೂರ್ತಿಯಾಗಿ ತೋರುತ್ತಲಿದ್ದೀಯೆ! ಸಕಲ ತತ್ವಗಳೂ ತದ್ವ್ಯತೀತ ವಸ್ತುಗಳೂ ನೀನೇ ಆಗಿರುವೆಯ್ಯಾ, ಪರಮಪುರುಷನೇ!

೨೫–೨೫. ನಿನ್ನ ಇಚ್ಛೆಯಿಂದಲೇ ಈ ಮೂರು ಲೋಕವೂ ನಿರ್ಮಿತವಾಗುತ್ತದೆ ನಿನ್ನ ಇಚ್ಛೆಯಿಂದಲೇ ಈ ಮೂರು ಲೋಕವೂ ನಾಶವಾಗುತ್ತದೆ. ಈ ವಿಧವಾದ ಕರ್ಮವನ್ನೆಸಗುತ್ತಿರುವ ನಿನ್ನನ್ನು ಸ್ತೋತ್ರಮಾಡುವುದೆಂದರೇನು? ಈ ರೀತಿ ನಾನು ಮಹಾವಿಷ್ಣುವನ್ನು ಸ್ತೋತ್ರಮಾಡಲು ಆ ಮಹಾತ್ಮನು ದೇವತೆಗಳ ಗುಂಪಿನ ಮಧ್ಯದಲ್ಲಿದ್ದ ನನ್ನನ್ನು ಕುರಿತು ಈ ರೀತಿ ಹೇಳಿದನು—

ಏವಂಸ್ತುತೋ ದೇವವರೋ ಮಯಾಸಾ
ವುವಾಚ ಮಾಂ ದೇವಗಣಸ್ಯ ಮಧ್ಯೇ ।
ಯೋಽಹಂ ಸದೇವಃ ಪರಮೇಶ್ವರಸ್ತ್ವಂ
ಯೋಽಹಂ ಸದೇವಃ ಪ್ರಪಿತಾಮಹಶ್ಚ ॥ ೨೬ ॥

ಆಶ್ರಿತ್ಯ ಮೂರ್ತಿತ್ರಿತಯಂ ಮಯೇದಂ
ಕರ್ಮತ್ರಯಂ ಶಂಕರಸಾಧ್ಯತೇ ವೈ ।
ಉತ್ಪತ್ತಿನಾಶೌ ಪರಿಪಾಲನಂ ಚ
ಕಾಲತ್ರಯೇ ಶಂಕರ ದೇವಕಾರ್ಯಾತ್ ॥ ೨೭ ॥

ಮೂರ್ತಿರ್ಮಮೋಗ್ರಾ ಜಗತಾಂ ತವೇಯಂ
ಸಂಹಾರಕಾರ್ಯಾರ್ಥಮುದೀರ್ಣದರ್ಪಾ ।
ಪ್ರಭುರ್ಭವಃ ಕಾರಣಕಾರಣಾನಾಂ
ಪೂಜ್ಯಶ್ಚ ಸರ್ವೇಶ್ವರ ಸರ್ವದೇವೈಃ ॥ ೨೮ ॥

---

ನಾನು ಯಾವ ದೇವದೇವನೆಂದು ನೀನು ಭಾವಿಸಿರುವೆಯೋ ಆ ಮಹಾಪುರುಷ ವಾಚ್ಯನಾದ ನಾನೇ ನೀನೆಂದೂ, ಆ ಪರಬ್ರಹ್ಮನಾದ ಚತುರ್ಮುಖಬ್ರಹ್ಮನೂ ಸಹ ನಾವೇ ಎಂದೂ, ಈ ನಾವು ಮೂವರೂ ಮೂರು ವಿಧ ಮೂರ್ತಿಗಳಾಗಿ ತೋರಿ ಸೃಷ್ಟಿ, ಸ್ಥಿತಿ, ಪ್ರಳಯ ಕರ್ಮಗಳನ್ನೆಸಗುತ್ತಿರುವೆವೆಂದೂ ತಿಳಿದುಕೊಳ್ಳು ಶಂಕರನೇ! ದೇವತಾಕಾರ್ಯಕ್ಕೋಸ್ಕರ ಉತ್ಪತ್ತಿ, ಸ್ಥಿತಿ, ಲಯಗಳನ್ನು ನಾವು ಮೂವರೂ ಬ್ರಹ್ಮ, ವಿಷ್ಣು, ಮಹೇಶ್ವರರಾಗಿ ಮಾಡುತ್ತಿರುವೆವು ಎಲೈ ಮಹೇಶ್ವರನೇ, ಜಗತ್ಪ್ರಧಾನನಾದ ನಿನ್ನನ್ನು ಯಾರು ಭಕ್ತಿಯಿಂದ ನಮಸ್ಕರಿಸುವರೋ ಮತ್ತು ಪೂಜೆಮಾಡುವರೋ ಅವರಿಗೆ ನನ್ನ (ವೈಷ್ಣವ)ಸ್ಥಾನವು ಸುಲಭವಾಗಿ ಸಿಕ್ಕುತ್ತದೆ. ನನ್ನ ಸಂಬಂಧವಾದ ಈ ವೈಷ್ಣವಧನುಸ್ಸನ್ನು ಪರಶುರಾಮನಿಗೋಸ್ಕರ ನೀನು ಕೊಡು. ಅವನು ಈ ಧನುಸ್ಸಿನಿಂದ ಶತ್ರುಸಂಹಾರಮಾಡಿ ತ್ರೇತಾಯುಗದಲ್ಲಿ ಅವತರಿಸುವ ರಾಘವನಾಮಕ

ಯೇ ತ್ವಾಂನಮಸ್ಯನ್ತಿ ಜಗತ್ಪ್ರಧಾನಂ
ಭಕ್ತಿಂ ಪರಾಂ ಯೇ ಚ ವಹಂತಿ ತುಭ್ಯಂ ।
ಭಕ್ತ್ಯಾ ಚ ನಿತ್ಯಂ ತವ ಪೂಜಯಂತಿ
ಸ್ಥಾನಂಹಿ ತೇಷಾಂ ಸುಲಭಂ ಮದೀಯಂ ॥ ೨೯ ॥

ಮದೀಯಮೇತದ್ಭುವಿ ಚಾಪರತ್ನಂ
ಪ್ರದೀಯತಾಂ ಭಾರ್ಗವನಂದನಾಯ ।
ಋಚೀಕಪುತ್ರಾಯ ಗುಣಾಧಿಕಾಯ
ತಸ್ಮಾತ್ಸಮಾದಾಸ್ಯತಿ ತಸ್ಯ ಪುತ್ರಃ ॥ ೩೦ ॥

ಸ ತೇನ ಚಾಪೇನ ನಿಹತ್ಯ ಶತ್ರೂ
ನ್ಕೃತ್ವಾಚಲಕ್ಷ್ಮೀಂ ವಸುಧಾಂ ಸುರೇಶ ।
ತಚ್ಚಾಪರತ್ನಂ ಭುವಿ ರಾಘವಾಯ
ಪ್ರದಾಸ್ಯತೇ ರಾಮ ಇತಿ ಶ್ರುತಾಯ ॥ ೩೧ ॥

ಕೃತ್ವಾಸರಾಮೋಽಪಿ ಹಿ ತೇನ ಕರ್ಮ
ಪ್ರದಾಸ್ಯತೇ ತದ್ವರುಣಾಯ ಚಾಪಂ ।
ತಸ್ಮಾತ್ಸಮಾದಾಸ್ಯತಿ ಫಾಲ್ಗುನೋಽಪಿ
ದೇವಾರ್ಥಕಾರ್ಯೈಕರತಿರ್ಮಹಾತ್ಮಾ ॥ ೩೨ ॥

---

ರಾಮನಿಗೆ ಕೊಟ್ಟುಬಿಡಲಿ. ಆ ಶ್ರೀರಾಮನು ಶತ್ರುಸಂಹಾರಾನಂತರ ಈ ಧನುಸ್ಸನ್ನು ವರುಣನಿಗೆ ಕೊಡುತ್ತಾನೆ. ಆ ವರುಣನಿಂದ ಆ ಧನುಸ್ಸು ಅರ್ಜುನನಿಗೆ ಕೊಡಲ್ಪಡುತ್ತದೆ. ನಿನ್ನ ಸಂಬಂಧವಾದ ಶೈವಧನುಸ್ಸನ್ನು ನೀನ ನಿಮಿಶಬ್ದವಾಚ್ಯನಾದ ಮಿಥಿಲ ರಾಜನಿಗೆ ಕೊಡು. ಅವನು ತನ್ನ ಮಗನಾದ ಜನಕಮಹಾರಾಜನಿಗೆ ಅದನ್ನು ಕೊಡುತ್ತಾನೆ. ಈ ರೀತಿಯಾಗಿ ಹೇಳಿ ಮಹಾವಿಷ್ಣುವು ಅಂತರ್ಧಾನನಾಗಲು ಅದರಂತೆ

ತ್ವಂ ಚಾಪರತ್ನಂ ಜನಕಾಯದೇಹಿ
ನಿಮಿರಾತಿನಾಮ್ನಾ ಭುವಿ ಶಬ್ದಿತಾಯ ।
ತೇನಾಪಿ ಚಾಪೇನಸತತ್ಪ್ರಸೂತೋ
ರಾಜಾ ಮಹತ್ಕರ್ಮ ಕರಿಷ್ಯತೀತಿ ॥ ೩೩ ॥

ಏತಾವದುಕ್ತ್ವಾ ಭಗವಾನ್ಮಹಾತ್ಮಾ
ಜಗಾಮ ಕಾಷ್ಠಾಂ ಮನಸಸ್ತ್ವಭೀಷ್ಟಾಂ ।
ಮಯಾ ತಥಾ ತೇ ಭುವಿ ಚಾಪರತ್ನೇ
ದ್ವಿಜಪ್ರಧಾನ ಕ್ಷಿತಿಪೇಷು ದತ್ತೇ ॥ ೩೪ ॥

ಯದ್ವೈಷ್ಣವಂ ಚಾಪವರಂಪಿತುಸ್ತೇ
ನ್ಯಸ್ತಂ ಕರೇ ವಾಸುಕಿತುಲ್ಯರೂಪಂ ।
ತದ್ದೇವಕಾರ್ಯೇಣ ವಿನಾನಶಕ್ಯಂ
ಕೇನಾಪ್ಯಧಿಜ್ಯ ಯುಧಿ ರಾಮ ಕರ್ತುಂ ॥ ೩೫ ॥

ಅಜ್ಞಾತವಸ್ತು ರಚಿತಂ ಸುರಕಾರ್ಯದಕ್ಷಂ
ಗೋವಿಂದಬಾಹುವಿಟಪಾಶ್ರಯಲಬ್ಧಮಾನಂ ।

---

ನಾನೂ ಈ ವೈಷ್ಣವ ಶೈವಚಾಪಗಳೆರಡನ್ನೂ ನಿನ್ನ ತಂದೆಗೂ, ಜನಕರಾಜನಿಗೂ ಕೊಟ್ಟಿರುತ್ತೇನೆ. ಸರ್ಪರಾಜನಾದ ವಾಸುಕಿಯಂತೆ ಪ್ರಕಾಶಿಸುತ್ತಿರುವ ವೈಷ್ಣವಚಾಪವನ್ನು ನೀನು ನಿನ್ನ ತಂದೆಯಿಂದ ಪಡೆದು, ಪಾತಾಳಗತರಾದ ದೇವಶತ್ರುಗಳನ್ನು ಸಂಹರಿಸು. ದೇವಕಾರ್ಯಕ್ಕೆ ವಿನಹ ಈ ಚಾಪವನ್ನು ಇನ್ನಾವುದಕ್ಕೂ ಉಪಯೋಗಿಸಕೂಡದು.

೩೬. ಎಲೈ ಪರಶುರಾಮನೇ, ಕೇಳು. ವೈಷ್ಣವಚಾಪದ ಮಹಿಮೆಯನ್ನು ವಿವರಿಸುವೆನು. ಈ ಧನುಸ್ಸು, ತಿಳಿಯದೆ ಇದ್ದ ವಿವಿಧವಸ್ತುಗಳಿಂದ ವಿರಚಿತವಾದುದು.

ನ್ಯಸ್ತಂ ಪುರಾ ಪಿತೃಕರೇ ತವ ಯುದ್ಧಶೌಂಡ
ಚೇತ್ಥಂ ಮಯಾ ಹರಿವಚಃ ಪ್ರಸಮೀಕ್ಷ್ಯರಾಮ ॥ ೩೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ವೈಷ್ಣವಧನುಃ
ಪ್ರಾದುರ್ಭಾವೋನಾಮ ಸಪ್ತಷಷ್ಟಿತಮೋಽಧ್ಯಾಯಃ

---

ದೇವತಾಕಾರ್ಯ ಮಾಡಲು ಸಮರ್ಥವಾದದ್ದು. ಗೋವಿಂದನ ತೋಳುಗಳೆಂಬ ವೃಕ್ಷಾಶ್ರಯದಿಂದ ಲಬ್ಧವಾದುದು. ಇಂತಹ ಧನುಸ್ಸನ್ನು ಎಲೈ ಯುದ್ಧಶೌಂಡರಾಮನೇ, ಹರಿವಚನವನ್ನನುಸರಿಸಿ ನಿನ್ನ ತಂದೆಯ ವಶಕ್ಕೆ ಬಹು ಹಿಂದೆಯೇ ಕೊಟ್ಟಿರುವೆನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ವೈಷ್ಣವಧನುಃಪ್ರಭಾವವೆಂಬ ಹೆಸರಿನ
ಅರವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಅಷ್ಟ ಷಷ್ಟಿತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ಏವಮುಕ್ತಸ್ತದಾ ರಾಮೋ ದೇವದೇವೇನ ಶಂಭುನಾ ।
ಪ್ರಣಮ್ಯ ಶಿರಸಾ ದೇವಂ ಪಾರ್ವತೀಂವರದಾಂ ತಥಾ ॥ ೧ ॥

ಪ್ರಮಥೈಶ್ಚ ಪರಿಷ್ವಕ್ತಸ್ಸೋತ್ಕಂಠೇನಾನ್ತರಾತ್ಮನಾ ।
ಜಗಾಮಾಶ್ರಮಮುದ್ದಿಶ್ಯ ಪಿತುಃ ಪರಬಲಾರ್ದನಃ ॥ ೨ ॥

ಸೋಽ ಚಿರೇಣೈವ ಸಂಪ್ರಾಪ್ಯ ದದರ್ಶಾಶ್ರಮಮಂಡಲೇ ।
ವಯೋವೃದ್ಧಂ ತಪೋವೃದ್ಧಂ ಪಿತರಂ ದೀಪ್ತತೇಜಸಂ ॥ ೩ ॥

---

### ಅರವತ್ತೆಂಟನೆಯ ಅಧ್ಯಾಯವು

೧-೬. ಮಾರ್ಕಂಡೇಯ ಮಹರ್ಷಿಯು ಹೇಳುತ್ತಾನೆ—ಹಿಂದಿನ ಅಧ್ಯಾಯ ದಲ್ಲಿ ವಿವರಿಸಿದಂತೆ ಶಂಕರನು ಪರಶುರಾಮನಿಗೆ ವೈಷ್ಣವಚಾಪ ಚರಿತ್ರೆಯನ್ನು ಹೇಳಿ ದೊಡನೆಯೇ, ಪರಶುರಾಮನು ಪಾರ್ವತೀಪತಿಯಾದ ಪರಮೇಶ್ವರನನ್ನು ನಮಸ್ಕರಿಸಿ ವೈಷ್ಣವಚಾಪವಂ ತರಲು ತಂದೆಯ ಮನೆಗೆ ಹೊರಟನು. ಆಗ ಈಶ್ವರನ ಪ್ರಮಥ ಗಣಂಗಳು ಭಾರ್ಗವರಾಮನು ತಮ್ಮನ್ನಗಲಿ ಹೋಗುತ್ತಾನಲ್ಲಾ ಎಂಬ ದುಃಖದಿಂದ ಅಳುವು ಕತ್ತಿಗೆ ಚಾಚಿಕೊಂಡು ಬರಲು ಉತ್ಕಂಠಿತ ಮನಸ್ಸಿನಿಂದ ರಾಮನನ್ನು ಬಾಚಿ ತಬ್ಬಿ ಕೊಂಡು ಅಳುತ್ತಾ ಬೀಳ್ಕೊಟ್ಟರು. ಪರಶುರಾಮನು ಕೈಲಾಸವಾಸಿಗಳೆಲ್ಲರ ಅನು ಮತಿಯಿಂದ ತಂದೆಯ ಆಶ್ರಮಕ್ಕೆ ಪ್ರಯಾಣ ಬೆಳೆಸಿದನು.

ಸೋಽಭಿವಾದ್ಯ ಪಿತುಃ ಪಾದೌ ಮಾತುಶ್ಚ ಪರವೀರಹಾ ।
ಭ್ರಾತೄಣಾಮಾನುಪೂರ್ವ್ಯೇಣ ಧರ್ಮನಿತ್ಯೋ ಜಿತೇಂದ್ರಿಯಃ ॥ ೪ ॥

ತೈಶ್ಚಾಽಮೂರ್ಧನ್ಯುಪಾಘ್ರಾತಃ ಸಾಂತ್ವಿತಸ್ಸ ಮಹಾತಪಾಃ ।
ಸ ಮತ್ಪ್ರಸಾದಂ ಪೃಷ್ಟಶ್ಚೇತ್ಯುಕ್ತ್ವಾ ಸರ್ವಮಶೇಷತಃ ॥ ೫ ॥

ಆಖ್ಯಾತವಾಂಸ್ತತಃ ಪಶ್ಚಾತ್ಪಾತಾಲಗಮನಂ ತದಾ ।
ಆಸನ್ನಂ ದೇವಕಾರ್ಯಂ ಚ ಚಾಪರತ್ನಂ ಚ ವೈಷ್ಣವಂ ॥ ೬ ॥

ಜಮದಗ್ನಿರ್ಮಹಾತೇಜಾಃ ಶ್ರುತ್ವಾ ರಾಮವಚಸ್ತದಾ ।
ಚಾಪರತ್ನಂ ಚ ರಾಮಾಯ ಪ್ರದದೌ ದೇವಪೂಜಿತಂ ॥ ೭ ॥

ದತ್ವೋವಾಚಸತಂ ರಾಮಂ ಹುತಾಶನಸಮಪ್ರಭಂ ।
ಪಶ್ಚಿಮೇನ ಸಮುದ್ರೇಣ ಪ್ರವಿಶ್ಯವರುಣಾಲಯಂ ॥ ೮ ॥

---

ಬಹು ಜಾಗ್ರತೆಯಾಗಿ ತಂದೆಯ ಮನೆಗೆ ಬಂದು ಆಶ್ರಮಮಂಡಲವನ್ನು ಸಂದರ್ಶಿಸಿ ವಯೋವೃದ್ಧನೂ, ತಪೋವೃದ್ಧನೂ, ಮಹಾತೇಜಸ್ವಿಯೂ ಆದ ತನ್ನ ತಂದೆಯಾದ ಜಮದಗ್ನಿಋಷಿಯನ್ನು ನಮಸ್ಕರಿಸಿ, ಬಳಿಕ ತಾಯಿಯ ಪಾದಗಳಿಗೆ ವಂದಿಸಿ ಆನುಪೂರ್ವಿಯಿಂದ ಅಣ್ಣಂದಿರುಗಳ ಚರಣಗಳಿಗೆರಗಿ, ಧರ್ಮತತ್ಪರನೂ ಜಿತೇಂದ್ರಿಯನೂ ಆದ ಆ ಪರಶುರಾಮನು ಅವರುಗಳೆಲ್ಲರಿಂದಲೂ ಶಿರಸ್ಸಿನಲ್ಲಿ ಅಘ್ರಾಣಿಸಲ್ಪಟ್ಟವನಾಗಿ ಸಮಾಧಾನ ಚಿತ್ತದಿಂದ ಕುಳಿತ ಬಳಿಕ ನನ್ನ (ಶಿವನ) ವಿಚಾರವಾದ ಕುಶಲಪ್ರಶ್ನೆಗಳಂಗೈದು ಅವರೆಲ್ಲರಿಗೂ ಎಲ್ಲ ಕಥೆಯನ್ನೂ (ಸಾಲ್ವನನ್ನು ಸಂಹರಿಸಿದ್ದು ಮೊದಲುಗೊಂಡು) ತಂದೆಗೆ ತಿಳಿಸಿ ಇನ್ನು ಮುಂದೆ ಪಾತಾಳಲೋಕಕ್ಕೆ ಹೋಗಬೇಕಾಗಿರುವ ಸಂಗತಿಯನ್ನು ಹೇಳಿದನು. ಈಗ ದೇವತಾಕಾರ್ಯವು ಒದಗಿರುವುದರಿಂದ ಚಾಪರತ್ನವಾದ ವೈಷ್ಣವಧನುಸ್ಸು ಬೇಕಾಗಿದೆಯೆಂದು ತಿಳಿಸಿದನು.

೭. ಜಮದಗ್ನಿಯು ತನ್ನ ಮಗನು ಹೇಳಿದ ಚರಿತ್ರೆಯನ್ನು ಚನ್ನಾಗಿ ಕೇಳಿ ತನ್ನ ಮನೆಯಲ್ಲಿದ್ದ, ದೇವಪೂಜಿತವಾದ ವೈಷ್ಣವಚಾಪವನ್ನು ಪರಶುರಾಮನ ವಶಕ್ಕೆ ಕೊಟ್ಟನು.

೮-೧೨. ಜಮದಗ್ನಿಯು ತನ್ನ ಮಗನಾದ ಪರಶುರಾಮನಿಗೆ ಮಾಡಿದ ಧರ್ಮಾನುಶಾಸನ ಕ್ರಮವದೆಂತೆನೆ .-

ಸಂಪೂಜ್ಯ ವರುಣಂ ರಾಮಸ್ತಸ್ಮೈವಾನುಮತೇ ತದಾ ।
ಶಕ್ರಶತ್ರೂನ್ದುರಾಚಾರಾನ್ಪಾತಾಲ ನಿಲಯಾರ್ಜಹಿ ।
ಅನೇನ ಚಾಪರತ್ನೇನ ವೈಷ್ಣವೇನ ಮಹಾಬಲ ।
ದೈತೇಯಾನ್ಸಮರೇ ಹತ್ವಾ ಗತ್ವಾ ಚ ವರುಣಾಲಯಂ ॥ ೧೦ ॥

ಪ್ರಷ್ಟವ್ಯೋವರುಣೋ ದೇವಸ್ತ್ವಯಾ ಧರ್ಮಾನ್ಸನಾತನಾನ್ ।
ಸ ಪುತ್ರ ವರುಣಾದ್ಧರ್ಮಾನ್ಶ್ರುತ್ವಾ ರಾಮ ಯಥಾವಿಧಿ ॥ ೧೧ ॥

ಆಗಚ್ಛೇಥಾ ಯಥಾಕಾಲಂ ಮತ್ಸಮೀಪಂ ಮಹಾಭುಜ ।
ಏವಮುಕ್ತಸ್ತದಾ ರಾಮಃ ಪಿತ್ರಾ ಧರ್ಮಭೃತಾಂ ವರಃ ॥ ೧೨ ॥

ಪಿತರಂ ಮಾತರಂ ಭ್ರಾತೄನಭಿವಾದ್ಯ ಯಥಾವಿಧಿ ।
ಜಗಾಮ ವರುಣಾವಾಸಂ ರಾಮೋ ವೈಶ್ವಾನರದ್ಯುತಿಃ ॥ ೧೩ ॥

---

ಯಜ್ಞೇಶ್ವರನಿಗೆ ಸಮನಾದ ಕಾಂತಿಯುಳ್ಳ ತನ್ನ ಮಗನಾದ ಪರಶುರಾಮನ ವಶಕ್ಕೆ ವೈಷ್ಣವ ಧನುಸ್ಸನ್ನು ಕೊಟ್ಟು ಜಮದಗ್ನಿ ಋಷಿಯು ಇಂತು ಹೇಳಿದನು :- '' ನೀನು ಪಶ್ಚಿಮ ಸಮುದ್ರದಿಂದ ಪಾತಾಳಕ್ಕೆ ಪ್ರವೇಶಿಸು. ಅಲ್ಲಿಯ ರಾಜನಾದ ವರುಣನನ್ನು ಪೂಜಿಸಿ ಬಳಿಕ ಆತನ ಅಪ್ಪಣೆಯನ್ನು ಪಡೆದು ಇಂದ್ರಶತ್ರುಗಳಾದ ದುರಾಚಾರಿಗಳಾದ ಪಾತಾಳವಾಸಿಗಳನ್ನು ಸಂಹಾರಮಾಡು. ಈಗ ನಿನ್ನ ವಶಕ್ಕೆ ಕೊಟ್ಟಿರುವ ಈ ವೈಷ್ಣವ ಚಾಪರತ್ನದಿಂದ ರಾಕ್ಷಸರನ್ನು ಯುದ್ಧದಲ್ಲಿ ಜಯಿಸು ಬಳಿಕ ವರುಣನ ಅರಮನೆಗೆ ಹೋಗಿ ಸನಾತನ ಧರ್ಮಸೂಕ್ಷ್ಮಗಳನ್ನು ಚೆನ್ನಾಗಿ ವರುಣನ ಮುಖದಿಂದ ಕೇಳಿ ತಿಳಿದುಕೊ. ಶಾಸ್ತ್ರೀಯವಾದ ಸಂಗತಿಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡ ಬಳಿಕ ಶೀಘ್ರನಾಗಿ ಕಾಲಕ್ಷೇಪಮಾಡದೆ ನನ್ನ ಸಮೀಪಕ್ಕೆ ಬಂದು ಬಿಡು ಈ ರೀತಿಯಾಗಿ ಧರ್ಮಜ್ಞರೊಳಗೆ ಶ್ರೇಷ್ಠನಾದ ಪರಶುರಾಮನು ತಂದೆಯಿಂದ ಉಪದೇಶಿಸಲ್ಪಟ್ಟನು.

೧೨-೧೩. ತಂದೆಯ ಮಾತನ್ನು ಕೇಳಿದೊಡನೆ ಪರಶುರಾಮನು, ತಂದೆತಾಯಿಗಳನ್ನೂ, ಅಣ್ಣಂದಿರುಗಳನ್ನೂ ಯಥಾವಿಧಿಯಾಗಿ ಅಭಿವಂದನ ಮಾಡಿ ಅಗ್ನಿಯಂತೆ

ಸಪ್ರವಿಶ್ಯಸಮುದ್ರೇಣ ಮಹಾದೇವಪ್ರಸಾದತಃ ।
ತತೋಽಶ್ಮನಗರಂ ರಾಮೋ ದದರ್ಶ ಪುರಮುತ್ತಮಂ ॥ ೧೪ ॥

ಮನೋಽಭಿರಾಮಂ ಸ್ಫಟಿಕಾಶ್ಮಚಿತ್ರಂ
ತುರಂಗನಾಗೇಂದ್ರಕುಲಾಕುಲಂ ಚ ।
ವಿಭೂಷಿತಂ ಪನ್ನಗದೈತ್ಯನಾಥೈ
ರುದ್ಯಾನವಾಪೀಶತಸಂಕುಲಂ ಚ ॥ ೧೫ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪರಶುರಾಮಸ್ಯಾಶ್ಮನಗರದರ್ಶನಂ
ನಾಮಾಷ್ಟಷಷ್ಟಿತಮೋಽಧ್ಯಾಯಃ

---

ತೇಜಸ್ಸುಳ್ಳ ಆ ಪರಶುರಾಮನು ಪಶ್ಚಿಮಸಮುದ್ರವನ್ನು ಪ್ರವೇಶಿಸಿದನು. ಮಹಾದೇವನ ಅನುಗ್ರಹವಿಶೇಷದಿಂದ ಭಾರ್ಗವರಾಮನು ಸಮುದ್ರ ಮಾರ್ಗದಿಂದ ಪಾತಾಳ ಲೋಕವನ್ನು ಪ್ರವೇಶಿಸಿ ಅಲ್ಲಿ ಅಶ್ಮನಗರಿಯೆಂಬ ನಗರವನ್ನು ಕಂಡನು. ಆ ಅಶ್ಮನಗರಿಯು ಮನೋಹರವಾಗಿಯೂ ಸ್ಫಟಿಕ ಶಿಲೆಗಳಿಂದ ಚಿತ್ರಿತವಾಗಿಯೂ, ತುರಂಗ ನಾಗೇಂದ್ರರ (ಕುದುರೆ ಆನೆ) ಗುಂಪಿನಿಂದ ಕೂಡಿದುದಾಗಿಯೂ, ನಾಗರಾಜನಿಂದಲೂ, ರಾಕ್ಷಸರಾಜರಿಂದಲೂ ಸಹ ವಿಭೂಷಿತವಾದುದಾಗಿಯೂ, ವಿವಿಧೋದ್ಯಾನಗಳಿಂದಲೂ ವಿವಿಧ ಸರೋವರಗಳಿಂದಲೂ, ತುಂಬಲ್ಪಟ್ಟುದಾಗಿಯೂ, ಪ್ರಕಾಶಿಸುತ್ತಿತ್ತು

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ರಾಮನ ಅಶ್ಮನಗರ ದರ್ಶನವೆಂಬ ಹೆಸರಿನ
ಅರವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

## ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

### ಏಕೋನಸಪ್ತತಿತಮೋಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ತಸ್ಮಿನ್ಪುರವರೇ ರಮ್ಯೇ ರತ್ನಚಿತ್ರಸಭಾಗತಂ ।
ರತ್ನಾಸನಗತಂ ವೀರಂ ಚಾರುಕುಂಡಲಲೋಚನಂ ॥ ೧ ॥

ಸ್ನಿಗ್ಧವೈಡೂರ್ಯಸಂಕಾಶಂ ಶುಕ್ಲಾಂಬರವಿಭೂಷಿತಂ ।
ಹಾರಭಾರಾರ್ಪಿತತನುಂ ಚಾರುಕೇಯೂರಧಾರಿಣಂ ॥ ೨ ॥

ಪ್ರವಾಲಮಣಿಮುಕ್ತಾಢ್ಯಂ ಗಂಭೀರಂ ಭುಜಗಾಶ್ರಯಂ ।
ಕಿರೀಟೋತ್ತಂಸಸಂಛನ್ನಂ ಯಾದೋಗಣಸಮಾಶ್ರಯಂ ॥ ೩ ॥

---

### ಅರವತ್ತೊಂಭತ್ತನೆಯ ಅಧ್ಯಾಯವು.

೧-೧೪. ಮಾರ್ಕಂಡೇಯ ಋಷಿಗಳು ಹೇಳುತ್ತಾರೆ :- ೧ನೇ ಶ್ಲೋಕದಿಂದ ೧೪ನೇ ಶ್ಲೋಕ ಪೂರ್ತಿಯಾಗಿ ವರುಣಲೋಕವನ್ನೂ, ವರುಣನನ್ನೂ ವರ್ಣಿಸಿರುತ್ತಾರೆ :- ಪರಶುರಾಮನು ವರುಣಲೋಕಕ್ಕೆ ಹೋಗಿ ವರುಣನನ್ನು ನೋಡಿ ಅವನಿಗೆ ನಮಸ್ಕರಿಸಿದನು

ಆ ವರುಣನು ಹೇಗಿದ್ದನೆಂದರೆ :- ರತ್ನದಿಂದ ವಿಚಿತ್ರವಾಗಿ ಕೆತ್ತಲ್ಪಟ್ಟ ಅಲಂಕೃತವಾದ ಸಭೆಯಲ್ಲಿ ರತ್ನಸಿಂಹಾಸನದ ಮೇಲೆ ಆ ವೀರನಾದ ವರುಣನು ಕುಳಿತಿದ್ದನು. ಅತನು ಅನೇಕವಾದ ಆಭರಣಗಳನ್ನು ಧರಿಸಿದ್ದನು. ಮನೋಹರವಾದ ವೈಡೂರ್ಯಗಳಿಂದ ಪ್ರಕಾಶಿಸುತ್ತಿರುವ ಶುಕ್ಲವಸ್ತ್ರವನ್ನು ಧರಿಸಿದ್ದನು. ವಿವಿಧ ಹಾರ

ಆದಿತ್ಯಮುದಕಾವಾತಮಂಭಸಾಂ ಪತಿಮೂರ್ಜಿತಂ ।
ಲೋಕನಾಥಂ ಮಹದ್ಭೂತಂ ಭಕ್ತಾನಾಮಭಯಪ್ರದಂ ॥ ೪ ॥

ವಿಷ್ಣೋರ್ಭಾಗಂ ವಿಶಾಲಾಂಸಂ ವಿಶಾಲಾಕ್ಷಂ ಮಹಾಭುಜಂ ।
ಸೇವ್ಯಮಾನಂಮಹಾಭಾಗೈಸ್ತ್ರಿದಶೈರ್ಬ್ರಾಹ್ಮಣೈಸ್ತಥಾ ॥ ೫ ॥

ದೈತೇಯೈಶ್ಚ ಮಹಾಭಾಗೈರ್ಭೀಮೈರ್ಭೀಮಪರಾಕ್ರಮೈಃ ।
ಸುಂದೋಪಸುಂದಶಕ್ರಾಕ್ಷಶಂಬರಾಮುರಕಂಟಕೈಃ ॥ ೬ ॥

ಹಯಗ್ರೀವಮಹಾಗ್ರೀವದಶಗ್ರೀವಸುರಾಂತಕೈಃ ।
ಭೀಮಭೀಮಾಕ್ಷನರಕವಿಕಟೋತ್ಕಟಮಾರಣೈಃ ॥ ೭ ॥

ಅತಿಕಾಯಮಹಾಕಾಯಭೀಮಕಾಯಬಲೋದ್ಧತೈಃ ।
ನಾಗೈಶ್ಚಸುಮಹಾಕಾಯೈರ್ಮಹಾಭೋಗೈರ್ಜಗದ್ಧಿತೈಃ ॥ ೮ ॥

---

ಗಳನ್ನು ಹಾಕಿಕೊಂಡಿದ್ದನು. ಕಿವಿಗಳಲ್ಲೂ ಭುಜಗಳಲ್ಲೂ ಕುಂಡಲ ಕೇಯೂರಗಳು ಶೋಭಿಸುತ್ತಿದ್ದುವು. ಉತ್ತಮವಾದ ಕಿರೀಟವನ್ನು ಧರಿಸಿದ್ದನು. ಜಲಚರ ಪ್ರಾಣಿಗಳು ಅವನ ನಾನಾ ಭಾಗಗಳಲ್ಲೂ ಕಾಣಬರುತ್ತಿದ್ದುವು ಉದಕದೊಳಗೆ ವಾಸಿಸುತ್ತಿರುವ ಸೂರ್ಯನೋ ಎಂಬಂತೆ ಆ ಜಲಪತಿಯು ತನ್ನ ಭಕ್ತರಿಗೆ ಅಭಯಪ್ರದಾನಮಾಡುತ್ತಾ ಅಲ್ಲಿ ಮಂಡಿಸಿದ್ದನು. ವಿಷ್ಣುವಿನ ಒಂದು ಭಾಗವಾದ, ವಿಶಾಲ ಹೃದಯ, ವಿಶಾಲ ನಯನನಾದ ಆ ವರುಣನು ದೇವತೆಗಳಿಂದಲೂ, ಬ್ರಾಹ್ಮಣರಿಂದಲೂ ಸೇವಿಸಲ್ಪಡುತಲಿದ್ದನು. ಮತ್ತು ಆ ಸಭೆಯಲ್ಲಿ ದಿತಿಯ ಪುತ್ರರಾದ ವೀರಾಧಿವೀರರಾದ ಭಯಂಕರ ಶೌರ್ಯವುಳ್ಳ ಸುಂದ, ಉಪಸುಂದ, ಶಕ್ರಾಕ್ಷ, ಶಂಬರ, ಅಮುರಕಂಟಕ, ಹಯಗ್ರೀವ, ಮಹಾಗ್ರೀವ, ದಶಗ್ರೀವ, ಭೀಮ, ಭೀಮಾಕ್ಷ, ನರಕ, ವಿಕಟ, ಉತ್ಕಟ, ಮಾರಣ, ಅತಿಕಾಯ, ಮಹಾಕಾಯ, ಭೀಮಕಾಯ, ಬಲೋದ್ಧತ ಮುಂತಾದ ರಾಕ್ಷಸರೂ ಸಹ ನಿಬಿಡರಾಗಿ ತುಂಬಿದ್ದರು. ಮಹಾಕಾಯರಾದ ದೊಡ್ಡ

ನಾಗರಾಜಾ ವಾಸುಕಿನಾ ಶಂಖೇನ ಕುರುಣಾತಥಾ ।
ಮಹಾಪದ್ಮೇನಪದ್ಮೇನ ಕರ್ಕೋಟಕಧನಂಜಯೈಃ ॥ ೯ ॥

ಐರಾವತೇನ ನಾಗೇನ ತಕ್ಷಕೇಣ ಬಲೇನ ಚ ।
ಕಂಬಲಾಶ್ವತರಾಭ್ಯಾಂಚ ಹ್ಯಾರ್ಯಕೇಣ ಮಹಾತ್ಮನಾ ॥ ೧೦ ॥

ವಾಲವ್ಯಜನಹಸ್ತಾಸ್ತ್ರಮುಪವೀಜಂತಿ ನಿಮ್ನಗಾಃ ।
ಗಂಗಾ ಚ ಸರಯೂ ರಾಜನ್ ವಿತಸ್ತಾ ಯಮುನಾ ತಥಾ ॥ ೧೧ ॥

ಇರಾವತೀ ಚಂದ್ರಭಾಗಾ ನರ್ಮದಾ ಚ ಮಹಾನದೀ ।
ಪಯೋಷ್ಣೀ ಬ್ರಾಹ್ಮಣೀ ಗೌರೀ ವಿಪಾಶಾ ದೇವಿಕಾ ತಥಾ ॥ ೧೨ ॥

ಶತದ್ರುಃ ಕಂಪನಾ ಸಿಂಧುಸ್ತಥಾ ಚಾನ್ಯಾಸ್ಸಹಸ್ರಶಃ ।
ಸೇವ್ಯಮಾನಸ್ತಥಾ ಕೂಪೈಸ್ತಟಾಗೈಶ್ಚ ಸವಿಗ್ರಹೈಃ ॥ ೧೩ ॥

ಸರೋವರೈಸ್ಸಾಗರೈಶ್ಚ ಸಮುದ್ರೈಶ್ಚ ಯದೂತ್ತಮ ।
ತಂ ದೃಷ್ಟ್ವಾ ವರುಣಂ ರಾಜನ್ಸ ವವಂದೇ ಭೃಗೂತ್ತಮಃ ॥ ೧೪ ॥

---

ದೊಡ್ಡ ಹೆಡೆಗಳನ್ನು ಬಿಟ್ಟುಕೊಂಡಿರುವ ನಾಗರೂ ಅಲ್ಲಿದ್ದರು. ನಾಗರಾಜನಾದ ವಾಸುಕಿಯಿಂದಲೂ ಶಂಖ, ಕುರು, ಮಹಾಪದ್ಮ, ಕರ್ಕೋಟಕ, ಧನಂಜಯ, ಐರಾವತ, ನಾಗ, ತಕ್ಷಕ, ಬಲ, ಕಂಬಳ, ಅಶ್ವತರ, ಆರ್ಯಕರೆಂಬ ನಾಗರಾಜರಿಂದಲೂ ಆ ಸಭೆಯು ತುಂಬಿಹೋಗಿತ್ತು. ನದಿಗಳು ಆಕಾರವನ್ನು ತಳೆದು ಕೈಯ್ಯಲ್ಲಿ ಬೀಸಣಿಗೆಯನ್ನು ಹಿಡಿದು ಬೀಸುತ್ತಿದ್ದುವು. ಅವುಗಳಲ್ಲಿ ಮುಖ್ಯವಾದ ಕೆಲವು ನದಿಗಳನ್ನು ತಿಳಿಸುತ್ತೇವೆ. ಗಂಗಾ, ಸರಯೂ, ವಿತಸ್ತಾ, ಯಮುನಾ, ಇರಾವತೀ, ಚಂದ್ರಭಾಗಾ, ನರ್ಮದಾ, ಮಹಾನದೀ, ಪಯೋಷ್ಣೀ, ಬ್ರಾಹ್ಮಣೀ, ಗೌರೀ, ವಿಪಾಶಾ, ದೇವಿಕಾ ಶತದ್ರೂ, ಕಂಪನಾ, ಸಿಂಧು, ಇವೇ ಮೊದಲಾದ ಸಾವಿರಾರು ನದಿಗಳು ಅಲ್ಲಿ ವರುಣನನ್ನು ಸೇವಿಸುತ್ತಿದ್ದುವು. ಇವುಗಳಲ್ಲದೆ ಕೂಪ, ತಟಾಕ, ಸರೋವರ, ಸಾಗರ, ಸಮುದ್ರ ಮುಂತಾದ ಮಹಾ ಮಹಾ ಜಲಾಶಯಮಹಾಶಯರೆಲ್ಲರೂ ಶರೀರವನ್ನು ಧರಿಸಿ ತಮ್ಮ ರಾಜನಾದ ವರುಣನನ್ನು ಸೇವೆಮಾಡುತ್ತಿದ್ದರು.

**ಪೂಜಯಾಮಾಸ ಚ ತಥಾ ವರುಣೋಽಪಿ ಭೃಗೂತ್ತಮಂ ।**
**ಪಾದ್ಯಾರ್ಘ್ಯಾಚಮನೀಯಾದ್ಯೈ ರಾಸನೇನೋದಕೇನಚ ॥ ೧೫ ॥**

**ಆಸೀನಶ್ಚ ತದಾ ರಾಮೋ ದೈತೇಯಾನಾಂ ವಧೇ ವೃತಃ ।**
**ಮಹಾದೇವವಚಸ್ಸರ್ವಂ ವರುಣಾಯ ನ್ಯವೇದಯತ್ ॥ ೧೬ ॥**

**ಸ ಚ ತೇನಾಭ್ಯನುಜ್ಞಾತೋ ಯಯೌದೈತ್ಯಪುರಂ ಮಹತ್ ।**
**ವರುಣೋಽಪಿ ಮಹಾತೇಜಾ ರಾಮವಾಕ್ಯೇನ ಯಾದವ ॥ ೧೭ ॥**

**ಸಂವಾದಯಾಮಾಸ ತದಾ ರಾಮಂ ರಣಕೃತಕ್ಷಣಂ ।**
**ತದಾ ವರುಣದೂತೇಭ್ಯೋ ದೈತೇಯಾಃ ಶ್ರುತವಿಸ್ತರಾಃ ॥ ೧೮ ॥**

**ನಿಷ್ಕ್ರಮ್ಯ ನಗರಾದ್ರಾಜನ್ ಚತುರಂಗಬಲಾನ್ವಿತಾಃ ।**
**ಸುಸನ್ನದ್ಧಾಃ ಪ್ರತೀಕ್ಷಂತೋ ರಾಮಮುದ್ಭುತವಿಕ್ರಮಂ ॥ ೧೯ ॥**

**ದದೃಶುಶ್ಚ ಮಹಾಭಾಗಂ ವಿಷ್ಣುಚಾಪಧರಂ ತದಾ ।**
**ಮೃತ್ಯೋರ್ಭುಜಮಿವೋದಗ್ರಂ ಲೋಕಾಕರ್ಷಣತತ್ಪರಂ ॥ ೨೦ ॥**

---

೧೫ ತನ್ನನ್ನು ನಮಸ್ಕರಿಸಿದ ಪರಶುರಾಮನನ್ನು ನೋಡಿದೊಡನೆಯೇ ವರುಣನು ತಾನೂ ಸಹ ಪಾದ್ಯಾರ್ಘ್ಯಾಚಮನೀಯಾದಿಗಳಿಂದಲೂ, ಆಸನದಿಂದಲೂ, ಉದಕದಿಂದಲೂ ಭಾರ್ಗವರಾಮನನ್ನು ವಿಧಿವತ್ತಾಗಿ ಪೂಜಿಸಿದನು.

೧೬. ಸುಖದಿಂದ ಕುಳಿತುಕೊಂಡ ಬಳಿಕ ಪರಶುರಾಮನು ವರುಣನಿಂದ ರಾಕ್ಷಸರ ವಧೆಗೋಸ್ಕರ ಪ್ರಾರ್ಥಿಸಲ್ಪಟ್ಟನು. ಆಗ ಪರಶುರಾಮನು ಮಹಾದೇವನಿಂದ ಹೇಳಲ್ಪಟ್ಟ ಮಾತುಗಳನ್ನೆಲ್ಲಾ ವರುಣನ ಸಂಗಡ ಹೇಳಿದನು.

೧೭-೨೧. ಆ ಕೂಡಲೆ ವರುಣನು ದೈತ್ಯಪುರಕ್ಕೆ ಹೊರಡುವಂತೆ ಪರಶುರಾಮನನ್ನು ಪ್ರಾರ್ಥಿಸಿಕೊಳ್ಳಲು ಅದರಂತೆ ರಾಮನೂ ಕೂಡಲೆ ಪ್ರಯಾಣಮಾಡಿದನು. ಆಗ ಪರಶುರಾಮನ ಮಾತಿನಂತೆ ವರುಣನು ತನ್ನ ದೂತರ ಮೂಲಕ ರಾಕ್ಷಸರೆಲ್ಲರೂ ಯುದ್ಧಸನ್ನದ್ಧರಾಗಬೇಕೆಂದು ಹೇಳಿಕಳುಹಿಸಿದನು. ಇದನ್ನು ಕೇಳಿ ರಾಕ್ಷಸರೆಲ್ಲರೂ ಚತುರಂಗಸೇನಾ ಸಮೇತರಾಗಿ ಯುದ್ಧಕ್ಕೆ ಹೊರಟರು. ಈರೀತಿ ಯುದ್ಧಸನ್ನದ್ಧ

ದೀಪ್ತಾಂಶುಜಾಲಂ ರಣಚಂಡವೇಗಂ
ಧನುರ್ಧರಂ ಕಾಲಭುಜಪ್ರಕಾಶಂ ।
ಮಹಾನುಭಾವಂ ಸಮರೇಷ್ವಜೇಯಂ
ಲೇಲಿಹ್ಯಮಾನಂ ಭುಜಗೇಂದ್ರಬಾಹುಂ　　　॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವರುಣಾದಿದರ್ಶನಂನಾಮ
ಏಕೋನಸಪ್ತತಿತಮೋಽಧ್ಯಾಯಃ

ರಾಗಿ ಅದ್ಭುತ ಪರಾಕ್ರಮಶಾಲಿಯಾದ ಪರಶುರಾಮನನ್ನು ರಣರಂಗದಲ್ಲಿ ದರ್ಶನ ಮಾಡಿದರು. ವೈಷ್ಣವಚಾಪವನ್ನು ಧರಿಸಿ ನಿಂತಿದ್ದ ಪರಶುರಾಮನು ಲೋಕಾಕರ್ಷಣ ತತ್ಪರನಾದ ಮೃತ್ಯುವಿನ ಭಯಂಕರ ಭುಜದಂಡವೋ ಎಂಬಂತೆ ಶತ್ರುಗಳ ಕಣ್ಣಿಗೆ ಕಾಣಿಸಿದನು. ಮತ್ತು ಆ ಪರಶುರಾಮನು ಪ್ರಜ್ವಲಿಸುತ್ತಿರುವ ಸೂರ್ಯಕಿರಣ ಗಳಂತೆಯೂ, ಯುದ್ಧರಂಗದಲ್ಲಿ ಪ್ರಚಂಡ ಪರಾಕ್ರಮಿಯಂತೆಯೂ, ಯಮನಂತೆ ಘೋರಿಸುತ್ತಿರುವ ಧನುರ್ಧರನಂತೆಯೂ, ಕಣ್ಣಿಗೆ ಕಾಣಿಸಿದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ವರುಣಾದಿದರ್ಶನವೆಂಬ ಹೆಸರಿನ
ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಸಪ್ತತಿತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

**ಸನ್ನದ್ಧಂ ದಾನವಗಣಂ ಪತಾಕಾಶತಸಂಕುಲಂ ।**
**ನಾನಾಪ್ರಕಾರವಾದಿತ್ರಂ ಸಿಂಹನಾದಬಲೋದ್ಧತಂ ॥ ೧ ॥**

**ದೃಷ್ಟ್ವಾ ರಾಮೋ ಮಹಾತೇಜಾಃ ಸಜ್ಜಂ ಚಕ್ರೇ ಮಹದ್ಧನುಃ ।**
**ಶರೈಸ್ಸಂಛಾದಯಾಮಾಸ ದೈತ್ಯಸೈನ್ಯಂ ಮಹಾಬಲಂ ॥ ೨ ॥**

**ಅಭ್ರಚ್ಛಾಯೇವಸಂಜಜ್ಞೇ ರಾಮಮುಕ್ತೈಶ್ಶಿಲೀಮುಖೈಃ ।**
**ತಿರ್ಯಗೂರ್ಧ್ವಮಧಶ್ಚೈವ ಶರೈರ್ವ್ಯಾಪ್ತಂ ಸಮಂತತಃ ॥ ೩ ॥**

---

## ಎಪ್ಪತ್ತನೆಯ ಅಧ್ಯಾಯವು

೧-೨. ಮಾರ್ಕಂಡೇಯನು ಹೇಳುತ್ತಾನೆ—ಎಲೈ ವಜ್ರರಾಜನೆ ಕೇಳು. ನೂರಾರು ಧ್ವಜಗಳಿಂದ ಕೂಡಿ ವಿವಿಧ ವಾದ್ಯಧ್ವನಿಗಳೊಡನೆ ಸಿಂಹನಾದ ಮಾಡುತ್ತಾ ಎದುರಿಗೆ ಯುದ್ಧಸನ್ನದ್ಧವಾಗಿ ಬಂದ ದಾನವ ಸೈನ್ಯವನ್ನು ನೋಡಿ ಪರಶುರಾಮನು ವೈಷ್ಣವಚಾಪವನ್ನು ಸಿದ್ಧಗೊಳಿಸಿ ಬಾಣಗಳನ್ನು ಬಿಟ್ಟು ಆ ಬಾಣಗಳಿಂದ ದೈತ್ಯಸೈನ್ಯವನ್ನು ಮುಚ್ಚಿಬಿಟ್ಟನು.

೩-೧೯. ಪರಶುರಾಮನು ಬಿಟ್ಟ ಬಾಣಗಳಿಂದ ಮೇಲೆ, ಕೆಳಗೆ ಮತ್ತು ಅಡ್ಡಡ್ಡವಾಗಿ, ಉದ್ದುದ್ದವಾಗಿ, ಎಲ್ಲಿ ನೋಡಿದರಲ್ಲಿ ಮೋಡಮುಸುಕಿದಂತೆ ದಿಕ್ಕುಗಳು

**ಚಾಪಮಂಡಲಮಧ್ಯಸ್ಥಃ ಪರಿವೇಷೇವ ಭಾಸ್ಕರಃ ।**
**ದೃಷ್ಟಮಾತ್ರೇಣ ಸೈನ್ಯಾನಾಂ ಚಕ್ಷೂಂಷ್ಯಪಹರದ್ರಣೇ ॥ ೪ ॥**

**ಶರಾಂಧಕಾರೇ ಮಗ್ನಾಸ್ತೆ ರಾಕ್ಷಸಾ ದುಷ್ಟಚೇತಸಃ ।**
**ರಾಮಸಂದರ್ಶನಾದೇವ ದೃಷ್ಟ್ವೇಽರ್ಕೇ ಕೌಶಿಕಾಯಥಾ ॥ ೫ ॥**

**ಸದಾನವಾನಾಂ ವ್ಯಸೃಜನ್ರಾಮೋಭಾತಿ ಶಿಲೀಮುಖಾನ್ ।**
**ಸದಾ ನವಾನಾಂ ಮಧುವತ್ಕುಸುಮಾನಾಂ ಶಿಲೀಮುಖಃ ॥ ೬ ॥**

**ಶರಾಂಧಕಾರೇ ಮಹತಿ ಮಗ್ನೋ ಮತಿಮತಾಂ ವರಃ ।**
**ಮಾಯಾಂ ಕೃತ್ವಾ ತದಾಽಗ್ನೇಯಂ ತಂ ದದಾಹ ಶರೋತ್ಕರಂ ॥ ೭ ॥**

**ಶರಾಂಧಕಾರಗಹನಾನ್ನಿಷ್ಕ್ರಾನ್ತಾಸ್ತೇ ದಿತೇಃ ಸುತಾಃ ।**
**ಭಾರ್ಗವಂ ಕೋಷ್ಠಕೀಕೃತ್ಯ ರಣೇ ಬಿಭಿದುರಂಜಸಾ ॥ ೮ ॥**

---

ತುಂಬಿಹೋದುವು. ಆ ಚಾಪಮಂಡಲಮಧ್ಯದಲ್ಲಿ ನಿಂತಿದ್ದ ಪರಶುರಾಮನನ್ನು ನೋಡಿದರೆ ಸುತ್ತಲೂ ಪರಿವೇಷ ಕಟ್ಟಿರುವ ಸೂರ್ಯಮಂಡಲದಂತೆ ತೋರುತ್ತಿತ್ತು. ನೋಡಿದ ಮಾತ್ರದಿಂದಲೇ ಆ ಸೈನಿಕರ ಕಣ್ಣುಗಳನ್ನು ಪರಶುರಾಮನು ಅಪಹರಿಸಿಬಿಟ್ಟನು. ಆ ಬಾಣಗಳಿಂದ ವ್ಯಾಪ್ತವಾದ ಅಂಧಕಾರದಲ್ಲಿ ಮುಳುಗಿದ್ದ ಸೈನಿಕರು ಸೂರ್ಯನಂತಿರುವ ಪರಶುರಾಮನನ್ನು, ಸೂರ್ಯನನ್ನು ಗೂಬೆಗಳು ನೋಡಲಾರದೆ ಇರುವಂತೆ, ನೋಡಲು ಶಕ್ತರಾಗದೆ ಹೋದರು. ಆ ರಾಕ್ಷಸರ ಮೇಲೆ ಪರಶುರಾಮನು ತಡೆಬಿಡುವಿಲ್ಲದಂತೆ ಬಾಣಗಳನ್ನು ಬಿಡುತ್ತ ಬರಲು ಹೂವಿನ ರಸದ ಮೇಲೆ ಹೊಸ ಹೊಸದಾಗಿ ದುಂಬಿಗಳೆರಗುವಂತೆ ರಾಕ್ಷಸರ ಮೇಲೆ ಬಾಣಗಳು ಬೀಳುತ್ತ ಬಂದುವು. ಆ ವಿಧವಾದ ಬಾಣಗಳಿಂದುಂಟಾದ ಅಂಧಕಾರದಿಂದ ಪರಶುರಾಮನು ಮುಚ್ಚಿಹೋಗಲು ಅಗ್ನಿಸಂಬಂಧವಾದ ಮಾಯೆಯಿಂದ ಬೆಳಕನ್ನುಂಟುಮಾಡಿದನು. ಬೆಳಕನ್ನು ಕಂಡೊಡನೆ ಆ ದೈತ್ಯರು ಶರಾಂಧಕಾರವೆಂಬ ವನದಿಂದ ಹೊರಗೆ ಬಂದು ಪರಶುರಾಮನನ್ನು ಮುತ್ತಿ ಬಾಣಪರಂಪರೆಗಳಿಂದ ಭೇದಿಸಿದರು. ಆಗ ರಾಕ್ಷಸರು ಪ್ರಚಂಡ

ಪ್ರಚಂಡೈರರ್ಧನಾರಾಚೈರ್ವತ್ಸದಂತೈಸ್ಸಚೂಚಕೈಃ ।
ವರಾಹಕರ್ಣೈರ್ಭಲ್ಲೈಶ್ಚ ಕ್ಷುರಪ್ರೈಶ್ಚ ಚಟಕಾನನೈಃ ॥ ೯ ॥

ಕೋಮರ್ಭೈರ್ಭಿಂಡಿಪಾಲೈಶ್ಚ ಪಾಷಾಣೈರ್ಲಗುಡೈಶ್ಶುಭೈಃ ।
ಬಡ್ಗೈಃ ಪ್ರಾಸೈಸ್ತಥಾ ಚಕ್ರೈರ್ಗದಾಮುಸಲಕಂಪನೈಃ ॥ ೧೦ ॥

ಪರಿಘೈರಾಯಸೈಶ್ಶೂಲೈಃ ಕುಠಾರೈಶ್ಶಕ್ತಿಭಿಸ್ತಥಾ ।
ಸ ಬಾಧ್ಯಮಾನೋಽಪಿ ರಣೇ ದೈತ್ಯನಾಥಾಯುಧೋತ್ಕರೈಃ ॥ ೧೧ ॥

ನವಿವ್ಯಥೆ ಮಹಾತೇಜಾ ಹುತಾಹುತಿರಿವಾನಲಃ ।
ಯದಾ ಶಸ್ತ್ರಪ್ರಹಾರೈಸ್ತಂ ನಶೇಕುಸ್ಸಮರೇ ದ್ವಿಜಂ ॥ ೧೨ ॥

ಹಂತುಂ ದೈತ್ಯವರಾಯುದ್ಧೇ ಚಕ್ರುರಸ್ತ್ರಂ ತದಾ ಮಹತ್ ।
ಅಯುಶ್ಶಂಕುರ್ಮಹಾತೇಜಾ ರಾಜಾ ದೈತ್ಯಗಣಸ್ಯ ಯಃ ॥ ೧೩ ॥

ಸಮೇತ್ಯೈರ್ದಾನವೈಸ್ಸಾರ್ಧೇ ರಾಮಂ ರಣಕೃತಕ್ಷಣಂ ।
ಶರೈಃ ಸಂಛಾದಯಾಮಾಸ ದಿವ್ಯಾಸ್ತ್ರಪ್ರತಿಮಂತ್ರಿತೈಃ ॥ ೧೪ ॥

---

ವಾದ ಅರ್ಧಬಾಣಗಳಿಂದಲೂ, ಮೊನಚಾದ, ಹಂದಿಯ ಮೂತಿಯಂತಿದ್ದ, ತ್ರಿಶೂಲದ ಮೊನೆ, ಗುಬ್ಬಚ್ಚಿಯ ಮೊನೆಗಳಂತಿದ್ದ ಬಾಣಗಳಿಂದಲೂ, ಒನಕೆ, ಭಿಂಡಿವಾಲ, ಪಾಷಾಣ, ದೊಡ್ಡ ದೊಣ್ಣೆ, ಕತ್ತಿ, ಈಟಿ, ಚಕ್ರ, ಗದೆ, ಹಾರೆ, ಕಬ್ಬಿಣದ ಸರಳು, ಶೂಲ, ತ್ರಿಶೂಲ, ಶಕ್ತಿ ಮುಂತಾದ ವಿವಿಧ ಭಯಂಕರ ಶಸ್ತ್ರಗಳಿಂದಲೂ, ನಾನಾವಿಧವಾದ ಆಯುಧ ಪರಂಪರೆಗಳಿಂದಲೂ ಪರಶುರಾಮನ ದೇಹವನ್ನು ಗಾಯಗೊಳಿಸುತ್ತಿದ್ದಾಗ್ಯೂ ಆ ಭಾರ್ಗವರಾಮನು ಅದೊಂದಕ್ಕೂ ಹೆದರಲೇ ಇಲ್ಲ. ಬೆಂಕಿಗೆ ಆಹುತಿ ಹಾಕಿದರೆ ಅದನ್ನೆಲ್ಲಾ ಅಗ್ನಿಯು ಹುತಮಾಡುವಂತೆ ಎಲ್ಲ ಶಸ್ತ್ರಾಸ್ತ್ರಾಯುಧಗಳನ್ನೂ ಜೀರ್ಣಿಸಿಕೊಂಡು ಸ್ತಬ್ಧನಾಗಿ ನಿಂತನು. ಏನಾದರೂ, ದೈತ್ಯರು ಶಸ್ತ್ರಪ್ರಹಾರಗಳಿಂದ ಆ ಬ್ರಾಹ್ಮಣನನ್ನು ಜಯಿಸಲಾರದೆ ಹೋದರು. ಆಗ ದೈತ್ಯರು ಭಾರ್ಗವರಾಮನ ಮೇಲೆ ಚಕ್ರವನ್ನು ಪ್ರಯೋಗಿಸಿದರು. ಆ ಕೂಡಲೆ ಆ ದೈತ್ಯಗಣದ ರಾಜನಾದ ಅಯುಶ್ಶಂಕುವು ದೈತ್ಯಗಣದೊಡನೆ ಸೇರಿ ಪರಶುರಾಮನ ಮೇಲೆ ಬಾಣಗಳ ಮಳೆಯನ್ನೇ ಕರೆದುಬಿಟ್ಟನು. ಪರಶುರಾಮನು ಹೆದರುವನೇನು? ಬೇರೆ ಬೇರೆ ಅಸ್ತ್ರ

**ಅಸ್ತ್ರೈರಸ್ತ್ರಾಣಿ ಸಂವಾರ್ಯ ದಾನವೇಂದ್ರಸ್ಯ ಭಾರ್ಗವಃ ।**
**ಚಿಚ್ಛೇದ ಸಶರಂ ಚಾಪಂ ರುಕ್ಮದಂಡಂ ತಥಾ ಧ್ವಜಂ　　　　॥ ೧೫ ॥**

**ಸಾರಥೇಶ್ಚ ಶಿರಃ ಕಾಯಾಚ್ಛಿರಸ್ತ್ರಾಣವಿಭೂಷಿತಂ ।**
**ಏತತ್ಕೃತ್ವಾರಣೇ ಕರ್ವ ದಕ್ಷಿಣೇನ ಸ ಪಾಣಿನಾ　　　　॥ ೧೬ ॥**

**ಜಗ್ರಾಹ ಪರಶುಂ ತೀಕ್ಷ್ಣಂ ದೈತ್ಯಕಾಯವಿದಾರಣಂ ।**
**ಪದ್ಭ್ಯಾಮಾಕ್ರಮ್ಯವೇಗೇನ ಸಮರೇ ರಥಕೂಬರಂ　　　　॥ ೧೭ ॥**

**ನಿರ್ಜೀವಾನ್ಪಾದವೇಗೇನ ಕೃತ್ವಾ ತುರಗಸತ್ತಮಾನ್ ।**
**ಗದಯಾ ಚ ರಥಸ್ಥಸ್ಯ ದಾನವೇಂದ್ರಸ್ಯ ಸಂಯುಗೇ　　　　॥ ೧೮ ॥**

**ಜಹಾರ ಸಶಿರಸ್ತ್ರಾಣಂ ಶಿರೋಜ್ಜ್ವಲಿತಕುಂಡಲಂ ।**
**ಅಯಃಶಂಕೌ ಹತೇ ದೈತ್ಯೇ ಭಾರ್ಗವಂ ಸಮರೇ ತಥಾ　　　　॥ ೧೯ ॥**

**ಸರ್ವೇ ದೈತ್ಯಗಣಾಃ ಕ್ರುದ್ಧಾಶ್ಛಾದಯಾಮಾಸುರಂಜಸಾ ।**
**ಅಸ್ತ್ರಪುಂಜಂ ರಣೇ ಛಿತ್ವಾ ತೇಷಾಂ ಭೃಗುಕುಲೋದ್ಭವಃ　　　　॥ ೨೦ ॥**

---

ಗಳನ್ನು ಪ್ರಯೋಗಿಸಿ ಚಕ್ರವನ್ನೂ, ಅಸ್ತ್ರಗಳನ್ನೂ, ಶತ್ರುಗಳ ರುಕ್ಮದಂಡ ಧ್ವಜಾದಿಗಳನ್ನೂ ಸಹ ಭಾರ್ಗವರಾಮನು ಭೇದಿಸಿ ಸಾರಥಿಯ ತಲೆಯನ್ನೂ, ತಲೆಯಮೇಲಿನ ಕಿರೀಟವನ್ನೂ ಕತ್ತರಿಸಿ ಕೆಡವಿದನು. ಇಷ್ಟು ಕೆಲಸ ಮಾಡಿದ ಬಳಿಕ ಪರಶುರಾಮನು ಬಲಗಯ್ಯಿಂದ ತನ್ನ ತೀಕ್ಷ್ಣವಾದ ಕೊಡಲಿಯನ್ನು ಹಿಡಿದು ನಿಂತನು. ಬಳಿಕ ಕಾಲುಗಳಿಂದ ರಥಗಳನ್ನು ಒತ್ತಿ ಹಿಡಿದು ಕೈಗೊಡಲಿಯಿಂದ ಕುದುರೆಗಳನ್ನೂ, ರಾಕ್ಷಸರ ಶಿರಗಳನ್ನೂ ತರಿಯುತ್ತ ಬಂದನು. ಬಳಿಕ ಗದೆಯಿಂದ ಅಯಶ್ಶಂಕುವಿನ ತಲೆಯನ್ನು ಕಿರೀಟಸಹಿತವಾಗಿ ಹೊಡೆದುರುಳಿಸಿದನು. ಈ ರೀತಿ ಅಯಶ್ಶಂಕುವು ಹತನಾಗಿ ಬಿದ್ದುಹೋದ ಕೂಡಲೆ ಉಳಿದ ರಾಕ್ಷಸರು ಪರಶುರಾಮನನ್ನು ನೋಡಿದರು.

೨೦-೨೪. ಭಾರ್ಗವರಾಮನ ಮೇಲೆ ಬಹಳ ಕೋಪಗೊಂಡವರಾಗಿ ಅಸ್ತ್ರಸಮುದಾಯದಿಂದ ಅವನನ್ನು ಮುಚ್ಚಿಬಿಟ್ಟರು. ರಾಮನು ಆ ಅಸ್ತ್ರಗಳನ್ನೆಲ್ಲಾ

ರಣೇ ಚಿಚ್ಛೇದ ಗಾತ್ರಾಣಿ ಶಿರಾಂಸಿ ಚ ಮಹಾತಪಾಃ ।
ಕ್ಷಣಮಾತ್ರೇಣ ರಾಮೋಽಪಿ ದೈತ್ಯದೇಹಸಮಾಕುಲಾಂ ॥ ೨೧ ॥

ಶೋಣಿತೌಘನದೀಂ ಚಕ್ರೇ ಕೇಶಶೈವಾಲಶಾದ್ವಲಾಂ ।
ಬಾಣಮೀನಾಂ ಚಾಪನಕ್ರಾಂ ಛತ್ರಹಂಸಾವಲೀಂ ತಥಾ ॥ ೨೨ ॥

ಪ್ರೇತಲೋಕಾರ್ಣವಗಮಾಂ ಭೀರುಕಲ್ಮಷವರ್ಧಿನೀಂ ।
ಹಸ್ತಿಶೀರ್ಷೋಪಲಾಂ ರೌದ್ರಾಂ ಚಾರುಪುಚ್ಛಸಪನ್ನಗಾಂ ॥ ೨೩ ॥

ಏವಂ ವಿಧೇಽಪಿ ಸಂವೃತ್ತೇ ರಣೇ ಕರ್ಮಣಿ ದಾನವಾಃ ।
ತಂ ರಾಮಮಕ್ಷತಂ ದೃಷ್ಟ್ವಾ ಹತಶೇಷಾಃ ಪ್ರದುದ್ರುವುಃ ॥ ೨೪ ॥

ಮಯತಾರಪ್ರಭೃತಯಃ ಪುರಂ ಚ ವಿವಿಶುಸ್ತದಾ ।
ಪಲಾಯಮಾನಾನ್ಸಮರೇ ನ ಜಘಾನ ಸ ಭಾರ್ಗವಃ ॥ ೨೫ ॥

ಕಿಂಚಿತ್ ಶೇಷೇಷು ದೈತ್ಯೇಷು ವಿನಿವೃತ್ತಸ್ತದಾ ರಣಾತ್ ।
ಹತದೈತ್ಯಾಯುತಗಣೋ ರಾಮೋಽಶ್ಮನಗರಂ ಯಯೌ ॥ ೨೬ ॥

---

ಚೂರುಚೂರಾಗಿ ಕತ್ತರಿಸಿ ರಾಕ್ಷಸರ ತಲೆಯನ್ನು ಕಡಿದು ಉರುಳಿಸಲಾರಂಭಿಸಿದನು. ಒಂದು ಕ್ಷಣದೊಳಗಾಗಿ ರಾಕ್ಷಸರೆಲ್ಲರೂ ಹತರಾಗಿಹೋದರು. ಆ ಹತದೈತ್ಯರ ದೇಹದಿಂದ ಒಂದು ಭಾರೀ ರಕ್ತನದಿಯೇ ಹರಿಲಾರಂಭವಾಯಿತು. ಆ ನದಿಯಲ್ಲಿ ಕೊಚ್ಚಿಹೋಗುತ್ತಿದ್ದ ಬಾಣಗಳು ಮೀನುಗಳಂತೆಯೂ, ಧನುಸ್ಸುಗಳು ಮೊಸಳೆಗಳಂತೆಯೂ, ಛತ್ರಿಗಳು ಹಂಸಗಳಂತೆಯೂ, ಇವೆಲ್ಲವೂ ಪ್ರೇತಲೋಕಾಭಿಮುಖವಾಗಿಯೂ ಹರಿದು ಹೋಗುತ್ತಾ ಭಯಂಕರ ಪಾಪವನ್ನು ವೃದ್ಧಿಗೊಳಿಸುತ್ತಿರುವಂತೆಯೂ ತೋರುತ್ತಿತ್ತು. ಆ ನದಿಯಲ್ಲಿ ಆನೇತಲೆಗಳೆಂಬ ಬಂಡೆಗಳೂ ಅವುಗಳ ಬಾಲಗಳೆಂಬ ಹಾವುಗಳೂ ಕಾಣುತ್ತಿದ್ದುವು. ಈರೀತಿ ಇದ್ದಾಗ್ಯೂ ಆ ಯುದ್ಧರಂಗದಲ್ಲಿ ಏನೂ ಗಾಯವಿಲ್ಲದೆ ಗಂಭೀರವಾಗಿ ನಿಂತಿದ್ದ ರಾಮನನ್ನು ನೋಡಿ ಹತಶೇಷ ರಾಕ್ಷಸರು ಓಡಿಹೋದರು.

೨೫-೨೬. ಮಯ, ತಾರ ಮುಂತಾದ ಪ್ರಮುಖರಾದ ರಾಕ್ಷಸರು ಊರಿಗೆ ಹಿಂತಿರುಗಿದರು. ಹಿಂತಿರುಗಿ ಓಡಿಹೋಗುತ್ತಿದ್ದ ಶತ್ರುಗಳನ್ನು ಭಾರ್ಗವರಾಮನು ಹೊಡೆಯಲಿಲ್ಲ. ಸ್ವಲ್ಪ ಸ್ವಲ್ಪ ಉಳಿದಿದ್ದ ರಾಕ್ಷಸರು ಹಿಂತಿರುಗಿ ಹೋಗಿ ಮನೆಗೆ

**ರಾಮಪ್ರವೇಶೇ ನಗರಂ ವರುಣಸ್ಯಾಜ್ಞಯಾ ತದಾ ।**
**ಪತಾಕಾಧ್ವಜಸಂಬಾಧಂಕೃತಂ ದೇವೈರ್ವಿಶೇಷವತ್ ॥ ೨೭ ॥**

**ನಾಗೈಶ್ಚ ದಾನವೈಶ್ಚೈವಸಿಕ್ತಂ ಚಂದನವಾರಿಣಾ ।**
**ಧೂಪಪುಂಜಸಮುತ್ಕ್ಷಿಪ್ತಂ ಕುಸುಮೋತ್ಕರಮಂಡಿತಂ ॥ ೨೮ ॥**

**ತತಶ್ಚ ಸುಮಹಾತೇಜಾ ವರುಣಸ್ತು ವಿನಿರ್ಗತಃ ।**
**ಪುತ್ರಪೌತ್ರೈಃ ಪರಿವೃತೋ ರಾಮಪ್ರಗ್ರಹಕಾರಣಾತ್ ॥ ೨೯ ॥**

**ಸಂಪೂಜ್ಯಮಾನಂ ವರುಣೋ ರಥಮಾರೋಪ್ಯ ಚ ಸ್ವಕಂ ।**
**ಪ್ರವೇಶಯಾಮಾಸ ಪುರಂ ಬಹುತೂರ್ಯಪುರಸ್ಕೃತಂ ॥ ೩೦ ॥**

**ರಾಮಪ್ರವೇಶೇ ಚತದಾ ನೃತ್ಯನ್ತ್ಯೋಽಪ್ಸರಸಾಂಗಣಾಃ ।**
**ಗಂಧರ್ವಮುಖ್ಯಾಗಾಯಂತಿ ಸಂಸ್ತುವಂತಿ ಚ ಬಂದಿನಃ ॥ ೩೧ ॥**

---

ಸೇರಿಕೊಂಡರು. ಇಂತು ಹತಶೇಷರು ಓಡಿಹೋದ ಬಳಿಕ ಪರಶುರಾಮನು ಅಶ್ಮ ನಗರವನ್ನು ಪ್ರವೇಶಿಸಿದನು ರಾಮನು ನಗರಪ್ರವೇಶ ಮಾಡುವ ಕಾಲದಲ್ಲಿ ವರುಣನ ಅಪ್ಪಣೆಯಿಂದ ದೇವತೆಗಳು ಊರನ್ನು ಬಾವುಟ ತೋರಣಗಳಿಂದ ವಿಶೇಷವಾಗಿ ಅಲಂಕರಿಸಿದರು

೨೮-೩೧. ಊರಿನ ಬೀದಿಗಳಲ್ಲೆಲ್ಲಾ ನಾಗರೂ ದಾನವರೂ ಗಂಧೋದಕಗಳನ್ನು ಚುಮುಕಿಸಿದರು. ಎಲ್ಲೆಲ್ಲಿಯೂ ಧೂಪದ ಹೊಗೆಯು ಸುವಾಸನೆಯು ಹರಡಿಕೊಂಡಿತ್ತು. ಮತ್ತು ಎಲ್ಲೆಲ್ಲಿಯೂ ವಿವಿಧ ಪರಿಮಳ ಪುಷ್ಪಗಳನ್ನು ಹರಡಿದ್ದರು. ಆ ಸಮಯದಲ್ಲಿ, ಪರಶುರಾಮನನ್ನು ವೈಭವದಿಂದ ಊರಿಗೆ ಬರಮಾಡಿಕೊಳ್ಳಬೇಕೆಂದು ವರುಣನು ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳ ಗುಂಪಿನೊಡನೆ ಪರಶುರಾಮನಿದ್ದಲ್ಲಿಗೆ ಹೋಗಿ ವಿಧಿವತ್ತಾಗಿ ಪೂಜಿಸಿ ಸುಂದರವಾದ ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡು, ವಿವಿಧ ವಾದ್ಯಗಳು ಧ್ವನಿಮಾಡುತ್ತಿರಲು ಪರಶುರಾಮನನ್ನು ಊರಿಗ ಮೆರೆವಣಿಗೆಯಾಗಿ ಕರೆತಂದನು. ಆಗ ಬೀದಿಗಳಲ್ಲೆಲ್ಲಿಯೂ ಅಪ್ಸರಸ್ತ್ರೀಯರು ನರ್ತನ ಮಾಡುತ್ತಿದ್ದರು. ಗಂಧರ್ವರು ಇಂಪಾಗಿ ಗಾನಮಾಡುತ್ತಿದ್ದರು. ಸ್ತುತಿಪಾಠಕರು ಹೊಗಳುತ್ತಿದ್ದರು.

ಸಪ್ರವಿಶ್ಯಾಥ ನಗರಂ ವರುಣಸ್ಯ ತಥಾ ಗೃಹಂ ।
ಉವಾಸತತ್ರ ಧರ್ಮಾತ್ಮಾ ವರುಣೇನ ಸುಪೂಜಿತಃ ॥ ೩೨ ॥

ಧರ್ಮಾಣಾಮಾಗಮಂ ಕೃತ್ವಾ ವರುಣಾತ್ಸಸುತಾತ್ತದಾ ॥ ೩೩ ॥

ಏವಂ ಸ ರಾಮಃ ಪರವೀರಘಾತೀ
ಸಂಪ್ರಾಪ್ಯ ಯಾದೋಗಣನಾಥವೇಶ್ಮ ।
ಉವಾಸಪುತ್ರೈರ್ವರುಣಸ್ಯ ಸಾರ್ಧಂ
ಸಂಪೂಜಿತಸ್ತೇನ ಜಲೇಶ್ವರೇಣ ॥ ೩೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಅಯಶ್ಶಂಕುವಧೋನಾಮ ಸಪ್ತತಿತಮೋಧ್ಯಾಯಃ

---

೩೨-೩೪. ಈ ರೀತಿ ವೈಭವದಿಂದ ಪರಶುರಾಮನು ವರುಣನಗರವನ್ನು ಪ್ರವೇಶಿಸಿ ವರುಣನಿಂದ ಪೂಜಿತನಾಗಿ ವರುಣನ ಮನೆಯಲ್ಲಿ ಸುಖವಾಗಿ ವಾಸಮಾಡುತ್ತಿದ್ದನು ಅಲ್ಲಿ ವರುಣನಿಂದಲೂ, ಅವನ ಮಕ್ಕಳಿಂದಲೂ ಧಾರ್ಮಿಕವಿಚಾರವನ್ನು ಕುರಿತು ಚರ್ಚಿಸಿ ತಿಳಿದುಕೊಳ್ಳುತ್ತಾ ಇದ್ದನು. ಈ ರೀತಿ ಜಲಪತಿಯಾದ ವರುಣನ ಮನೆಯಲ್ಲಿ ಅವನ ಮಕ್ಕಳೊಡನೆ ಉಪಚಾರವಂ ಕೈಗೊಂಡು ಪರಶುರಾಮನು ಸುಖವಾಗಿದ್ದನು.

ಇಂತೆಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಅಯಶ್ಶಂಕುವಧೆಯೆಂಬ ಹೆಸರಿನ ಎಪ್ಪತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ ಪ್ರಥಮಖಂಡೇ
## ಏಕಸಪ್ತತಿತಮೋಧ್ಯಾಯಃ

---

॥ ವಜ್ರ ಉವಾಚ ॥

**ಯತ್ಸ ಶುಶ್ರಾವ ಧರ್ಮಾತ್ಮಾ ವರುಣಾತ್ ಭೃಗುನಂದನ ।**
**ತನ್ಮಮಾಚಕ್ಷ್ವ ತತ್ತ್ವೇನ ಪರಂ ಕೌತೂಹಲಂ ಹಿ ಮೇ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಜಮದಗ್ನಿಸುತೋ ರಾಮೋ ವರುಣಸ್ಯ ಗೃಹೋಷಿತಃ**
**ಕದಾಚಿದ್ವರುಣಂ ದೇವಂ ಇದಂ ವಚನಮಬ್ರವೀತ್ ॥ ೨ ॥**

---

## ಎಪ್ಪತ್ತೊಂದನೆಯ ಅಧ್ಯಾಯವು

೧. ವಜ್ರಭೂಪಾಲಕನು ಹೇಳುತ್ತಾನೆ.—ಎಲೈ, ಮಾರ್ಕಂಡೇಯನೇ ! ಧರ್ಮಾತ್ಮನಾದ ಪರಶುರಾಮನು ವರುಣನ ಮನೆಯಲ್ಲಿ ವಾಸಮಾಡುತ್ತಿದ್ದಾಗ ವರುಣನಿಂದ ಏನೇನನ್ನು ಕೇಳಿ ತಿಳಿದುಕೊಂಡನೋ ಅದನ್ನೆಲ್ಲಾ ಕೇಳಬೇಕೆಂದು ನನಗೆ ಆಶೆಯಾಗಿದೆ. ಅದನ್ನು ನನಗೆ ದಯವಿಟ್ಟು ತಿಳಿಸು.

೨. ಮಾರ್ಕಂಡೇಯನು ವಜ್ರಭೂಪಾಲಕನಿಗೆ ಹೇಳುತ್ತಾನೆ.—ವರುಣನ ಮನೆಯಲ್ಲಿ ವಾಸಮಾಡುತ್ತಿದ್ದಾಗ ಜಮದಗ್ನಿ ಋಷಿಯ ಮಗನಾದ ರಾಮನು ಒಂದಾನೊಂದು ಕಾಲದಲ್ಲಿ ವರುಣನನ್ನು ಕುರಿತು ಈ ರೀತಿ ಪ್ರಶ್ನೆಮಾಡಿದನು.

॥ ರಾಮ ಉವಾಚ ॥

ನಮಸ್ತೇ ದೇವದೇವೇಶ ಸುರಾಸುರಗಣಾರ್ಚಿತ ।
ಗೋಬ್ರಾಹ್ಮಣಹಿತಾಸಕ್ತ ಯಾದೋಗಣಜಲೇಶ್ವರ ॥ ೩ ॥

ತ್ವಂ ತಸ್ಯ ದೇವದೇವಸ್ಯ ವಿಷ್ಣೋರಮಿತತೇಜಸಃ ।
ಅಯನಮೃಷಿಭಿರ್ಯೇನ ವಿಷ್ಣುರ್ನಾರಾಯಣಃಸ್ಮೃತಃ ॥ ೪ ॥

ತ್ವಮೇವೇದಂ ಜಗತ್ಸರ್ವಂ ಸ್ಥಾವರಂ ಜಂಗಮಂಚ ಯತ್ ।
ಬ್ರಹ್ಮಾ ವಿಷ್ಣುಶ್ಚರುದ್ರಶ್ಚ ತ್ವಚ್ಛರೀರೇ ಸಮಾಶ್ರಿತಾಃ ॥ ೫ ॥

ತ್ವಮಿಂದ್ರಸ್ತ್ವಂ ಚ ಧನದಸ್ತ್ವಮೀಶಸ್ತ್ವಂ ಸಮೀರಣಃ ।
ತ್ವಮಗ್ನಿಸ್ತ್ವಂ ಯಮಶ್ಚೈವ ಸರ್ವಾಧಾರಸ್ತ್ವಮಚ್ಯುತಃ ॥ ೬ ॥

ದೇವಾನಾಮೀಶ್ವರಶ್ಚೈವ ನಾಗಾನಾಮೀಶ್ವರಸ್ತಥಾ ।
ಸಾಗರಾಣಾಂಚಸರಸಾಂ ಸರಿತಾಂ ಚ ಮಹಾಭುಜ ॥ ೭ ॥

---

೩. 'ವರುಣನನ್ನು ಕುರಿತು ಪರಶುರಾಮನು ಸ್ತೋತ್ರಮಾಡುತ್ತಾನೆ.—ದೇವ ದೇವೋತ್ತಮನೇ! ಸುರಾಸುರರ ಗಣದಿಂದ ಪೂಜೆಗೊಂಬುವವನೆ' ನಿನಗೆ ನಮಸ್ಕಾರ. ನೀನು ಗೋಬ್ರಾಹ್ಮಣರ ಹಿತದಲ್ಲಾಸಕ್ತನಾದವನು ಜಲಚರಪ್ರಾಣಿಗಳಿಗೂ ಜಲಕ್ಕೂ ಸಹ ನೀನೇ ರಾಜನು. ನೀನು ಮಹಾಪರಾಕ್ರಮಶಾಲಿಯಾದ, ದೇವದೇವೋತ್ತಮನಾದ ಮಹಾವಿಷ್ಣುವಿನ ಮಾರ್ಗಸ್ವರೂಪನು. ಯಾವ ನಿನ್ನಿಂದ ವಿಷ್ಣುವು ನಾರಾಯಣ (ಜ್ಞಾನಕ್ಕೆ ಮಾರ್ಗದರ್ಶಿ) ನೆಂದೆನಿಸಿಕೊಂಡಿರುವನು. ಈ ಕಣ್ಣಿಗೆ ಕಾಣುತಲಿರುವ ಸ್ಥಾವರಜಂಗಮಾತ್ಮಕವಾದ ಸಕಲಪ್ರಪಂಚವೂ ನೀನೇ ಆಗಿರುವೆ. ಬ್ರಹ್ಮವಿಷ್ಣು, ಮಹೇಶ್ವರರು ನಿನ್ನ ದೇಹವನ್ನು ಆಶ್ರಯಿಸಿಕೊಂಡಿರುತ್ತಾರೆ. ಇಂದ್ರನೂ, ಕುಬೇರನೂ, ವಾಯುವೂ ಅಗ್ನಿಯೂ, ಯಮನೂ ನೀನೇ ಆಗಿ ಸರ್ವಾಧಾರನಾದ ಅಚ್ಯುತನೆನಿಸಿಕೊಂಡಿರುತ್ತೀಯೆ! ದೇವತೆಗಳಿಗೂ ನಾಗರಿಗೂ ಸಹ ನೀನೇ ಒಡೆಯನು. ಸಾಗರ, ಸರೋವರ, ನದಿ, ಕೂಪ, ವಾಪೀ, ಕಟಾಕಗಳಿಗೆಲ್ಲಾ ನೀನೇ ಅಧಿಪತಿಯು. ವಿಷ್ಣುವಿನ ಎಡಗಣ್ಣಿನಂತೆ ಇರುವ ಮಹಾತ್ಮನಾದ

**ಕೂಪವಾಪೀತಟಾಕಾನಾಂ ಶೌಚಸ್ಯ ಪರಮಸ್ಯ ಚ ।**
**ವಿಷ್ಣೋರ್ವಾಮಸ್ಯ ನೇತ್ರಸ್ಯ ಶಶಾಂಕಸ್ಯ ಮಹಾತ್ಮನಃ　　॥ ೮ ॥**

**ತ್ವನ್ಮಯಂ ಮಂಡಲಂ ದೇವ ತ್ವನ್ಮಯಾಸ್ಸರ್ವತಾರಕಾಃ ।**
**ತ್ವಮೇವಸರಿತಾಂ ನಾಥಸ್ಸಮುದ್ರೋ ಯಾದಸಾಂಪತಿಃ　　॥ ೯ ॥**

**ಆಧಾರಸ್ಸರ್ವರತ್ನಾನಾಂ ವಿದ್ಯಾನಾಂ ಚ ಜಗತ್ಪತೇ ।**
**ತ್ವನ್ಮಯೋದೇಹಿನಾಂ ಪ್ರಾಣೋ ಜೀವೋ ರುಧಿರಸಂಜ್ಞಕಃ　　॥ ೧೦ ॥**

**ರಾಮಸ್ತ್ವಂ ಪ್ರಾಣಿನಾಂ ದೇವ ಸರ್ವದೇವಮಯೋ ವಿಭುಃ ।**
**ಭವತಾಸಂಯುತಾ ಪಾಶೈರ್ದಾನವಾ ದೇವದಾರುಣೈಃ　　॥ ೧೧ ॥**

**ಪಾತಾಲದ್ವಾರಮಾಶ್ರಿತ್ಯ ಭವಾಂಸ್ತಿಷ್ಠತಿ ನಿರ್ಭಯಃ ।**
**ಮೇರುಪೃಷ್ಠೇ ಚ ಭಗವನ್ಪುರೀ ತೇ ದೇವನಿರ್ಮಿತಾ　　॥ ೧೨ ॥**

---

ಚಂದ್ರನ ಮಂಡಲವು ನಿನ್ನ ಸ್ವರೂಪವಾಗಿದೆ. ಸಕಲ ನಕ್ಷತ್ರಗಳೂ ತ್ವನ್ಮಯವಾಗಿದೆ ಯಾದಃಪತಿಯೆನಿಸಿದ ಸಮುದ್ರನಿಗೂ ಸಹ ನೀನೇ ನಾಥನಾಗಿದೀಯೆ. ಸಕಲ ರತ್ನಗಳಿಗೂ ಸಕಲ ವಿದ್ಯೆಗಳಿಗೂ, ಎಲೈ ಜಗತ್ಪತಿಯೆ! ನೀನೇ ನಾಯಕನು. ಜೀವಿಗಳ ಪ್ರಾಣಗಳು ನಿನ್ನ ವಶದಲ್ಲಿವೆ. ಜೀವವು ರುಧಿರ (ರಕ್ತ) ವೆನಿಸಿಕೊಂಡಿದೆ. ರಾಮನೂ ನೀನೇ ಸಕಲ ಪ್ರಾಣಿಗಳಿಗೂ, ಎಲೈ ಸ್ವಾಮಿಯೆ! ನೀನೇ ಒಡೆಯನಾಗಿ ಸರ್ವದೇವಮಯನಾಗಿದೀಯೆ.

೧೧-೧೫. ಪಾಶಹಸ್ತ (ವರುಣನ ಆಯುಧವು ಹಗ್ಗ) ನಾದ ನಿನ್ನಿಂದ ಭಯಂಕರರಾದ ರಾಕ್ಷಸರೆಲ್ಲರೂ ಪಾಶಬದ್ಧರಾಗಿ ನಿನ್ನ ಅಧೀನದಲ್ಲಿದ್ದಾರೆ. ನೀನು ಪಾತಾಳ ದ್ವಾರವನ್ನಾಶ್ರಯಿಸಿಕೊಂಡು ಯಾರ ಭಯವೂ ಇಲ್ಲದೆ ಸುಖವಾಗಿದ್ದೀಯೆ ನೀನು ವಾಸಮಾಡುತ್ತಿರುವ, ಅಶ್ಮನಗರವು ದೇವನಿರ್ಮಿತವಾದುದಾಗಿ ಮೇರುಪರ್ವತದ

ತೃತೀಯಾ ಚ ಮಹಾಭಾಗ ಮಾನಸೋತ್ತರಮೂರ್ಧನಿ ।
ಪುರತ್ರಯೇ ತ್ವಂ ವಸಸಿ ಪ್ರಕಾಮ್ಯೇನ ಜಲೇಶ್ವರ ॥ ೧೩ ॥

ಸರ್ವತ್ರ ಪೂಜ್ಯಸೇ ದೇವೈಸ್ಸರ್ವಭೂತಭವೋದ್ಭವ ।
ಆಧಾರಸ್ತ್ವಂ ಹಿ ತಪಸಾಂ ಶೌಚಾನಾಂ ಭುವನಸ್ಯ ಚ ॥ ೧೪ ॥

ತ್ರೈಲೋಕ್ಯಂ ಸಕಲಂ ದೇವ ಪ್ರಕೃತಿರ್ವಿಕೃತಿಶ್ಚ ತೇ ।
ಮಮಾಪಿ ಸುಮಹಾಭಾಗ ಪ್ರಸಾದಸುಮುಖೋಽಹ್ಯಸಿ ॥ ೧೫ ॥

ತಸ್ಮಾನ್ಮೇ ಭಗವಞ್ಛಿಂಧಿ ಸಂಶಯಾನ್ಮನಸಿಸ್ಥಿತಾನ್ ।

॥ ವರುಣ ಉವಾಚ ॥

ಯತ್ರಾಸ್ತಿತೇ ಸಂಶಯಮಸ್ತ್ರಧಾರಿ
ಛೇತ್ತಾಸ್ಮಿ ತೇತತ್ರನ ಸಂಶಯೋಽತ್ರ ।

---

ಹಿಂಭಾಗದಲ್ಲಿದೆ. ನಿನ್ನ ಮೂರನೆಯದಾದ ಇನ್ನೊಂದು ಪಟ್ಟಣವು ಮಾನಸಪರ್ವತದ ಉತ್ತರಭಾಗದ ಶಿಖರದಲ್ಲಿದೆ. ಈ ರೀತಿ ಈ ಮೂರು ಪಟ್ಟಣಗಳಲ್ಲೂ ನೀನು ವಿಶೇಷವಾಗಿ ವಾಸಮಾಡುತ್ತಾ ಇರುತ್ತೀಯೆ. ಸಕಲ ಪ್ರಾಣಿಗಳ ಉತ್ಪತ್ತಿಕಾರಣನಾದ ನೀನು ಎಲ್ಲ ಕಡೆಗಳಲ್ಲೂ ದೇವತೆಗಳಿಂದ ಪೂಜಿಸಲ್ಪಡುತ್ತೀಯೆ! ತಪಸ್ಸುಗಳಿಗೂ ಶುಚಿಯಾದ ಆಚಾರಗಳಿಗೂ, ಭುವನತ್ರಯಕ್ಕೂ ನೀನೇ ಆಧಾರನು. ಮೂರು ಲೋಕವೂ ಅಲ್ಲೆಲ್ಲಾ ಕಾಣಬರುವ ಪ್ರಕೃತಿಯೂ ವಿಕೃತಿಯೂ ನೀನೇ ಆಗಿರುವಿ! ಎಲೈ ಮಹಾಭಾಗನೆ! ನನಗೂ ನೀನು ಪ್ರಸನ್ನನಾಗಿ ಸುಮುಖದಿಂದಿರುವಿಯಾದುದರಿಂದ ನನ್ನ ಮನಸ್ಸಿನಲ್ಲಿರುವ ಸಂಶಯಗಳನ್ನೆಲ್ಲಾ ಸಂಹರಿಸಬೇಕೈ, ಮಹಾನುಭಾವನೇ!

೧೬. ವರುಣನು ಪರಶುರಾಮನನ್ನು ಕುರಿತು ಹೇಳುತ್ತಾನೆ.—"ಎಲೈ, ವಿಷ್ಣುಚಾಪಧಾರಿಯೆ! ನಿನಗೆ ಎಲ್ಲಿ ಸಂಶಯವಿದೆಯೊ, ಆ ಸಂಶಯಗಳನ್ನು ನಾನು

ಯಥಾ ಮಮೇಶಸ್ತ್ರಿಪುರಾಂತಕೋಽಸೌ
ತಥಾ ಭವಾನ್ಮೇ ರಣಚಂಡವೇಗಃ　　　॥ ೧೬ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶ್ರೀಪರಶುರಾಮವರುಣಕೃತ ಸ್ತೋತ್ರೋ
ನಾಮೈಕಸಪ್ತತಿತಮೋಽಧ್ಯಾಯಃ

---

ನಿಶ್ಚಯವಾಗಿಯೂ ಪರಿಹಾರಮಾಡುತ್ತೇನೆ. ನನಗೆ ಈಶ್ವರನನ್ನು ಕಂಡರೆ ಎಷ್ಟು ಅಭಿಮಾನವಿದೆಯೋ ಅದರಂತೆ ನಿನ್ನ ವಿಷಯದಲ್ಲೂ ಅಷ್ಟೇ ಅಭಿಮಾನವಿದೆಯೆಂದು ತಿಳಿದುಕೋ,'' ಎಂದು ವರುಣನು ಪರಶುರಾಮನಿಗೆ ಹೇಳಿದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪರಶುರಾಮ ವರುಣಸ್ತೋತ್ರವೆಂಬ ಹೆಸರಿನ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ದ್ವಿಸಪ್ತತಿತಮೋಽಧ್ಯಾಯಃ

॥ ರಾಮ ಉವಾಚ ॥

ಸ್ನಿಗ್ಧವೈಡೂರ್ಯಸಂಕಾಶ ಯಾದೋಗಣಜಲೇಶ್ವರ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ಕಾಲಸಂಸ್ಥಾಂ ಮಹಾಭುಜ ॥ ೧ ॥

॥ ವರುಣ ಉವಾಚ ॥

ಅನಾದಿನಿಧನಃ ಕಾಲೋ ರುದ್ರಸ್ಸಂಕರ್ಷಣಸ್ಸ್ಮೃತಃ ।
ಸರ್ವಭೂತಸಮುತ್ಪಾಚ್ಚ ಸ ತು ರುದ್ರಃ ಪ್ರಕೀರ್ತಿತಃ ॥ ೨ ॥

ಅನಾದಿನಿಧನತ್ವೇನ ಸ ಮಹಾನ್ಪರಮೇಶ್ವರಃ ।
ನಿಮೇಷಾದಪಿಸೂಕ್ಷ್ಮತ್ವಾತ್ಸೂಕ್ಷ್ಮಾತ್ಸೂಕ್ಷ್ಮತರೋ ಹ್ಯತಿ ॥ ೩ ॥

---

## ಎಪ್ಪತ್ತೆರಡನೆಯ ಅಧ್ಯಾಯವು

೧. ಪರಶುರಾಮನು ಪ್ರಶ್ನೆಮಾಡುತ್ತಾನೆ.—ಮನೋಹರನಾದ ವೈಡೂರ್ಯ ರತ್ನದಂತೆ ಪ್ರಕಾಶಮಾನನಾದ ಸಮುದ್ರಗಳಿಗೊಡೆಯನಾದ, ಮಹಾವೀರನೆ! ನಿನ್ನ ಮುಖದಿಂದ ನಾನು ಕಾಲಪರಿಣಾಮವನ್ನು ತಿಳಿಯಬೇಕೆಂದು ಆಶೆಪಡುತ್ತಿದೇನೆ.

೨. ಅದಕ್ಕೆ ವರುಣನು ಉತ್ತರ ಹೇಳುತ್ತಾನೆ. ಕೇಳೈ, ಪರಶುರಾಮನೆ! ಕಾಲವೆಂಬುದು ತುದಿಮೊದಲಿಲ್ಲದೇ ಇರುವುದು. ಇದು ಸಕಲಭೂತ ಸಮುತ್ಪತ್ತಿಯುಳ್ಳುದಾದ ಸಂಕರ್ಷಣವೆಂದೂ, ರುದ್ರಕಾಲವೆಂದೂ ಹೇಳಲ್ಪಟ್ಟಿರುವುದು.

೩. ಕಾಲಕ್ಕೆ ತುದಿಮೊದಲಿಲ್ಲದೆ ಇರೋಣದರಿಂದ ಆ ಮಹಾಕಾಲವು ಪರಮೇಶ್ವರನೆನಿಸಿಕೊಳ್ಳುವುದು. ರೆಪ್ಪೆಹೊಡೆಯುವ ಕಾಲಕ್ಕಿಂತ ಸೂಕ್ಷ್ಮವಾದ, ಆ ಸೂಕ್ಷ್ಮ

ತಸ್ಯ ಸೂಕ್ಷ್ಮಾತಿಸೂಕ್ಷ್ಮಸ್ಯ ಕಾಲಸ್ಯ ಪರಮೇಷ್ಠಿನಃ ।
ದುರ್ವಿಭಾವ್ಯಾ ಮಹಾಭಾಗ ಯೋಗಿನಾಮಪಿಸೂಕ್ಷ್ಮತಾ ॥ ೪ ॥

ಪದ್ಮಪತ್ರಸಹಸ್ರಂತು ಸೂಚ್ಯಾ ವೈ ಭಿದ್ಯತೇ ಯದಾ ।
ಸಮಕಾಲಂತು ತದ್ಭಿನ್ನಮಬುಧೋ ಮನ್ಯತೇ ಜನಃ ॥ ೫ ॥

ಕಾಲಕ್ರಮೇಣತದ್ಭಿನ್ನಂ ಸಾತಸ್ಯ ದ್ವಿಜಸೂಕ್ಷ್ಮತಾ ।
ತಸ್ಯ ಸೂಕ್ಷ್ಮಾತಿಸೂಕ್ಷ್ಮಸ್ಯ ನ ಚಾತಿಸಹತೇ ದ್ವಿಜ ॥ ೬ ॥

ನಾಮಸಂಖ್ಯಾ ಬುಧೈರ್ಜ್ಞೇಯಾ ಗ್ರಹಗತ್ಯನುಸಾರತಃ ।
ತತ್ರತಾರಾಗ್ರಹಾಃ ಪಂಚ ದ್ವೌಚ ಜ್ಞೇಯೌ ಮಹಾಗ್ರಹೌ ॥ ೭ ॥

ಉಪಗ್ರಹೌಚ ದ್ವೌ ಜ್ಞೇಯಾದೇವಂ ಪ್ರೋಕ್ತಾ ನವಗ್ರಹಾಃ ।
ಭೌಮಜ್ಞಜೀವಭೃಗುಜಸೌರಾಸ್ತಾರಾಗ್ರಹಾಸ್ಸ್ಮೃತಾಃ ॥ ೮ ॥

---

ದಲ್ಲೂ ಅತಿಸೂಕ್ಷ್ಮವಾದ ಕಾಲದ ಬ್ರಹ್ಮಕಾಲವು ಯೋಚಿಸಲಿಕ್ಕೇ ಅಸಾಧ್ಯವಾಗಿದೆ. ಅದು ಯೋಗಿಗಳಿಗೂ ಅತಿಸೂಕ್ಷ್ಮವಾದ ಕಾಲವು.

೫. ಸಾವಿರ ಕಮಲದೆಲೆಗಳನ್ನು ಜೋಡಿಸಿಕೊಂಡು ಸೂಜಿಯಿಂದ ಚುಚ್ಚಿದರೆ ಯಾವಾಗ ಅದು ತೂತಾಗುತ್ತದೋ ಆ ಭಿನ್ನಕಾಲವನ್ನು ತಿಳಿಯಲಸಾಧ್ಯ

೬. ಕಾಲಕ್ರಮದಿಂದ ಆ ಭಿನ್ನಕಾಲವು ತಿಳಿಯುವುದು. ಅಯ್ಯಾ, ಬ್ರಾಹ್ಮಣನೇ! ಆ ಕಾಲವು, ಅದಕ್ಕೆ ಸೂಕ್ಷ್ಮವೆನಿಸುವುದು. ಆ ಸೂಕ್ಷ್ಮದಲ್ಲಿ ಸೂಕ್ಷ್ಮ ಕಾಲದ ಗತಿಯು ತಿಳಿಯಲಿಕ್ಕಾಗದು.

೭-೮. ಗ್ರಹಗಳ ಗತಿಗಳನ್ನನುಸರಿಸಿ ವಿವೇಕಶಾಲಿಗಳಾದವರು ನಾಮಸಂಖ್ಯೆಯನ್ನರಿಯಬೇಕು. ಆ ಗ್ರಹಗಳಲ್ಲಿ ಐದು ತಾರಾಗ್ರಹಗಳೆಂದೂ, ಎರಡು ಮಹಾಗ್ರಹಗಳೆಂದೂ ರಾಹುಕೇತುಗಳೆಂಬ ಉಪಗ್ರಹಗಳೆರಡೂ ಸೇರಿ ಒಟ್ಟು ಒಂಭತ್ತು ಗ್ರಹಗಳೆಂದು ತಿಳಿಯಬೇಕು. ಕುಜ, ಬುಧ, ಗುರು, ಶುಕ್ರ, ಶನಿಗಳೈವರೂ ತಾರಾಗ್ರಹ

ಚಂದ್ರಾದಿತ್ಯೌ ತಥಾ ರಾಮ ವಿಜ್ಞೇಯೌ ದ್ವೌ ಮಹಾಗ್ರಹೌ ।
ಉಪಗ್ರಹೌ ಚ ದ್ವೌ ಜ್ಞೇಯೌ ರಾಹುಃ ಕೇತುಶ್ಚ ಭಾರ್ಗವ ॥ ೯ ॥

ಚಂಡಾರ್ಕಗತ್ಯಾಕಾಲಸ್ಯ ಪರಿಚ್ಛೇದಮುಖೋ ಯಹಾ ।
ತದಾ ತಯೋಃ ಪ್ರವಕ್ಷ್ಯಾಮಿ ಗತಿಮಾಶ್ರಿತ್ಯ ಭಾರ್ಗವ ॥ ೧೦ ॥

ಭಗಣೇನಸಮಗ್ರೇಣ ಜ್ಞೇಯಾ ದ್ವಾದಶರಾಶಯಃ ।
ತ್ರಿಶಾಂಶಶ್ಚ ತಥಾ ರಾಶೇರ್ಭಾಗ ಇತ್ಯಭಿಧೀಯತೇ ॥ ೧೧ ॥

ಆದಿತ್ಯಾದ್ವಿಪ್ರಕೃಷ್ಟಸ್ತು ಭಾಗೇ ದ್ವಾದಶಕೇ ತಥಾ ।
ಚಂದ್ರಮಾಸ್ಯಾತ್ತದಾರಾಮ ಮಾಸಾರ್ಧೇನನಸಂಶಯಃ ॥ ೧೨ ॥

ಭಾಗದ್ವಾದಶಕೇನೈವ ತಿಥ್ಯಾಂತಿಥ್ಯಾಂ ಕ್ರಮೇಣ ತು ।
ಚಂದ್ರಮಾಃ ಕೃಷ್ಣಪಕ್ಷಾಂತೇ ಸೂರ್ಯೇಣಸಹ ಯುಜ್ಯತೆ ॥ ೧೩ ॥

---

ಗಳು. ಚಂದ್ರ ಸೂರ್ಯರಿಬ್ಬರೂ ಮಹಾಗ್ರಹಗಳು ರಾಹುಕೇತುಗಳಿಬ್ಬರೂ ಉಪಗ್ರಹಗಳು

೧೦-೧೧ ಚಂದ್ರಸೂರ್ಯರ ಗತಿಯನ್ನನುಸರಿಸಿ ಯಾವಾಗ ಕಾಲವು ಪರಿಚ್ಛೇದ (ಭಾಗ) ವನ್ನು ಹೊಂದುವುದೋ ಆಗ ಆ ಕಾಲಗಳ ಗತಿಯನ್ನಾಶ್ರಯಿಸಿದ ಸಂಪೂರ್ಣವಾದ ನಕ್ಷತ್ರಗಣದಿಂದ ಹನೆರಡು ರಾಶಿಗಳನ್ನು ತಿಳಿದುಕೊಳ್ಳಬೇಕು. ಒಂದು ರಾಶಿಯ ಮೂವತ್ತು ಭಾಗಕ್ಕೆ (ದಿನ) ಒಂದು ಭಾಗವೆಂದು ಹೆಸರು

೧೨-೧೩ ಸೂರ್ಯನಿಂದ ಚಂದ್ರನು ಹನ್ನೆರಡು ಭಾಗ (೧೫ ದಿವಸ ಶುಕ್ಲ ಪಕ್ಷ) ದೂರದೂರ ಹೋಗುತ್ತಾ ಬರುವನು. ಅದೇ ಚಂದ್ರನು ಕೃಷ್ಣಪಕ್ಷ ೧೫ ದಿನ (ಹನ್ನೆರಡು ಭಾಗದಿಂದ) ಸೂರ್ಯನ ಹತ್ತಿರ ಹತ್ತಿರಕ್ಕೆ ಬರುತ್ತಾ ತಿಂಗಳ ಕೊನೆಯಲ್ಲಿ ಅಮಾವಾಸ್ಯೆಯ ದಿನ ಸೂರ್ಯನೊಡನೆ ಕೂಡಿಕೊಳ್ಳುವನು. ಶುಕ್ಲಪಕ್ಷ ಬಿದಿಗೆಯಿಂದ ಹಿಡಿದು ಕೃಷ್ಣಪಕ್ಷದ ಅಮಾವಾಸ್ಯೆವರೆಪಿಗೆ ಪ್ರತಿರಾತ್ರಿಯೂ ಆಕಾಶದಲ್ಲಿ ಹುಟ್ಟುವ ಚಂದ್ರನ ಗತಿಯನ್ನು ನೋಡಿದರೆ ಇದು ಎಲ್ಲರಿಗೂ ಮುಂದಟ್ಟಾಗುವುದು.

**ಸನ್ನಿಕರ್ಷಾದಥಾರಭ್ಯ ಸನ್ನಿಕರ್ಷಮಥಾಪರಂ ।**
**ಚಂಡಾರ್ಕಯೋರ್ಬುಧೈರ್ಮಾಸಶ್ಚಾಂದ್ರ ಇತ್ಯಭಿಧೀಯತೆ ॥ ೧೪ ॥**

**ಸಾವನೇ ಚ ತಥಾ ಮಾಸಿ ತ್ರಿಂಶತ್ಸೂರ್ಯೋದಯಾಸ್ಸ್ಮೃತಾಃ ।**
**ಆದಿತ್ಯರಾಶಿಭಾಗೇನ ಸೌರೋ ಮಾಸಃ ಪ್ರಕೀರ್ತಿತಃ ॥ ೧೫ ॥**

**ಸರ್ವರ್ಕ್ಷಪರಿವರ್ತೈಶ್ಚ ನಾಕ್ಷತ್ರೋ ಮಾಸ ಉಚ್ಯತೆ ।**
**ತಿಥಿನೈಕೇನ ದಿವಸಶ್ಚಾಂದ್ರಮಾನೇ ಪ್ರಕೀರ್ತಿತಃ ॥ ೧೬ ॥**

**ಅಹೋರಾತ್ರೇಣ ಚೈಕೇನ ಸಾವನೋ ದಿವಸಸ್ಸ್ಮೃತಃ ।**
**ಆದಿತ್ಯಭಾಗಭೋಗೇನ ಸೌರೋದಿವಸ ಉಚ್ಯತೆ ॥ ೧೭ ॥**

---

೧೪. ಚಂದ್ರನು ಸೂರ್ಯನ ಹತ್ತಿರ (ಸನ್ನಿಕರ್ಷಕ್ಕೆ) ಬರುವುದು ಮೊದಲು ಮಾಡಿಕೊಂಡು, ಇನ್ನೊಂದು ಬಾರಿ ಅದೇ ರೀತಿ ಹತ್ತಿರಕ್ಕೆ ಬರುವ ಕಾಲದವರಿಗಿನ ಒಂದು ತಿಂಗಳಿಗೆ ಚಂದ್ರಮಾಸವೆಂದು ಹೆಸರು.

೧೫. ಸಾವನ ಮಾಸವೆಂದರೆ ಮೂವತ್ತು ಸೂರ್ಯೋದಯದ ದಿನಗಳೆಂದು ಹೆಸರು. (ಒಂದು ತಿಂಗಳಿಗೆ ಸರಿಯಾಗಿ ೩೦ ದಿನ). ಸೂರ್ಯನು ಮೇಷಾದಿ ಹನ್ನೆರಡು ರಾಶಿಗಳಲ್ಲಿ ಪ್ರವೇಶಿಸಿ ಸಂಚರಿಸುವ ದಿವಸಗಳಿಗೆ ಸೌರಮಾಸವೆಂದು ಹೆಸರು.

೧೬. ಇಪ್ಪತ್ತೇಳು ನಕ್ಷತ್ರಗಳ ಒಂದು ಪರಿವರ್ತನೆಗೆ ನಾಕ್ಷತ್ರಮಾಸವೆಂದು ಹೆಸರು. ಚಾಂದ್ರಮಾಸದಲ್ಲಿ ಒಂದು ತಿಥಿಗೆ ಒಂದು ದಿವಸವೆಂದು ಹೇಳಲ್ಪಟ್ಟಿದೆ

೧೭ ಒಂದು ಹಗಲು ಒಂದು ರಾತ್ರಿ ಸೇರಿದ ಒಂದು ದಿನಕ್ಕೆ ಸಾವನ ದಿವಸವೆಂದೂ, ಆದಿತ್ಯನು ಮೇಷಾದಿ ರಾಶಿಗಳಲ್ಲಿ ಒಂದು ಭಾಗ ಭೋಗಿಸುವ ಒಂದು ದಿವಸಕ್ಕೆ ಸೌರದಿವಸವೆಂದೂ ಹೆಸರು. ಒಂದು ರಾಶಿಗೆ ಮೂವತ್ತು ಭಾಗ (ದಿನ) ವೆಂದು ಹಿಂದೆಯೇ ಹೇಳಿದೆ.

**ಚಂದ್ರನಕ್ಷತ್ರಭೋಗೇನ ನಾಕ್ಷತ್ರೋ ದಿವಸಸ್ಸ್ಮೃತಃ ।**
**ಮಾನೇ ಮಾಸಸ್ತುನಾಕ್ಷತ್ರಃ ಸಪ್ತವಿಂಶತಿಭಿರ್ದಿನೈಃ ॥ ೧೮ ॥**

**ಪರಿಶೇಷೇಷು ಮಾಸೇಷು ಮಾಸಸ್ತ್ರಿಂಶದ್ದಿನಃ ಸ್ಮೃತಃ ।**
**ಸೌರೇಣಾಬ್ದಸ್ತು ಮಾಸೇನ ಯದಾ ಭವತಿ ಭಾರ್ಗವ ॥ ೧೯ ॥**

**ಸಾವನೇನ ತು ಮಾಸೇನ ದಿವಸಂ ಕೇನ ಪೂರ್ಯತೆ ।**
**ಊನರಾತ್ರಾಶ್ಚ ತೇ ರಾಮ ಪ್ರೋಕ್ತಾಸ್ಸಂವತ್ಸರೇಣ ಷಟ್ ॥ ೨೦ ॥**

**ಸೌರಸಂವತ್ಸರಸ್ಯಾಂತೆ ಮಾನೇನ ಶಶಿಜೇನ ತು ।**
**ಏಕಾದಶಾತಿರಿಚ್ಯಂತೆ ದಿನಾನಿ ಭೃಗುನಂದನ ॥ ೨೧ ॥**

**ಸಮಾದ್ವಯೇಸಾಷ್ಟಮಾಸೆ ದಿನಷೋಡಶಕಾನ್ವಿತೇ ।**
**ನಾಡೀಚತುಷ್ಟಯುತಂತೇತು ತಸ್ಮಾನ್ಮಾಸೋಽತಿರಿಚ್ಯತೆ ॥ ೨೨ ॥**

---

೧೮ ಚಂದ್ರನು ಒಂದೊಂದು ನಕ್ಷತ್ರದಲ್ಲಿ ಭೋಗಿಸುವ ದಿವಸಕ್ಕೆ 'ನಾಕ್ಷತ್ರ ದಿವಸ' ವೆಂದೂ ಅದೇ ಮೇರೆ ಇಪ್ಪತ್ತೇಳು ದಿನಗಳು ಕಳೆದರೆ ನಾಕ್ಷತ್ರ ಮಾಸ' ವೆಂದೂ ಹೆಸರಾಗುವುದು.

೧೯-೨೦. ಉಳಿದ ತಿಂಗಳುಗಳಲ್ಲಿ ತಿಂಗಳಿಗೆ ಮೂವತ್ತು ದಿನಗಳೆಂದು ತಿಳಿಯ ಬೇಕು. ಸೌರಮಾಸದಿಂದ ಒಂದು ವರ್ಷವು ಯಾವಾಗ ಪೂರ್ಣವಾಗುವುದೋ, ಅದನ್ನೂ ಸಾವನಮಾಸದಿಂದ ಒಂದು ವರ್ಷವು ಯಾವಾಗ ಮುಗಿಯುವುದೆಂಬು ದನ್ನೂ ನನಗೆ ತಿಳಿಯುವಂತೆ ತಿಳಿಸಬೇಕೈ, ವರುಣನೇ !

೨೧-೨೨ ಸಾವನಮಾನಕ್ಕೂ ಸೌರಮಾನಕ್ಕೂ ಆರು ರಾತ್ರಿಗಳು ಕಡಿಮೆ ಬರುತ್ತದೆ. ಅಂದರೆ ೩೬೦ ದಿನಕ್ಕೆ ಸರಿಯಾದ ೧ ವರ್ಷಕ್ಕೆ ಸಾವನಮಾನವಾಯಿತು. ಸೌರಮಾನ ಅದಕ್ಕಿಂತ ೬ ದಿನ ಹೆಚ್ಚಾದರೆ ೩೬೬ ದಿನವಾದರೂ, ಅಷ್ಟು ಆಗುವುದಿಲ್ಲ ವೆಂದೂ ಗಣಿತದ ಪ್ರಕಾರ ೩೬೫॥ ದಿವಸಗಳಾಗುವುವೆಂದೂ ಸಿದ್ಧಾಂತಿಗಳು ಬರೆಯು ತ್ತಾರೆ. ಚಾಂದ್ರಮಾನವು ಲೆಖ್ಖಾಚಾರಮಾಡಿದಂತೆ ೨೨॥ ಅಥವಾ ಅರ್ಧದಿನ ಹೆಚ್ಚುಕಡಿಮೆ ವರ್ಷಕ್ಕೊಮ್ಮೆ ಬರುವುದೆಂದು ತಿಳಿಯಬೇಕು. ಅಂದರೆ, ಎಲೈ ಪರಶು ರಾಮನೆ! ಕೇಳು. ಚಾಂದ್ರಮಾನಕ್ಕಿಂತ ಸೌರಮಾನವು ಹನ್ನೊಂದು ದಿವಸ ಹೆಚ್ಚಾಗಿ ಬರುವುದೆಂದು ತಿಳಿಯೈ, ಪರಶುರಾಮನೇ !

**ಸಚಾಧಿಮಾಸಕಃ ಪ್ರೋಕ್ತಃ ಕಾಮ್ಯಕರ್ಮಸು ಗರ್ಹಿತಃ ।**
**ಯದಾ ಚಂದ್ರೇಣಮಾನೇನ ಪೂರ್ಣಸ್ಸಂವತ್ಸರೋ ಭವೇತ್ ॥ ೨೩ ॥**

**ತದಾನಾಕ್ಷತ್ರಮಾನೇನ ಸ ಮಾಸೋ ವಾರ್ಷಿಕೋ ಭವೇತ್ ।**
**ಏವಂ ಕಾಲಸ್ಯ ಸೂಕ್ಷ್ಮಸ್ಯ ಪ್ರೋಕ್ತಂ ಮಾನಚತುಷ್ಟಯಂ ॥ ೨೪ ॥**

**ಯೇನ ಯೇನ ಚ ಮಾನೇನ ಯದ್ಯತ್ಕಾರ್ಯಂ ನಿಬೋಧತತ್ ॥ ೨೫ ॥**

**ಅಬ್ದಾಯನಂ ತು ಗ್ರಹಚಾರಕರ್ಮ**
**ಸೌರೇಣಮಾನೇನ ಸದಾ ವ್ಯವಸ್ಯೇತ್ ।**
**ಸತ್ರಾಣ್ಯುಪಾಸ್ಯಾನ್ಯಥ ಸಾವನೇನ**
**ಲೋಕೇ ಚ ಯತ್ಸ್ಯಾದ್ವ್ಯವಹಾರಕರ್ಮ ॥ ೨೬ ॥**

---

೨೨–೨೪. ಈರೀತಿ ಚಾಂದ್ರಮಾನ ಸಂವತ್ಸರವು ವರ್ಷಕ್ಕೆ ಹನ್ನೊಂದು ದಿವಸದ ಮೇರೆ ಕಡಿಮೆಯಾಗಿ ಬರುವುದರಿಂದ ೨ ವರ್ಷ ೮ ತಿಂಗಳು ೧೬ದಿನ ೪ ಘಳಿಗೆಗೆ ಒಮ್ಮೆ ಒಂದು ತಿಂಗಳು ಹೆಚ್ಚಾಗಿ ಬರುತ್ತದೆ. ಹಾಗೆ ಬರುವ ಒಂದು ತಿಂಗಳಿಗೆ ಅಧಿಕಮಾಸವೆಂದು ಹೆಸರು. ವ್ರತನಿಯಮಾದಿ ಕಾಮ್ಯಕರ್ಮಗಳನ್ನು ಆ ಅಧಿಕ ಮಾಸದಲ್ಲಿ ಮಾಡಬಾರದು. ಈ ರೀತಿ ಯಾವಾಗ ಚಾಂದ್ರಮಾಸದಿಂದ ಒಂದು ಸಂವತ್ಸರ ಸಂಪೂರ್ಣವಾಗುವುದೋ, ಆಗ ನಾಕ್ಷತ್ರಮಾನದಿಂದ ಆ ತಿಂಗಳು ವರ್ಷ ಪೂರ್ತಿಯಾಗುವುದು. ಈ ರೀತಿಯಾಗಿ ನಾಲ್ಕು ವಿಧವಾದ ಕಾಲಮಾನದ ಸೂಕ್ಷ್ಮ ರೀತಿಯನ್ನು ನಿನಗೆ ತಿಳಿಸಿರುವೆನು.

೨೫. ಎಲೈ ವರುಣನೇ! ಯಾವ ಯಾವ ಮಾನದಿಂದ ಯಾವ ಯಾವ ಕಾರ್ಯಗಳನ್ನಾಚರಿಸಬೇಕೋ ಅದನ್ನು ನನಗೆ ತಿಳಿಸೆಂದು ಪರಶುರಾಮನು ಪ್ರಶ್ನೆಮಾಡಿದನು.

೨೬-೨೭. ಸೌರಮಾನದಿಂದಲೂ, ಚಾಂದ್ರಮಾನದಿಂದಲೂ, ನವಗ್ರಹ ಶಾಂತಿ ಮುಂತಾದ ಕರ್ಮಗಳನ್ನೂ, ಸಾವನಮಾನದಿಂದ ಯಜ್ಞಯಾಗಾದಿಗಳು, ವ್ಯವಹಾರ

ಸ್ಯಾತ್ಪೂರ್ವಕಾಲಕ್ಷಯಪೂರಣಾಭ್ಯಾಂ
ಚಾಂದ್ರೇಣ ಮಾನೇನ ಯುಗಂ ಚ ರಾಹೋಃ ।
ನಕ್ಷತ್ರಸತ್ರಾಣ್ಯಯನಾನಿ ಚೇಂದೊ
ರ್ಮಾನೇನ ಕುರ್ಯಾದ್ಭಗಣಾತ್ಮಕೇನ ॥ ೨೭ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವರುಣಂ ಪ್ರತಿ ಪರಶುರಾಮ ಪ್ರಶ್ನೇಽರ್ಕಾದಿ
ಮಾಸವರ್ಣನಂನಾಮ ದ್ವಿಸಪ್ತತಿತಮೋಽಧ್ಯಾಯಃ

---

ಕರ್ಮ (ಬಡ್ಡಿ, ಸಂಬಳ, ಇತ್ಯಾದಿ)ಗಳನ್ನೂ, ಚಾಂದ್ರಮಾನದಲ್ಲಿ ರಾಹು ಚಂದ್ರ ಗ್ರಹಣಾದಿಗಳ ತರ್ಪಣಗಳನ್ನೂ, ನಕ್ಷತ್ರಯಾಗಾದಿಗಳನ್ನು ನಾಕ್ಷತ್ರಮಾನದಿಂದಲೂ ನಡೆಸಬೇಕು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಅರ್ಕಾದಿಮಾಸವರ್ಣನವೆಂಬ ಹೆಸರಿನ
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ತ್ರಿಸಪ್ತತಿತಮೋಧ್ಯಾಯಃ

॥ ವರುಣ ಉವಾಚ ॥

ಲಘ್ವಕ್ಷರಸಮಾ ಮಾತ್ರಾ ನಿಮೇಷಃ ಪರಿಕೀರ್ತಿತಃ ।
ಅತಃ ಸೂಕ್ಷ್ಮತರಃ ಕಾಲೋ ನೋಪಲಭ್ಯೋ ಭೃಗೂತ್ತಮ ॥ ೧ ॥

ನೋಪಲಭ್ಯಂ ಯಥಾದ್ರವ್ಯಂ ಸುಸೂಕ್ಷ್ಮಂ ಪರಮಾಣುತಃ ।
ದ್ವೌನಿಮೇಷೌ ತ್ರುಟಿರ್ಜ್ಞೇಯಾ ಪ್ರಾಣೋ ದಶತ್ರುಟಿಃ ಸ್ಮೃತಃ ॥ ೨ ॥

ವಿನಾಡಿಕಾತು ಷಟ್ಪ್ರಾಣಾಸ್ತಾಃ ಷಷ್ಠಿರ್ನಾಡಿಕಾ ಮತಾ ।
ಅಹೋರಾತ್ರಂ ಚ ತಾಷ್ಷಷ್ಟ್ಯಾ ನಿತ್ಯಮೇತೈಃ ಪ್ರಕೀರ್ತಿತಂ ॥ ೩ ॥

---

## ಎಪ್ಪತ್ತಮೂರನೆಯ ಅಧ್ಯಾಯವು

೧. ವರುಣನು ಹೇಳುತ್ತಾನೆ- ಒಂದು ಲಘು ಅಕ್ಷರ(ಅ)ಸಮವು ಮಾತ್ರೆಯು. ಇದಕ್ಕೆ ನಿಮೇಷ (ರೆಪ್ಪೆಹೊಡೆಯುವ ಕಾಲ)ವೆಂದು ಹೆಸರು. ಎಲೈ ಪರಶುರಾಮನೇ, ಇದಕ್ಕಿಂತ ಸೂಕ್ಷ್ಮತರವಾದ ಕಾಲವು ಸಿಕ್ಕುವುದಿಲ್ಲ.

೨-೩. ಪರಮಾಣುವಿಗಿಂತ ಸೂಕ್ಷ್ಮವಾದ ದ್ರವ್ಯವು ಹೇಗೆ ದೊರೆಯುವುದಿಲ್ಲವೋ, ಅದರಂತೆ ನಿಮೇಷಕ್ಕಿಂತ ಕಮ್ಮಿಯಾದ ಕಾಲವಿಲ್ಲವೇ ಇಲ್ಲ ಎರಡು ನಿಮೇಷ (ರೆಪ್ಪೆಮುಚ್ಚಿ ತೆಗೆಯುವ ಕಾಲ)ಗಳಿಗೆ ಒಂದು ತ್ರುಟಿಯೆಂದು ಹೆಸರು ದಶತ್ರುಟಿ ಕಾಲಕ್ಕೆ ಒಂದು ಪ್ರಾಣವೆಂದು ಹೆಸರು. ಆರು ಪ್ರಾಣಗಳ ಕಾಲಕ್ಕೆ ಒಂದು ವಿಘಳಿಗೆ. ಅರವತ್ತು ವಿಘಳಿಗೆಗೆ ಒಂದು ಘಳಿಗೆ ಅರುವತ್ತು ಘಳಿಗೆಗಳು ಸೇರಿದ ಒಂದು ಹಗಲು ಒಂದು ರಾತ್ರಿ ಕೂಡಿದರೆ ಒಂದು ದಿನವಾಗುವುದೆಂದು ತಿಳಿಯಬೇಕು

**ತ್ರಿಂಶನ್ಮುಹೂರ್ತಾಶ್ಚ ತಥಾ ಅಹೋರಾತ್ರೇಣ ಕೀರ್ತಿತಾಃ ।**
**ತತ್ರ ಪಂಚದಶ ಪ್ರೋಕ್ತಾ ರಾಮ ನಿತ್ಯಂ ದಿವಾಚರಾಃ ॥ ೪ ॥**
**ಉತ್ತರಾಂ ತು ಯದಾ ಕಾಷ್ಠಾಂ ಕ್ರಮಾದಾಕ್ರಮತೇ ರವಿಃ ।**
**ತದಾ ತಥಾ ಭವೇದ್ವೃದ್ಧಿರ್ದಿವಸಸ್ಯ ಮಹಾಭುಜ ॥ ೫ ॥**
**ದಿವಸಶ್ಚ ಯಥಾ ರಾಮ ವೃದ್ಧಿಂ ಸಮಧಿಗಚ್ಛತಿ ।**
**ತದಾಶ್ರಿತಮುಹೂರ್ತಾನಾಂ ಜ್ಞೇಯಾಹಾನಿಸ್ತದಾ ತಥಾ ॥ ೬ ॥**

---

೪-೬. ಅಹೋರಾತ್ರಿಗಳು ಸೇರಿ ಮೂವತ್ತು ಮುಹೂರ್ತಗಳಾಗುವುವು. ಅದರಲ್ಲಿ ಹದಿನೈದು ಹಗಲಿನ ಮುಹೂರ್ತಗಳು, ಹದಿನೈದು ರಾತ್ರಿ ಮುಹೂರ್ತಗಳು. ಹನ್ನೆರಡು ಕ್ಷಣಗಳಿಗೆ ಒಂದು ಮುಹೂರ್ತವೆಂದು ಹೆಸರು. ಹಗಲಿನ ಹದಿನೈದು ಮುಹೂರ್ತಗಳಾವುವೆಂದರೆ—

ರೌದ್ರಃ ಶ್ವೇತಶ್ಚ ಮೈತ್ರಶ್ಚ ಅಥಾ ಪೌರ ಭಟಸ್ಮೃತಃ ।
ಸಾವಿತ್ರೋ ವೈಶ್ವದೇವಶ್ಚ ಗಾಂಧರ್ವಃ ಕುತಪಸ್ತಥಾ ॥
ರೌಹಿಣಸ್ತಿಲಕಶ್ಚೈವ ವಿಜಯೋ ನೈಋತಸ್ತಥಾ ।
ಶಂಬರೋವರುಣಶ್ಚೈವ ಭಗಃ ಪಂಚದಶಸ್ಮೃತಾಃ ॥

೧. ರೌದ್ರ, ೨. ಶ್ವೇತ, ೩. ಮೈತ್ರ, ೪. ಪೌರಭಟ, ೫ ಸಾವಿತ್ರ, ೬. ವೈಶ್ವದೇವ, ೭. ಗಾಂಧರ್ವ, ೮. ಕುತಪ, ೯. ರೌಹಿಣ, ೧೦. ತಿಲಕ, ೧೧. ವಿಜಯ, ೧೨ ನೈಋತ, ೧೩. ಶಂಬರ, ೧೪. ವರುಣ, ೧೫. ಭಗ.

[ರಾಮಾಯಣ ಅರಣ್ಯಕಾಂಡ ೬೮ನೇ ಸರ್ಗದ ೧೩ನೇ ಶ್ಲೋಕ]

ಹದಿನೆಂಟಾವೃತ್ತಿ ರೆಪ್ಪೆಹೊಡೆದರೆ (ನಿಮೇಷ) ಒಂದು ಕಾಷ್ಠವೆಂದು ಹೆಸರಾಗುತ್ತದೆ. ಅಂಥಾ ೩೦ಕ್ಕೆ ಒಂದು ಕಲೆ, ಅಂಥಹ ೩೦ ಕಲೆಗೆ ೧ ಕ್ಷಣ. ೧೨ ಕ್ಷಣಕ್ಕೆ ಒಂದು ಮುಹೂರ್ತ. ಅಂಥಾ ೩೦ಕ್ಕೆ ಒಂದು ದಿವಸ. ಇಂಥ ೧೫ ದಿವಸಕ್ಕೆ ಒಂದು ಪಕ್ಷ. ಇಂಥ ೨ ಪಕ್ಷಕ್ಕೆ ಒಂದು ತಿಂಗಳು ಎರಡೆರಡು ತಿಂಗಳಿಗೆ ಒಂದು ಋತು ಇಂಥಾ ಮೂರು ಋತುಗಳು ಒಂದು ಅಯನ. ಇಂಥ ೨ ಅಯನಗಳು ಒಂದು ವರ್ಷ. ಸೂರ್ಯನು ಪ್ರತಿದಿವಸವೂ ಉತ್ತರಕಾಷ್ಠ ಕಾಲವನ್ನು (ಉತ್ತರಾಯಣ) ಯಾವಾಗ ಆಕ್ರಮಿಸುತ್ತ ಬರುವನೋ ಆಗ ದಿವಸವು (ಹಗಲು) ಹೆಚ್ಚಾಗುತ್ತಾ ಬರುವುದು. ಯಾವಾಗ ಹಗಲು ಹೆಚ್ಚುತ್ತ ಬರುವುದೋ ಅದನ್ನಾಶ್ರಯಿಸಿದ ಮುಹೂರ್ತಗಳಿಗೆ ಕ್ಷಯವುಂಟಾಗುತ್ತ ಬರುತ್ತದೆ.

**ದಕ್ಷಿಣಾಂ ಚ ಯದಾ ಕಾಷ್ಠಾಂ ಕ್ರಮಾದಾಕ್ರಮತೇ ರವಿಃ ।**
**ದಿವಸಸ್ಯ ತದಾ ಹಾನಿರ್ಜ್ಞಾತವ್ಯಾ ನಿತ್ಯಮೇವತು ॥ ೭ ॥**

**ಕ್ಷೀಯಂತೆ ದಿನಹಾನೌತು ತನ್ಮುಹೂರ್ತಾಸ್ತಥೈವಚ ।**
**ರಾತ್ರ್ಯಾಶ್ರಿತಾಶ್ಚ ವರ್ಧಂತೆ ರಾತ್ರಿವೃದ್ಧೌ ತಥಾ ತಥಾ ॥ ೮ ॥**

**ಯದಾ ಮೇಷಂ ಸಹಸ್ರಾಂಶುಸ್ತುಲಾಂ ಚ ಪ್ರತಿಪದ್ಯತೇ ।**
**ಸಮರಾತ್ರಿರ್ದಿನಃಕಾಲೋ ವಿಷುವಚ್ಛಬ್ದವಾಚಕಃ ॥ ೯ ॥**

**ತತ್ರ ದಾನಂ ಸ್ವಲ್ಪಮಪಿ ಮಹದ್ಭವತಿ ಭಾರ್ಗವ ।**
**ಶ್ರಾದ್ಧಂ ಜಪ್ಯಂ ಹುತಂ ದತ್ತಂ ಯಚ್ಚಾನ್ಯತ್ಸುಕೃತಂ ಭವೇತ್ ॥ ೧೦ ॥**

---

೭–೮. ಯಾವಾಗ ಸೂರ್ಯನು ದಕ್ಷಿಣಾಕಾಷ್ಠ (ಅಯನ)ವನ್ನು ಕ್ರಮವಾಗಿ ಆಕ್ರಮಿಸುವನೋ ಆಗ ಹಗಲು ಕಡಿಮೆಯಾಗುತ್ತಾ ಬಂದಂತೆ ರಾತ್ರಿಮುಹೂರ್ತಗಳು ಕೊಂಚವಾಗಿ ವೃದ್ಧಿಹೊಂದುತ್ತ ಬರುತ್ತವೆ.

೯. ಯಾವ ದಿವಸ ಸೂರ್ಯನು ಮೇಷರಾಶಿಯನ್ನು ಪ್ರವೇಶಿಸುವನೋ ಆ ದಿವಸವನ್ನು ವಿಷುವತ್ಪುಣ್ಯಕಾಲವೆಂದು ಹೇಳುವರು. ಆ ದಿವಸ ರಾತ್ರಿ ೩೦ ಘಳಿಗೆ, ಹಗಲು, ೩೦ ಘಳಿಗೆ ಸರಿಯಾಗಿರುತ್ತದೆ. ಈ ರೀತಿ ಪ್ರತಿವರ್ಷವೂ ಮೇಷ ಸಂಕ್ರಮಣದ ದಿನ ಅಹೋರಾತ್ರಿಗಳು ಸಮಸಮವಾಗಿಯೇ ಇರುವುದು. ಇದನ್ನೇ ಅಮರಸಿಂಹನು —

'ಸಮರಾತ್ರಂ ದಿವೇಕಾಲೇ ವಿಷುವದ್ವಿಷುವಂಚ ತತ್' ಎಂದು ಉದಹರಿಸಿರುವನು,

೧೦. ಇಂಥಾ ವಿಷುವತ್ಪುಣ್ಯಕಾಲದಲ್ಲಿ ಯಾವ ಸ್ವಲ್ಪ ದಾನವನ್ನು ಮಾಡಿದಾಗ್ಯೂ ಅದು ಅನಂತವಾಗುವುದು. ಶ್ರಾದ್ಧ, ಜಪ, ಹೋಮ, ದಾನ ಮುಂತಾದ ಯಾವ ಪುಣ್ಯಕಾರ್ಯ ಮಾಡುವುದಕ್ಕೂ ಇದು ಸರಿಯಾದ ಕಾಲ.

ಸೂರ್ಯಸಂಕ್ರಮಣಸ್ಯಾಂತೇ ಸೌರೋಮಾಸಸ್ಸಮಾಪ್ಯತೇ ।
ಸೌರಮಾಸದ್ವಯಂ ರಾಮ ಋತುರಿತ್ಯಭಿಧೀಯತೇ ॥ ೧೧ ॥

ಋತುತ್ರಯಂ ಚಾಯನಂ ಸ್ಯಾತ್ತದ್ದ್ವಯಂ ಚ ಸಮಾಸ್ಮೃತಾ ।
ದೇವತಾನಾ ಮಹೋರಾತ್ರಂ ಸ ಚ ರಾಮ ಪ್ರಕೀರ್ತಿತಃ ॥ ೧೨ ॥

ಮೇಷಾದಿಷಟ್ಕಗೇ ಸೂರ್ಯೇ ತೇಷಾಂ ದಿವಸ ಉಚ್ಯತೇ ।
ತುಲಾದಿಷಟ್ಕಗೇ ಸೂರ್ಯೇ ತೇಷಾಂ ರಾತ್ರಿಃ ಪ್ರಕೀರ್ತಿತಾ ॥ ೧೩ ॥

ಪಿತ್ರ್ಯಾಣಾಂ ಚಾಂದ್ರಮಾಸೇನ ಅಹೋರಾತ್ರೋಽಭಿಧೀಯತೇ ।
ಕೃಷ್ಣಪಕ್ಷಾಷ್ಟಮೀಮಧ್ಯೇ ತೇಷಾಂ ರಾತ್ರ್ಯುದಯಃ ಸ್ಮೃತಃ ॥ ೧೪ ॥

---

೧೧. ಸೂರ್ಯಸಂಕ್ರಮಣದ ಕಡೇ ದಿವಸ ಒಂದು ಸೌರಮಾಸವು ಕಳೆದುಹೋಗುತ್ತದೆ ಇಂತಹ ಎರಡು ಸೌರಮಾಸ ಸೇರಿದರೆ ಒಂದು ಋತುವೆನಿಸಿಕೊಳ್ಳುತ್ತದೆ

೧೨. ಮೂರು ಋತುಗಳು ಒಂದು ಅಯನವಾಗುವುದು ಇಂತಹ ಎರಡು ಅಯನಗಳು ಒಂದು ವರ್ಷವೆನಿಸಿಕೊಳ್ಳುತ್ತದೆ. ಎಲೈ, ಭಾರ್ಗವರಾಮನೆ! ಕೇಳು ಈ ಎರಡು ಅಯನಗಳೇ ದೇವತೆಗಳಿಗೆ ಅಹೋರಾತ್ರಿಗಳಿಂದ ಕೂಡಿದ ಒಂದು ದಿವಸವಾಗುವುದು.

೧೩. ಮೇಲೆ ಉದಹರಿಸಿದಂತೆ ಸೂರ್ಯನು ಮೇಷಾದಿಯಾಗಿ ಆರು (ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ) ರಾಶಿಗಳಲ್ಲಿ ಸಂಚರಿಸಿದ ಆರುತಿಂಗಳಿಗೆ ದೇವತೆಗಳ ಒಂದು ಹಗಲಾಗುವುದು. ತುಲಾದಿ ಆರು (ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ) ರಾಶಿಗಳಲ್ಲಿ ಸಂಚರಿಸುವಾಗ ಈ ಆರು ತಿಂಗಳಕಾಲ ದೇವತೆಗಳಿಗೆ ಒಂದು ರಾತ್ರಿ ಎಂದು ಹೇಳಲ್ಪಟ್ಟಿದೆ.

೧೪-೧೫. ದೇವತೆಗಳಿಗೆ ಸೌರಮಾಸವನ್ನನುಸರಿಸಿ ಒಂದು ವರ್ಷಕ್ಕೆ ಅಹೋರಾತ್ರಿಗಳು ಹೇಳಲ್ಪಟ್ಟುವು. ಪಿತೃಗಳಿಗೆ ಚಾಂದ್ರಮಾನಮಾಸ ರೀತ್ಯಾ ಅಹೋರಾತ್ರಿಗಳನ್ನು ವಿಧಾಯಕ ಮಾಡಿದಾರೆ. ಕೃಷ್ಣಪಕ್ಷದ ಅಷ್ಟಮೀ ಮಧ್ಯದಲ್ಲಿ ಅವರಿಗೆ ರಾತ್ರಿ ಮುಗಿದು ಉದಯಕಾಲವೆಂದು ತಿಳಿಯಬೇಕು. ಶುಕ್ಲಪಕ್ಷದ ಅಷ್ಟಮೀ

ಶುಕ್ಲಪಕ್ಷಾಷ್ಟಮೀಸಾಮಧ್ಯೇ ತೇಷಾಮಸ್ತಮಯಸ್ತಥಾ ।
ಅರ್ಧರಾತ್ರಃ ಪೌರ್ಣಮಾಸ್ಯಾಂ ಪಿತೄಣಾಂ ಸಮುದಾಹೃತಃ ॥ ೧೫ ॥

ಕೃಷ್ಣಪಕ್ಷಾವಸಾನೇ ಚ ತೇಷಾಂ ಮಧ್ಯಾಹ್ನ ಉಚ್ಯತೆ ।
ಕೃಷ್ಣಪಕ್ಷಕ್ಷಯೇ ತಸ್ಮಾತ್ತೇಷಾಂ ಶ್ರಾದ್ಧಂ ಪ್ರದೀಯತೆ ।
ಕೃಷ್ಣಪಕ್ಷಕ್ಷಯೇಶ್ರಾದ್ಧಂ ಯಶ್ಚ ನಿತ್ಯಂ ಕರಿಷ್ಯತಿ ।
ಸತತಂ ತರ್ಪಿತಾಸ್ತೇನಭವಂತಿ ಪಿತರೋಽವ್ಯಯಾಃ ॥ ೧೬ ॥

ಸಮಾಶತೈರ್ದ್ವಾದಶಭಿರ್ದಿವ್ಯೈಸ್ತಿಷ್ಯಯುಗಂ ಸ್ಮೃತಂ ।
ದ್ವಿಗುಣಂ ದ್ವಾಪರಂ ಜ್ಞೇಯಂ ತ್ರೇತಾ ತ್ರಿಗುಣಮುಚ್ಯತೆ ॥ ೧೭ ॥

---

ಮಧ್ಯದಲ್ಲಿ ಅವರಿಗೆ ಅಸ್ತಮಾನಕಾಲವೆಂದೂ, ಪೂರ್ಣಿಮೆಯ ದಿವಸ ಅವರಿಗೆ ಅರ್ಧರಾತ್ರಿಯೆಂತಲೂ, ಕೃಷ್ಣಪಕ್ಷದ ಕಡೆಗೆ ಬರುವ ಅಮಾವಾಸ್ಯೆಯ ದಿನಕ್ಕೆ ಅವರಿಗೆ ಮಧ್ಯಾಹ್ನಕಾಲವೆಂದೂ ಹೇಳಲ್ಪಟ್ಟಿದೆ. ಆದ್ದರಿಂದಲೇ ಕೃಷ್ಣಪಕ್ಷದ ಕೊನೆಯ ದಿವಸವಾದ ಅಮಾವಾಸ್ಯೆಯ (ದರ್ಶ) ದಿನ ಪಿತೃಶ್ರಾದ್ಧವನ್ನು ಮಾಡಬೇಕೆಂದು ಧರ್ಮಶಾಸ್ತ್ರಗಳಲ್ಲಿ ವಿಧಾಯಕವಾಗಿರುತ್ತೆ.

೧೬. ಆದ್ದರಿಂದ ಯಾರು ಪ್ರತಿ ಕೃಷ್ಣಪಕ್ಷದ ಕಡೆಯ ದಿನವಾದ ಅಮಾವಾಸ್ಯೆಯ ದಿವಸ ಮಧ್ಯಾಹ್ನ ಕಾಲದಲ್ಲಿ ಪಿತೃತರ್ಪಣವನ್ನು ತಪ್ಪದೆ ಮಾಡುತ್ತಾರೆಯೋ ಅಂತಹವರ ಪಿತೃಗಳು ನಾಶರಹಿತವಾದ ಪುಣ್ಯಲೋಕಗಳನ್ನು ಹೊಂದುವರಲ್ಲದೆ ಪ್ರತಿದಿನವೂ ತೃಪ್ತರಾಗಿಯೇ ಇರುತ್ತಾರೆ.

೧೭-೨೦ ದೇವತೆಗಳ ಒಂದು ದಿನದ ಲೆಕ್ಕವನ್ನು ಹಿಂದೆ ವಿವರಿಸಲಾಗಿದೆಯಷ್ಟೆ? ಇಂತಹ ೩೬೦ ದಿನಗಳಿಗೆ ಒಂದು ದಿವ್ಯವರ್ಷವೆಂದು ತಿಳಿಯಬೇಕು. ಇಂತಹ ದಿವ್ಯವರ್ಷಗಳು ಹನ್ನೆರಡು ಸಾವಿರವಾದರೆ ಒಂದು ದೈವತಯುಗವೆಂದು ತಿಳಿಯಬೇಕು. ಹನ್ನೆರಡು ಸಾವಿರ ದೈವತವರ್ಷಕ್ಕೆ ಒಂದು ಕಲಿಯುಗದ ಲೆಖ್ಖವೆಂದು ತಿಳಿಯಬೇಕು ಹನ್ನೆರಡು ಸಾವಿರವನ್ನು ಮುನ್ನೂರರವತ್ತರಿಂದ ಗುಣಿಸಿದರೆ ಆಗುವ ನಲವತ್ತಮೂರು ಲಕ್ಷದ ಎಂಭತ್ತು ಸಾವಿರ ಸಂಖ್ಯೆಯಷ್ಟು ಮಾನುಷವರ್ಷದ ಗಣನೆಯಾಗುವುದು. ಕಲಿಯುಗದ ಸಂಖ್ಯೆ ಇಷ್ಟು ವರ್ಷಗಳೆಂದು ನಿರ್ಣಯವಾಗಿದೆ ಇದರ ಎರಡರಷ್ಟು ದ್ವಾಪರಯುಗದ ಸಂಖ್ಯೆಯೂ, ಇದರ ಮೂರರಷ್ಟು ತ್ರೇತಾ

**ಚತುರ್ಗುಣಂ ಕೃತಂ ಪ್ರೋಕ್ತಂ ಪಿಂಡಿತಂ ಚಾಬ್ದಸಂಖ್ಯಯಾ ।**
**ಚತುರ್ಯುಗ ಸಹಸ್ರಾಣಿ ರಾಮ ದ್ವಾದಶ ಕೀರ್ತಿತಂ ॥ ೧೮ ॥**

**ಅತಃ ಪರಂ ಯುಗಾವಸ್ಥಾಂ ನಿಬೋಧ ಗದತೋಮಮ ।**
**ಚತುಷ್ಪಾತ್ಸಕಲೋ ಧರ್ಮಸ್ತಥಾ ಬ್ರಹ್ಮೋತ್ತರಂ ಜಗತ್ ॥ ೧೯ ॥**

**ಶ್ವೇತವರ್ಣೋ ಹರಿರ್ದೇವೋ ಜ್ಞಾನನಿತ್ಯಾಶ್ಚ ಮಾನವಾಃ ।**
**ಚತ್ವಾರ್ಯಬ್ದಸಹಸ್ರಾಣಿ ತೇಷಾಮಾಯುಃ ಪ್ರಕೀರ್ತಿತಂ ॥ ೨೦ ॥**

**ಸಮಾನವೀರ್ಯಾಶ್ಚ ನರಾಸ್ತತ್ರ ನಾಸ್ತ್ಯಧರೋತ್ತರಂ ।**
**ತ್ರಿಪಾದವಿಗ್ರಹೋ ಧರ್ಮೋ ರಾಮ ತ್ರೇತಾಯುಗೇ ತದಾ ॥ ೨೧ ॥**

---

ಯುಗದ ಸಂಖ್ಯೆಯೂ, ನಾಲ್ಕರಷ್ಟು ಕೃತಯುಗದ ವರ್ಷಗಳೂ ಆಗುವುವೆಂದು ತಿಳಿಯಬೇಕು. ಈ ಗುಣಿತವು ಸರ್ವರಿಗೂ ಸುಲಭವಾಗಿ ಗೊತ್ತಾಗುವುದರಿಂದ ಗುಣಾಕಾರ ಮಾಡಿ ಸಂಖ್ಯೆಯನ್ನು ಕೊಡುವುದು ಅನವಶ್ಯಕವೆಂದು ಇಲ್ಲಿ ಕೊಡಲಿಲ್ಲ.

ಮೇಲೆ ಬರೆದ ಲೆಖ್ಖದಂತೆ ಎರಡು ಸಾವಿರ ಯುಗಗಳು ಕಳೆದರೆ ಬ್ರಹ್ಮನಿಗೆ ಒಂದು ಹಗಲೆಂದು ತಿಳಿಯಬೇಕು. ಇದು ಬ್ರಾಹ್ಮಸಂಬಂಧವಾದ ಉದಯಕಲ್ಪವೆನಿಸುವುದು. ಎರಡನೆಯದೇ ಕ್ಷಯಕಲ್ಪ ಇದನ್ನು ಪ್ರಳಯವೆಂದೂ ಹೇಳಿದಾರೆ. “ ಎಲೈ ಪರಶುರಾಮನೇ ! ನಾನು ಮುಂದೆ ಹೇಳುವ ಯುಗಾವಸ್ಥೆಯ ವಿಷಯವನ್ನು ಮನಸ್ಸಿಟ್ಟು ಕೇಳು, ಕೃತಯುಗ ಹುಟ್ಟಿದಾಗ ಧರ್ಮವು ನಾಲ್ಕು ಪಾದಗಳುಳ್ಳದಾಗಿ (ವೃಷಭರೂಪವಾಗಿ) ದೃಢಧರ್ಮಮೂಲವಾಗಿ ಬ್ರಾಹ್ಮಣರೇ ಶ್ರೇಷ್ಠರೆಂದೂ, ಸಕಲ ಧರ್ಮಗಳೂ ಅವರಲ್ಲೇ ಮೂರ್ತಿಮತ್ತಾಗಿ ಇರುತ್ತವೆಂದೂ ತಿಳಿದುಕೋ. ಆಗ ಮಹಾವಿಷ್ಣುವು ಶುಭ್ರವರ್ಣವನ್ನು ಧರಿಸಿ ಪ್ರಕಾಶಮಾನನಾಗಿರುವನು. ಮನುಷ್ಯರೆಲ್ಲರೂ ನಿತ್ಯವೂ ಜ್ಞಾನಾಭ್ಯಾಸ (ಬ್ರಹ್ಮವಿಚಾರ) ನಿರತರಾಗಿರುವರು. ಆ ಕೃತಯುಗದಲ್ಲಿ ಮನುಷ್ಯರು ನಾಲ್ಕುಸಾವಿರ ವರ್ಷಗಳು ಬದುಕಿರುವರು.

೨೧–೨೪. ಆ ಕಾಲದ ಜನರು ಸಮಾನಪರಾಕ್ರಮಶಾಲಿಗಳಾಗಿರುವರು. ಆ ಕಾಲದಲ್ಲಿ ಕೀಳುಮೇಲಾಗುವುದಿಲ್ಲ. ಉತ್ತಮವರ್ಣದವರನ್ನು ಕಂಡರೆ ಉಳಿದವರು ಪೂಜ್ಯಭಾವದಿಂದಿರುವರು. ಎಲೈ ಪರಶುರಾಮನೇ ! ಕೇಳು. ತ್ರೇತಾಯುಗದಲ್ಲಿ ಧರ್ಮವು ಮೂರು ಕಾಲಿನಿಂದ ನಿಂತಿರುತ್ತದೆ. ಮಹಾವಿಷ್ಣುವು ಕೆಂಪುಬಣ್ಣದ ವಿಗ್ರಹ

**ಕೇಶವೇ ರಕ್ತತಾಂ ಯಾತೇ ನರಾ ದಶಶತಾಯುಷಃ ।**
**ಯಜ್ಞೇ ಶುಭೇ ಪ್ರವರ್ತಂತೇ ನಿತ್ಯಂ ಹಿಂಸಾತ್ಮಕೇಷು ಚ　　॥ ೨೨ ॥**

**ಜಗತ್ಕ್ಷತ್ರೋತ್ತರಂ ಚೈವ ತದಾ ಭವತಿ ಭಾರ್ಗವ ।**
**ದ್ವಿಪಾದವಿಗ್ರಹೋ ಧರ್ಮಃ ಪೀತತಾಮಚ್ಯುತೇ ಗತೇ　　॥ ೨೩ ॥**

**ಸಮಾಃ ಶತಾನಿಚತ್ವಾರಿ ತದಾ ಜೀವಂತಿ ಮಾನವಾಃ ।**
**ಯುದ್ಧಶೌಂಡಾ ಮಹೋತ್ಸಾಹಾ ಲೋಕಾ ವೈಶ್ಯೋತ್ತರಾಸ್ತದಾ　　॥ ೨೪ ॥**

**ಜಾಯಂತೆ ಶಾಸ್ತ್ರಭೇದಾಶ್ಚ ಮತಿಭೇದಾಸ್ತಥೈವ ಚ ।**
**ಸ್ವಲ್ಪಮಾಯುರ್ನೃಣಾಂಬುದ್ಧ್ವಾ ವಿಷ್ಣುರ್ಮಾನುಷರೂಪಧೃಕ್　　॥ ೨೫ ॥**

**ಏಕಮೇವ ಯಜುರ್ವೇದಂ ಚತುರ್ಧಾ ವ್ಯಭಜತ್ಪುನಃ ।**
**ತಸ್ಯ ಶಿಷ್ಯಪ್ರಶಿಷ್ಯಾಶ್ಚ ವೇದಮೇಕಂ ಪುನಃಪುನಃ　　॥ ೨೬ ॥**

---

ರೂಪನಾಗಿರುವನು. ಮನುಷ್ಯರು ಒಂದು ಸಾವಿರ ವರ್ಷ ಆಯುಃಪರಿಮಿತಿಯಿಂದ ಕೂಡಿರುವರು. ಪಶುಯಜ್ಞವು ವಿಶೇಷವಾಗಿ ನಡೆಯುತ್ತದೆ. ಆಗ ಕ್ಷತ್ರಿಯರು ಪ್ರಬಲರಾಗಿರುತ್ತಾರೆ. ಕ್ಷಾತ್ರಧರ್ಮದಲ್ಲಿ ಜನರಿಗೆ ಬಹಳ ಗೌರವವಿರುತ್ತದೆ. ಮುಂದೆ ದ್ವಾಪರಯುಗ ಬಂದಾಗ ಭಗವಂತನಾದ ಮಹಾವಿಷ್ಣುವು ಹಳದೀ ಬಣ್ಣದಿಂದಿರುತ್ತಾನೆ. ಧರ್ಮವು ಎರಡು ಕಾಲುಗಳಲ್ಲಿ ಮಾತ್ರ ನಿಂತಿರುತ್ತದೆ.

೨೪. ಜನರು ಆಗ ನಾಲ್ಕು ನೂರು ವರ್ಷ ಬದುಕಿರುತ್ತಾರೆ. ಜನರು ಯುದ್ಧದಲ್ಲಿ ಬಹಳ ಮುಂದಾಳುಗಳಾಗಿ ಮಹಾ ಉತ್ಸಾಹದಿಂದ ಕೂಡಿರುತ್ತಾರೆ ಆಗ್ಯೆ ವೈಶ್ಯಧರ್ಮವು ಬಹು ಪ್ರಬಲವಾಗಿ ಅದಕ್ಕೆ ಬಹು ಗೌರವವುಂಟಾಗುತ್ತದೆ.

೨೫-೨೭. ಆ ತ್ರೇತಾಯುಗದಲ್ಲಿ ಶಾಸ್ತ್ರಭೇದಗಳುಂಟಾಗುತ್ತವೆ. ಅದರಂತೆ ಜನರ ಬುದ್ಧಿಯೂ ಭೇದಿಸುತ್ತ ಬರುತ್ತದೆ. ಜನರ ಆಯುಸ್ಸು ಸ್ವಲ್ಪವೇ ಇರುವುದನ್ನು ತಿಳಿದು ಮಹಾವಿಷ್ಣುವು ಮನುಷ್ಯರೂಪವನ್ನು ಧರಿಸಿ, ಯಜುರ್ವೇದವೊಂ

**ಶಾಖಾಭೇದಸಹಸ್ರೇಣ ವಿಭಜಂತಿ ದ್ವಿಜೋತ್ತಮಾಃ ।**
**ಏಕಪಾದಸ್ಥಿತೇ ಧರ್ಮೇ ಕೃಷ್ಣತಾಂ ಕೇಶವೇ ಗತೆ ॥ ೨೭ ॥**

**ಧರ್ಮಭೇದೇ ಸಮುತ್ಪನ್ನೇ ದೇವತಾನಾಮನಿಶ್ಚಯೆ ।**
**ನ ವಿದ್ಯತೆ ತದಾ ರಾಮ ಆಯುಷಸ್ತು ವಿನಿಶ್ಚಯಂ ॥ ೨೮ ॥**

**ಗರ್ಭಸ್ಥಾಶ್ಚಮ್ರಿಯಂತೇಽತ್ರ ಬಾಲ್ಯಯೌವನಗಾಸ್ತಥಾ ।**
**ಶೂದ್ರೋತ್ತರಸ್ತದಾ ಲೋಕಸ್ತ್ರಿಷ್ಯೇ ಭವತಿಭಾರ್ಗವ ॥ ೨೯ ॥**

**ಸುರಪ್ರತಿಷ್ಠಾ ಧರ್ಮಶ್ಚ ತದಾ ಭವತಿ ಭೂತಲೆ ।**
**ಪಾಪಿಷ್ಠೋ ವರ್ಧತೆ ರಾಮ ಧರ್ಮಿಷ್ಠಃ ಕ್ಷೀಯತೆ ತದಾ ॥ ೩೦ ॥**

---

ದನ್ನೇ ನಾಲ್ಕು ವಿಭಾಗವನ್ನಾಗಿ ಭಾಗಿಸಿದನು. ಬಳಿಕ ಅವನ ಶಿಷ್ಯಪ್ರಶಿಷ್ಯರೆಲ್ಲರೂ ಆ ವೇದವನ್ನೊಂದನ್ನೇ ಪುನಃ ಪುನಃ ಬ್ರಾಹ್ಮಣರೂಪರಾಗಿ ಶಾಖಾಭೇದಸಹಸ್ರಗಳಿಂದ ಭಾಗಿಸಿದರು.

ಬಳಿಕ ಕಲಿಯುಗವು ಪ್ರಾಪ್ತವಾಗಲಾಗಿ ಪರಮಾತ್ಮನಾದ ಮಹಾವಿಷ್ಣುವು ಕೃಷ್ಣತ್ವ (ಕರೀಬಣ್ಣ) ವನ್ನು ಧರಿಸುವನು. ಧರ್ಮವು ಮುಕ್ಕಾಲುಪಾಲಿನಷ್ಟು ನಾಶವಾಗಿ ಒಂದೇ ಪಾದದಿಂದ ನಿಲ್ಲುವುದು

೨೮-೩೦. ಈ ರೀತಿ ಧರ್ಮಭೇದವುಂಟಾಗುತ್ತ ಬಂದಂತೆ ದೇವತೆಗಳ ವಿಷಯದಲ್ಲಿ, ನಿಶ್ಚಯಬುದ್ಧಿ ಕಡಿಮೆಯಾಗುತ್ತ ಬರುತ್ತದೆ. ಅದರಂತೆ ಆಯುಸ್ಸೂ ಸಹ ಅನಿಶ್ಚಿತವಾದುದಾಗಿ ಕಡಿಮೆಯಾಗುತ್ತ ಬರುತ್ತದೆ ಅನೇಕರು ಗರ್ಭದಲ್ಲಿದ್ದಾಗಲೇ ಸತ್ತುಹೋಗುತ್ತಾರೆ. ಕೆಲವರು ಬಾಲ್ಯದಲ್ಲೂ, ಕೆಲವರು ಒಳ್ಳೇ ಯೌವನಕಾಲದಲ್ಲೂ ಯಮನ ಮನೆಯನ್ನು ಸೇರುತ್ತಾರೆ. ಶೂದ್ರಜಾತಿಯ ಜನರು ಬಹು ಪ್ರಬಲರಾಗುತ್ತ ಬರುತ್ತಾರೆ. ಪ್ರಪಂಚವೆಲ್ಲಾ ಅವರ ಪ್ರಾಬಲ್ಯದಿಂದಲೇ ತುಂಬಿಹೋಗುತ್ತ ಬರುತ್ತದೆ ಪಾಪಿಷ್ಠರು ಬಹಳ ಅಭಿವೃದ್ಧಿಗೆ ಬರುತ್ತಾರೆ ಧರ್ಮಿಷ್ಠರು ಹೀನಸ್ಥಿತಿಗೆ ಬರುತ್ತಾರೆ. ರಾಜರುಗಳು ಶೂದ್ರಭೂಯಿಷ್ಠರಾಗಿಯೂ, ಕಳ್ಳರು ಅರ್ಥದಿಂದ ಉಪಜೀವಿಸುತ್ತಲೂ ಇರುತ್ತಾರೆ. ಬ್ರಾಹ್ಮಣರು ವಿಧಿನಿಷೇಧಗಳನ್ನು ಬಿಟ್ಟು ಸಿಕ್ಕಿದ್ದನ್ನು ಸಿಕ್ಕಿದ ಕಡೆ ತಿಂದುಬಿಡುತ್ತಾರೆ. ಎಲೈ ಪರಶುರಾಮನೇ! ಕೇಳು. ಧರ್ಮ

ರಾಜಾನಃ ಶೂದ್ರಭೂಯಿಷ್ಠಾ ಶ್ಛೇರಾಶ್ಚಾಧರ್ಮೋಪಜೀವಿನಃ ।
ಬ್ರಾಹ್ಮಣಾಸ್ಸರ್ವಭಕ್ಷ್ಯಾಶ್ಚ ಭವಂತಿ ಭೃಗುನಂದನ ॥ ೩೦ ॥

ಧರ್ಮನಿಷ್ಠಶ್ಚಿರಂ ರಾಜಾ ನ ತದಾ ರಾಮ ಜೀವತಿ ।
ತಸ್ಮಿನ್ಕಾಲೆಸುಕೃತಿನಾಂ ಭಕ್ತಿರ್ಭವತಿ ಕೇಶವೇ ॥ ೩೨ ॥

ತೇಷಾಮುತ್ಯಲ್ಪ ಕಾಲೇನ ತೋಷಮಾಯಾತಿ ಕೇಶವಃ ।
ಧನ್ಯಾಃ ಕಲಿಯುಗೇ ರಾಮ ತಪಸ್ತಪ್ಸ್ಯಂತಿ ಮಾನವಾಃ ॥ ೩೩ ॥

ತಪಸಾಽಲ್ಪೇನ ತೇ ಸಿದ್ಧಿಂ ಪ್ರಾಪ್ಸ್ಯಂತೀತಿ ಚ ನಿಶ್ಚಯಃ ।
ಚತುರ್ಯುಗೈಕಸಪ್ತತ್ಯಾ ಮನ್ವಂತರಮಿಹೋಚ್ಯತೆ ॥ ೩೪ ॥

ಕಲ್ಪಸ್ತುರಾಮ ವಿಜ್ಞೇಯೋ ಮನವಸ್ತುಚತುರ್ದಶ ।
ಆದಿಮಧ್ಯಾನ್ತಕಾಲೇಷು ಮನೂನಾಂ ಭೃಗುಸತ್ತಮ ॥ ೩೫ ॥

ಕೃತಮಾನಪ್ರಮಾಣೇನ ಸಂಧಿರ್ಭವತಿಮಾನದ ।
ಚತುರ್ಯುಗ ಸಹಸ್ರಂತು ಕಲ್ಪಮಾಹುರ್ಮನಿಷಿಣಃ ॥ ೩೬ ॥

---

ನಿಷ್ಠರಾದ ರಾಜರು ಆ ಕಾಲದಲ್ಲಿ ನೂರು ಸಂವತ್ಸರವೂ ಪೂರ್ತಿಯಾಗಿ (ಚಿರಕಾಲ) ಬದುಕಿರುವುದಿಲ್ಲ. ಅಂತಹ ಕಾಲದಲ್ಲೂ ಸಹ ಒಳ್ಳೆ ಪುಣ್ಯಶಾಲಿಗಳಾದ ಜನರಿಗೆ ಪರಮಾತ್ಮನಲ್ಲಿ ಭಕ್ತಿಯುಂಟಾಗುತ್ತದೆ. ಅಂಥವರ ವಿಷಯದಲ್ಲಿ ಭಗವಂತನಾದ ಕೇಶವನು ಸ್ವಲ್ಪಕಾಲದೊಳಗಾಗಿ ತೃಪ್ತನಾಗಿ ವರಪ್ರದಾನ ಮಾಡುತ್ತಾನೆ ಎಲೈ ಪರಶುರಾಮನೇ! ಕೇಳು. ಕಲಿಯುಗದಲ್ಲಿ ಭಗವದಾರಾಧನೆಯಂ ಮಾಡುವ ಮಾನವರೇ ಧನ್ಯರು. ಅಂತಹ ಮಹಾನುಭಾವರು ಸ್ವಲ್ಪಕಾಲ ತಪಸ್ಸು (ಧ್ಯಾನ) ಮಾಡಿದಾಗ್ಯೂ ಆತ್ಮಸಿದ್ಧಿಯನ್ನು ಹೊಂದುವರೆಂಬುದು ನಿಶ್ಚಯವಾದ ಮಾತು. ಚತುರ್ಯುಗಗಳು ಎಪ್ಪತ್ತೊಂದಾವರ್ತಿ ಮರಳಿದರೆ ಒಂದು ಮನ್ವನ್ತರವೆಂದು ಹೇಳಿಸಿಕೊಳ್ಳುತ್ತದೆ. ಇಂಥಾ ಮನ್ವಂತರಗಳು ಹದಿನಾಲ್ಕಕ್ಕೆ ಒಂದು ಕಲ್ಪ (ಪ್ರಳಯಕಾಲ) ವಾಗುವುದು. ಹದಿನಾಲ್ಕು ಮನುಗಳ ಆದಿಮಧ್ಯಾಂತ್ಯ ಕಾಲಗಳಲ್ಲಿ ನಡೆಯುವ ಕಾಲ ಪರಿಮಿತಿಯೇ ಇದು. ಈ ರೀತಿಯಾದ ಕಾಲಪ್ರಮಾಣದಿಂದ ಸಂಧಿಕಾಲವುಂಟಾಗಿ ನಾಲ್ಕು ಯುಗಸಹಸ್ರಗಳು ಕಳೆದರೆ ಕಲ್ಪ (ಪ್ರಳಯ) ವಾಗುವುದೆಂದು ತಿಳಿದವರು ಹೇಳುವರು.

ಕಲ್ಪಶ್ಚ ದಿವಸಃ ಪ್ರೋಕ್ತೋ ಬ್ರಹ್ಮಣಃ ಪರಮೇಷ್ಠಿನಃ
ತಾವತೀ ಚ ನಿಶಾತಸ್ಯ ಯಸ್ಯಾಂ ಶೇತೇಸ ಭಾರ್ಗವ ॥ ೩೭ ॥
ಏವಂವಿಧೈರಹೋರಾತ್ರೈರ್ದಿನಮಾಸಾದಿಸಂಖ್ಯಯಾ ।
ಪೂರ್ಣಂ ವರ್ಷಶತಂ ಸರ್ವಂಬ್ರಹ್ಮಾ ಭಾರ್ಗವ ಜೀವತಿ ॥ ೩೮ ॥
ಬ್ರಹ್ಮಾಯುಷಾ ಪರಿಚ್ಛಿನ್ನಃ ಪೌರುಷೋ ದಿವಸಃಸ್ಮೃತಃ ।
ತಾವತೀ ಚ ನಿಶಾತಸ್ಯ ಯಸ್ಯೇದಂಸಕಲಂ ಜಗತ್ ॥ ೩೯ ॥
ಏವಂ ವಿಧಾ ಯೇ ದಿವಸಾ ವ್ಯತೀತಾ
ನಚಾಗತಾಯೇ ಚ ಮಹಾನುಭಾವ ।
ಅನಾದಿಮತ್ವಾತ್ಪರಮೇಶ್ವರಸ್ಯ
ಹ್ಯನನ್ತಭಾವಾಚ್ಚ ತಥಾಚಸಂಖ್ಯಾಃ ॥ ೪೦ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವರುಣರಾಮಸಂಭಾಷಣೇ ಕಾಲಸಂಖ್ಯಾ
ವರ್ಣನಂನಾಮ ತ್ರಿಸಪ್ತತಿತಮೋಧ್ಯಾಯಃ

---

೩೭-೪೦. ಪರಮೇಷ್ಠಿಯೆನಿಸಿದ ಬ್ರಹ್ಮನಿಗೆ ಒಂದು ದಿವಸವಾದರೆ ಅದಕ್ಕೆ ಕಲ್ಪವೆಂದು ಹೆಸರು. ಅಷ್ಟೇಕಾಲ ಪರಿಮಿತಿಯುಳ್ಳ ರಾತ್ರಿಯಲ್ಲಿ ಬ್ರಹ್ಮನು ಮಲಗಿ ನಿದ್ದೆಮಾಡುತ್ತಾನೆ. ದಿನ ಮಾಸಾದಿ ಸಂಖ್ಯೆಯಿಂದ ಈ ರೀತಿ ಕ್ಲಿಪ್ತಗೊಳಿಸಲ್ಪಟ್ಟಿರುವ ಬ್ರಹ್ಮನ ಅಹೋರಾತ್ರಿರೂಪವಾದ ಒಂದು ದಿವಸ ಲೆಖ್ಖವನ್ನನುಸರಿಸಿಕೊಂಡು, ಈ ರೀತಿ ಒಂದು ನೂರು ವರ್ಷಗಳ ಆಯುಃಪರಿಮಾಣಕಾಲ ಬ್ರಹ್ಮನು ಬದುಕಿರುತ್ತಾನೆಂದು ತಿಳಿಯಬೇಕು. ಈ ರೀತಿ ಬ್ರಹ್ಮಾಯುಸ್ಸಿನಿಂದ ಪರಿಚ್ಛಿನ್ನವಾದ ಒಂದು ದಿವಸಕ್ಕೆ ಪೌರುಷದಿವಸವೆಂದು ಹೆಸರಿದೆ. ಇದೇ ಪರಿಮಾಣವುಳ್ಳ ರಾತ್ರಿಯು ಬ್ರಹ್ಮನ ನಿದ್ದೆಯ ಸಮಯವೆಂದು ತಿಳಿಯಬೇಕು. ಈ ರೀತಿಯಾಗಿ ಜಗತ್ತು ಬ್ರಹ್ಮನ ಹಗಲಿನಲ್ಲಿ ಎಚ್ಚರಗೊಂಡಿರುವುದು. ರಾತ್ರಿಯಲ್ಲಿ ಅಡಗಿ ಹೋಗುವುದು. ಹೀಗೆಯೇ ಜಗತ್ತು ಹುಟ್ಟುಸಾವುಗಳಿಂದ ಕೂಡಿರುವುದು. ಎಲೈ ಮಹಾನುಭಾವನೆ! ಆದಿಮೊದಲಿಲ್ಲದ ಪರಮೇಶ್ವರನ ರುದ್ರರೂಪಕಾಲವು ಅನಂತವಾಗಿಯೂ ಅಸಂಖ್ಯವಾಗಿಯೂ ಇದೆ.

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ವರುಣರಾಮ ಸಂಭಾಷಣೆಯೆಂಬ ಹೆಸರಿನ ಕಾಲ
ಸಂಖ್ಯಾವರ್ಣನಾತ್ಮಕವಾದ ಎಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು.

— ಓಂತತ್ಸತ್ —